# ವಿಷಯಾನುಕ್ರಮಣಿಕೆ

# ಶಿವಾನುಭವ

ಸಂಪುಟ. ೧ ಫೇಬರವಾರಿ ೧೯೨೬ ಸಂಚಿಕೆ. ೧

## ಪತ್ರಿಕೆಯ ಉದ್ದೇಶ.

ಶಿವಾನುಭವ ಮಾಸಪತ್ರಿಕೆಯ ಉದ್ದೇಶವು ವೀರಶೈವ ಧರ್ಮದ ಪ್ರಿಯ ಧರ್ಮಗ್ರಂಥಗಳನ್ನು ಪ್ರಸಿದ್ಧಪಡಿಸುವದೇ ಮುಖ್ಯವಾಗಿರುತ್ತದೆ. ಈ ಉದ್ದೇಶದಿಂದ ಹೊರಡಿಸಲ್ಪಟ್ಟ ಪತ್ರಿಕೆಗಳಾಗಲಿ, ಇಲ್ಲವೆ ಪುಸ್ತಕ ಮಾಲಿಕೆಗಳಾಗಲಿ, ಈಗ ಯಾವವೂ ಇರುವದಿಲ್ಲ. ಕೈ. ವಾ. ರಾವ ಬಹಾದ್ದೂರ ಮಲ್ಲಪ್ಪಾ ವಾರದ ಇವರು ಬಹಳ ಹಣ ವ್ಯಯ ಮಾಡಿ, ಅನೇಕ ಧಾರ್ಮಿಕ ಗ್ರಂಥಗಳನ್ನು ಮೊದಲು ಹೊರಪಡಿಸಿದರು. ಅವರ ತ್ನಗಳಿಂದ ಅನೇಕ ಧಾರ್ಮಿಕ ಗ್ರಂಥಗಳು ಅದರಲ್ಲಿ ವಿಶೇಷವಾಗಿ, ೃತ ಗ್ರಂಥಗಳು ಹೊರಬಿದ್ದವು. ಅವರು ಮಾಡಿದ ಕಾರ್ಯವು ರಣೀಯವಾಗಿದೆ. ತರುವಾಯ ಕೈ. ವಾ. ಎಸ್ ಆರ್ ಕರಿಬ ಸ ಶಾಸ್ತ್ರಿಗಳು ಈ ಮಹತ್ವದ ಕಾರ್ಯವನ್ನು ಕೈಕೊಂಡು " ವೀರಶೈವ ...ಪ್ರಕಾಶಿಕಾ ಎಂಬ ಹೆಸರಿನಿಂದ ಒಂದು ಮಾಸಪತ್ರಿಕೆಯನ್ನು ...ಡಿಸಹತ್ತಿದರು. ಇದರ ದ್ವಾರದಿಂದ ಅನೇಕ ಸಂಸ್ಕೃತ, ಮತ್ತು ...ಡ ಉದ್ಗ್ರಂಥಗಳು ಪ್ರಕಾಶಿತವಾದವು. ಆದರೆ ಈಚೀಚೆಗೆ ಇಂಥ ಗ್ರಂಥ ಪ್ರಕಾಶದ ಕಾರ್ಯಗಳು ನಿಂತು ಹೋಗಿವೆ. ನಿಜವಾಗಿ ವೀರ ಶೈವ ವಾಙ್ಮಯವು ಬಹು ದೊಡ್ಡದದೆ. ಮತ್ತು ನಾನಾವಿಧವುಳ್ಳದ್ದು ಅದೆ. ಇದನ್ನು ಪ್ರಕಟಪಡಿಸುವ ಪ್ರಯತ್ನಗಳು ವೀರಶೈವ ಸಮಾಜದಿಂದ

ಎಡೆಬಿಡದೆ ನಡಿಯುವೆ ಹೋದರೆ, ಅವರ ನಿಜವಾದ ಹೆಚ್ಚಳಕ್ಕೆ ಕುಂದಕ ಉಂಟಾಗದೆ ಇರಲಾರದು. ಇದನ್ನು ಕೆಲಮಟ್ಟಿಗಾದರೂ ದೂರ ಮಾಡುವ ಉದ್ದೇಶದಿಂದ ನಾನು ಈಗಿನ ಪತ್ರಿಕೆಯನ್ನು ಪ್ರಾರಂಭಿಸಿದ್ದೇನೆ.

ಈ ಪತ್ರಿಕೆಯ ದ್ವಾರಾ ಗ್ರಂಥಪ್ರಕಾಶನದ ಕಾರ್ಯವನ್ನಷ್ಟೇ ಅಲ್ಲ. ವೀರಶೈವ ಸಮಾಜದ ಧಾರ್ಮಿಕ, ರಾಜಕೀಯ, ಸಾಮಾಜಿಕ ಇತಿಹಾಸವನ್ನೂ ಸಹ ಆದಷ್ಟು ಮಟ್ಟಿಗೆ ಶೋಧಿಸಿ, ಪ್ರಕಟ ಮಾಡುವ ಕಾರ್ಯವನ್ನೂ ಕೈಕೊಳ್ಳಬೇಕೆಂದು ನಮ್ಮ ಉದ್ದೇಶವಿರುತ್ತದೆ ವೀರಶೈವ ಸಮಾಜದಲ್ಲಿ ಬಹು ಪುರಾತನ ಕಾಲದಿಂದಲೂ ಅನೇಕ ಸಾಧುಸತ್ಪುರುಷರೂ ಧರ್ಮಪ್ರವರ್ತಕರೂ ಉತ್ಪನ್ನರಾಗಿ, ಅವರು ಕರ್ನಾಟಕದಲ್ಲಿ ಅತ್ಯುಜ್ವಲವಾದ ಧರ್ಮ ಪ್ರಭೆಯನ್ನು ಬೀರಿದ್ದಾರೆ ಅವರ ಕೃತಿಗಳನ್ನು ಕರ್ನಾಟಕಸ್ಥರು ಅರಿಯುವದು ಅತ್ಯಂತಾವಶ್ಯಕವು ಅದರಂತೆಯೇ ವೀರಶೈವರಲ್ಲಿ ಅನೇಕ ಶೂರ ರಾಜ ಮನೆತನದವರು ಉದ್ಭವಿಸಿ, ಹಿಂದುತ್ವದ ರಕ್ಷಣೆಯ ಹೊಡೆದಾಟದಲ್ಲಿ ಕರ್ನಾಟಕ ರಾಜ್ಯಗಳು ಯಾವ ಯಾವ ಮಹತ್ಕಾರ್ಯಗಳನ್ನು ಕೈಕೊಂಡವೋ ಅವುಗಳಲ್ಲಿ ಅವರು ಯಾವತರದ ಸಹಾಯುವನ್ನು ಮಾಡಿದರು ಎಂಬದನ್ನೂ ಸಹ ಶೋಧಿಸಿ ಪ್ರಕಟಿಸುವದು ಬಹಳ ಅವಶ್ಯವಾಗಿದೆ. ಹೀಗೆ ನಮ್ಮ ಸಮಾಜದಲ್ಲಿ ಶೋಧಪಡಿಸತಕ್ಕ ಸಂಗತಿಗಳು ಅನೇಕವಿವೆ. ಮತ್ತು ಅವುಗಳ ಸಾಧನಗಳಾದರೂ ಇನ್ನೂ ಬಹಳಮಟ್ಟಿಗೆ ಉಪಲಬ್ಧವಿವೆ. ಈ ತರದ ಶೋಧನೆಯ ಕಾರ್ಯದಲ್ಲಿ ಕರ್ನಾಟಕಸ್ಥರನ್ನು ಅದರಲ್ಲಿ ವಿಶೇಷವಾಗಿ, ವೀರಶೈವ ಸುಶಿಕ್ಷಿತರನ್ನು ತತ್ಪರಗೊಳಿಸಿ, ಅವರನ್ನು ಶೋಧನೆಯ ಕಾರ್ಯಗಳಿಗೆ ಪ್ರೋತ್ಸಾಹಿಸುವದಾದರೂ ಈ ಪತ್ರಿಕೆಯ ಎರಡನೇ ಮುಖ್ಯ ಉದ್ದೇಶವಿರುತ್ತದೆ.

ಶ್ರೀ ಬಸವೇಶ್ವರನು ಹಿಂದುಸ್ತಾನದಲ್ಲಿ ಈ ವರೆಗೆ ಆಗಿ ಹೋದ ಧರ್ಮ ಸುಧಾರಕರಲ್ಲಿ ಅಗ್ರಗಣ್ಯನಾಗಿರುತ್ತಾನೆ. ಯಾವ ಕಾಲಕ್ಕೆ ಕರ್ನಾಟಕದಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಯು ಮುಸುಳಿಸಿ ಹೋಗಿತ್ತೋ, ಆಗ ಆತನು ಉತ್ಪನ್ನನಾಗಿ ಅದರ ಪ್ರಭಾವವನ್ನು ಅಲ್ಲಿ ಸ್ಥಿರಗೊಳಿಸಿದನು. ಅವನು ಹರಡಿದ ವಿಚಾರಗಳು ಅಸ್ಪೃಶ ವರ್ಣದವರಿಂದ ಹಿಡಿದು ಮೇಲಿನ ವರ್ಣದವರ ವರೆಗೂ ರೋಮ ರೋಮಗಳಲ್ಲಿಯೂ ಸಂಧಿಸಿ ಹೋದ್ದರಿಂದ, ಅವರೆಲ್ಲರಲ್ಲಿ ಒಂದು ತರದ ರಾಷ್ಟ್ರೀಯ ಭಾವ

ನೆಯು ತುಂಬಲಿಕ್ಕೆ ಕಾರಣವಾಯಿತು. ಇದರ ಪ್ರಭಾವದಿಂದ ಅಸಂಖ್ಯ ಗ್ರಂಥಕಾರರು ಉತ್ಪನ್ನರಾದರು. ಮತ್ತು ಅವರು ತಮ್ಮ ಉಜ್ವಲವಿಚಾರಗಳನ್ನು ನಾನಾಬಗೆಯ ವಚನಗಳಿಂದ ನುಡಿದು, ತೋರಿಸಿದರು. ಅವರು ರಚಿಸಿದ ಈ ವಚನಗಳ ಸಮುದಾಯವು ಅಪಾರವಾಗಿರುತ್ತದೆ. ಈ ವಚನಗಳು ಎಷ್ಟು ಪ್ರಾಸಾದಿಕವೂ ಉದಾತ್ತ ವಿಚಾರದವೂ ಇರುತ್ತವೆಂಬದು ನಾನು ಗ್ರಂಥಿಸಿದ “ವಚನ ಶಾಸ್ತ್ರ ಸಾರ” ವೆಂಬ ಗ್ರಂಥದಿಂದ ಕೆಲಮಟ್ಟಿಗೆ ವಾಚಕರಿಗೆ ತಿಳಿದುಬರುವಂತೆ ಇದೆ. ಇಂಥ ವಾಙ್ಮಯವು ಯಾವ ಭಾಷೆಯಲ್ಲಿದ್ದರೂ ಅದಕ್ಕೆ ಅದು ಗೌರವವನ್ನು ಕೊಡದೆ ಇರಲಾರದು. ಇಂಥ ಶ್ರೇಷ್ಠವಾದ ವಾಙ್ಮಯವನ್ನು ಅಚ್ಚುಗೊಳಿಸಿ ಪ್ರಸಿದ್ಧಿಸುವದು ನಮ್ಮ ಕರ್ನಾಟಕಸ್ಥರ ಅದರಲ್ಲಿ ವಿಶೇಷವಾಗಿ ಲಿಂಗಾಯತರ ಕರ್ತವ್ಯವಾಗಿದೆ. ಈ ಉದ್ದೇಶವನ್ನು ಮುಂದಿಟ್ಟುಕೊಂಡು, ಅನೇಕ ವಚನಗ್ರಂಥಗಳನ್ನು ಈ ಶಿವಾನುಭವದಲ್ಲಿ ಕ್ರಮೇಣ ಪ್ರಕಟಪಡಿಸುತ್ತ, ಹೋಗುವೆವು. ಈ ತರದ ವಾಙ್ಮಯಕ್ಕೆ ಕಾರಣೀಭೂತನಾದ, ಶ್ರೀ ಬಸವೇಶ್ವರನ ವಚನಗಳನ್ನೇ ಮೊದಲು ಪ್ರಕಟಪಡಿಸುವೆವು. ಮುಂದೆ ಕ್ರಮವಾಗಿ ಬೇರೆ ಮಹತ್ವದ ವಚನಗಳನ್ನು ಇದರಲ್ಲಿ ಕೊಡುತ್ತಾ ಹೋಗುವೆವು.

ಲಿಂಗಾಯತ ಧರ್ಮವು ಬಹು ಜನ ಸಮಾಜವನ್ನು ಉಚ್ಚನೀಚ ಭಾವವನ್ನು ಎಳ್ಳಷ್ಟಾದರೂ ಮನಸ್ಸಿನಲ್ಲಿ ತಾರದೆ ಮೇಲಕ್ಕೆಬ್ಬಿಸಲು ಮುಂದೊರೆದದ್ದಿರುತ್ತದೆ. ಈ ಪ್ರಯತ್ನದಲ್ಲಿ ಅದು ಯಾವತರದ ಅಸಾಧು ಮಾರ್ಗವನ್ನು ಸ್ವೀಕರಿಸಲಿಲ್ಲ. ಜನರಲ್ಲಿ ಭಕ್ತಿ, ನೀತಿ, ತಿಳುವಳಿಕೆ ಇವುಗಳನ್ನು ಹಬ್ಬಿಸಲಿಕ್ಕೆ ಯತ್ನಿಸಿ ಈ ಮಾರ್ಗದಿಂದಲೇ ಸಮಾಜದಲ್ಲಿ ಅತ್ಯುಚ್ಚ ಭಾವವನ್ನು ನೆಲೆಗೊಳಿಸಿರುತ್ತದೆ. ಈ ಮಾರ್ಗವನ್ನು ಇದು ಕೈಕೊಂಡಿರುವ ಕಾರಣ ಅದರ ಪ್ರವರ್ತಕರು ಹಗುರು ಭಾಷೆಯಲ್ಲಿಯೇ ತಮ್ಮ ವಿಚಾರಗಳನ್ನು ಪ್ರಕಟಿಸಲು ತೊಡಗಿದರು. ಈ ಉದ್ದೇಶದಿಂದ ಅವರು ಮೊದಲಿನ ನಾನಾತರದ ವೃತ್ತಗಳು, ಕಂದಪದ್ಯಗಳು ಮೊದಲಾದ ಕ್ಲಿಷ್ಟಕವಿತಾ ಪದ್ಧತಿಗಳನ್ನು ಬಿಟ್ಟುಕೊಟ್ಟು, ಎಂಥ ಪಾಮರನಿಗಾದರೂ ಸುಲಭವಾಗಿ ತಿಳಿಯುವಂತೆ ನಾನಾಬಗೆಯ ಷಟ್ಪದಿಗಳನ್ನೂ, ತ್ರಿಪದಿಗಳನ್ನೂ ಸಾಂಗತ್ಯಗಳನ್ನೂ ರಗಳೆಗಳನ್ನೂ ರಚಿಸಿರುವರು. ಈ ರಚನೆಗಳಾದರೂ ಬಹು ಸುಂದರವಾಗಿಯೂ ಪ್ರತಿಭಾಮಯ

ವಾಗಿಯೂ ಇವೆ. ಆದರೆ ಈ ವಾಙ್ಮಯವು ಇನ್ನು ಅಜ್ಞಾತಾವಸ್ಥೆಯಲ್ಲಿ ಇದೆ. ಅದನ್ನು ಸಹ ಶೋಧಿಸಿ ಈ ಪತ್ರಿಕೆಯಲ್ಲಿ ಪ್ರಸಿದ್ಧಿಸುವ ಯತ್ನವು ಮಾಡಲ್ಪಡುವದು.

ಮೇಲ್ಕಂಡ ಗ್ರಂಥಗಳು ಕನ್ನಡದ ಮಾಧ್ಯಮಿಕ ಭಾಷಾಶೈಲಿಯಲ್ಲಿ ಬರೆಯಲ್ಪಟ್ಟಿರುತ್ತವೆ. ಅದ್ದರಿಂದ ಇವುಗಳು ಈಗಿನವರಿಗೆ ಅಷ್ಟು ಸುಗಮವಾಗಿರುವದಿಲ್ಲ. ಇವುಗಳ ಮರ್ಮಗಳನ್ನು ಅರಿಯಬೇಕಾದರೆ, ಈಗಿನ ಗದ್ಯಾತ್ಮಕ ಭಾಷೆಯಲ್ಲಿ ಅವುಗಳ ವಿಚಾರಗಳನ್ನು ಸುಲಭವಾಗಿ ವಿವರಿಸುವದು ಅತ್ಯಾವಶ್ಯಕವಾಗಿದೆ. ಆದ್ದರಿಂದ ಈ ತರದ ಲೇಖಗಳನ್ನೂ ಸಹ ಈ ಪತ್ರಿಕೆಯಲ್ಲಿ ಕೊಡಲು ವ್ಯವಸ್ಥೆಯು ಮಾಡಲ್ಪಡುವದು

ವೀರಶೈವ ಪೂರ್ವ ಪಂಡಿತರು ಹ್ಯಾಗೆ ಕನ್ನಡ ಭಾಷೆಯಲ್ಲಿ ತಮ್ಮ ರಚನೆಗಳನ್ನು ಮಾಡಿದರೋ ಹಾಗೆಯೇ ಸಂಸ್ಕೃತಭಾಷೆಯಲ್ಲಿಯೂ ಮಾಡಿದ್ದಾರೆ ಸಂಸ್ಕೃತಭಾಷೆಯು ಮೊದಲಿನ ಕಾಲಕ್ಕೆ ಒಂದು ಸ್ಥಾನದ ಸಾರ್ವತ್ರಿಕ ಭಾಷೆಯು ಆದ್ದರಿಂದ ಬೇರೆ ಬೇರೆ ನಾಡುಗಳಲ್ಲಿಯ ಪಂಡಿತರಿಗೂ ಸಹ ತಮ್ಮ ಮತತತ್ವಗಳನ್ನು ತಿಳಿಯಪಡಿಸಬೇಕೆಂದು, ಸಂಸ್ಕೃತದಲ್ಲಿಯೂ ಅನೇಕ ಗ್ರಂಥಗಳನ್ನು ವೀರಶೈವ ಪಂಡಿತರು ಬರೆದಿದ್ದಾರೆ. ಇವುಗಳನ್ನು ಸಹ ಈ ಪತ್ರಿಕೆಯಲ್ಲಿ ಪ್ರಸಿದ್ಧಿಸುವ ಪ್ರಯತ್ನವು ಮಾಡಲ್ಪಡುವದು.

ಮೇಲ್ಕಂಡ ಕಾರ್ಯಗಳು ಎಷ್ಟು ಮಹತ್ವದವಿರುತ್ತವೆಂಬುದು ನಮ್ಮ ವಾಚಕರೆಲ್ಲರಿಗೂ ತಿಳಿಯದೆ ಇರಲಾರದು. ಆದ್ದರಿಂದ ಅವರು ನಮ್ಮ ಈ ಪ್ರಯತ್ನಕ್ಕೆ ಮನವಿಟ್ಟು ಸಹಾಯ ಮಾಡುವರೆಂದು, ನಾವು ಅವರನ್ನು ಪ್ರಾರ್ಥಿಸುತ್ತೇವೆ. ಈ ಕಾರ್ಯಕ್ಕೆ ವೀರಶೈವ ಸಮಾಜದಲ್ಲಿಯ ಪಂಡಿತರೂ, ಮಠಾಧಿಪತಿಗಳೂ, ಧನಿಕರೂ, ಸಹಾಯ ಮಾಡುವದು ಅತ್ಯಾವಶ್ಯಕವಾಗಿದೆ. ಇವರ ಸಂಪೂರ್ಣ ಸಹಾಯವಿಲ್ಲದೆ, ಈ ಮಹತ್ಕಾರ್ಯವು ಎಂದಿಗೂ ನೆರವೇರಲಾರದು. ಆದ್ದರಿಂದ ಈ ಕಾರ್ಯಕ್ಕೆ ಅವರು ತಮ್ಮಿಂದಾದಷ್ಟು ಸಹಾಯ ಮಾಡಿ, ಪ್ರೋತ್ಸಾಹಿಸಬೇಕೆಂದು, ನಾವು ಅವರನ್ನು ವಿನಯಪೂರ್ವಕವಾಗಿ, ಬಿನ್ನವಿಸಿ ಕೊಳ್ಳುತ್ತೇವೆ.

# ವೀರಶೈವ ಕನ್ನಡ ವಾಙ್ಮಯದಲ್ಲಿಯ ಕೆಲ ಹೆಗ್ಗುರುತುಗಳು.

ವೀರಶೈವ ವಾಙ್ಮಯವು ಬಹು ಪುರಾತನ ಕಾಲದಿಂದಲೂ ಈ ವರೆಗೆ ಒಂದೇಸವನೆ ಪ್ರವಹಿಸುತ್ತ ಬಂದಿದೆ. ಆದರೆ ಇದರ ಆರಂಭ ಕಾಲದ ಇತಿಹಾಸವನ್ನು ಈಗ ಕಂಡು ಹಿಡಿಯುವದು ದುಸ್ತರವಾಗಿದೆ. ಯಾಕಂದರೆ ವೀರಶೈವ ಮತದ ಉಗಮವು ಆಗಮ ಗ್ರಂಥಗಳಲ್ಲಿ ಆಗಿದ್ದು, ಈ ಆಗಮ ಗ್ರಂಥಗಳ ಪೂರ್ಣಸ್ವರೂಪವು ಇನ್ನೂ ಚನ್ನಾಗಿ ಗೊತ್ತಾಗಿಲ್ಲ. ಈ ಆಗಮಗಳಲ್ಲಿ ಕೆಲವು ಮಾತ್ರ ಈಗ ಅಚ್ಚಾಗಿದ್ದು ಅವುಗಳ ಮೇಲಿಂದ ವೀರಶೈವ ಮತದ ಪೂರ್ವದ ಸ್ವರೂಪವನ್ನು ನಿಶ್ಚಿತವಾಗಿ ದೃಢಪಡಿಸುವದು ಬಹಳ ದುಸ್ತರವಾಗಿದೆ. ಆದರೆ ವೀರಶೈವ ಮತದ ಪೂರ್ವಸ್ಥಿತಿಯು ಹೀಗಿದ್ದರೂ, ಶ್ರೀ ಬಸವೇಶ್ವರನ ಕಾಲದಿಂದೀಚೆಗೆ ಅದರ ನಿಜಸ್ಥಿತಿಯನ್ನು ಕೆಲಮಟ್ಟಿಗಾದರೂ ಕಂಡು ಹಿಡಿಯಲಿಕ್ಕೆ ಶಕ್ಯವಿದೆ. ಯಾಕಂದರೆ ಬೇರೆ ಬೇರೆ ಕಾಲಕ್ಕೆ ಕರ್ನಾಟಕದಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಕ್ರಾಂತಿಗಳು ಉದ್ಭವಿಸಿದ್ದು, ಆಗ ಅಸಂಖ್ಯ ಗ್ರಂಥಗಳು ಹೊರಬಿದ್ದವು ಈ ಗ್ರಂಥಗಳ ಬಹು ದೊಡ್ಡ ಭಾಗವು ಈಗ ನಾಶವಾಗಿ ಹೋಗಿದ್ದರೂ ಇನ್ನೂ ಅನೇಕ ಗ್ರಂಥಗಳು ಉಪಲಬ್ಧವಿರುವದರಿಂದ ಅವುಗಳಮೇಲಿಂದ ಈ ಅವಧಿಯಲ್ಲಿ ಅಂದರೆ ಹೋದ ಸುಮಾರು ಸಾವಿರ ವರುಷಗಳಲ್ಲಿ ವೀರಶೈವ ವಾಙ್ಮಯದಲ್ಲಿ ಯಾವ ಯಾವ ತರದ ಉತ್ಕರ್ಷಾಪಕರ್ಷಗಳು ಒದಗಿದವೆಂಬದನ್ನು ಕೆಲವಂಶದಿಂದಲಾದರೂ ಗುರುತು ಹಿಡಿಯಲಿಕ್ಕೆ ಶಕ್ಯವಿರುತ್ತದೆ.

ವೀರಶೈವ ವಾಙ್ಮಯ ಕಾಲದಲ್ಲಿ ಮೂರು ವಿಭಾಗಗಳನ್ನು ನಾವು ಮಾಡಬಹುದು. (೧) ಬಸವೇಶ್ವರನಕಾಲ (೨) ವಿಜಯನಗರದ ಅರಸರ ಕಾಲ (೩) ಬದನೂರ ಅರಸರಕಾಲ. ಬಸವೇಶ್ವರನಕಾಲವು ೧೦೦೦ ದಿಂದ ಪ್ರಾರಂಭವಾಗಿ ೧೨೦೦ ರವರಿಗೆ ನಡೆಯಿತೆಂದು ತಿಳಿಯಬಹುದು. ಎರಡನೇಕಾಲವು ೧೩೦೦ ರಿಂದ ೧೫೬೫ ರವರೆಗೆ ಮತ್ತು ಮೂರನೇ ಕಾಲವು ೧೬೦೦ ರಿಂದ ೧೮೦೦ರವರಿಗೆ ಸಾಗಿತೆಂದು ನಾವು ಸ್ಥೂಲಮಾನದಿಂದ ಕಲ್ಪಿಸಬಹುದು. ಮೊದಲನೆಯ ಕಾಲದಲ್ಲಿ ಶ್ರೀ ಬಸವೇಶ್ವರನೇ ಅಗ್ರಗಣ್ಯನು. ಎರಡನೇ ಕಾಲದಲ್ಲಿ ಅನೇಕ ಗ್ರಂಥಕಾರರು

ಉತ್ಪನ್ನರಾಗಿ ಅನೇಕ ಧರ್ಮ ಗ್ರಂಥಗಳನ್ನು ರಚಿಸಿರುತ್ತಾರೆ. ಮುಂದೂ ನೆಕಾಲದಲ್ಲಿ ಅನೇಕ ವೀರಶೈವ ಪಂಡಿತರು ಬಿದನೂರು ರಾಜರ ಆಶ್ರಯವನ್ನು ಹೊಂದಿ ಅನೇಕ ಉದ್ಗ್ರಂಥಗಳನ್ನು ಬರೆದರು.

## ಬಸವೇಶ್ವರನ ಕಾಲ.

ಈ ಕಾಲವು ಧರ್ಮ ಪ್ರಸಾರದ ಕಾಲವು. ಕರ್ನಾಟಕದಲ್ಲಿ ವೀರಶೈವ ಧರ್ಮವು ಬಸವೇಶ್ವರನಿಂದಲೇ ಮೊದಲಿಗೆ ಪ್ರಾರಂಭಿಸಲ್ಪಟ್ಟಿತ್ತೆಂದು ಹೇಳಲಿಕ್ಕೆ ಬರಲಾರದು. ಇದು ಅವನಕ್ಕಿಂತಲೂ ಪೂರ್ವದಲ್ಲಿ ಪ್ರಾರಂಭಿಸಿರಬಹುದೆಂದು ತೋರುತ್ತದೆ. ಯಾಕಂದರೆ ದೇವರ ದಾಸಿಮಯ್ಯನೆಂಬ ಶಿವಶರಣನ ಉಲ್ಲೇಖವನ್ನು ಬಸವೇಶ್ವರನು ತನ್ನ ವಚನಗಳಲ್ಲಿ ಮಾಡಿರುವದರಿಂದ ಅವನು ಪೂರ್ವಿಕನಿರಬಹುದು. ಅವನು ೧೦೦೮ರಿಂದ ೧೦೪೧ ರವರೆಗೆ ಆಳಿದ ಚಾಲುಕ್ಯ ವಂಶದ ರಾಜನಾದ ಜಯಸಿಂಹನ ಆಳಿಕೆಯಲ್ಲಿ ಇದ್ದನು. ಇವನು ರಾಮನಾಥ ಎಂಬ ಮುದ್ರಿಕೆಯುಳ್ಳ ವಚನವು ಪ್ರಚಾರದಲ್ಲಿ ಇದೆ. ಆದರೆ ಬಸವೇಶ್ವರನ ಕಾಲಕ್ಕೆಯೇ ಅಸಂಖ್ಯ ವಚನಕಾರರೂ ಗ್ರಂಥಕಾರರೂ ಆಗಿಹೋಗಿರುವರು. ಅಲ್ಲಮಪ್ರಭು, ಸಿದ್ಧರಾಮ, ಮಾಚಿದೇವ, ನೋಳಿಗಯ್ಯ, ಆದಯ್ಯ, ಕಿನ್ನರಿ ಬ್ರಹ್ಮಯ್ಯ, ಮಹಾದೇವಿಯಕ್ಕ, ನುಲಿಯಚಂದಯ್ಯ, ಪಾಲ್ಕುರಿಕೆ ಸೋಮಾರಾಧ್ಯ, ಕೇಶಿರಾಜ ಮೊದಲಾದ ಅನೇಕ ಶಿವಶರಣರು ಉತ್ಪನ್ನರಾಗಿ, ತಮ್ಮ ವಿಚಾರಗಳನ್ನು ಪ್ರಕಟಪಡಿಸಿದರು. ಈ ಗ್ರಂಥ ಸಮುದಾಯದಲ್ಲಿ ವಚನಗ್ರಂಥಗಳೇ ಹೆಚ್ಚಾಗಿರುವವು. ಈ ವಚನಗಳ ಸಂಖ್ಯೆಯು ಬಹಳ ದೊಡ್ಡದಿರುತ್ತದೆಂಬದರಲ್ಲಿ ಏನೂ ಸಂದೇಹವಿಲ್ಲ. ಇವುಗಳ ಸಂಖ್ಯೆಯು ಎರಡೆಂಭತ್ತುಕೋಟಿ ಇರುತ್ತದೆಂದು ಐತಿಹ್ಯವದೆ. ಬಸವೇಶ್ವರನು ಕಲ್ಯಾಣದೊಳಗೆ ಮಂತ್ರಿಪದದಲ್ಲಿ ಆರೂಢನಾಗಿದ್ದಾಗ ಅವನ ಉಜ್ವಲವಾದ ಧರ್ಮ ಭಕ್ತಿಯನ್ನೂ ಮಹತ್ತಾದ ತಾತ್ವಿಕ ವಿಚಾರಗಳನ್ನೂ ಪ್ರತ್ಯಕ್ಷವಾಗಿ ತಿಳಿಯಬೇಕೆಂದು ಹಿಂದುಸ್ಥಾನದಲ್ಲಿಯ ಅನೇಕ ಭಾಗಗಳ ಕಡೆಯಿಂದ ಪಂಡಿತರು ಅವನಲ್ಲಿಗೆ ಬರುತ್ತಿದ್ದರು. ಕಾಶ್ಮೀರ ದೇಶದ ನೋಳಿಗಯ್ಯನೂ ಗುಜರಾಥ ದೇಶದ ಆದಯ್ಯನೂ ತೆಲಗು ದೇಶದಿಂದ ತೆಲುಗು ಜೊಮ್ಮಯ್ಯನೂ ಉರಿಲಿಂಗಪೆದ್ದಿಯೂ ಇವರೇ ಮೊದಲಾದವರು ಆಗ ಪ್ರಸಿದ್ಧರಾಗಿದ್ದರು. ಹೀಗೆ ಬಸ

ವೇಶ್ವರನು ಪಂಡಿತರನ್ನು ಬರಮಾಡಿಕೊಂಡು, ತನ್ನರಮನೆಯಲ್ಲಿ ಧರ್ಮ ತತ್ವಗಳ ಬಗ್ಗೆ ಪ್ರಸ್ತಾಪ ನಡೆಯಿಸುತ್ತಿದ್ದನು. ಯಾವಸ್ಥಳದಲ್ಲಿ ಇಂಥ ಪ್ರಸ್ತಾಪಗಳು ನಡೆಯುತ್ತಿದ್ದವೋ ಆ ಸ್ಥಳಕ್ಕೆ **ಶಿವಾನುಭವ ಮಂಟಪ ವೆಂಬ** ಹೆಸರು ಉಂಟಾಗಿತ್ತು. ಈ ಮಂಟಪದಲ್ಲಿ ಧರ್ಮತತ್ವಗಳ ಚರ್ಚಿಸಲ್ಪಟ್ಟು, ಅಲ್ಲಿ ನಿರ್ಧಾರವಾದ ವಿಷಯಗಳು, ಅಲ್ಲಿ ನೆರೆದ ಪಂಡಿತರಿಂದ ವಚನರೂಪವಾಗಿ ರಚಿಸಲ್ಪಡುತ್ತಿದ್ದವು. ಆಮೇಲೆ ಈ ವಚನಗಳ ದ್ವಾರಾ ಅನೇಕ ಉಪದೇಶಕರು ದೇಶದಲ್ಲೆಲ್ಲ ಮತತತ್ವಗಳನ್ನು ಬೋಧಿಸಹತ್ತುತ್ತಿದ್ದರು. ಇವರಿಂದ ಸಹಜಿಕವಾಗಿಯೇ ಬಸವೇಶ್ವರನ ಕಾಲದಲ್ಲಿ ಒಂದು ದೊಡ್ಡ ವಾಙ್ಮಯವು ಪ್ರಾದುರ್ಭವಿಸಿತು. ಈ ವಾಙ್ಮಯಕ್ಕೆ ವಚನಶಾಸ್ತ್ರ ಅಥವಾ ಶಿವಾನುಭವವೆಂಬ ಹೆಸರು ಉತ್ಪನ್ನವಾಯಿತು. ಇದರ ಪ್ರಭಾವದಿಂದ ವೀರಶೈವಧರ್ಮವು ದೇಶದಲ್ಲಿ ಬಹು ತೀವ್ರವಾಗಿ, ಬೆಳೆಯಹತ್ತಿತು. ಹೀಗೆ ಬೆಳೆದ ಹಾಗೆಲ್ಲ ದೇಶದ ಬೇರೆ ಬೇರೆ ಕಡೆಗೆ, ಅನೇಕ ವಚನಕಾರರು ಉತ್ಪನ್ನರಾಗಿ, ಧರ್ಮ ಬೋಧೆಯನ್ನು ಮಾಡತೊಡಗಿದರು. ಹೀಗೆ ನೂರಾರು ವಚನಕಾರರು ಅನೇಕ ಮಹತ್ವಗ್ರಂಥಗಳನ್ನು ರಚಿಸಿದ್ದು, ಕಂಡು ಬರುತ್ತದೆ. ಆದರೆ ವಚನಕಾರರು ಪೂರ್ವದ ಧಾರ್ಮಿಕ ಪದ್ಧತಿಯನ್ನು ಬಿಡಲಿಲ್ಲ. ಅವರು ವೇದಾಗಮೋಪನಿಷತ್ತುಗಳ, ತತ್ವಗಳನ್ನೇ ಕನ್ನಡ ಭಾಷೆಯಿಂದ ಜನರಲ್ಲಿ ಬೋಧಿಸಿದರು. ಅನೇಕ ವಚನಕಾರರು, ಅಜ್ಞರು, ಸಂಸ್ಕೃತವನ್ನು ಅರಿಯದವರೆಂದು, ಅವರ ಮೇಲೆ ದೋಷವಿಡುತ್ತಾರೆ. ಇದು ನಿಜವಲ್ಲ. ಅವರು ವಿದ್ವಾಂಸರಿದ್ದರು. ಮತ್ತು ಸಂಸ್ಕೃತವನ್ನು ಚನ್ನಾಗಿ ಅರಿತವರಿದ್ದರು. ಅವರ ಅನೇಕ ವಚನಗಳು ವೇದಾಗಮೋಪನಿಷತ್ತುಗಳಲ್ಲಿಯ ವಾಕ್ಯಗಳ ಭಾಷಾಂತರಗಳೇ ಆಗಿರುತ್ತವೆ. ಮತ್ತು ಅವುಗಳಲ್ಲಿ ಸಂಸ್ಕೃತ ಗ್ರಂಥಗಳ ಅನೇಕ ಅವತರಣಗಳನ್ನು ಕಾಣಬಹುದು.

ವಚನಕಾರರ ಈ ಧಾರ್ಮಿಕ ಚಳವಳಿಯಿಂದ ದೇಶದಲ್ಲಿ ಒಂದು ವಿಲಕ್ಷಣವಾದ ಸಾಮಾಜಿಕ, ಧಾರ್ಮಿಕ ಕ್ರಾಂತಿಯು ಉತ್ಪನ್ನವಾಯಿತು. ಇದರಿಂದ ಸಮಾಜದ ಎಲ್ಲ ವಂಗಡದವರಲ್ಲಷ್ಟೇ ಅಲ್ಲ, ಸ್ತ್ರೀ ವರ್ಗದವರಲ್ಲೂ, ಅನೇಕ ಗ್ರಂಥಕಾರರು ಉತ್ಪನ್ನರಾದರು. ಇವರಲ್ಲಿ ಅನೇಕರು ವಚನ ಗ್ರಂಥಗಳನ್ನು ಮಾಡಿದ್ದಾರೆ. ಮಹಾದೇವಿಯಕ್ಕ, ಮುಕ್ತಾಯಕ್ಕ, ನೀಲಾಂಬಿಕೆ, ಸತ್ಯಕ್ಕ ಇವರೇ ಮೊದಲಾದವರು ಬಸವೇಶ್ವರ

ಕಾಲಕ್ಕೆ ಪ್ರಸಿದ್ಧರಾದರು. ಇವರು ಮಾಡಿದ, ರಚನೆಗಳಾದರೂ ಬಹ
ಸುಂದರವಾಗಿರುತ್ತವೆ.

ಬಸವೇಶ್ವರನ ತರುವಾಯು, ದೇಶದಲ್ಲೆಲ್ಲ ಅವ್ಯವಸ್ಥೆಯು ಉಂ
ಟಾಯಿತು. ದೇಶದಲ್ಲಿ ಯಾವ ಪ್ರಬಲ ರಾಜ್ಯಗಳೂ ಉಳಿಯಲಿಲ್ಲ.
ಮುಂದೆ ಸ್ವಲ್ಪ ಕಾಲದಲ್ಲಿ, ಮುಸಲ್ಮಾನರು ಕರ್ನಾಟಕದಲ್ಲಿ ನುಗ್ಗಿ ಕಲ್ಯಾ
ಣನಗರವನ್ನು ಕೈವಶಮಾಡಿಕೊಂಡು, ಕಲಬುರ್ಗೆಯಲ್ಲಿ ರಾಜ್ಯವಾಳಹತ್ತಿ
ದರು. ಈ ಅಶಾಂತತೆಯ ಕಾಲದಲ್ಲಿ ಮೊದಲಿನ ಧಾರ್ಮಿಕ ಚಳವಳಿ
ಯು ನಿಂತು ಹೋಯಿತು. ಇದರಿಂದ ಗ್ರಂಥಕಾರರೂ ಕಡಿಮೆಯಾಗ
ಹತ್ತಿದರು. ಈ ಸ್ಥಿತಿಯು ವಿಜಯನಗರದರಾಜ್ಯವು ಸ್ಥಾಪಿಸಲ್ಪಡುವವ
ರೆಗೂ ಹಾಗೆ ಉಳಿಯಿತು. ಈ ಅವಧಿಯಲ್ಲಿ ಬಸವೇಶ್ವರನ ಕಾಲ
ದಲ್ಲಿ ರಚಿಸಲ್ಪಟ್ಟಿದ್ದ ಅನೇಕ ಗ್ರಂಥಗಳು ನಾಶವಾದ ಹಾಗೆ ತೋರುತ್ತ
ದೆ. ಈ ಅವನತಿಯ ಕಾಲವು ಸುಮಾರು ನೂರು ವರ್ಷಗಳವರೆಗೂ
ಕರ್ನಾಟಕದಲ್ಲಿ ಇದ್ದಿರಬೇಕೆಂದು ತೋರುತ್ತದೆ.

## ವಿಜಯನಗರದಕಾಲ.

ವಿಜಯನಗರದ ರಾಜ್ಯವು ಸ್ಥಾಪಿಸಲ್ಪಟ್ಟಂದಿನಿಂದ ಕನಾಟಕದ
ಸಂಸ್ಕೃತಿಯು ಪುನಃ ಪ್ರಾರಂಭವಾಯಿತೆಂದು ಹೇಳಲಿಕ್ಕೆ ಏನೂ ಅಡ್ಡಿ
ಇಲ್ಲ. ಈ ಅರಸರು ವಿದ್ಯಾಪಕ್ಷಪಾತಿಗಳಾಗಿದ್ದರು. ಆದ್ದರಿಂದಲೇ
ವಿಜಯನಗರಕ್ಕೆ ವಿದ್ಯಾನಗರವೆಂತಲೂ ಎರಡನೆಯ ಹೆಸರು ಬಿದ್ದಿದೆ.
ಈ ರಾಜದಲ್ಲಿ ಅನೇಕರು ವೀರಶೈವಧರ್ಮಕ್ಕೆ ಉತ್ತೇಜನ ಕೊಟ್ಟಿದ್ದಾ
ರೆ ಹುಕ್ಕ ( ೧೩೩೬ ೧೩೫೩ ) ಬುಕ್ಕ ( ೧೩೩೬ –೧೩೭೯ ) ದೇವ
ರಾಯ ಅಥವಾ ಪ್ರೌಢರಾಯ ( ೧೪೧೯ –೧೪೪೬ ) ವಿರೂಪಾಕ್ಷ(೧೪
೬೭ ೧೪೭೮ ) ಈ ಅರಸರ ಆಸ್ಥಾನದಲ್ಲಿ ಅನೇಕ ವೀರಶೈವ ಪಂಡಿತ
ರು ಮನ್ನಣೆಯನ್ನು ಹೊಂದಿದ್ದರು. ಈ ಕಾಲದಲ್ಲಿ ಅನೇಕ ಪುರಾಣಗಳೂ
ವಚನಗ್ರಂಥಗಳೂ ರಚಿಸಲ್ಪಟ್ಟವು. ಇವರು ರಚಿಸಿದ ಪುರಾಣಗಳು ಬಸವೇಶ್ವ
ರನ ಕಾಲಕ್ಕೆ ಆಗಿಹೋದ ಮಹಾ ಪುರುಷರ ಸಂಬಂಧವಾಗಿ ಇರುತ್ತವೆ ಈ
ಪುರಾಣಗಳು ಬಹು ಸುಲಭ ಭಾಷೆಯಲ್ಲಿ ನಾನಾತರದ ಷಟ್ಪದಿಗಳೊಳಗೆ ಬ
ಹು ಸುಂದರವಾಗಿ ರಚಿಸಲ್ಪಟ್ಟಿವೆ. ಈ ಚರಿತ್ರೆಗಳು ವಾರ್ಧಿಕದಲ್ಲಷ್ಟೇ ಅಲ್ಲ,
ರಗಳೆಗಳು ಸಾಂಗತ್ಯಗಳು, ತ್ರಿಪದಿಗಳು, ನಾನಾಬಗೆಯ ಪದ್ಯಗಳು ಹೀಗೆ
ಅನೇಕರಚನೆಗಳಲ್ಲಿ ಬರೆಯಲ್ಪಟ್ಟವು. ಇದರಲ್ಲಿ ಅವರ ಉದ್ದೇಶವು ಜನಸ

ಮುದಾಯದಲ್ಲಿ ಧರ್ಮಜಾಗ್ರತೆಯನ್ನು ಮಾಡುವದೇ ಮುಖ್ಯವಾಗಿತ್ತು. ಇದಲ್ಲದೆ ಇವರಲ್ಲಿ ಅನೇಕ ಗ್ರಂಥಕಾರರು ಬಸವೇಶ್ವರನ ಕಾಲಕ್ಕೆ ಆಗಿಹೋದ ಶಿವಶರಣರ ವಚನಗಳನ್ನು ಕೂಡಿಸಹತ್ತಿ, ನಾನಾಬಗೆಯ ಸಂಗ್ರಹಗಳನ್ನು ನಿರ್ಮಿಸಿದರು. ಕೆಲವರು ಧಾರ್ಮಿಕ ವಿಷಯಗಳನ್ನು ಈ ಪುರಾತನರ ವಚನಗಳ ದ್ವಾರಾ ನಿರೂಪಿಸಹತ್ತಿದರು. ಬೇರೆ ಕೆಲವರು ಆ ಶಿವಶರಣರ ವಚನಗಳನ್ನು ಸಂಗ್ರಹಿಸಿ ಅವುಗಳಿಗೆ ಟೀಕೆಗಳನ್ನು ಬರೆಯಹತ್ತಿದರು. ಬೇರೆ ಕೆಲವರು ತಮ್ಮ ಅನುಭವದಿಂದ ಸ್ವತಂತ್ರ ವಚನಗಳನ್ನೇ ರಚಿಸಿದರು ಹೀಗೆ ಈ ಕಾಲಕ್ಕೆ ಅನೇಕ ವೀರಶೈವ ಧರ್ಮಗ್ರಂಥಕಾರರು ಹುಟ್ಟಿ ವೀರಶೈವ ಧರ್ಮದ ತೇಜಸ್ಸನ್ನು ಪಸರಿಸಿದರು

**ಹುಕ್ಕ ಬುಕ್ಕ** :— ಇವರ ಕಾಲದಲ್ಲಿ ಹರಿಹರ ರಾಘವಾಂಕ ಭೀಮಕವಿ ಇವರು ಪ್ರಸಿದ್ಧರಾಗಿದ್ದರು ಹರಿಹರನಿಗೆ ರಾಘವಾಂಕನು ಶಿಷ್ಯ. ರಾಘವಾಂಕನಿಗೆ ಭೀಮಕವಿಯು ಶಿಷ್ಯನೆಂದು ವೀರಶೈವ ಗ್ರಂಥಕಾರರು ತಿಳಿದಿದ್ದಾರೆ. ಭೀಮಕವಿಯು ಬಸವಪುರಾಣವನ್ನು ೧೩೬೯ ರಲ್ಲಿ ಬರೆದಿರುವದರಿಂದ ಇವರೆಲ್ಲರು ಈ ಹುಕ್ಕ ಬುಕ್ಕರ ಕಾಲದಲ್ಲಿ ಇರಬೇಕು. ಹರಿಹರನು ಶಿವಶರಣರ ಬಗ್ಗೆ ಅಸಂಖ್ಯ ರಗಳೆಗಳನ್ನು ರಚಿಸಿರುವನಲ್ಲದೆ ಗಿರಿಜಾಕಲ್ಯಾಣ ಮೊದಲಾದ ಉದ್ಗ್ರಂಥಗಳನ್ನು ಬರೆದಿರುವನು. ರಾಘವಾಂಕನೂ ಭೀಮಕವಿಯೂ ಬಸವ, ಸಿದ್ಧರಾಮ, ಆದಯ್ಯ, ಮೊದಲಾದ ಶಿವಶರಣರ ಪುರಾಣಗಳನ್ನು ರಚಿಸಿರುವರು. ಇವೆಲ್ಲವು ಬಹು ಪ್ರೌಢತರವಾದ ಕಾವ್ಯಗಳಾಗಿವೆ.

**ದೇವರಾಯ** :— ಈತನಿಗೆ ಪ್ರೌಢರಾಯನೆಂತಲೂ ಹೆಸರಿದ್ದ ಹಾಗೆ ತೋರುತ್ತದೆ. ಇವನು ಬಹು ಪ್ರತಾಪಶಾಲಿಯಾದ ರಾಜನಾಗಿದ್ದನು. ಮುಸಲ್ಮಾನರೊಡನೆ ಅವನು ಅನೇಕ ಸಾರೆ ಯುದ್ಧ ಮಾಡಬೇಕಾಯಿತು. ಇವನು ವಿದ್ಯಾ ಪಕ್ಷಪಾತಿಯಾಗಿದ್ದಲ್ಲದೆ ಸ್ವತಃ ಕವಿಯಾಗಿದ್ದನು. ಇವನ ರಾಜ್ಯ ಕಾರಭಾರದಲ್ಲಿ ಅನೇಕ ವೀರಶೈವರು ಶ್ರೇಷ್ಠತರದ ಉದ್ಯೋಗಗಳನ್ನು ಪಡೆದಿದ್ದರು. ಇವರಲ್ಲಿ ಅನೇಕರು ಕವಿಗಳೂ, ಗ್ರಂಥಕಾರರೂ ಇರುವರು. ಜಕ್ಕಣಾರ್ಯನು ಈ ರಾಜನ ಮಂತ್ರಿಯಾಗಿದ್ದನು. ಲಕ್ಕಣ್ಣದಂಡೇಶನು ಸೇನಾನಾಯಕನಾಗಿದ್ದನು. ಇವರಿಬ್ಬರೂ ವೀರಶೈವರಲ್ಲಿ ಉದ್ದಾಮ ಗ್ರಂಥಕಾರರು. ಜಕ್ಕಣಾರ್ಯನು ಶಿವಶರಣರ ವಚನಗಳಿಂದ ನೂರಾ ಒಂದು ಸ್ಥಳಗಳನ್ನು ನಿರೂಪಿಸಿ.

ಒಂದು ಗ್ರಂಥವನ್ನು ರಚಿಸಿದ್ದಾನೆ. ಪ್ರಭುದೇವರ ವಚನಗಳಿಗೆ ಮಾಡಿದ, ಟೀಕೆಯಾದರೂ ಇವನದೇ ಇರುತ್ತದೆ. ಲಕ್ಕಣ್ಣದಂಡೇಶನು ಶಿವತತ್ವಚಿಂತಾಮಣಿ ಎಂಬ ಹೆಸರಿನ ವಾರ್ಧಿಕಷಟ್ಪದಿ ಗ್ರಂಥವನ್ನು ರಚಿಸಿದ್ದಾನೆ. ಈ ಗ್ರಂಥದಲ್ಲಿ ಅವನು ದೇವರಾಯನು ಮಾಡಿದ ಯುದ್ಧಗಳಲ್ಲಿ ತಾನು ವಿಶೇಷ ಸಹಾಯ ಮಾಡಿದವನೆಂದು ಹೇಳಿಕೊಂಡಿದ್ದಾನೆ. ಈ ಗ್ರಂಥಕಾರರಲ್ಲದೆ ಕಲ್ಲಮಠದ ಪ್ರಭುದೇವರೂ ಕರಸ್ಥಲದ ನಾಗಿದೇವರೂ ಕುಮಾರ ಬಂಕನಾಥನೂ ಇವರೂ ಸಹ ಇದೇ ಕಾಲಕ್ಕೆ ಇದ್ದರು. ಇವರೆಲ್ಲರು ಮೊದಲಿನ ಶಿವ ಶರಣರ ವಚನಗಳನ್ನು ಪ್ರಾಬಲ್ಯ ಸ್ಥಿತಿಗೆ ತಂದರು. ಶತಕ ತ್ರಯವನ್ನು ರಚಿಸಿದ ಮೊಗ್ಗೆಯಮಾಯಿದೇವನೂ ಪ್ರಭುಲಿಂಗಲೀಲೆಯನ್ನು ಬರೆದ ಚಾಮರಸನೂ ಇದೇ ಕಾಲಕ್ಕೆ ಇದ್ದರು. ಇವರೆಲ್ಲರು ದೇವರಾಜನಿಂದ ವಿಶೇಷ ಮನ್ನಣೆಯನ್ನು ಹೊಂದಿದವರಾಗಿದ್ದರು. ಚನ್ನಬಸವ ಪುರಾಣವನ್ನು ಬರೆದ ವಿರೂಪಾಕ್ಷ ಪಂಡಿತರು ಹೇಳುವದೇನಂದರೆ, ಈ ಕಾಲಕ್ಕೆ ನೂರಾ ಒಂದು ವಿರಕ್ತರು ಉದ್ಭವಿಸಿ, ದೇಶದಲ್ಲಿ ಧರ್ಮ ಜಾಗ್ರತೆಯನ್ನು ಮಾಡಿದರು. ಈ ಸಂಗತಿಯಿಂದ ಈ ಕಾಲದಲ್ಲಿ ಅನೇಕ ವೀರಶೈವ ಗ್ರಂಥಕಾರರು ಉತ್ಪನ್ನರಾದರೆಂದು ಊಹಿಸಲಿಕ್ಕೆ ಆಸ್ಪದವಾಗುತ್ತದೆ.

**ವಿರೂಪಾಕ್ಷಃ—** ದೇವರಾಜನ ಆಳಿಕೆಯ ತರುವಾಯ, ದೇಶದಲ್ಲಿ ಅನಾಯಕತನವು ಉತ್ಪನ್ನವಾಯಿತು. ಸಿಂಹಾಸನಕ್ಕೋಸ್ಕರ ಅನೇಕ ವರ್ಷ ಬಡಿದಾಟಗಳು ನಡೆದವು. ಇಂಥ ಸ್ಥಿತಿಯಲ್ಲಿ, ದೇಶದಲ್ಲಿ ಅನಾಚಾರ ಅನೀತಿ ಮುಂತಾದ ದುರ್ಗುಣಗಳು ಪ್ರಬಲಿಸುವದು ಸಹಜವದೆ. ಈ ಸ್ಥಿತಿಯು ಕೆಲವು ದಿವಸ ಆಗಿಹೋದ ಬಳಿಕ, ವಿರೂಪಾಕ್ಷನೆಂಬ ರಾಜನು ವಿಜಯನಗರದ ರಾಜ್ಯಭಾರ ಮಾಡ ತೊಡಗಿದನು. ಈ ಕಾಲಕ್ಕೆ ಮಸುಳಿ ಹೋದ ವೀರಶೈವ ಧರ್ಮವು ಪುನಃ ತಲೆ ಎತ್ತಿತು. ಈ ಕಾರ್ಯವನ್ನು ಮಾಡಿದಂಥಾ ಮಹಾ ಪುರುಷನು ಯಾರೆಂದರೆ, ತೋಂಟದಾರ್ಯರು. ಇವರು ಮಾಡಿದ ಕಾರ್ಯಗಳು ಅತ್ಯದ್ಭುತವಾಗಿವೆ. ಇವರು ಆ ಕಾಲಕ್ಕೆ ಇಡೀ ಕರ್ನಾಟಕ ದೇಶದಲ್ಲಿ ಪ್ರವಾಸ ಮಾಡಿ, ಧರ್ಮ ಜಾಗ್ರತೆಯನ್ನು ಉಂಟು ಮಾಡಿದರು. ಇವರು ಧರ್ಮೋಪದೇಶ ಮಾಡುವದಕ್ಕೋಸ್ಕರ ಸಾವಿರಾರು ಮಠಗಳನ್ನು ಸ್ಥಾಪಿಸಿ, ಆಲ್ಲಿ ಯೋಗ್ಯರನ್ನು ನೇಮಿಸಿ, ಯಾವಾಗಲೂ ಧರ್ಮ

ಬೋಧೆ ನಡೆಯುವಂತೆ ವ್ಯವಸ್ಥೆ ಮಾಡಿದರು. ಇವರು ಷಟ್ಸ್ಥಲದ ವಿಷಯವಾಗಿ, ಒಂದು ಸ್ವತಂತ್ರ ಗ್ರಂಥವನ್ನೇ ರಚಿಸಿದರು. ಇವರ ಶಿಷ್ಯರುಗಳಾದ ಘನಲಿಂಗ, ಬೋಳ ಬಸವೇಶ್ವರ ಇವರೂ ಬಹು ಸುಂದರವಾದ ವಚನಗಳನ್ನು ರಚಿಸಿದ್ದಾರೆ. ಗುಬ್ಬಿ ಮಲುಹಣನು ಗಣಭಾಷ್ಯ ರತ್ನಮಾಲೆ ಎಂಬ ಶಿವಶರಣರ ಉಕ್ತಿಗಳ ಸಂಗ್ರಹವನ್ನು ರಚಿಸಿದನು. ಸ್ವತಂತ್ರ ಸಿದ್ಧಲಿಂಗೇಶ್ವರನೂ ಇದೇಕಾಲಕ್ಕೆ ತನ್ನ ಗ್ರಂಥವನ್ನು ರಚಿಸಿದನು. ವಿರುಪಾಕ್ಷ ಪಂಡಿತನು ಈ ಕಾಲಕ್ಕೆ ೭೦೦ ಅಮರಗಣಂಗಳು ಉತ್ಪನ್ನರಾಗಿ ದೇಶದಲ್ಲಿ ಧರ್ಮಜಾಗ್ರತೆಯನ್ನು ಮಾಡಿದರೆಂದು ಬರೆದಿದ್ದಾನೆ. ಇದರಮೇಲಿಂದ ಆ ಕಾಲಕ್ಕೆ ತೋಂಟದಾರ್ಯರ ಪ್ರಭಾವದಿಂದ ದೇಶದಲ್ಲೆಲ್ಲ ಎಂಥ ಮಹತ್ತರ ಧಾರ್ಮಿಕ ಜಾಗ್ರತೆಯು ಮಾಡಲ್ಪಟ್ಟಿತೆಂಬದನ್ನು ವಾಚಕರು ಅರಿಯಬಹುದು.

ಇದೇಸಮಯಕ್ಕೆ ವೀರಶೈವರಲ್ಲಿ ಇನ್ನೊಬ್ಬ ಮಹಾ ಪುರುಷನು ಉದಯವಾದನು. ಅವನು ಯಾರೆಂದರೆ ನಿಜಗುಣ ಶಿವಯೋಗಿಯು. ಅನೇಕರು ನಿಜಗುಣ ಶಿವಯೋಗಿಯು ಇದಕ್ಕೂ ಪೂರ್ವಿಕನೆಂದು ತಿಳಿದಿದ್ದಾರೆ. ಇದು ತಪ್ಪೆಂದು ತೋರುತ್ತದೆ. ಬಸವೇಶ್ವರನ ಕಾಲದಲ್ಲಿ ನಿಜಗುಣವೆಂಬ ಹೆಸರಿನ ಒಬ್ಬ ವಚನಕಾರನು ಇದ್ದುದು ನಿಜವು. ಆದರೆ ಆತನು ಈ ನಿಜಗುಣ ಶಿವಯೋಗಿಯಲ್ಲ. ಈ ಸಂಗತಿಯು ಅವರಿಬ್ಬರ ಮುದ್ರಿಕೆಗಳಿಂದ ತಿಳಿದು ಬರುವಂತೆ ಇದೆ. ಮೊದಲಿನ ನಿಜಗುಣಿಯ ಮುದ್ರಿಕೆಯು ನಿಜಗುಣಯೋಗಿಯ ಯೋಗಾ" ಎಂದು ಇದೆ. ಆದರೆ ಈ ಎರಡನೇ ನಿಜಗುಣಿಯ ಮುದ್ರಿಕೆಯು ' ಶಂಭುಲಿಂಗ ಎಂದು ಇದೆ. ಇದರ ಮೇಲಿಂದ ಇವರಿಬ್ಬರೂ ಬೇರೆಂಬುದು ಸ್ಪಷ್ಟವಾಗುತ್ತದೆ.

ನಿಜಗುಣ ಶಿವಯೋಗಿಯು ಹಿಂದೂ ಧರ್ಮದ ವಿಶ್ವಕೋಶಕಾರನೆಂದು ಹೇಳಬಹುದು. ಕರ್ನಾಟಕದಲ್ಲಿ ಯಾವನಾದರೂ ಗ್ರಂಥಕಾರನು ಈಗಿನವರೆಗೂ ಧಾರ್ಮಿಕ ತೇಜಸ್ಸನ್ನು ಸ್ಥಿರಗೊಳಿಸಲಿಕ್ಕೆ ಕಾರಣನಾಗಿದ್ದರೆ, ಆತನು ನಿಶ್ಚಯವಾಗಿ ಈ ನಿಜಗುಣ ಶಿವಯೋಗಿಯೇ ಇರುತ್ತಾನೆ. ಇವನು ರಚಿಸಿದ ಪದ್ಯಗಳು, ನಿರೂಪಿಸಿದ ವೇದಾಂತ ಗ್ರಂಥಗಳು ಕರ್ನಾಟಕದ ಎಲ್ಲ ಸಮಾಜದವರ ಕೈಯ್ಯಲ್ಲಿ ಓಡಾಡುತ್ತವೆ. ಸಂಸ್ಕೃತವನ್ನರಿಯದವರು ವೇದಾಂತದ ತತ್ವಗಳನ್ನು ತಿಳಿಯಲಿಚ್ಛಿಸಿ

ದರೆ, ಅವರ ಆಕಾಂಕ್ಷೆಗಳು ಈತನ ಗ್ರಂಥಗಳಿಂದ ಪೂರ್ಣತೆಯನ್ನು ಹೊಂದುತ್ತವೆ. ಇವನ ಗ್ರಂಥಗಳು ಎಲ್ಲ ಧರ್ಮದವರಲ್ಲಿಯೂ ಮಠಗಳಲ್ಲಿಯೂ ಪಠ್ಯ ಪುಸ್ತಕಗಳಂತೆ ಇರುವವು. ಇವನು ರಚಿಸಿದ ಭಕ್ತಿಯ, ನೀತಿಯ, ಜ್ಞಾನದ ಪದಗಳು ಆಬಾಲವೃದ್ಧರಿಗೆ ಪ್ರಿಯಕರವಾಗಿರುತ್ತವೆ. ಅವನ ಹಾಡುಗಳು ಏಕತಾರೆಯ ಅಯ್ಯನವರೂ ದಾಸರೂ ಇವರ ಬಾಯಲ್ಲಿ ಸದಾ ಇರುತ್ತವೆ. ಈತನ ಕೃತಿಗಳು ಅನೇಕ ಜನರನ್ನು ಪ್ರೇರೇಪಿಸಿ ಧಾರ್ಮಿಕವ್ಯಾಸಂಗಕ್ಕೆ ತೊಡಗಿಸಿರುವವು. ಇವನ ಗ್ರಂಥಗಳು ಸಂಸ್ಕೃತದಲ್ಲಿ ಸಹ ಭಾಷಾಂತರಿಸಲ್ಪಟ್ಟಿವೆ. ಇಂಥ ಲೋಕೋತ್ತರ ಪುರುಷನು ಈ ಕಾಲಕ್ಕೆ ಜನಿಸಿ ಕರ್ನಾಟಕದಲ್ಲಿ ಧಾರ್ಮಿಕ ಸ್ಥಿತಿಗೆ ಪ್ರಾಚುರ್ಯವನ್ನು ತಂದುಕೊಟ್ಟನು.

ವಿಜಯನಗರದ ಕಡೆಯ ಅರಸರು ವೈಷ್ಣವ ಪಂಥಕ್ಕೆ ಒಲಿದವರಾಗಿದ್ದರು. ಆದ್ದರಿಂದ ಅವರ ಆಸ್ಥಾನಗಳಲ್ಲಿ ಶೈವಮತಗಳಿಗೆ ಅಷ್ಟು ಪ್ರಾಮುಖ್ಯತೆಯು ದೊರೆತಿರಲಿಲ್ಲ. ಆದರೆ ಈ ಸಂಗತಿಯಿಂದ ವೀರಶೈವ ಧರ್ಮಕ್ಕೆ ಆಗ ಚ್ಯುತಿಯು ಒದಗಿದಂತೆ ತೋರುವದಿಲ್ಲ. ಯಾಕಂದರೆ ವಿಜಯನಗರದ ಅರಸರ ಪೂರ್ವಕಾಲದಲ್ಲಿ ಮಹತ್ತರ ಧರ್ಮ ಸುಧಾರಕರೂ ವಚನಕಾರರೂ ಮಠಾಧಿಪತಿಗಳೂ ಪುರಾಣಕಾರರೂ ಪದ್ಯಕಾರರೂ ಉತ್ಪನ್ನರಾದ್ದರಿಂದ, ಧಾರ್ಮಿಕ ಚಳವಳಿಯು ಯಾವರೀತಿಯಿಂದಲೂ ಆಗ ಮುಸುಕಿಸಿ ಹೋಗಲಿಲ್ಲ. ಇದಲ್ಲದೆ ಕೃಷ್ಣರಾಯರಿಂದ ರಾಮರಾಜನವರೆಗೂ ಶಾಂತತೆಯು ಕಾಲವು. ಆದ್ದರಿಂದ ಈ ಕಾಲಕ್ಕೂ ಸಹ ಅನೇಕ ಧಾರ್ಮಿಕ ಪುರುಷರೂ ಗ್ರಂಥಕಾರರೂ ಆಗಿಹೋದರು. ಉದ್ಭಟಕಾವ್ಯವನ್ನು ಬರೆದ ಬಸವಾಂಕನು, ಭಿಕ್ಷಾಟನ ಚರಿತೆಯನ್ನು ಬರೆದ ಗುರುಲಿಂಗ ವಿಭುವು, ವೀರಶೈವಾಮೃತಮಹಾಪುರಾಣವನ್ನು ಬರೆದ ಗುಬ್ಬಿಯ ಮಲ್ಲಣಾರ್ಯನು, ಚನ್ನಬಸವ ಪುರಾಣವನ್ನು ಬರೆದ ವಿರುಪಾಕ್ಷ ಪಂಡಿತನು ಇನ್ನೂ ಅನೇಕರು ವಿಜಯನಗರದ ರಾಜ್ಯದ ಅಂತ್ಯಕಾಲಕ್ಕೆ ಪ್ರಸಿದ್ಧರಾಗಿದ್ದರು.

ತಾಳೀಕೋಟೆಯ ಯುದ್ಧವಾದ ಬಳಿಕ ರಾಜ್ಯದಲ್ಲೆಲ್ಲ ಅನಾಯಕತೆಯು ಉತ್ಪನ್ನವಾಯಿತು. ಮುಸಲ್ಮಾನರ ದಾಳಿಗಳು ಕರ್ನಾಟಕದಲ್ಲೆಲ್ಲ ಹೆಚ್ಚಿದವು. ಇದರಿಂದ ಕರ್ನಾಟಕ ದೇಶದ ಸಂಸ್ಕೃತಿಯು ಎಲ್ಲಿ ಮುಳುಗಿ ಹೋಗುವದೋ ಏನೋ ಎಂಬ ಭೀತಿಯು ಉತ್ಪನ್ನವಾಯಿತು.

ಆದರೆ ನಮ್ಮ ಕರ್ನಾಟಕದ ಸುದೈವದಿಂದ ಹೊಸದೊಂದು ರಾಜ್ಯವು ಆಗ ಕರ್ನಾಟಕ ದೇಶದ ಪಶ್ಚಿಮ ಮೂಲೆಯಲ್ಲಿ ಉದಯವಾಯಿತು. ಈ ರಾಜ್ಯವು ಕರ್ನಾಟಕದ ಸಂಸ್ಕೃತಿ, ಆದರ ಕಲೆ, ಆದರ ವಿದ್ಯೆಯನ್ನು ಸ್ಥಿರವಾಗಿ ಹಿಡಿದು ನೂರಾಐವ್ವತ್ತು ವರ್ಷಗಳವರೆಗೂ ಅವುಗಳನ್ನು ಕಾಪಾಡಿಕೊಂಡಿತು. ಈ ರಾಜ್ಯವಾವುದೆಂದರೆ ಬಿದನೂರ ಅಥವಾ ಇಕ್ಕೇರಿಯ ರಾಜ್ಯ. ಈ ಬಿದನೂರಿನ ರಾಜ್ಯವು ಪ್ರಬಲಿಗೆ ಬಂದಂದಿನಿಂದ ಕರ್ನಾಟಕಕ್ಕೆ ಹೊಸ ತೇಜಸ್ಸು ಉತ್ಪನ್ನವಾಗಲಿಕ್ಕೆ ಕಾರಣವಾಯಿತು.

## (೩) ಬಿದನೂರ ರಾಜ್ಯದಕಾಲ.

ಬಿದನೂರಿನ ಅರಸರ ಪೂರ್ವಜರು ವಿಜಯನಗರ ಭೂಪತಿಗಳ ಮಾಂಡಲಿಕರಾಗಿದ್ದರು. ಆದರೆ ಆ ರಾಜ್ಯವು ಹಾಳಾದಬಳಿಕ ಪಶ್ಚಿಮ ಘಟ್ಟದ ಬಂದುಕಟ್ಟಿನ ಸೀಮೆಯಲ್ಲಿ ಇವರು ನೆಲೆಯೂರಿಕೊಂಡು ಮುಸಲ್ಮಾನರ ದಾಳಿಗಳನ್ನು ಪ್ರತಿಭಟಿಸಹತ್ತಿದರು. ಇವರು ಶಿವಮೊಗ್ಗೆ ಜಿಲ್ಹೆ, ರಾಣೇಬಿನ್ನೂರ ಕೋಡ ತಾಲೂಕುಗಳು ದಕ್ಷಿಣ ಕಾನಡಾ ಜಿಲ್ಹೆ ಹಾಸನ ಮತ್ತು ಕಡೂರ ಜಿಲ್ಹೆಗಳನ್ನು ಆಕ್ರಮಿಸಿದರು. ಈ ರಾಜ್ಯದ ಅರಸರುಗಳೆಲ್ಲರು ಬಹು ಯೋಗ್ಯತೆಯುವರಿದ್ದು, ಅತ್ಯಂತ ಧಾರ್ಮಿಕ ಬುದ್ಧಿಯುವರೂ ವಿದ್ಯಾಪಕ್ಷಪಾತಿಗಳೂ ಆಗಿದ್ದರು. ಇವರು ವೀರಶೈವರಿದ್ದರೂ, ಬೇರೆ ಜಾತಿಯುವರನ್ನು ಎಂದೂ ಅವಹೇಲನೆ ಮಾಡಲಿಲ್ಲ. ಈ ರಾಜರು ರಾಜ್ಯವಾಳಿದ ಪ್ರಾಂತದಲ್ಲಿ ಅವರಿಂದ ಸಹಾಯ ಹೊಂದದ ದೇವಾಲಯವಿಲ್ಲ, ಮಠವಿಲ್ಲ. ಇವರು ವ್ಯಾಪಾರಕ್ಕೆ ಬಹಳ ಉತ್ತೇಜನ ಕೊಡುತ್ತಿದ್ದುದರಿಂದ ದೇಶದಲ್ಲೆಲ್ಲ ಸಂಪತ್ತು ತುಂಬಿತುಳುಕುತ್ತಿತ್ತು. ಈ ಸಂಗತಿಯನ್ನು ಅನೇಕ ಯುರೋಪಿಯನ್ ಪ್ರವಾಸಿಗಳು ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿದ್ದಾರೆ. ಈ ಅರಸರಲ್ಲಿ ಕೆಲವರು ಸ್ವತಃ ಗ್ರಂಥಕಾರರು ಇದ್ದರು. ಇಂಥವರಲ್ಲಿ ಬೂದಿ ಬಸವಪ್ಪ ನಾಯಕರು ಅತಿ ಪ್ರಸಿದ್ಧಿಯನ್ನು ಪಡೆದರು.

ಇವರು ಸಂಸ್ಕೃತ ಮತ್ತು ಕನ್ನಡ ವಾಙ್ಮಯಕ್ಕೆ ಬಹಳ ಉತ್ತೇಜನ ಕೊಟ್ಟರು. ಇವರು ಶಿವತತ್ವರತ್ನಾಕರವೆಂಬ ಮಹತ್ತರವಾದ ಸಂಸ್ಕೃತ ಗ್ರಂಥವನ್ನು ರಚಿಸಿದ್ದಾರೆ. ಹ್ಯಾಗೆ ನಿಜಗುಣಶಿವಯೋಗಿಯ ಗ್ರಂಥಗಳು ವಿಶ್ವ ಕೋಶವೆಂದು ಎಣಿಸಲ್ಪಡಬಹುದೋ, ಹಾಗೆಯೇ ಈ

ಗ್ರಂಥವಾದರೂ ಒಂದು ವಿಶ್ವ ಕೋಶವಾಗಿದೆ. ನಿಜಗುಣಶಿವಯೋಗಿಗಳು ತಮ್ಮ ಗ್ರಂಥಗಳಲ್ಲಿ ಧಾರ್ಮಿಕ ಒಂದೇ ಭಾಗವನ್ನು ತೆಗೆದುಕೊಂಡಿದ್ದರೆ, ಬೂದಿ ಬಸವಪ್ಪ ನಾಯಕರು ಧರ್ಮವನ್ನಷ್ಟೇ ಅಲ್ಲ, ಜಗತ್ತಿನಲ್ಲಿ ಇರಬಹುದಾದ ಎಲ್ಲ ತರದ ಕಲೆಗಳ ಜ್ಞಾನವನ್ನು ಬಹು ಸ್ಫುಟವಾಗಿಯೂ ಸಂಕ್ಷೇಪವಾಗಿಯೂ ವಿವರಿಸಿರುವರು. ಯಾರಾದರೂ ಹಿಂದೂ ನಾಗರಿಕತೆಯ ಜ್ಞಾನವನ್ನು ಪಡೆದುಕೊಳ್ಳಲು ಇಚ್ಛಿಸಿದರೆ, ಅವರು ಈ ಗ್ರಂಥವನ್ನು ಓದಿದಲ್ಲಿ ಅವರ ಇಚ್ಛೆಯು ಪೂರ್ತಿಯಾಗದೆ ಇರಲಾರದು. ಈ ಗ್ರಂಥದಲ್ಲಿ ಪಶು ಚಿಕಿತ್ಸೆ, ಶಸ್ತ್ರ ವಿದ್ಯೆ, ನಗರರಚನೆ ಇಂಥ ಉಪಯುಕ್ತ ವಿಷಯಗಳನ್ನು ಸಹ ವರ್ಣಿಸಿದ್ದಾರೆ. ಈ ಮಹತ್ತರ ಗ್ರಂಥವನ್ನು ಮಿ|| ಬಿ. ರಾಮರಾವ ಇವರು ಈಗ ಪ್ರಸಿದ್ಧಿಸುತ್ತಿದ್ದು, ಅದನ್ನು ಪ್ರತಿಯೊಬ್ಬ ಕರ್ನಾಟಕಸ್ಥನು ಸಂಗ್ರಹಿಸುವಷ್ಟು ಮಹತ್ವವುಳ್ಳ ಗ್ರಂಥವಾಗಿದೆ.

ಈ ರಾಜರ ಕಾಲದಲ್ಲಿ ಅನೇಕ ವೀರಶೈವ ಮಠಗಳು ಸ್ಥಾಪಿಸಲ್ಪಟ್ಟು, ಅಲ್ಲಿ ವೀರಶೈವ ಪಂಡಿತರು ನಿಯೋಜಿತರಾಗಿದ್ದರು. ಮನೋವಿಜಯವನ್ನೂ, ಶಬ್ದ ಮಂಜರಿಯನ್ನೂ, ಸೋಮನಾಥ ಪುರಾಣವನ್ನೂ ಬರೆದ ಮರಿ ತೋಂಟದಾರ್ಯರು ಇದೇ ಕಾಲಕ್ಕೆ ಪ್ರಸಿದ್ಧಿಯನ್ನು ಹೊಂದಿದರು. ವೀರಶೈವಾಚಾರ ಕೌಸ್ತುಭವನ್ನು ರಚಿಸಿದ ಮೋನಪ್ಪ ಮಂತ್ರಿಗಳೂ, ಕ್ರಿಯಾಸಾರಕ್ಕೆ ಟೀಕೆಯನ್ನು ಬರೆದ ನಿರ್ವಾಣ ಮಂತ್ರಿಗಳೂ, ಈ ರಾಜರ ಆಸ್ಥಾನದಲ್ಲಿ ಶ್ರೇಷ್ಠ ಪದವಿಗಳನ್ನು ಹೊಂದಿದ್ದರು. ಸೋಸಲೇ ರೇವಣಾರಾಧ್ಯರೂ ವೀರಭದ್ರ ದೇಶಿಕೇಂದ್ರರೂ ಇದೇ ಕಾಲಕ್ಕೆ ಪ್ರಸಿದ್ಧರಾಗಿದ್ದರು. ಈ ಬಿದನೂರು ಅರಸರ ಬಿರುದಾವಳಿಗಳಲ್ಲಿ "ವಿಶುದ್ಧ ವೈದಿಕಾದ್ವೈತ ಸಿದ್ಧಾಂತ ಪ್ರತಿಷ್ಠಾಪಕ, ಶಿವಗುರುಭಕ್ತಿ ಪರಾಯಣ" ಎಂಬ ಶಬ್ದಗಳು ದೊರಕುತ್ತವೆ. ಈ ತರದ ಬಿರುದುಗಳನ್ನು ಈ ರಾಜರು ಹೊಂದಿದ್ದರ ಮೇಲಿಂದ ಇವರಲ್ಲಿ ಧಾರ್ಮಿಕ ಬುದ್ಧಿಯು ಎಷ್ಟು ತೀವ್ರವಾಗಿ ವಾಸಿಸುತ್ತಿತ್ತು ಎಂಬದು ವ್ಯಕ್ತವಾಗುತ್ತದೆ.

ಈ ಬಿದನೂರ ಅರಸರಂತೆಯೇ ಸ್ವಾದಿ ಮತ್ತು ಬೀಳಗಿಯ ಅರಸರಲ್ಲಿಯೂ ಗ್ರಂಥಕಾರರು ದೃಗ್ಗೋಚರವಾಗುತ್ತಾರೆ. ಸ್ವಾದಿಯ ಅರಸರ ಪೂರ್ವಜನಾದ ಸದಾಶಿವೇಂದ್ರನೂ ಒಂದು ಗ್ರಂಥವನ್ನು ರಚಿಸಿ

ದ್ದಾನೆ.

೧೮ ನೇ ಶತಮಾನದ ಅಂತ್ಯ ಭಾಗದಲ್ಲಿ ಮೇಲ್ಕಂಡ ಯಾಪತ್ತಾ ರಾಜ್ಯಗಳೂ ಮೈಸೂರ ರಾಜ್ಯವೂ ಹೈದರಅಲ್ಲಿ ಮತ್ತು ಟೀಪು ಸುಲ್ತಾನ ಇವರ ಮಹತ್ವಾಕಾಂಕ್ಷೆಗೆ ಒಳಗಾಗಿ, ಅವೆಲ್ಲ ರಾಜ ಮನೆತನಗಳು ಲಯವನ್ನು ಹೊಂದಿದವು. ಕರ್ನಾಟಕದ ಉಳಿದ ಭಾಗಗಳೂ ಸಹ ಪೇಶ್ವೆಯವರ ಮತ್ತು ನಿಜಾಮನ ಆಡಳಿತೆಗೆ ಒಳಪಟ್ಟವು. ಅಂದಿನಿಂದ ಕರ್ನಾಟಕದ ಸತ್ವಾಂಶವು ಹೊರಟು ಹೋಯಿತು. ಇದರ ಕೂಡ ವೀರಶೈವರ ಧರ್ಮ ಜಾಗ್ರತೆಯೂ ವಿದ್ಯಾಭಿಲಾಷೆಗಳೂ ಅಳಿದು ಹೋದವು. ಅಂದಿನಿಂದ ವೀರಶೈವ ಕನ್ನಡ ಗ್ರಂಥಕಾರರು ವಿರಳರಾದರು. ಈ ಸ್ಥಿತಿಯು ಕರ್ನಾಟಕದ ದುರ್ದೈವದಿಂದ ಈ ವರೆಗೂ ಉಳಿದಿರುತ್ತದೆ.

ಈ ಮೇರೆಗೆ ನಾನು ಹೋದ ಸಾವಿರ ವರ್ಷದಲ್ಲಿ ವೀರಶೈವ ವಾಙ್ಮಯದಲ್ಲಿ ಮುಖ್ಯವಾಗಿರುವ ಹೆಗ್ಗುರುತುಗಳನ್ನು ಮಾತ್ರ ಸಂಕ್ಷೇಪವಾಗಿ ವಿವರಿಸಲಿಕ್ಕೆ ಪ್ರಯತ್ನಿಸಿದ್ದೇನೆ. ಇದರ ಮೇಲಿಂದ ಕರ್ನಾಟಕ ಸಂಸ್ಕೃತಿಯನ್ನು ಪ್ರಕಟ ಮಾಡುವ ಕಾರ್ಯದಲ್ಲಿ ವೀರಶೈವರು ಎಂಥ ಮಹತ್ವದ ಭಾಗವನ್ನು ಸ್ವೀಕರಿಸಿದ್ದಾರೆಂಬುದನ್ನು ಸ್ಪಷ್ಟವಾಗಿ ತಿಳಿಯಬಹುದು. ನಾನು ಇದರಲ್ಲಿ ಮೂರು ಮುಖ್ಯ ವಿಭಾಗಗಳನ್ನು ಮಾಡಿ, ಆಯಾ ಕಾಲಗಳಲ್ಲಿ ಉತ್ಪನ್ನರಾದ ಮುಖ್ಯ ಗ್ರಂಥಕಾರರನ್ನು ಮಾತ್ರ ಉದಾಹರಣೆಗಾಗಿ ನಿರ್ದೇಶಿಸಿದ್ದೇನೆ. ನಿಜವಾಗಿ ಪ್ರತಿಯೊಂದು ಕಾಲದಲ್ಲಿಯೂ ಅಸಂಖ್ಯ ಗ್ರಂಥಕಾರರು ಆಗಿ ಹೋಗಿದ್ದಾರೆ. ಬಸವೇಶ್ವರನ ಕಾಲದಲ್ಲಿ ಅಸಂಖ್ಯ ಬೋಧಕರು ಉತ್ಪನ್ನರಾಗಿ ಅನೇಕ ವಚನ ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳಿಗೆ ಲೆಕ್ಕವೇ ಇಲ್ಲ. ೧೫ ನೇ ಶತಮಾನದಲ್ಲಿದ್ದ ಲಕ್ಕಣ್ಣದಂಡೇಶನು ಅನೇಕ ಕವಿಗಳ ಸಾಧು ಸತ್ಪುರುಷರ ಹೆಸರುಗಳನ್ನು ತನ್ನ ಗ್ರಂಥಗಳಲ್ಲಿ ಕೊಟ್ಟಿದ್ದಾನೆ. ೧೭ ನೇ ಶತಮಾನದಲ್ಲಿದ್ದ ಗುಬ್ಬಿಯ ಮಲುಹಣನು ತನ್ನ ಮತ್ತು ತನ್ನ ಹಿಂದಿನ ಕಾಲಕ್ಕಿದ್ದ ಅನೇಕ ಸಾಧು ಸತ್ಪುರುಷರ ಹೆಸರುಗಳನ್ನು ಕೊಟ್ಟಿದ್ದಾನೆ. ಹಾಗೆಯೇ ೧೮ ನೇ ಶತಮಾನದಲ್ಲಿ ರಚಿಸಲ್ಪಟ್ಟಿದ್ದ ರಾಘವಾಂಕ ಪುರಾಣದಲ್ಲಿ ಅನೇಕ ಮಹಾ ಪುರುಷರ ಹೆಸರುಗಳು ಬಂದಿವೆ. ಇದರ ಮೇಲಿಂದ ವೀರಶೈವ ಧಾರ್ಮಿಕ ವಾಙ್ಮಯವು ಎಷ್ಟು ಅಪಾರವಾಗಿರುತ್ತದೆಂಬದರ ಊಹೆಯನ್ನು ವಾಚಕರು ಮಾಡಬಹುದು.

ಇವರ ನಿಜಾಂಶವನ್ನು ಕಂಡು ಹಿಡಿಯುವದು ಕರ್ನಾಟಕಸ್ಥರ ಕರ್ತ ವ್ಯವಾಗಿದೆ.

ಆದರೆ ಈ ಬಗ್ಗೆ ಈ ವರೆಗೂ ಯಾವ ಸಂಘಟಿತ ಪ್ರಯ ತ್ನವು ಏನೂ ನಡೆದಿಲ್ಲೆಂಬುದು ಬಹು ವಿಷಾದಕರವಾಗಿರುತ್ತದೆ. ಈ ಸಂಗತಿಯನ್ನು ಕೆಲಮಟ್ಟಿಗಾದರು ವೀರಶೈವ ಸಮಾಜದವರು ತಮ್ಮ ನಿವರ್ತನಕ್ಕೆ ತಂದು ಪ್ರಯತ್ನಿಸಿದಲ್ಲಿ ಅವರು ಕರ್ನಾಟಕ ವಾಙ್ಮಯ ಪ್ರಸಾರದ ಕಾರ್ಯದಲ್ಲಿ ಮೊದಲನೆಯ ಮೆಟ್ಟನ್ನು ಹತ್ತಿದಂತೆ ಆಗುವ ದೆಂದು ನಾನು ಭಾವಿಸುತ್ತೇನೆ.

## ಬಸವೇಶ್ವರನ ನೈತಿಕ ವಿಚಾರಗಳು.

ಈಗಿನ ಕಾಲಕ್ಕೆ ಗ್ರಂಥಕಾರರು ಒಂದು ವಿಷಯವನ್ನು ತೆಗೆದುಕೊಂ ಡು ಅದಕ್ಕೆ ಸಾಧಕ ಬಾಧಕ ಪ್ರಮಾಣಗಳನ್ನು ಕೊಟ್ಟು, ಒಂದು ವ್ಯವ ಸ್ಥೆಯಿಂದ ಬರೆಯುವ ಪದ್ಧತಿಯುಂಟು. ಇಂಥ ಗ್ರಂಥಗಳನ್ನು ಓದು ವವರು ವಚನ ಗ್ರಂಥಗಳನ್ನು ನೋಡಿದಕೂಡಲೆ, ಅವುಗಳಲ್ಲಿ ಒಂದ ಕ್ಕೊಂದು ಸಂಬಂಧವಿರದಂಥ ನಾನಾತರದ ಉಕ್ತಿಗಳ ಮಾಲೆಯನ್ನು ಕಂಡು, ಅವುಗಳ ಬಗ್ಗೆ ತಾತ್ಸಾರಭಾವವನ್ನು ತಾಳುವ ಸಂಭವವದೆ. ಆದರೆ ಇವುಗಳನ್ನು ಈ ರೀತಿಯಾಗಿ ಪರೀಕ್ಷಿಸುವ ಕ್ರಮವಲ್ಲ. ಧರ್ಮೋ ಧ್ಧಾರಕರ ಮೂಲಗ್ರಂಥಗಳ ಸ್ಥಿತಿಯು ಹೆಚ್ಚುಕಡಿಮೆ ಪ್ರಮಾಣದಿಂದ ಹೀಗೆಯೇ ಇರುತ್ತದೆ. ಬಹುಶಃ ಅವು ಸ್ಫುರಣಹೊಂದಿದ ಕಾಲಕ್ಕೆ ಬರೆದ ನುಡಿಗಳು ಇರುತ್ತವೆ. ಆದ್ದರಿಂದ ಅವುಗಳಲ್ಲಿ ಅಷ್ಟು ವ್ಯವಸ್ಥೆ ಯು ತೋರಿ ಬರುವದಿಲ್ಲ. ಮುಹಮ್ಮದ ಪೈಗಂಬರನು ರಚಿಸಿದ ಕುರಾ ನದೊಳಗಿನ ವಾಕ್ಯಗಳಲ್ಲಿ ದ್ವಿರುಕ್ತಿಗಳು ತುಂಬಿ ಹೋಗಿವೆ. ಬಾಯ ಬಲ್ಲಿನಲ್ಲಿಯು ಏಸೂ ಕ್ರಿಸ್ತನ ವಾಕ್ಯಗಳಾದರೂ ಬಹಳಸಾರೆ ಅಪ್ರಸ್ತುತ ವಾಗಿ ಇದ್ದದ್ದು ಕಂಡುಬರುತ್ತದೆ. ಬೌದ್ಧ ಧರ್ಮದ ಪವಿತ್ರ ಗ್ರಂಥ ವಾದ ಧಮ್ಮಪದದಲ್ಲಿಯೂ ಹೀಗೆಯೇ ಇರುತ್ತದೆ. ಅದರಂತೆಯೇ ಹಿಂದೂ ಧರ್ಮದ ಪವಿತ್ರ ಗಂಥಗಳಲ್ಲಿ ಶ್ರೇಷ್ಠವೆನಿಸಿಕೊಂಡ ಉಪ ನಿಷದ್ಗ್ರಂಥಗಳ ರಚನೆಯಲ್ಲಿ ಸಹ ವಿಷಯವ್ಯತ್ಯಾಸಗಳು ಆಗಿಂದಾ ಗ್ಗೆ ನಡುನಡುವೆ ತೋರಿಬರುತ್ತವೆ. ಇವಾವೂ ಕ್ರಮ ಪಟ್ಟು ಬರೆ

ದ ಗ್ರಂಥಗಳಂತೆ ಇಲ್ಲ. ಆದರೂ ಇವುಗಳ ಬೆಲೆಯು ಎಳ್ಳಷ್ಟಾದರೂ ಕಡಿಮೆಯಾಗಿಲ್ಲ. ಅವುಗಳ ಮಹತ್ವವು ಅಚ್ಚಳಿಯದೆ ಇನ್ನೂವರೆಗೆ ಹಾಗೆಯೇ ಇದೆ. ಯಾಕಂದರೆ ಈ ಗ್ರಂಥಗಳೆಲ್ಲ ಪ್ರಸಾದಿಕವಾಗಿವೆ. ಅಂತಃಕರಣದಲ್ಲಿ ಮೂಡಿದ ವಿಚಾರಗಳನ್ನು ತೇಜಃಪುಂಜವಾದ ರೀತಿಯಿಂದ ರಚಿಸಿದವು ಇರುತ್ತವೆ. ಪೂರ್ವದ ಶಿವಶರಣರ ವಚನಗಳಾದರೂ ಹೀಗೆಯೇ ಇವೆ. ಅವು ಪ್ರತಿಭಾಮಯವಾಗಿವೆ. ಅವು ಅಂತಃಕರಣದಿಂದ ಹೊರಸೂಸುವ ಸತ್ಯ ವಾಕ್ಯಗಳಿವೆ. ಆದ್ದರಿಂದ ಹ್ಯಾಗೆ ಕುರಾನ ಬಾಯಬಲ್ ಉಪನಿಷದ್ಗ್ರಂಥಗಳು ಆಯಾ ಜನಾಂಗಗಳಲ್ಲಿ ಮಹದ್ಗ್ರಂಥಗಳಾಗಿರುವವೋ, ಹಾಗೆಯೇ ಶಿವಶರಣರ ವಚನಗಳಾದರೂ ಕನ್ನಡದಲ್ಲಿ ಮಹತ್ವದ ಕೃತಿಗಳು ಇರುತ್ತವೆ.

ಶಿವಶರಣರು ಸಂಸಾರವನ್ನು ತೊರೆಯದೆ, ಜಗತ್ತಿನಲ್ಲಿದ್ದುಕೊಂಡು ಆಯುಷ್ಯ ಕ್ರಮವನ್ನು ಹ್ಯಾಗೆ ಜರಗಿಸಬೇಕೆಂಬದನ್ನು ವಿಶೇಷವಾಗಿ ವಿವೇಚಿಸಿರುವರು. ಈ ಸಂಗತಿಯು ಬಹು ಮಹತ್ವವಾದದ್ದು ಅವರು ಸಮಾಜವನ್ನು ಬಿಡಲಿಲ್ಲ. ಕಂದ ಮೂಲಗಳನ್ನು ಭಕ್ಷಿಸುತ್ತ ಅರಣ್ಯವಾಸಿಗಳಾಗಲಿಲ್ಲ. ಆದ್ದರಿಂದ ಅವರ ವಚನಗಳಲ್ಲಿ ನೈತಿಕ ವಿಷಯಗಳು ಹೆಚ್ಚಾಗಿ ಇರುತ್ತವೆ. ನೀತಿಯು ಸಮಾಜಕ್ಕೆ ಸಂಬಂಧಿಸಿದಂಥಾದ್ದು. ಸಮಾಜ ಬಿಟ್ಟವರಿಗೆ ನೀತಿಯು ಇರಲಾರದು. ಇದಕ್ಕನುಸಾರವಾಗಿ ಬಸವೇಶ್ವರನ ವಚನಗಳಲ್ಲಿ ನೀತಿಯ ವಿಷಯಗಳು ತುಂಬಿಕೊಂಡಿವೆ. ಅನೇಕರು ಬಸವೇಶ್ವರನು ದುರ್ನಡತೆಯವನು, ಅನೇಕ ದುರ್ಗುಣಗಳನ್ನು ಸಲಹಿದ್ದನು, ವೀರಶೈವ ಧರ್ಮವನ್ನು ಅಸಾಧು ಮಾರ್ಗದಿಂದ ಪ್ರಸಾರಗೊಳಿಸಿದನು, ಎಂದು ಅವನ ಮೇಲೆ ನಾನಾತರವಾಗಿ ದೋಷವಿಡುತ್ತಾರೆ. ಆದರೆ ಜಗತ್ತಿನಲ್ಲಿ ಅನೀತಿಯಿಂದ ಯಾವಧರ್ಮವೂ ಬೆಳೆದಿಲ್ಲ. ಸಾತ್ವಿಕ ಗುಣ ಪರಿಪೂರ್ಣವಾದ ನಮ್ಮ ಹಿಂದುಸ್ತಾನದ ದೇಶದಲ್ಲಿಯಂತೂ ಅನಾಚಾರದಿಂದ ಯಾವ ಧರ್ಮವೂ ಹಿಂದೆ ಎಂದೂ ಬೆಳೆದಿಲ್ಲ, ಮುಂದಾದರೂ ಬೆಳೆಯಲಾರದು. ಅನಾಚಾರ ಮತ್ತು ದುಷ್ಟತೆಯಿಂದ ದುಷ್ಟಜನರು ಮಾತ್ರ ಪರಸ್ಪರ ಕೆಲಕಾಲ ಕೂಡಬಹುದು. ಆದರೆ ಇವರು ಸಮಾಜವನ್ನು ರಚಿಸಲಾರರು. ಬಸವೇಶ್ವರನು ನಿಜವಾಗಿ ಒಂದು ಬಲಿಷ್ಠ ಸಮಾಜವನ್ನು ನಿರ್ಮಿಸಿದ್ದಾನೆ. ಇದು ಸದ್ವರ್ತನೆಯ ತಳಹದಿಯಮೇಲೆ ಊರದಹೊರ್ತು, ಎಂದಿಗೂ ಸಾಧ್ಯವಾಗಲಾರದು.

ಬಸವೇಶ್ವರನು ತನ್ನ ವಚನಗಳಲ್ಲಿ ಸದ್ಗತಿಯನ್ನು ಹೊಂದಬೇಕಾದರೆ, ಇಹಲೋಕದಲ್ಲಿ ಸದ್ವರ್ತನೆಯಿಂದ ನಡೆಯುವವರಿಂದಲೇ ಆಗುತ್ತದೆಂದು ಮೇಲಿಂದಮೇಲೆ ಹೇಳುತ್ತಾನೆ. ಒಂದು ವಚನದಲ್ಲಿ ಆತನು ಇಹಲೋಕವನ್ನು ಒಂದು ಟಂಕಸಾಲೆಗೆ ಹೋಲಿಸಿದ್ದಾನೆ. ಮತ್ತು ಈ ಟಂಕಸಾಲೆಯಲ್ಲಿ ಯಾರು ಚೊಕ್ಕನಾಣ್ಯವಾಗಿ ಹೊರಬೀಳುವರೋ ಅವರೇ ಮುಂದಿನ ಲೋಕಕ್ಕೆ ಒಪ್ಪುವರೆಂದು ಹೇಳಿದ್ದಾನೆ.

**ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ. ಇಲ್ಲಿ ಸಲ್ಲುವರುಅಲ್ಲಿಯೂಸಲ್ಲುವರಯ್ಯ. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ ಕೂಡಲಸಂಗಮದೇವಾ.**

ಸ್ವರ್ಗಲೋಕವೆಂಬುದು ಬೇರೊಂದು ಸ್ಥಾನದಲ್ಲಿಲ್ಲ, ಎಲ್ಲತರದ ಲೋಕಗಳು ಈ ಜಗತ್ತಿನಲ್ಲಿಯೇ ಇವೆ, ಎಂದು ಬಸವೇಶ್ವರನು ಭಾವಿಸುತ್ತಿದ್ದನು. ಯಾವನು ಸದಾಚಾರಿಯೋ ಅವನೇ ದೇವಲೋಕದವನು. ಯಾವನು ಅನಾಚಾರಿಯೋ ಅವನೇ ನರಕದೊಳಗೆ ಇರುವವನು ಎಂದು ಅವನ ವಿಚಾರಗಳಿವೆ.

**ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೇ? ಈ ಲೋಕದೊಳಗೆ ಮತ್ತನಂತ ಲೋಕ. ಶಿವಲೋಕ ಶಿವಾಚಾರವಯ್ಯಾ. ಶಿವಭಕ್ತನಿದ್ದ ಠಾವೇ ದೇವಲೋಕ. ಶಿವಭಕ್ತನಂಗಣವೇ ವಾರಣಾಸಿ. ಕಾಯವೇ ಕೈಲಾಸ, ಇದು ಸತ್ಯ, ಕೂಡಲಸಂಗಮದೇವಾ.**

**ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ. ಸತ್ಯವ ನುಡಿವುದೇ ದೇವಲೋಕ. ಅಸತ್ಯವ ನುಡಿವುದೇ ಮರ್ತ್ಯಲೋಕ. ಆಚಾರವೇ ಸ್ವರ್ಗ, ಅನಾಚಾರವೇ ನರಕ. ಇದಕ್ಕೆ ನೀವೇ ಪ್ರಮಾಣು ಕೂಡಲಸಂಗಮದೇವ.**

ಇದರ ಮೇಲಿಂದ ಬಸವೇಶ್ವರನು ಸದಾಚರಣೆಗೆ ಎಷ್ಟು ಮಹತ್ವ ಕೊಡುತ್ತಿದ್ದನೆಂಬುದು ಸ್ಪಷ್ಟವದೆ. ಅವನು ತನ್ನ ವಚನಗಳಲ್ಲಿ ತನ್ನನ್ನು ಯಾವತರದ ಕುಮಾರ್ಗಕ್ಕೆ ಹಚ್ಚಬೇಡವೆಂದು ದೇವರನ್ನು ಬೇಡಿಕೊಳ್ಳಲಿಕ್ಕೆ ಬೇಸರಿಯುವದಿಲ್ಲ. ಪರಮಾತ್ಮನನ್ನು ಹೊಂದದೆ ಇರಬೇಕಾದರೆ, ಮನುಷ್ಯನಲ್ಲಿಯ ದುಷ್ಟವಾಸನೆಗಳೇ ಕಾರಣವೆಂದು ಅವನ ದೃಢವಾದ ಅಭಿಪ್ರಾಯವು.

**ಆಶೆಯಾಮಿಷ ತಾಮಸ ಹುಸಿ ವಿಷಯು ಕುಟಿಲ ಕುಹಕ**

**ಕ್ರೋಧ ಕ್ಷುದ್ರ ಮಿಥ್ಯೆ ಇವನೆನ್ನ ನಾಲಿಗೆಯ ಮೇಲಿಂದತ್ತ ತೆಗೆದು ಕಳೆಯಯ್ಯ. ಇವೆಂತೆಂದೊಡೆ, ನಿಮ್ಮತ್ತಲೆನ್ನ ಬರಲೀಯವು. ಇದು ಕಾರಣ ಇವೆಲ್ಲವ ಕಳೆದು ಎನ್ನ ನಿಮ್ಮಯ ಭಕ್ತನ ಮಾಡಾ ಕೂಡಲಸಂಗಮದೇವಾ.**

**ಕಾಯ ವಿಕಾರ ಕಾಡಿಹವಯ್ಯ. ಮನದ ವಿಕಾರ ಕೂಡಿಹವಯ್ಯ. ಇಂದ್ರಿಯ ವಿಕಾರ ಸುಳಿಹವಯ್ಯ. ಸುಳಿವಿನೊಳಗೆ ಸುಳಿವುತಲಿದ್ದೇನೆ. ಸಿಲುಕಿಸದಿರಯ್ಯ. ಅನ್ಯ ಚಿತ್ತವನಿರಿಸದಿರಯ್ಯ. ನಿಮ್ಮ ಚಿತ್ತದಿರಿಸಯ್ಯ. ಅನುಪಮ ಸುಖಸಾರಾಯ ಶರಣರಲ್ಲಿ ಕೂಡಿಸು. ಕೂಡಲಸಂಗಮದೇವಯ್ಯ, ಇದನೇ ಬೇಡುವೆನಯ್ಯ.**

ಈ ತರದ ಬಸವೇಶ್ವರನ ಅಸಂಖ್ಯ ಉಕ್ತಿಗಳನ್ನು ಉದಹರಿಸಬಹುದು.

ಒಬ್ಬ ಮನುಷ್ಯನು ಲಿಂಗಧಾರಣಕ್ಕೆ ಯೋಗ್ಯನಾಗಬೇಕಾದರೆ, ಅವನ ನಡೆನುಡಿಗಳು ಶುದ್ಧವಾಗಿಯೇ ಇರಬೇಕೆಂಬುದು ಬಸವೇಶ್ವರನ ಅಭಿಪ್ರಾಯವಾಗಿತ್ತು. ಈ ವಿಷಯದಲ್ಲಿ ಅವನು ಎಷ್ಟು ಸ್ಪಷ್ಟ ಮತವುಳ್ಳವನಿದ್ದನೆಂಬುದು ಈ ಕೆಳಗಿನ ವಚನಗಳಿಂದ ವ್ಯಕ್ತವಾಗುತ್ತದೆ.

**ಕುಂಬಳದ ಕಾಯಿಗೆ ಕಬ್ಬುನದ ಕಟ್ಟು ಕೊಟ್ಟರೆ, ಕೊಳೆವುದಲ್ಲದೆ, ಬಲುಹಾಗಬಲ್ಲುದೇ? ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ ಭಕ್ತಿ ಎಂತಹುದೋ? ಮುನ್ನಿನಂತೆ. ಕೂಡಲಸಂಗಯ್ಯ, ಮಾನಹೀನನ ಮೀಸಲ ಕಾಯ್ದಿರಿಸಿದಂತೆ.**

**ಸಗಣೆಯ ಬೆನಕಂಗೆ ಸಂಪಿಗೆಯರಳಲ್ಲಿ ಪೂಜಿಸಿದರೆ, ರಂಜನೆಯಹುದಲ್ಲದೆ, ಅದರ ಗಂಜಳ ಬಿಡದಣ್ಣ. ಮಣ್ಣ ಪುತ್ಥಳಿಯ ಮಾಣದೆ ಜಲದಲ್ಲಿ ತೊಳೆದರೆ, ನಿಚ್ಚ ನಿಚ್ಚ ಕೆಸರಹುದಲ್ಲದೆ, ಅದರಚ್ಚುಗ ಬಿಡದಣ್ಣ. ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ, ಕೆಟ್ಟವನೇಕೆ ಸದ್ಭಕ್ತನಹನು ಕೂಡಲಸಂಗಮದೇವಾ?**

**ಕಬ್ಬುನದ ಕೋಡಗ ಪರುಷ ಮುಟ್ಟಲು ಹೊನ್ನಾದರೇನು, ಮತ್ತೇನಾದರೇನು, ತನ್ನ ಮುನ್ನಿನ ರೂಪ ಬಿಡದನ್ನಕ್ಕರ? ಕೂಡಲಸಂಗಮದೇವಯ್ಯ ನಿಮ್ಮ ನಂಬಿಯೂ, ನಂಬದ ಡಂಭಕರಿಗಯ್ಯ.**

ಯಾವ ಮಹಾತ್ಮನು ಇಂಥ ವಿಚಾರಗಳಿಗೆ ಇಂಬುಗೊಡುತ್ತಿಪ್ಪನೋ, ಅವನು ದುರಾಚಾರಿಗಳನ್ನು ಆದರಿಸುತ್ತಿದ್ದನೆಂಬುದು ಊಹಿಸಲಿಕ್ಕೆ ಅಸಾಧ್ಯವಾಗಿದೆ.

ದೀಕ್ಷೆಯನ್ನು ಹೊಂದಿದ ಬಳಿಕ ಸಹ ಲಿಂಗಧಾರಿಯು ಸದಾಚಾರದ ಕಟ್ಟುಗಳಿಗೆ ತಪ್ಪದೆ ಒಳಪಟ್ಟು ನಡೆಯಬೇಕೆಂದು ಬಸವೇಶ್ವರನು ಸದಾ ಬೋಧಿಸುತ್ತಾನೆ. ಲಿಂಗಧಾರಣವು ಸದಾಚಾರದ ಗುರುತು. ಸದಾಚಾರವಿಲ್ಲದೆ ಹೋದರೆ, ಲಿಂಗಿಯಲ್ಲ. ಹೀಗೆ ನಡೆಯುವವರಿಗೆ ಪ್ರಾಯಶ್ಚಿತ್ತವು ಸಹ ಇಲ್ಲವೆಂಬುದು ಅವನ ಅಭಿಪ್ರಾಯವಾಗಿದೆ. ಅವನು ಅನ್ನುವದೇನಂದರೆ:—

**ಸದಾಚಾರ ಸದ್ಭಕ್ತಿ ಇಲ್ಲದವರ ನೀನೊಲ್ಲೆಯಯ್ಯ. ಅವರ ಆರಾಧನೆ ದಂಡ. ನಿಚ್ಚ ನಿಚ್ಚ ಪ್ರಾಯಶ್ಚಿತ್ತರನೊಲ್ಲನಯ್ಯ, ಕೂಡಲಸಂಗಮದೇವ ಭೂಮಿ ಭಾರಕರ.**

**ಕೋಪಿ ಮಜ್ಜನಕ್ಕೆರೆದರೆ, ರಕ್ತದ ಧಾರೆ. ಪಾಪಿ ಹೂವನೇರಿಸಿದರೆ, ಮಸೆದಾಯುಧದ ಗಾಯ. ಕೂಪರ ನಾರನೂ ಕಾಣೆ, ಮೂದರ ಚನ್ನಯ್ಯನಲ್ಲದೆ. ಕೂಪರನಾರನೂ ಕಾಣೆ, ಡೋಹರ ಕಕ್ಕಯ್ಯನಲ್ಲದೆ. ವ್ಯಾಪ್ತಿಯುಳ್ಳವ ನಮ್ಮ ಮಡಿವಾಳಮಾಚಯ್ಯ. ನಿಮ್ಮ ಪತ್ತಿಗರಿವರಯ್ಯ, ಕೂಡಲಸಂಗಮದೇವಾ.**

ವೀರಶೈವನು ಮೋಕ್ಷವನ್ನು ಹೊಂದಲಿಕ್ಕೆ ಷಟ್ಸ್ಥಲಮಾರ್ಗವು ಅವನಿಗೆ ಏರ್ಪಡಿಸಲ್ಪಟ್ಟಿರುವದು. ಈ ಮಾರ್ಗಕ್ಕೆ ಭಕ್ತಸ್ಥಲವೇ ಮೊದಲನೇ ಪಾವಟಿಗೆಯಾಗಿದೆ. ಈ ಭಕ್ತಸ್ಥಲಕ್ಕೆ ಸದಾಚಾರವೂ ಭಕ್ತಿಯೂ ತಳಹದಿಯಾಗಿರುತ್ತವೆ. ಈ ಗುಣಗಳಿಲ್ಲದೆ ಹೋದರೆ, ಮುಂದಿನ ಶ್ರೇಷ್ಠ ಸ್ಥಿತಿಗಳು ವೀರಶೈವನಿಗೆ ಎಂದಿಗೂ ದೊರಕಲಾರವು. ಆದ್ದರಿಂದ ಪ್ರತಿಯೊಂದು ವಚನ ಗ್ರಂಥದಲ್ಲಿ ಸದಾಚಾರ ಮತ್ತು ನೀತಿಗೆ ಬಹಳ ಮಹತ್ವ ಸ್ಥಾನವು ಕೊಡಲ್ಪಟ್ಟಿದೆ.

ದುರ್ಮಾರ್ಗಕ್ಕೆ ವಿಷಯ ಲಂಪಟತನವೇ ಕಾರಣವು. ಅದ್ದರಿಂದ ವಚನಕಾರರು ತಮ್ಮ ವಚನಗಳಲ್ಲಿ ಸಂಸಾರ ಹೇಯಸ್ಥಲವನ್ನು ಮೊದಲು ವರ್ಣಿಸಿರುತ್ತಾರೆ. ಮನುಷ್ಯನಿಗೆ ನಿಜವಾದ ಸುಖವು ವಿಷಯ ಲಂಪಟತನದಲ್ಲಿ ಎಂದಿಗೂ ದೊರಕಲಾರದು. ವಿಷಯ ಸುಖಗಳು ಅಲ್ಪಸುಖವನ್ನು ಕೊಡುವಂಥವು, ನಶ್ವರವಾದವುಗಳು. ಆದರೆ ಸದ್ಭಕ್ತಿ ಸದಾಚಾರ ವಿವೇಕಗಳೇ ಮನುಷ್ಯನಿಗೆ ಸದಾಸುಖ ಕೊಡುವಂಥ ವಿರುತ್ತವೆ. ಆದ್ದರಿಂದ ಬಸವೇಶ್ವರನು ಬೇಡಿಕೊಳ್ಳುವದೇನಂದರೆ:—

**ವಿಷಯವೆಂಬ ಹಸರನೆನ್ನ ಮುಂದೆ ತಂದು ಪಸರಿಸದಿರಯ್ಯ. ಪಶುವೇನು ಬಲ್ಲುದು, ಹಸುರೆಂದೆಳಸುವದಲ್ಲದೆ? ವಿಷಯ ರಹಿ**

ತನವಮಾಡಿ, ಭಕ್ತಿರಸವ ದಣಿಯ ಮೇಯಿಸಿ, ಸುಬುದ್ಧಿ ಎಂಬ ಉದಕವನೆರೆದು, ನೋಡಿ ಸಲಹಯ್ಯಾ ಕೂಡಲಸಂಗಮದೇವಾ.

ಮನುಷ್ಯನ ಅಂತರಂಗ ಬಹಿರಂಗ ಶುದ್ಧಿ ಎಂದರೆ ಸದಾಚಾರದಿಂದ ವರ್ತಿಸುವದೇ ಇರುತ್ತದೆ. ಬಸವೇಶ್ವರನು ಅನ್ನುವದೇನಂದರೆ:--

ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯವ ನುಡಿಯಲುಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ, ಇದೇ ಅಂತರಂಗದ ಶುದ್ಧಿ, ಇದೇ ಬಹಿರಂಗದ ಶುದ್ಧಿ. ಇದೇ ನಮ್ಮ ಕೂಡಲಸಂಗಮನೊಲಿಸುವ ಪರಿ.

ಅರ್ಥವಡಗದು, ಕ್ರೋಧ ತೊಲಗದು, ಕ್ರೂರ ಕುಹಕ ಕುಭಾಷೆ ಬಿಡದನ್ನಕ್ಕರ, ನೀನೆತ್ತ ಶಿವನೆತ್ತ, ಹೋಗತ್ತ ಮರುಳೇ. ಭವರೋಗವೆಂಬ ತಿಮಿರ ತಿಳಿಯದನ್ನಕ್ಕರ ಕೂಡಲಸಂಗಯ್ಯ ನೆತ್ತ ನೀನೆತ್ತಮರುಳೆ?

ಕೆಡೆನಡೆಯದೆ, ಕೆಡೆನುಡಿಯದೆ ಅನ್ಯವನು ಪ್ರತಿಪಾದಿಸದಿದ್ದರೆ ಏನು ಕೊಡನಯ್ಯಾ ಲಿಂಗವು? ತಾನೇನು ಬೇಡಿದ್ದನೀವನಾಗಿ, ನಂಬಿಗೆಯುಳ್ಳ ಶಿವಭಕ್ತಂಗೆ ಇದೇದಿಬ್ಯ ಕೂಡಲಸಂಗಮದೇವಾ.

ಒಬ್ಬ ಮನುಷ್ಯನು ಜ್ಞಾನಿಯಾಗಿದ್ದರೂ ಕೂಡ ಅವನು ಸದಾಚಾರಿಯಾಗಿರದಿದ್ದರೆ ಅವನು ತ್ಯಾಜ್ಯನೆಂದು ಬಸವೇಶ್ವರನು ತಿಳಿಯುತ್ತಿದ್ದನು. ಅವನು ಜಂಗಮ ಸ್ಥಲವನ್ನು ಹೊಂದಿದವನಾದರೂ ಕೂಡ ನಿಂದ್ಯಾಸ್ಪದನು.

ಆಪ್ಯಾಯನಕ್ಕೆ ಅನ್ನವ ನೀಡುವೆ. ಲಾಂಛನಕ್ಕೆ ಶರಣೆಂಬೆ. ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ ನೀ ಸಾಕ್ಷಿಯಾಗಿ, ಛೀ ಎಂಬೆನು ಕೂಡಲಸಂಗಮದೇವಾ-

ವೇದಶಾಸ್ತ್ರವ ಬಲ್ಲವರ ಹಿರಿಯರೆಂಬೆನೆ? ಮಾಯಾಭ್ರಾಂತು.ಕವಿತೆಗೀತಜ್ಞರ ಹಿರಿಯರೆಂಬೆನೆ? ಇವರು ಹಿರಿಯರುಗಳೇ, ಯಾಗನಟ್ಟುವಿಗೆ ಪ್ರಾಣರು? ಇವರಿಂದಧಿಕವ ಸಾಧಿಸುವರೇನು, ಕಿರಿಯರೆ? ಇಂತು ವಿದ್ಯಾಗುಣ ಜ್ಞಾನಧರ್ಮ ವಿಚಾರ ಶೀಲಂಗಳ ನಮ್ಮ ಕೂಡಲಸಂಗನ ಶರಣರು ಸಾಧಿಸಿದ ಸಾಧನೆಯನೆ ಸಾಧಿಸುವದು.

ಈ ವಚನಗಳ ಮೇಲಿಂದ ಬಸವೇಶ್ವರನು ಶುದ್ಧನಡತೆಗೆ ಎಷ್ಟು ಮಹತ್ವ ಕೊಟ್ಟಿರುವನೆಂಬದು ಸ್ಪಷ್ಟವಾಗುತ್ತದೆ.

ಮನುಷ್ಯನಿಗೆ ತನ್ನ ಧ್ಯೇಯದಲ್ಲಿ ಅನೇಕ ತೊಂದರೆಗಳು ಬರು

ವದುಂಟು. ಇದು ವ್ಯವಹಾರದಲ್ಲಿ ಸಹಜಿಕವಾಗಿರುತ್ತದೆ. ಇಂಥ ಕಾಲ ದಲ್ಲಿಯೂ ಸಹ ಮನುಷ್ಯನು ತನ್ನ ಸದ್ಗುಣಗಳನ್ನು ಬಿಡಕೂಡದು. ಇಂಥ ಕಷ್ಟಗಳು ಮನುಷ್ಯನ ಪರೀಕ್ಷೆಗಾಗಿ ಮೇಲಿಂದ ಮೇಲೆ ಬರು ತ್ತವೆ. ಈ ಕಾಲಕ್ಕೆ ಆತನು ತನ್ನ ನಿಷ್ಠೆಯನ್ನು ಎಂದೂ ಬಿಡಕೂಡ ದು. ಈ ಬಗ್ಗೆ ಬಸವೇಶ್ವರನು ಅನ್ನುವದೇನಂದರೆ:--

**ಭಕ್ತನಾಗಿ ತನ್ನ ಹಿಡಿದೆನೆಂದು ಹೋದರೆ ನುಗ್ಗು ಮಾಡುವ, ನುಸಿಯು ಮಾಡುವ, ಮಣ್ಣು ಮಾಡುವ, ನುಸಿಯು ಮಾಡು ವ, ಕೂಡಲಸಂಗಮದೇವರ ನೆರೆನಂಬಿದೆನಾದರೆ ತನ್ನಂತೆ ಮಾಡು ವ.**

**ಅರಿವನಯ್ಯ ಸಣ್ಣನಾಹನ್ನಕ್ಕ. ಒರೆವನಯ್ಯ ಬಣ್ಣಗಾಂಬ ನ್ನಕ್ಕ. ಅರೆದರೆ ಸಣ್ಣಗಾಗಿ, ಒರೆದರೆ ಬಣ್ಣ ಬಂದರೆ ಕೂಡ ಲಸಂಗಮದೇವರೊಲಿದು ಸಲಹುವ.**

ಈ ತರದ ತೊಂದರೆಗಳು ಬಂದ ಕಾಲಕ್ಕೆ ಮನುಷ್ಯನು ಅತ್ಯಂ ತ ಸ್ಥಿರ ಮನಸ್ಸಿನವನು ಇರಬೇಕು- ಸ್ಥಿರ ಮನಸ್ಸಿನ ಮುಂದೆ ಶ್ರೀ ಮಂತಿಕೆಯ ತೇಜಸ್ಸು ಎಂದಿಗೂ ಸಾಗಲಾರದು. ಸ್ಥಿರ ಮನಸ್ಸು ಬಡ ತನವುಳ್ಳದ್ದಾದರೂ ಘನತರವಾದದ್ದು. ಒಂದು ಕಡೆ ಬಸವೇಶ್ವರನು ಅನ್ನುವದೇನೆಂದರೆ:--

**ನೋಡಾ! ಬಡವರ ಮನೆ, ಮನ ನೋಡಾ ಘನ. ಸೋಂಕಿ ನಲ್ಲಿ ಶುಚಿ. ಸರ್ವಾಂಗ ಕಲಿ. ಪಸಾರಕ್ಕನುಕೂಲವಿಲ್ಲ. ಬಂದ ತತ್ಕಾಲಕ್ಕುಂಟು. ಕೂಡಲಸಂಗನಶರಣರು ಸ್ವತಂತ್ರರು, ಧೀರರು.**

ಈ ತರದ ಮನಸ್ಸಿನವರಿಗೆ ಯಾವದೂ ಕೊರತೆಇಲ್ಲ. ಆದ್ದರಿಂದ ಬಸವೇಶ್ವರನು ತನಗೆ ಶ್ರೀಮಂತಿಕೆಯು ಬೇಡ. ಬಡತನವನ್ನೇ ದಯ ಪಾಲಿಸಬೇಕೆಂದು ಬೇಡಿಕೊಳ್ಳುತ್ತಾನೆ. ಬಡತನವು ಕೆಲಸಕ್ಕೆ ಹಚ್ಚುವ ದು. ಆತನು ಸ್ವತಂತ್ರ ವೃತ್ತಿಯುಳ್ಳವನು. ಆದರೆ ಶ್ರೀಮಂತಿಕೆಯು ಬಂಧನೆಗಳನ್ನುಂಟುಪಡಿಸುವದು. ದುಡಿಕೆಯಿಂದ ಆತನು ತನ್ನನ್ನು ಸಲ ಹಿಕೊಳ್ಳುವನಷ್ಟೇ ಅಲ್ಲ, ಇತರರನ್ನೂ ಸಲುಹುವನು. ಆದ್ದರಿಂದ ಈತ ನು ಸ್ವತಂತ್ರನು, ಧೀರನು ಎಂದು ಹೇಳಿರುವನು.

**ಭಕ್ತಿ ವಿಶೇಷವ ಮಾಡುವರೆ, ಹತ್ತು ಬೆರಳುಂಟು. ಹಾಸಿ ದುಡಿದರೆ, ತನಗುಂಟು, ತನ್ನ ಪ್ರಮಥರಿಗುಂಟು. ಮಾರಿ ತಂ ದೆಗಳಂತೆ, ಎನಗೇಕಹುದಯ್ಯ! ರತ್ನದ ಸಂಕೊಲೆಯುನಿಕ್ಕಿ ಕಾ**

**ಓಹ, ಕೂಡಲಸಂಗಮದೇವ ಶಿವಧೋ ಶಿವಧೋ!**

ಈ ಮೇರೆಗೆ ಬಸವೇಶ್ವರನು ತನ್ನನ್ನು ರತ್ನದ ಅಂದರೆ ಶ್ರೀಮಂತಿಕೆಯ ಸಂಕೋಲೆಯಲ್ಲಿ ಪರಮಾತ್ಮನು ಹಾಕಿರುವನೆಂದು ದುಃಖಿಸುತ್ತಾನೆ.

ಸತ್ಯ ಮಾರ್ಗದಲ್ಲಿ ನಡೆಯುವವರನ್ನು ಜನರು ವಿರೋಧಿಸುವದುಂಟು. ಆದರೆ ಅವನು ತನ್ನ ಸತ್ಯಮಾರ್ಗಗಳನ್ನು ಎಂದಿಗೂ ಬಿಡಕೂಡದು. ಜನರ ಹಿಂಸೆಗಳಿಗೆ ಆ ಕಾಲಕ್ಕೆ ಎಂದೂ ಪರಿವೆ ಇಡಕೂಡದೆಂದು ಬಸವೇಶ್ವರನು ಅನ್ನುತ್ತಾನೆ.

> **ಆರು ಮುನಿದು, ನಮ್ಮನೇನನಮಾಡುವರು? ಊರು ಮುನಿದು ನಮ್ಮನೆಂತ ಮಾಡುವರು? ನಮ್ಮ ಕುನ್ನಿಗೆ ಕೂಸ ಕೊಡಬೇಡ. ನಮ್ಮ ಸೊಣಗಂಗೆತಳಿಗೆಯಲ್ಲಿಕ್ಕಬೇಡ. ಆನೆಯ ಮೇಲೆ ಹೋಹವನ ಶ್ವಾನಕಚ್ಚಬಲ್ಲುದೇ? ನಮ್ಮ ಕೂಡಲಸಂಗಮದೇವರುಳ್ಳನ್ನಕ್ಕರ ನಮಗೇನಯ್ಯ?**

> **ನ್ಯಾಯನಿಷ್ಠುರ, ದಯಾದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ, ಶರಣರಿಗೆಯೂ ಅಂಜುವನಲ್ಲ. ಕೂಡಲಸಂಗಮದೇವರ ರಾಜತೇಜದೊಳಗಿಪ್ಪೆನಾಗಿ.**

ಯಾವನು ಸದಾಚಾರಿಯಾಗಿರುತ್ತಾನೋ ಅವನ ಸರಳವರ್ತನೆಗಳು ಕೆಡುಕರಿಗೆ ವಿರೋಧವಾಗಿ, ತೋರುತ್ತವೆ. ಆದ್ದರಿಂದ ಅವರು ಪೀಡಿಸಹತ್ತುವರು ಆದರೆ ಅವರ ಪೀಡನೆಗಳಿಗೆ ಅಂಜಿ ಯಾವನು ತನ್ನ ಸದ್ವರ್ತನೆಯನ್ನು ಬಿಡುತ್ತಾನೊ ಅವನಿಂದ ಸಮಾಜಸುಧಾರಣೆಯ ಕಾರ್ಯಗಳು ಎಂದಿಗೂ ಆಗಲಾರವು ಇಂಥ ಪೀಡೆಗಳಿಗೆ ಮಹಮ್ಮದ, ಕ್ರೈಸ್ತ, ಲೂಥರ ಮೊದಲಾದ ಸಮಾಜಸುಧಾರಕರೆಲ್ಲರೂ ಒಳಗಾದರು. ಅದರಂತೆಯೇ ಅನೇಕ ಕಠಿಣ ಪ್ರಸಂಗಗಳು ಬಸವೇಶ್ವರನಿಗೂಬಂದವು. ಅವನಿಗೆ ಚಿಕ್ಕಂದಿನಲ್ಲಿಯೇ ತನ್ನ ಮಾತಾ ಪಿತೃಗಳ ಮನೆಯನ್ನುತೊರೆಯಬೇಕಾಯಿತು. ಆದರೆ ಅವನು ಸ್ಥಿರಮನಸ್ಸಿನವನು ಇದ್ದದರಿಂದಲೇ ಅವನಿಂದ ಮಹತ್ಕಾರ್ಯಗಳು ಜರಗಿದವು. ಅವನು ಧ್ಯೇಯವನ್ನು ಅನುಸರಿಸುವಲ್ಲಿ ತನ್ನ ಪ್ರಾಣವನಾದರೂ ಬಿಡಬಹುದೆಂದು ಹೇಳಿದ್ದಾನೆ.

> **ಎನಿಸೆನಿಸೆಂದೆಡೆಯೂ ನಾ ಧೃತಿಗೆಡೆನಯ್ಯ. ಎಲುದೋರಿದೊಡೆಯೂ ನರಹರಿದಡೆಯೂ ಕರುಳು ಕುಪ್ಪಳಿಸಿದಡೆಯೂ ನಾಧೃತಿಗೆಡೆನಯ್ಯ ಶಿರಹರಿದು, ಅಟ್ಟೆ ನೆಲಕ್ಕೆ ಬಿದ್ದಡೆಯೂ**

**ನಾಲಿಗೆ 'ಸಂಗ ಶರಣು, ಎನ್ನುತ್ತಿಪ್ಪುದಯ್ಯ.**

**ನಾಳೆ ಬಪ್ಪುದು ನಮಗಿಂದೇ ಬರಲಿ. ಇದಕಾರಂಜುವರು, ಇದಕಾರಳಕುವರು? "ಜಾತಸ್ಯ ಮರಣಂ ಧೃವಂ" ಎಂದುದಾಗಿ ನಮ್ಮ ಕೂಡಲಸಂಗಮದೇವನು ಬರೆದ ಬರಹವ ತಪ್ಪಿಸುವರೇ, ಹರಿ ಬ್ರಹ್ಮಾದಿಗಳವಲ್ಲ.**

**ಜೊಳ್ಳುವಾಳಿಯುವ ನಾನಲ್ಲಯ್ಯ. ನಿಮ್ಮ ವೇಳೆಯಾಳಯ್ಯ. ಹಾಳುಗೆಟ್ಟೋಡುವ ಆಳು ನಾನಲ್ಲಯ್ಯ. ಕೇಳು ಕೂಡಲಸಂಗಮದೇವ, ಮರಣವೇ ಮಹಾನವಮಿ ಎನಗೆ.**

ಈ ರೀತಿಯಾಗಿ ದೃಢನಿಶ್ಚಯದಿಂದ ಬಸವೇಶ್ವರನು ವರ್ತಿಸಿದ್ದರಿಂದಲೇ ಅವನಿಂದ ಧರ್ಮಪ್ರಸಾರದ ಕಾರ್ಯಗಳಾದವು. ಆದರೆ ಯಾವನ ನಡೆನುಡಿಗಳು ಶುದ್ಧವಾಗಿ ಇರುತ್ತವೆಯೋ ಅವನಿಗೆ ಮಾತ್ರ ಇಂಥ ಮಹತ್ತರವಾದ ಆತ್ಮವಿಶ್ವಾಸವು ಉಂಟಾಗುವದು. ಇಂಥವನಲ್ಲಿ ಮಾತ್ರ ಜಗತ್ತನ್ನೇ ಎಳೆದುಕೊಳ್ಳುವಂಥ ಸಾಮರ್ಥ್ಯವು ಉತ್ಪನ್ನವಾಗುತ್ತದೆ.

ಬಸವೇಶ್ವರನಲ್ಲಿಯ ಮಹತ್ತರವಾದ ಧಾರ್ಮಿಕ ಬುದ್ಧಿ, ನೀತಿ ಮತ್ತೆ ಇವುಗಳನ್ನು ನೋಡಿ ಆ ಕಾಲಕ್ಕಿನ ಜನರು ಅವನು ಕೇವಲ ನಂದೀಸ್ವರೂಪನೆಂದು ಭಾವಿಸುತ್ತಿದ್ದರು. ನಂದಿಯು ಕೇವಲ ಧಾರ್ಮಿಕ ಮತ್ತು ಸದಾಚಾರಸ್ವರೂಪನಿರುತ್ತಾನೆ. ಬಸವೇಶ್ವರನು ಅತ್ಯಂತ ನೀತಿಯುಳ್ಳವನೆಂತಲೇ ಅವನಿಗೆ ನಂದೀಅವತಾರವೆಂದು ಅಂದಿದ್ದಾರೆ. ಜನರು ಹೀಗೆ ತನ್ನನ್ನುಭಾವಿಸಿದರೂ ಬಸವೇಶ್ವರನು ಅದಕ್ಕೆ ಉಬ್ಬಿ ವರ್ತಿಸಲಿಲ್ಲ. ಆತನು ಒಬ್ಬ ಕೇವಲ ದೀನನಾದ ಭಕ್ತನೆಂತಲೇ ತನ್ನನ್ನು ತಿಳಿದುಕೊಳ್ಳುತ್ತಿದ್ದನು. ಅವನು ಅನ್ನುವದೇನಂದರೆ:—

**ಮೇಲಾಗಲೊಲ್ಲೆನು ಕೀಳಾಗಲೊಲ್ಲದೆ, ಕೀಳಿಂಗಲ್ಲದೆ ಹಯನ ಕರೆವುದೇ? ಮೇಲಾಗಿ ನರಕದೊಳಗೋಲಾಡಲಾರೆನು. ನಿಮ್ಮ ಶರಣ ಪಾದಕ್ಕೆ ಕೀಳಾಗಿರಿಸು ಮಹಾದಾನಿ ಕೂಡಲಸಂಗಮದೇವಾ.**

**ಎನಗಿಂದ ಕಿರಿಯರಾರಿಲ್ಲ. ಶಿವಭಕ್ತರಿಗಿಂತ ಹಿರಿಯರಾರಿಲ್ಲ. ನಿಮ್ಮ ಪಾದಸಾಕ್ಷಿ, ಎನ್ನ ಮನಸಾಕ್ಷಿ, ಕೂಡಲಸಂಗಮದೇವಾ ಎನಗಿದೇ ದಿಬ್ಯ.**

**ಕಾಗೆ ವೃಷ್ಟಿಸುವ ಹೊನ್ನ ಕಳಶವಹುದರಿಂದ ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯ. ಕರ್ಮಾವಲಂಬನಂ ಕೇಚಿತ್ ಕೇಚಿತ್ ಜ್ಞಾನಾವಲಂಬನಂ। ವಯಂತು ಶಿವಭಕ್ತಾನಾಂ**

ಪಾದುಕಸ್ಯಾವಲಂಬನಂ ॥ ಎಂದುದಾಗಿ, ಕೂಡಲಸಂಗಮದೇವಾ ನಿಮ್ಮ ಸೆರೆಗೊಡ್ಡಿ ಬೇಡುವೆನು. ಇದೊಂದೇ ಪರಪ ಕರುಣಿಸಯ್ಯ.

ಇದರ ಮೇಲಿಂದ ಬಸವೇಶ್ವರನು ಎಷ್ಟು ಅಹಂಕಾರ ಮಮಕಾರ ಗಳನ್ನು ತೊರೆದವನಾಗಿದ್ದನೆಂಬುದು ವ್ಯಕ್ತವಾಗುತ್ತದೆ. ಅಹಂಕಾರವು ಅನೀತಿಗೆ ಮಾರ್ಗದರ್ಶಕವು. ಯಾವನು ತಾನು ಜಾಣನು, ಎಲ್ಲವನ್ನು ಬಲ್ಲವನು ಎಂದು ತಿಳಿಯುತ್ತಾನೋ, ಅವನ ಮನಸ್ಸಿನ ಪ್ರಗತಿಯು ಕೂಡಲೇ ಕುಂಠಿತವಾಗುತ್ತದೆ. ಮತ್ತು ಅವನು ದಿನ ದಿನಕ್ಕೆ ಅವನ ತಸ್ಥಿತಿಯನ್ನು ಹೊಂದುತ್ತ ಹೋಗುತ್ತಾನೆ. ಆದರಂತೆಯೇ ಮನುಷ್ಯನು ಸ್ತುತಿಗೆ ಮೆಚ್ಚುವವನು ಇರಕೂಡದು. ತನ್ನ ನಿಜವನ್ನು ತಿಳಿದುಕೊಂಡು, ದೈನ್ಯ ಭಾವದಿಂದಲೇ ವರ್ತಿಸತಕ್ಕದ್ದು. ಇದೇ ಅವನ ಪ್ರಗತಿಗೆ ಕಾರಣವು. ಈ ಬಗ್ಗೆ ಬಸವೇಶ್ವರನು ಒಂದು ಕಡೆಗೆ ಅನ್ನುವದೇನೆಂದರೆ:--

ಎನ್ನಲ್ಲಿ ನಿನ್ನ ಮೇಲಣ ಭಕ್ತಿ, ಸಾಸಿವೆಯ ಷಡ್ಭಾಗದಿನಿತಿಲ್ಲ. ಎನ್ನ ಭಕ್ತನೆಂಬರು. ನಾನಾವ ಪಾಪವ ಮಾಡಿದೆನೋ? ಬೆಳೆಯದ ಮುನ್ನ ಕೊಯ್ಯುವರೇ ಹೇಳಯ್ಯ? ಇರಿಯದ ವೀರ ಇಲ್ಲದ ಸೊಬಗನು ಎಲ್ಲಾ ಒಡೆಯರು ಏರಿಸಿ ನುಡಿವರು. ಎನಗಿದು ವಿಧಿಯೇ ಕೂಡಲಸಂಗಮದೇವ?

ಎನ್ನವರೊಲಿದು ಹೊನ್ನ ಶೂಲದಲ್ಲಿಕ್ಕಿದರು, ಎನ್ನ ಹೊಗಳಿ ಹೊಗಳಿ. ಎನ್ನ ಹೊಗಳತೆ ಎನ್ನ ಮೈಗೊಂಡಿತಲ್ಲ! ಅಯ್ಯೋ ನಿಮ್ಮ ಮನ್ನಣೆ ಮಸೆದಲಗಾಗಿ ತಾಗಿತ್ತಲ್ಲ! ಅಯ್ಯಾ, ನೊಂದೆನು, ಸೈರಿಸಲಾರೆನು. ಕೂಡಲಸಂಗಮದೇವಾ, ನೀನೆನಗೊಳ್ಳಿದನಾದರೆ, ಎನ್ನ ಹೊಗಳತೆಗಡ್ಡಬಾರಾ ಧರ್ಮೀ.

ಮೇಲ್ಕಂಡ ವಚನಗಳಿಂದ ಬಸವೇಶ್ವರನು ಎಷ್ಟು ದೀನ ಮತ್ತು ಸಭ್ಯ ವರ್ತನೆಯುಳ್ಳವನಿದ್ದನೆಂಬದು ಗೊತ್ತಾಗುತ್ತದೆ. ಈ ತರದ ವೃತ್ತಿಯು ಇರಬೇಕಾದರೆ, ಮನುಷ್ಯನ ಸದಸದ್ವಿಚಾರ ಬುದ್ಧಿಯು ಅತ್ಯಂತ ಜಾಗ್ರತವಾಗಿರಬೇಕಾಗುವದು. ಆತನಿಗೆ ಆತ್ಮ ನಿರೀಕ್ಷಣಭಾವವು ಮೇಲ್ತರದ್ದಿರಬೇಕಾಗುತ್ತದೆ. ಇಂಥ ಆತ್ಮ ನಿರೀಕ್ಷಣ ಭಾವವು ಬಸವೇಶ್ವರನಲ್ಲಿ ಅತ್ಯಂತ ಜಾಗ್ರತ ಸ್ಥಿತಿಯಲ್ಲಿತ್ತೆಂದು ತೋರುತ್ತದೆ. ಆದ್ದರಿಂದ ಅವನು ಅನ್ನುವದೇನಂದರೆ:--

ಡಂಬು ಡಳ್ಳು ಎನ್ನದಯ್ಯ. ಡಂಭಕನೆಂಬುವ ನಾನಯ್ಯ. ನಿಮ್ಮ ನಂಬಿದ ಶರಣರ ಡಿಂಗರಿಗ ನಾನು ಕೂಡಲಸಂಗಮದೇವ.

**\ ಆನು ಭಕ್ತನಲ್ಲಯ್ಯ. ಆನು ವೇಷಧಾರಿಯಯ್ಯ. ಕಟುಕ. ಕೆತ್ತುಗ ಕೊಲ್ಲುಗನೆಂಬುದು ಎನ್ನ ಹೆಸರಯ್ಯ. ಕೂಡಲಸಂಗದೇವಾ ನಿಮ್ಮ ಶರಣರ ಮನೆಯ ಮಗ ನಾನಯ್ಯ.**

ಹೀಗೆ ಯಾವನು ತನ್ನನ್ನು ತಿಳಿದುಕೊಂಡು ಆಚರಿಸುತ್ತಾನೋ, ಅವನ ನಡೆನುಡಿಗಳಲ್ಲಿ ತಪ್ಪಾಗುವದು ದುರ್ಲಭ. ಒಂದು ವೇಳೆ ತಪ್ಪುಗಳಾದರೂ ಅವುಗಳನ್ನು ಅವನು ತೀವ್ರವಾಗಿ ತಿದ್ದಿಕೊಳ್ಳುತ್ತಾನೆ.

ಬಸವೇಶ್ವರನು ಒಂದು ಧರ್ಮ ಸ್ಥಾಪಕನಂತೆ ಎಂದೂ ವರ್ತಿಸಲಿಲ್ಲ. ತಾನೊಬ್ಬ ಸಾಮಾನ್ಯ ಭಕ್ತನೆಂಬ ಭಾವವನ್ನು ತಾಳಿ, ಅವನು ವರ್ತಿಸುತ್ತಿದ್ದನು. ಈ ವಿಷಯದಲ್ಲಿ ಅವನಿಗೂ ಬುದ್ಧ, ಮಹಮ್ಮದ, ಕ್ರಾಯಿಸ್ತ ಮೊದಲಾದ ಧರ್ಮ ಸ್ಥಾಪಕರಿಗೂ ಮಹದಂತರವಿದೆ. ಇವರೆಲ್ಲರು ತಾವು ದೇವರಿಂದ ಜಗತ್ತಿನ ಉದ್ಧಾರಾರ್ಥವಾಗಿ ಕಳಿಸಲ್ಪಟ್ಟವರೆಂದು ಹೇಳಿ, ತಮ್ಮ ಧರ್ಮವನ್ನು ಪ್ರಸಾರಗೊಳಿಸಿದರು. ಆದರೆ ಬಸವೇಶ್ವರನು ಹಾಗೆ ಎಂದೂ ಮಾಡಲಿಲ್ಲ. ಅವನು ತಾನೊಬ್ಬ ದೇವದೂತನೆಂದು ಎಂದೂ ಹೇಳಿಕೊಳ್ಳಲಿಲ್ಲ. ಎಲ್ಲ ಮಾನವರಂತೆ ನಾನೊಬ್ಬ ಮನುಷ್ಯನು, ಅಪರಾಧಕ್ಕೆ ಒಳಗಾಗುವವನು ಎಂದು ಭಾವಿಸಿಕೊಂಡು ವರ್ತಿಸುತ್ತಿದ್ದನು.

ಅವನು ಒಂದುಕಡೆಗೆ ಅನ್ನುವದೇನಂದರೆ:

**\ ಎನ್ನ ತಪ್ಪು ಅನಂತಕೋಟಿ. ನಿಮ್ಮ ಸೈರಣೆಗೆ ಲೆಕ್ಕವಿಲ್ಲ. ಇನ್ನು ತಪ್ಪಿದೆನಾದರೆ ನಿಮ್ಮ ಪಾದವೇ ದಿಬ್ಯ. ಕೂಡಲಸಂಗಮದೇವಯ್ಯ, ನಿಮ್ಮ ಪ್ರಮಥರ ಮುಂದೆ ಕಿನ್ನರಿ ಬೊಮ್ಮಣ್ಣನೇ ಸಾಕ್ಷಿ.**

**ಆನು ಮಾಡಿದ ತಪ್ಪನೆಣಿಸಿಹೆನೆಂದೊಡೆ, ಗಣನೆ ಇಲ್ಲ. ನಡೆದು ತಪ್ಪುವೆನು, ನುಡಿದು ತಪ್ಪುವೆ, ನೀಡಿ ತಪ್ಪುವೆ, ಕೂಡಿ ತಪ್ಪುವೆ, ಅರಿದು ತಪ್ಪುವೆ, ಮರೆದು ತಪ್ಪುವೆ. ಎನ್ನ ತಪ್ಪನೊಪ್ಪ ಮಾಡಿಕೊಂಬುವದಲ್ಲದೆ, ಚಿತ್ತಕ್ಕೆ ತರಲಾಗದು ಕೂಡಲಸಂಗಮದೇವ.**

**ಎಡದ ಪಾದದಲೊದ್ದರೆ, ಬಲದ ಪಾದವ ಹಿಡಿವೆ. ಬಲದ ಪಾದದಲೊದ್ದರೆ, ಎಡದ ಪಾದವ ಹಿಡಿವೆ. ತ್ರಾಹಿ ತ್ರಾಹಿ ತಪ್ಪೆನ್ನದು, ಕ್ಷಮೆ ನಿಮ್ಮದು. ಕೂಡಲಸಂಗಮದೇವಾ ನಿಮ್ಮ ಕರುಣದ ಕಂದನಾನು.**

ಎಂದು ಬಸವೇಶ್ವರನು ಹೇಳಿಕೊಂಡಿದ್ದಾನೆ. ನೈತಿಕಾಚರಣೆಗೆ ಇಂಥ

ಆತ್ಮ ನಿರೀಕ್ಷಣೆಯು ತಳಹದಿಯಾಗಿದೆ. ಹೀಗೆ ಮನಸ್ಸಾಕ್ಷಿಯಾಗಿ ಯಾವನು ವರ್ತಿಸುತ್ತಾನೋ, ಅವನ ಆಚರಣೆಯು ಯಾವಾಗಲೂ ಶುದ್ಧವಾಗಿರುತ್ತದೆ.

ಈ ಬಗೆಯಾಗಿ ಬಸವೇಶ್ವರನು ಆಚರಿಸಿದ್ದರಿಂದಲೇ ಅವನು ತನ್ನ ಸಮಾಜವನ್ನು ಮುಂದಕ್ಕೆ ಒಯ್ಯಲು ಶಕ್ತನಾದನು. ಅವನು ಅತ್ಯಂತ ಪವಿತ್ರ ಆಚರಣೆಯುಳ್ಳವನು. ಆದರೆ ಅವನ ವಿರೋಧಿಗಳು ಅವನಬಗ್ಗೆ ನಾನಾತರದ ಅತ್ಯಂತ ಹೇಯವಾದ ಕಥೆಗಳನ್ನು ಕಲ್ಪಿಸಿದ್ದಾರೆ. ಇವುಗಳಿಗೂ ಅವನು ಬೋಧಿಸಿದ ತತ್ವಗಳಿಗೂ ಅಜಗಜಾಂತರ ವ್ಯತ್ಯಾಸವಿರುತ್ತದೆ. ಆದ್ದರಿಂದ ಇಂಥ ಕಥೆಗಳನ್ನು ನಂಬಲಿಕ್ಕೆ ಅಸಾಧ್ಯವಾಗಿರುತ್ತದೆ. ಅವನ ವಿಚಾರಗಳನ್ನು ಅರಿಯಲಿಕ್ಕೆ ಅವನ ವಚನಗಳೇ ಮಹತ್ವದ ಸಾಧನೆಗಳಾಗಿವೆ.

## ಶಿವಾನುಭವ ಶಾಸ್ತ್ರದ ವಿಸ್ತಾರವು.

ಶಿವಾನುಭವ ಶಾಸ್ತ್ರಜ್ಞಾನದ ವಿಸ್ತಾರವು ಬಹು ದೊಡ್ಡದದೆ. ವಚನಕಾರರು ಇದರೊಳಗೆ ನಾನಾತರದವಿಷಯುಗಳನ್ನು ಸೇರಿಸಿ ಇದನ್ನು ನಿರೂಪಿಸಿದ್ದಾರೆ. ಇದರೊಳಗೆ ನೈತಿಕ, ಸಾಮಾಜಿಕ, ಆಚಾರವಿಷಯಕ, ತಾತ್ವಿಕ, ವ್ಯವಹಾರಿಕ ಇವೇ ಮೊದಲಾದ ವಿಷಯುಗಳು ಅಡಕವಾಗಿವೆ ಶಿವಾನುಭವಿಗಳು ಜ್ಞಾನ ಮತ್ತು ಕ್ರಿಯೆ ಇವುಗಳಲ್ಲಿ ಪರಸ್ಪರ ವಿರುದ್ಧತೆಯನ್ನು ಕಲ್ಪಿಸಿಲ್ಲ. ಅವೆರಡೂ ಕ್ರಿಯೆಗಳಿಗೆ ಸರಿಯಾಗಿ ಮಹತ್ವ ಕೊಟ್ಟಿರುತ್ತಾರೆ. ಒಂದರ ವ್ಯಾಪಾರವು ಮತ್ತೊಂದರ ಮೇಲೆ ಅವಲಂಬಿಸಿದೆ. ಈ ವಿಷಯುವನ್ನು ಕುರಿತು ವಚನಕಾರರಲ್ಲಿ ಅತ್ಯಂತ ಶ್ರೇಷ್ಠ ಸ್ಥಾನವನ್ನು ಹೊಂದಿದ ಚನ್ನಬಸವೇಶ್ವರನು ಅನ್ನುವದೇನಂದರೆ:--

> **ಕ್ರಿಯೆಯೇ ಜ್ಞಾನವು, ಜ್ಞಾನವೇ ಕ್ರಿಯೆ. ಜ್ಞಾನವೆಂದರೆ ತಿಳಿಯುವದು, ಕ್ರಿಯೆ ಎಂದರೆ, ತಿಳಿದಂತೆ ಮಾಡುವದು. ಪರಸ್ತ್ರೀ ಭೋಗಿಸಬಾರದೆಂಬುದೇ ಜ್ಞಾನ. ಅದರಂತೆ ಆಚರಿಸುವದೇ ಕ್ರಿಯೆ. ಅಂತು ಆಚರಿಸದಿದ್ದರೆ, ಅದೇ ಅಜ್ಞಾನ ನೋಡಾ ಕೂಡಲ ಚನ್ನಸಂಗಮದೇವಾ.**

**ಕ್ರಿಯೆ ಜಡವೆಂಬರು, ಜ್ಞಾನ ಅಜಡವೆಂಬರು. ಅದೆಂತಯ್ಯಾ? ನೀತಿಯು ಹೇಳಿದ್ದು, ಜಡವೇ? ಕಷ್ಟವಿಲ್ಲದೆ ಬಂದಂತೆ ಬೊಗಳಿ, ಭೋಗಿಸಿ, ಭವಕ್ಕೆ ಹೋಗುವದು ಅಜಡವೇ? ಕ್ರಿಯಾ ಜ್ಞಾನ ವೆಂಬ ಉಭಯ ಶಬ್ದದರ್ಥವನರಿಯದೆ. ಕಂಡ ಕಂಡ ಹಾಗೆ ಬೊಗಳುವ ಹೊಲೆಮಾದಿಗರನು ಏನೆಂಬೆ ಕೂಡಲಚನ್ನಸಂಗಮದೇವಾ?**

ಆದುದರಿಂದ ವೀರಶೈವ ವಚನಕಾರರು ಕ್ರಿಯಾಮಯವಾದ ಈ ಜಗತ್ತು ಮಾಯೆ ಅಥವಾ ಸುಳ್ಳು ಎಂದು ಕಲ್ಪಿಸಿಲ್ಲ. ಆದ್ದರಿಂದ ಅವರು ಪರಮಾತ್ಮನ ಜ್ಞಾನದ ವಿವೇಚನೆಗಾಗಿ ಎಷ್ಟು ಪರಿಶ್ರಮ ಪಟ್ಟಿರುತ್ತಾರೋ, ಅಷ್ಟೇ ಅಥವಾ ಅದಕ್ಕು ಹೆಚ್ಚು ಮನುಷ್ಯನು ವ್ಯವಹಾರದಲ್ಲಿ ಹ್ಯಾಗೆ ವರ್ತಿಸಬೇಕೆಂಬುದನ್ನು ಕುರಿತು ಬಹಳ ವಿವೇಚಿಸಿರುವರು. ಆದ್ದರಿಂದ ಶಿವಾನುಭವದಲ್ಲಿ ತತ್ವಜ್ಞಾನ ವಿವೇಚನೆಯಷ್ಟೇ ಅಲ್ಲ, ನೈತಿಕ ಮತ್ತು ಆಚಾರ ವಿಷಯಕ ವಿವೇಚನೆಗಳಾದರೂ ಹೆಚ್ಚಾಗಿ ಇದ್ದುದು ತೋರಿಬರುತ್ತದೆ. ಈ ವಿವೇಚನೆಯಲ್ಲಿ ಅವರು ಯಾವ ಯಾವ ಭಾಗಗಳನ್ನು ಮಾಡಿದ್ದಾರೆ, ಮತ್ತು ಯಾವ ಯಾವ ವಿಷಯಗಳನ್ನು ಹ್ಯಾಗೆ ನಿರೂಪಿಸಿದ್ದಾರೆ, ಇದನ್ನು ಅತ್ಯಂತ ಸ್ಥೂಲರೀತಿಯಿಂದ ಕೆಳಗೆ ವಿವರಿಸಲು ನಾನು ಪ್ರಯತ್ನಿಸಿದ್ದೇನೆ.

## ಸೃಷ್ಟಿಯ ಕ್ರಮ.

**ಪಂಚಸಾದಾಖ್ಯಗಳು:-** ಶಿವಾನುಭವಶಾಸ್ತ್ರಜ್ಞರು ಸೃಷ್ಟಿಯ ರಚನೆಯ ವಿಷಯವಾಗಿ ಅನೇಕ ವಚನಗಳನ್ನು ಬರೆದಿರುವರು. ಸೃಷ್ಟಿಯ ಉಗಮವು ಪರಮಾತ್ಮನ ಒಂದು ಶಕ್ತಿಯಿಂದಲೇ ಆಗಿರುತ್ತದೆಂದು ಅವರು ಭಾವಿಸಿದ್ದಾರೆ. ಈ ಶಕ್ತಿಗೆ ಚಿತ್ಶಕ್ತಿ ಎಂಬ ಹೆಸರು. ಈ ಚಿತ್ಶಕ್ತಿಯು ಸೃಷ್ಟಿಗೆ ಸಾವಯವ ಸ್ಥಿತಿಯನ್ನು ತಂದು ಕೊಟ್ಟಿದೆ. ಜಗತ್ತಿನಲ್ಲಿ ನಕ್ಷತ್ರ ಸೂರ್ಯಚಂದ್ರಾದಿಗಳು ಒಂದು ವ್ಯವಸ್ಥೆಯಿಂದ ಸಾಗಿರುವದನ್ನು ನೋಡುತ್ತೇವೆ. ಅದರಂತೆಯೇ ಪೃಥ್ವಿಯಲ್ಲಿಯೂ ಕೂಡ ಸಜೀವ ನಿರ್ಜೀವ ಪದಾರ್ಥಗಳೆಲ್ಲ ತಮ್ಮ ವ್ಯಾಪಾರಗಳಲ್ಲಿ ಉದ್ಯುಕ್ತವಾಗಿವೆ. ಈ ಪದಾರ್ಥಗಳನ್ನೆಲ್ಲ ನಾವು ಸೂಕ್ಷ್ಮದೃಷ್ಟಿಯಿಂದ ನೋಡಿದರೆ, ಅವುಗಳಲ್ಲೆಲ್ಲ ಒಂದು ಪ್ರಚಂಡ ಶಕ್ತಿಯು ವ್ಯಾಪಿಸಿಕೊಂಡು, ವ್ಯವಹರಿಸುತ್ತದೆಂಬುದನ್ನು ನಾವು ಕಾಣಬಹುದು. ಇದಕ್ಕೆಲ್ಲ ಪರಮಾತ್ಮನ ಚಿತ್ಶಕಿಯೇ ಕಾರಣವಾಗಿರು

ತ್ತದೆ. ಆದರೆ ಈ ಜಗತ್ತಿಗೆ ಈ ಚಿತ್ಶಕ್ತಿಯಿಂದ, ನಾವು ಕಾಣುವಸ್ವರೂಪವು ಉಂಟಾಗಬೇಕಾದರೆ, ಅದು ಕೆಲವು ಸ್ಥಿತಿಗಳೊಳಗಿಂದ ಹಾಯ್ದು ಬರಬೇಕಾಗುತ್ತದೆ. ಈ ಸ್ಥಿತಿಗಳಿಗೆ ವಚನಕಾರರು ಸಾದಾಖ್ಯಗಳೆಂಬ ಹೆಸರನ್ನಿಟ್ಟಿರುವರು. ಅವು ಯಾವವೆಂದರೆ ಮಹಾಸಾದಾಖ್ಯ, ಶಿವಸಾದಾಖ್ಯ, ಅಮೂರ್ತಸಾದಾಖ್ಯ, ಮೂರ್ತಿಸಾದಾಖ್ಯ, ಕರ್ತುಸಾದಾಖ್ಯ, ಕರ್ಮಸಾದಾಖ್ಯ ಪ್ರತಿಯೊಂದು ಸಾದಾಖ್ಯದಲ್ಲಿ ನಾನಾತರದ ಶಕ್ತಿಗಳು ಉಗಮ ಹೊಂದುತ್ತವೆ ಆದರೆ ಆ ಶಕ್ತಿಗಳ ಕಡೆಯಸ್ವರೂಪು ಕರ್ಮಸಾದಾಖ್ಯವಿದ್ದು, ಅದರ ಪರಿಣಾಮವೇ ಈ ಬ್ರಹ್ಮಾಂಡವಾಗಿರುವದು. ಈ ಆರು ಸಾದಾಖ್ಯಗಳಲ್ಲಿ ಹುಟ್ಟಿದ ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷ ಶಕ್ತಿಗಳು ಈ ಜಗತ್ತಿನ ನಾನಾವಿಧವ್ಯಾಪಾರಗಳಲ್ಲಿ ವ್ಯವಹರಿಸುತ್ತಿದ್ದು, ಅವೆಲ್ಲವೂ ಪರಮಾತ್ಮನ ಇಚ್ಛಾನುಸಾರವಾಗಿ ಜಗತ್ತನ್ನು ನಡಿಸುತ್ತಲಿವೆ. ಸೃಷ್ಟಿಯ ಕ್ರಮದ ಜ್ಞಾನವೆಂದರೆ ಈ ಆರು ಸಾದಾಖ್ಯಗಳ ಜ್ಞಾನವೇ ಇರುತ್ತದೆ.

**ಷಡಧ್ವಗಳು:—** ಅಧ್ವಗಳೆಂದರೆ ಮಾರ್ಗಗಳು. ಯಾವ ಮಾರ್ಗಗಳಿಂದ ಪರಮಾತ್ಮನ ಶಕ್ತಿಗಳು ವ್ಯವಹರಿಸುತ್ತವೆಯೋ ಅವು ಆರು ಇದ್ದು, ಅವುಗಳಿಗೆ ಷಡಧ್ವಗಳೆಂಬ ಹೆಸರು. ಜಗತ್ತಿನಲ್ಲಿ ವಿದ್ಯುಲ್ಲತೆಯು ತುಂಬಿದೆ. ಆದರೆ ಅದು ಪ್ರಕಟವಾಗಬೇಕಾದರೆ ಹ್ಯಾಗೆ ಒಂದು ತಂತಿಯಂಥ ಪದಾರ್ಥವು ಅವಶ್ಯವೋ, ಹಾಗೆ ಪರಮಾತ್ಮನ ಶಕ್ತಿಗಳು ಈ ಷಡಧ್ವಗಳ ಮಾರ್ಗವಾಗಿ ಪ್ರಕಟವಾಗುತ್ತವೆ. ಇವುಗಳು ಆರು ಇರುತ್ತವೆ. ಯಾವವೆಂದರೆ, ಕಲಾಧ್ವ, ಪದಾಧ್ವ, ಮಂತ್ರಾಧ್ವ, ಭುವನಾಧ್ವ, ತತ್ವಾಧ್ವ, ವರ್ಣಾಧ್ವ. ಈ ಪ್ರತಿಯೊಂದು ಅಧ್ವದಲ್ಲಿ ವಚನಕಾರರು ಪುನಃ ಅನೇಕ ಭಾಗವಿಭಾಗಗಳನ್ನು ಮಾಡಿರುವರು. ಆವುಗಳ ವಿಚಾರವೇಷಡಧ್ವಜ್ಞಾನ. ಇದರ ವಿಚಾರಗಳು ಬಹು ಸೂಕ್ಷ್ಮವಾಗಿರುತ್ತವೆ. ಇವುಗಳ ವಿವೇಚನೆಯು ವಚನಶಾಸ್ತ್ರದ ಗ್ರಂಥಗಳಲ್ಲಿ ವಿಶೇಷವಾಗಿ ಮಾಡಲ್ಪಟ್ಟಿರುತ್ತದೆ.

ಈ ತರದ ಸೃಷ್ಟಿಯ ವಿಚಾರಗಳು ಬ್ರಾಹ್ಮಣರ ವೈದಿಕ ಗ್ರಂಥಗಳಲ್ಲಿ ಕಂಡು ಬರುವದಿಲ್ಲ. ಅವು ಆಗಮ ಗ್ರಂಥಗಳಲ್ಲಿ ಮಾತ್ರ ದೊರಕುತ್ತವೆ.

## ಕರಣ ಹಸಿಗೆ.

ಕರಣಹಸಿಗೆ ಎಂವರೆ ಮನುಷ್ಯನ ಶರೀರದಲ್ಲಿರುವ ನಾನಾವಿಧ ತತ್ವ ಗಳ ವಿವೇಚನೆ ಇರುತ್ತವೆ. ಇದೊಂದು ವೀರಶೈವರ ಮಾನಸಶಾಸ್ತ್ರ ಶರೀರಶಾಸ್ತ್ರವೆಂದು ಹೇಳಲ್ಪಡಬಹುದು. ವಚನಕಾರರು ಇಂಥ ವಿಷ ಯಗಳನ್ನು ವೇಲಿಂದಮೇಲೆ ಉಲ್ಲೇಖಿಸುತ್ತಾರೆ. ಈವಿಷಯಗಳ ಬಗ್ಗೆ ವಿಶೇಷ ವಿಚಾರವನ್ನು ಗ್ರೀಸ ದೇಶದ ತತ್ವಜ್ಞಾನಿಗಳು ಮಾಡಿರುವರು. ಮತ್ತು ಇವೇ ರೀತಿಯಾಗಿ ಈಗಿನ ಐರೋಪ್ಯ ಪಂಡಿತರೂ ಇಂಥ ವಿಷಯಗಳ ಬಗ್ಗೆ ಹೆಚ್ಚಾಗಿ ವಿಚಾರಮಾಡಿರುವರು. ಅವರಂತೆಯೇ ನಮ್ಮ ಹಿಂದು ಸ್ಥಾನ ದೇಶದಲ್ಲಿಯ ಪುರಾತನ ತತ್ವಜ್ಞಾನಿಗಳೂ ಈ ವಿಷಯಕ್ಕೆ ವಿಶೇಷ ಲಕ್ಷವನ್ನು ಪೂರೈಸಿರುವರು. ಇವರ ವಿಚಾರಗಳು ಸಾಂಖ್ಯ ಶಾಸ್ತ್ರದಲ್ಲಿ ಹೆಚ್ಚಾಗಿ ತೋರಿಬರುತ್ತವೆ. ಕರಣ ಹಸಿಗೆಯ ಗ್ರಂಥಗಳು ಈ ಸಾಂಖ್ಯರ ತತ್ವಗಳನ್ನೇ ಅನುಸರಿಸಿರುವವು. ಈ ತೆರದ ಗ್ರಂಥಗಳಲ್ಲಿ ಆತ್ಮ, ಜೀವ, ದೇಹ ಇವುಗಳವ್ಯಾಪಾರಗಳ ವಿವೇಚನೆ, ೩೬ ತತ್ವಗಳ ವರ್ಣನೆ, ಶರೀರದ ಬೇರೆಬೇರೆ ಇಂದ್ರಿಯಗಳ ಕಾರ್ಯಗಳು, ಷಟ್‌ಚಕ್ರಗಳ ಸ್ಥಿತಿಯು, ಇವೇ ಮೊದಲಾದ ವಿಷಯಗಳು ಬರುತ್ತವೆ. ಇದಲ್ಲದೆ ವಚನಕಾರರು ಈ ವಿಷಯದಲ್ಲಿ ಮನುಷ್ಯನ ಗುಣಾವಗುಣಗಳನ್ನು ವಿವೇಚಿಸಿ, ಅವುಗಳ ಭೇದಾಭೇದಗಳನ್ನು ಕಂಡು ಹಿಡಿದು, ಅವುಗಳನ್ನು ನಾನಾ ರೀತಿ ಯಿಂದ ವರ್ಣಿಸಿದ್ದಾರೆ. ಇಂಥ ವಿಷಯಗಳ ಜ್ಞಾನವು ಯಾವ ಮನು ಷ್ಯನು ಹೆಚ್ಚಿನ ಸ್ಥಿತಿಯನ್ನು ಬಯಸುತ್ತಾನೋ, ಅವನಿಗೆ ಅತ್ಯಾವಶ್ಯಕ ವಾದದ್ದೆಂದು ತಿಳಿದು, ವಚನಕಾರರು ಕರಣ ಹಸಿಗೆಗೆ ಮಹತ್ವ ಕೊಟ್ಟಿ ರುತ್ತಾರೆ. ಇದರಿಂದ ಯಾವ ಗುಣಗಳು ತನ್ನ ಪ್ರಗತಿಗೆ ಬಾಧಕವಾಗಿ ರುತ್ತವೆಯೋ, ಇವನ್ನು ತಿಳಿದುಕೊಂಡು, ಮನುಷ್ಯನು ಅವುಗಳನ್ನು ದೂರಮಾಡಲಿಕ್ಕೆ ಶಕ್ಯವಾಗುತ್ತದೆ.

## ಸ್ಥಲಗಳ ವಿಚಾರ.

ವಚನಕಾರರ ಗ್ರಂಥಗಳಲ್ಲಿ ಸ್ಥಲಗಳ ಸಂಬಂಧವಾಗಿ ಮೇಲಿಂದ ಮೇಲೆ ವಿವರಣೆಗಳು ಬರುತ್ತವೆ. ಸಾಮಾನ್ಯ ಜನರಿಗೆ ಸ್ಥಲಗಳ ಅರ್ಥ ವೇನು ಎಂಬವರ ಸ್ಪಷ್ಟ ಕಲ್ಪನೆಯು ಆಗುವದಿಲ್ಲ. ಕೆಲವು ವಚನಕಾ

ರರು ಸ್ಥಲ ಎಂಬ ಶಬ್ದಕ್ಕೆ ವಿಷಯವೆಂಬ ಸಾಮಾನ್ಯ ಹೆಸರನ್ನು ಕೊಟ್ಟು, ಯಾವ ನಿರ್ಬಂಧವಿಲ್ಲದೆ ನಾನಾ ತರದ ಧಾರ್ಮಿಕ, ನೈತಿಕ ವಿಷಯಗಳ ಬಗ್ಗೆ ತಮ್ಮ ಗ್ರಂಥಗಳಲ್ಲಿ ವಿಚಾರ ಮಾಡಿರುವರು ಭಾವ ಚಿಂತಾರತ್ನದಲ್ಲಿಯೂ ಲಿಂಗಲೀಲಾ ವಿಲಾಸದಲ್ಲಿಯೂ ಸ್ಥಲಗಳ ಅರ್ಥವು ಹೀಗೆ ಸಾಮಾನ್ಯವಾಗಿ ನಿರೂಪಿಸಲ್ಪಟ್ಟಿದೆ. ಆದರೆ ವಚನಕಾರರಲ್ಲಿ ಸ್ಥಲಗಳಿಗೆ ಕೆಲವೊಂದು ವಿಶೇಷಾರ್ಥಗಳು ಕೊಡಲ್ಪಟ್ಟಿವೆ. ಈ ಸ್ಥಲಗಳ ಜ್ಞಾನವೇ ಷಟ್ಸ್ಥಲ ಜ್ಞಾನವು

ವಚನಕಾರರು ಇದರಲ್ಲಿ ನಾನಾ ವಿಭಾಗಗಳನ್ನು ಮಾಡಿ, ಪ್ರತಿಯೊಂದು ಭಾಗವನ್ನು ನಾನಾ ವಿಧ ರೀತಿಯಿಂದ ಬಹು ಆಶ್ಚರ್ಯಕರವಾದ ರೀತಿಯಿಂದ ವಿವರಿಸಿದ್ದಾರೆ. ಇದರ ಅಂಶವನ್ನು ಸ್ಥೂಲವಾನದಿಂದ ನಾನು ರಚಿಸಿದ "ವಚನ ಶಾಸ್ತ್ರ ಸಾರ" ಗ್ರಂಥದಿಂದ ಕೆಲವು ಮಟ್ಟಿಗೆ ವಾಚಕರು ಅರಿಯ ಬಹುದು. ಅವರು ಈ ಬಗ್ಗೆ ಕೆಳಗೆ ಬರೆದ ಪ್ರಕಾರ ವಿಭಾಗಗಳನ್ನು ಮಾಡಿರುವರು. ಈ ವಿಭಾಗಗಳ ಸಂಖ್ಯೆಯು ಕ್ರಮವಾಗಿ ೧, ೨, ೩, ೬, ೧೮, ೩೬, ೨೧೬ ಇರುತ್ತವೆ. ಷಟ್ಸ್ಥಲದ ಗ್ರಂಥಗಳಲ್ಲಿ ಮೇಲ್ಕಂಡ ರೀತಿಯಿಂದ ವಿವೇಚನೆಯು ಇರುತ್ತದೆ.

**ಒಂದು ಸ್ಥಲ:—** ಇದು ಲಿಂಗ ಸ್ಥಲವು. ಈ ವಿಷಯದಲ್ಲಿ ಪರಮಾತ್ಮನ ಮೂಲ ಅವ್ಯಕ್ತ ಸ್ಥಿತಿಯ ನಿರೂಪಣೆಯು ಇರುತ್ತದೆ.

**ಎರಡು ಸ್ಥಲಗಳು:—** ಇವು ಅಂಗ ಲಿಂಗಗಳು ಇರುತ್ತವೆ ಇವುಗಳ ಪರಸ್ಪರ ಸಂಬಂಧದ ವಿವೇಚನೆಯೇ ಇದರಲ್ಲಿ ಬರುತ್ತದೆ. ಇದರಲ್ಲಿ ಜಗತ್ತು ಮತ್ತು ಪರಮಾತ್ಮ ಇವೆರಡರ ವಿವೇಚನೆಯೇ ಮುಖ್ಯವಾದದ್ದು.

**ಮೂರು ಸ್ಥಲಗಳು:—** ಅಂಗ ಸ್ಥಲಗಳು ಮೂರು. ಅವು ಯಾವವೆಂದರೆ:— ತ್ಯಾಗಾಂಗ, ಭೋಗಾಂಗ, ಯೋಗಾಂಗ. ಲಿಂಗ ಸ್ಥಲಗಳು ಮೂರು. ಯಾವವೆಂದರೆ: ಇಷ್ಟ, ಪ್ರಾಣ, ಭಾವ. ಈ ಎಲ್ಲ ವಿಷಯಗಳ ವಿವೇಚನೆಯು ಇದರಲ್ಲಿ ಬರುತ್ತದೆ. ಅಂಗ ಲಿಂಗಗಳು ಭಿನ್ನವಾಗಿ ತೋರಿದರೂ ಅವುಗಳು ಒಂದನ್ನೊಂದು ಬಿಟ್ಟು ವ್ಯವಹರಿಸಲಾರವು. ಇವುಗಳು ಮನುಷ್ಯನ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಲ್ಲಿ ಹ್ಯಾಗೆ ವ್ಯವಹರಿಸುತ್ತವೆ ಎಂಬದರ ವಿವೇಚನೆಯು ಇದರಲ್ಲಿ

ಬರುತ್ತದೆ.

**ಆರು ಸ್ಥಲಗಳು:—** ಇದರಲ್ಲಿ ಆರು ಅಂಗ ಸ್ಥಲಗಳು ಇವೆ. ಅವು ಯಾವವೆಂದರೆ:— ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ. ಅದರಂತೆಯೇ ಆರು ಲಿಂಗ ಸ್ಥಲಗಳು ಇದ್ದು, ಅವು ಯಾವವೆಂದರೆ:— ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ. ಇವುಗಳ ಸವಿಸ್ತಾರ ವರ್ಣನೆಯು ಈ ಷಟ್ಸ್ಥಲದಲ್ಲಿ ಬರುತ್ತದೆ. ಪ್ರತಿ ಒಂದು ವಚನಗ್ರಂಥದಲ್ಲಿ ಈ ಆರು ಸ್ಥಲಗಳ ವಿವೇಚನೆಯು ಇದ್ದೇ ಇರುತ್ತದೆ. ಮನುಷ್ಯನ ವ್ಯವಹರಣೆಯು ಸರಿಯಾಗಿ ನಡೆಯಬೇಕಾದರೆ ಈ ಆರು ಸ್ಥಲಗಳ ಜ್ಞಾನವು ಅವಶ್ಯವಾಗಿರುತ್ತದೆ. ವೀರಶೈವ ಧರ್ಮದ ವಿಚಾರದಲ್ಲಿ ಇದು ಅತ್ಯಂತ ಮಹತ್ವವಾದ ಭಾಗವಾಗಿರುತ್ತದೆ.

**ಹದಿನೆಂಟು ಸ್ಥಲಗಳು:—** ಮೇಲೆ ವಿವರಿಸಿದ ಆರು ಸ್ಥಲಗಳಲ್ಲಿ ಪ್ರತಿಯೊಂದು ಸ್ಥಲವು ಮನುಷ್ಯನ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಲ್ಲಿಯೂ ವ್ಯವಹರಿಸುತ್ತದೆ. ಹೀಗೆ ವ್ಯವಹರಿಸಿದಾಗ್ಗೆಯೇ ಮನುಷ್ಯನ ನಾನಾ ವಿಧ ಶಕ್ತಿಗಳು ಪೂರ್ಣತೆಯನ್ನು ಹೊಂದುತ್ತವೆ. ಆದ್ದರಿಂದ ಭಕ್ತ ಸ್ಥಲದಲ್ಲಿ ಮೂರು ವಿಧಗಳು, ಮಹೇಶ್ವರ ಸ್ಥಲದಲ್ಲಿ ಮೂರು ವಿಧಗಳು, ಹೀಗೆ ಪ್ರತಿಯೊಂದು ಸ್ಥಲಗಳಲ್ಲಿ ಮೂರು ವಿಧಗಳನ್ನು ವಚನಶಾಸ್ತ್ರಕಾರರು ಮಾಡಿದ್ದು, ಹೀಗೆ ಒಟ್ಟಿಗೆ ಹದಿನೆಂಟು ಸ್ಥಲಗಳಾಗುವವು. ಈ ೧೮ ಸ್ಥಲಗಳ ಭೇದಾಭೇದಗಳನ್ನು ಈ ಪ್ರಕಾರ ವಿವೇಚಿಸಿರುವರು. ಅದಕ್ಕನುಗುಣವಾಗಿಯೇ ಪ್ರತಿಯೊಂದು ಲಿಂಗ ಸ್ಥಲವಲ್ಲಿಯೂ ಮೂರು ಮೂರು ವಿಧಗಳನ್ನು ಅವರು ಕಲ್ಪಿಸಿರುವರು. ಹೀಗೆ ೧೮ ಅಂಗ ಸ್ಥಲಗಳೂ ೧೮ ಲಿಂಗ ಸ್ಥಲಗಳೂ ಆಗಿರುವವು.

**ಮೂವತ್ತಾರು ಸ್ಥಲಗಳು:—** ಮೇಲ್ಕಂಡ ಆರು ಸ್ಥಲಗಳಲ್ಲಿಯು ಪ್ರತಿಯೊಂದು ಸ್ಥಲದಲ್ಲಿ ಪುನಃ ಆರು ವಿಧಗಳನ್ನು ಕಲ್ಪಿಸಿ, ಈ ಆರು ಸ್ಥಲಗಳಿಗೆ ಮೂವತ್ತಾರು ಸ್ಥಲಗಳನ್ನು ವೀರಶೈವ ವಚನಕಾರರು ಮಾಡಿರುವರು. **ಉದಾ:— ಭಕ್ತನ ಭಕ್ತ, ಭಕ್ತನ ಮಹೇಶ, ಇತ್ಯಾದಿ. ಮಹೇಶನ ಭಕ್ತ, ಮಹೇಶನ ಮಹೇಶ, ಇತ್ಯಾದಿ.** ಅದರಂತೆಯೇ ಲಿಂಗ ಸ್ಥಲಗಳಿಗೂ ೩೬ ವಿಧಗಳನ್ನು ಮಾಡಿದ್ದಾರೆ. **ಉದಾ:— ಆಚಾರಲಿಂಗದೊಳಗಣ ಆಚಾರಲಿಂಗ, ಆಚಾರಲಿಂ**

**ಗದೊಳಣ ಗುರುಲಿಂಗ, ಇತ್ಯಾದಿ.** ಇದರ ಉದ್ದೇಶವೇನಂದರೆ, ಮನುಷ್ಯನ ಪ್ರಗತಿಯು ಒಂದೇ ಸ್ಥಲದಲ್ಲಿ ಇದ್ದರೆ ಆಗಲಾರದು. ಅವನು ಯಾವತ್ತೂ ಸ್ಥಲಗಳಲ್ಲಿ ವ್ಯವಹರಿಸಲು ಶಕ್ತನಾದರೆ ಮಾತ್ರ ಅವನ ಯಾವತ್ತೂ ಶಕ್ತಿಗಳು ಸಮನಾಗಿ ಬೆಳೆಯುವವು. ಮನುಷ್ಯನು ಒಂದೇ ಒಂದು ಶಕ್ತಿಯನ್ನು ಬೆಳಿಸಿದರೆ ಅದು ಅವನ ಪ್ರಗತಿಗೆ ಕಾರಣವಲ್ಲ. ಉದಾ:-- ಕೇವಲ ಶಾರೀರಕ ಸಾಮರ್ಥ್ಯವಿದ್ದರೆ, ಅದು ಅವನಿಗೆ ಗುಣ ಕಾರಿಯಲ್ಲ. ಅದರೊಡನೆ ಮಾನಸಿಕ ಸಾಮರ್ಥ್ಯವೂ ಬೌದ್ಧಿಕ ಸಾಮರ್ಥ್ಯವೂ ಅವಶ್ಯವಾದವುಗಳು. ಅದರಂತೆಯೇ ಕೇವಲ ಬೌದ್ಧಿಕ ಸಾಮರ್ಥ್ಯದ ಬೆಳವಣಿಗೆಯೂ ಮನುಷ್ಯನಿಗೆ ಹಿತಕರವಲ್ಲ. ಅದರೊಡನೆ ಮಾನಸಿಕ ಸಾಮರ್ಥ್ಯವೂ ಶಾರೀರಕ ಸಾಮರ್ಥ್ಯವೂ ಅವಶ್ಯವಾದವುಗಳು. ಈ ಸಂಗತಿಯನ್ನು ತಮ್ಮ ಉದ್ದೇಶವಾಗಿಟ್ಟುಕೊಂಡು ವಚನ ಶಾಸ್ತ್ರಕಾರರು ಮೇಲ್ಕಂಡ ೩೬ ಸ್ಥಲಗಳನ್ನು ಮಾಡಿದ್ದಾರೆ. ಮತ್ತು ಅವರು ಈ ದೃಷ್ಟಿಯಿಂದ ಇವುಗಳ ವಿವೇಚನೆಯನ್ನು ಬಹಳವಾಗಿ ಮಾಡಿರುವರು.

**೨೧೬ ಸ್ಥಲಗಳು:—** ಈ ಸ್ಥಲಗಳ ಅವಶ್ಯಕತೆಯಾದರೂ ಮೇಲೆ ಕಾಣಿಸಿದ ಸಂಗತಿಯ ಮೇಲೆಯೇ ಅವಲಂಬಿಸಿರುತ್ತದೆ. ಈ ೨೧೬ ಸ್ಥಲಗಳ ಜ್ಞಾನವೆಂದರೆ, ಮನುಷ್ಯನ ಅತ್ಯಂತ ಸೂಕ್ಷ್ಮ ದೇಹವಾದ ಕಾರಣ ಶರೀರದ ಪ್ರಗತಿಯು. ಮನುಷ್ಯನಿಗೆ ಸ್ಥೂಲ, ಸೂಕ್ಷ್ಮ ಕಾರಣ ಎಂಬ ಮೂರು ಶರೀರಗಳು ಇರುತ್ತವೆ. ಈ ಯಾವತ್ತೂ ಶರೀರಗಳು ಯಾವಾಗ್ಗೆ ಒಂದೇ ಇಚ್ಛೆಯಿಂದ ಪರಸ್ಪರ ಆತಂಕವಿಲ್ಲದೆ ಸಮರಸ ಭಾವದಿಂದ ವ್ಯವಹರಿಸ ಬಲ್ಲವೊ ಆಗ್ಗೆ ಮನುಷ್ಯನು ಶ್ರೇಷ್ಠ ಸ್ಥಿತಿಯನ್ನು ಹೊಂದುತ್ತಾನೆ. ಇದರ ಜ್ಞಾನವೇ ೨೧೬ ಸ್ಥಲಗಳ ಜ್ಞಾನವು. ಈ ಜ್ಞಾನವನ್ನು ಮನುಷ್ಯನು ಸಂಪಾದಿಸಿ, ಅದನ್ನು ಆತನು ಒಳಕೊಳ್ಳಲಿಕ್ಕೆ ಬೇಕು. ಇದು ಮನುಷ್ಯನ ಗುಣಗಳ ಪ್ರಗತಿಯ ಪರಮಾವಧಿಯು. ಈ ೨೧೬ ಸ್ಥಲಗಳು ಯಾವವೆಂದರೆ. **ಭಕ್ತನ ಭಕ್ತನ ಭಕ್ತ, ಭಕ್ತನ ಭಕ್ತನ ಮಹೇಶ, ಇತ್ಯಾದಿ ಆರು ಸ್ಥಲಗಳು. ಭಕ್ತನ ಮಹೇಶನ ಭಕ್ತ, ಭಕ್ತನ ಮಹೇಶನ ಮಹೇಶ, ಇತ್ಯಾದಿ ಆರು ಸ್ಥಲಗಳು.** ಹೀಗೆ ಭಕ್ತ ಸ್ಥಲಕ್ಕೆ ೩೬ ಸ್ಥಲಗಳು. ಅದರಂತೆ ಮಹೇಶ್ವರ ಸ್ಥಲಕ್ಕೆ ೩೬ ಸ್ಥಲಗಳು. ಹೀಗೆ ಪ್ರತಿಯೊಂದು ಸ್ಥಲಕ್ಕೆ ೩೬ ಸ್ಥಲಗಳಂತೆ ಒಟ್ಟು ೨೧೬ ಸ್ಥಲಗಳಾಗುವವು.

# ನಿವೃತ್ತಿ.

ಹೀಗೆ ಮನುಷ್ಯನ ಯಾವತ್ತು ಶರೀರಗಳು ಸರಿಯಾಗಿ ಪೂರ್ಣತೆಯನ್ನು ಪೊಂದಿದ ಕೂಡಲೇ ಅವುಗಳ ಎಲ್ಲ ವ್ಯಾಪಾರಗಳು ನಿವೃತ್ತಿಯ ಮಾರ್ಗವನ್ನು ಅನುಸರಿಸಲು ಯೋಗ್ಯತೆಯನ್ನು ಹೊಂದುವವು. ಮೊದಲನೇ ಸ್ಥಲವಾದ ಲಿಂಗ ಸ್ಥಲದಿಂದ ೨೧೬ ಸ್ಥಲದವರಿಗೂ ಅವನು ಪ್ರವೃತ್ತಿಯ ಮಾರ್ಗದಲ್ಲಿರುವನು. ಹೀಗೆ ಮನುಷ್ಯನು ಪ್ರವೃತ್ತಿಯ ಪರಮಾವಧಿಯನ್ನು ಹೊಂದಿದ ಬಳಿಕ ಅವನು ನಿವೃತ್ತಿಯ ಮಾರ್ಗವನ್ನು ಅನುಸರಿಸಹತ್ತುವನು. ಈ ನಿವೃತ್ತಿಯ ಮಾರ್ಗವನ್ನು ಅನುಸರಿಸಹತ್ತಿದ ಕೂಡಲೇ ಅವನ ೨೧೬ ಸ್ಥಲಗಳು ೩೬ ಸ್ಥಲಗಳಲ್ಲಿ, ೩೬ ಸ್ಥಲಗಳು ೬ ಸ್ಥಲಗಳಲ್ಲಿ, ೬ ಸ್ಥಲಗಳು ೩ ಸ್ಥಲಗಳಲ್ಲಿ, ೩ ಸ್ಥಲಗಳು ೨ ಸ್ಥಲಗಳಲ್ಲಿ, ೨ ಸ್ಥಲಗಳು ೧ ಸ್ಥಲದಲ್ಲಿ ಹೀಗೆ ಕ್ರಮವಾಗಿ ಅಡಗಿ, ಮನುಷ್ಯನು ಯಾವ ಪರಬ್ರಹ್ಮದೊಳಗಿಂದ ಹೊರಬಿದ್ದಿರುವನೋ, ಅದೇ ಪರಬ್ರಹ್ಮದಲ್ಲಿಅವನು ಪುನಃಐಕ್ಯನಾಗುವನು. ಇದೇ ಶಿವಜೀವೈಕ್ಯವು, ಲಿಂಗಾಂಗಸಾಮ್ರಸ್ಯವು. ಈ ನಿವೃತ್ತಿಯ ಮಾರ್ಗದಲ್ಲಿ ಮನುಷ್ಯನ ತತ್ವಗಳು ಯಾವ ಯಾವುದರಲ್ಲಿ ಕ್ರಮವಾಗಿ ಕೂಡುತ್ತಾ ಹೋಗುವವೆಂಬದರ ವಿಚಾರವನ್ನು ವಚನಕಾರರು ಈ ವಿಷಯದಲ್ಲಿ ವಿಶೇಷವಾಗಿ ಮಾಡುತ್ತಾರೆ.

ಹೀಗೆ ವಚನಕಾರರು ಯಾವ ರೀತಿಯಿಂದ ಜಗತ್ತಿನಲ್ಲಿ ವ್ಯವಹರಿಸಬೇಕು, ತಮ್ಮ ಅವಗುಣಗಳನ್ನು ಹ್ಯಾಗೆ ಹೊಡೆದು ಹಾಕಬೇಕು, ತಮ್ಮ ಸದ್ಗುಣಗಳನ್ನು ಹ್ಯಾಗೆ ಬೆಳಿಸಬೇಕು, ತಮ್ಮ ಶಕ್ತಿಗಳನ್ನು ಹ್ಯಾಗೆ ಲಿಂಗ ಮುಖ ಮಾಡಬೇಕು, ಇವೇ ಮೊದಲಾದ ವಿಷಯಗಳನ್ನು ಬಹು ಆಶ್ಚರ್ಯಕರವಾದ ರೀತಿಯಿಂದ ವಿವೇಚಿರುತ್ತಾರೆ. ಇವೆಲ್ಲವುಗಳ ತಾತ್ವಿಕ ವಿಚಾರಗಳೇ ಷಟ್ಸ್ಥಲ ಜ್ಞಾನವೆನಿಸಿಕೊಳ್ಳುವದು.

ಪ್ರತಿಯೊಂದು ಧರ್ಮದಲ್ಲಿ ದೇವರ ಸಂಬಂಧವಾಗಿ ತಾತ್ವಿಕ ಜ್ಞಾನ ಮತ್ತು ದೇವರ ಉಪಾಸನೆ ಎಂಬ ಎರಡು ವಿಷಯಗಳು ಇದ್ದೇ ಇರುತ್ತವೆ. ಇವುಗಳಲ್ಲಿ ಉಪಾಸನೆಯ ಕ್ರಮವು, ಬೇರೆ ಬೇರೆ ಧರ್ಮಗಳ ಪರಿಸ್ಥಿತಿಗಳಿಗನುಸರಿಸಿ ಭಿನ್ನ ಭಿನ್ನ ತರವಾಗಿರುವದು. ಕ್ರಿಸ್ತೀ ಧರ್ಮದಲ್ಲಿ ಒಂದು ಸ್ಥಳದಲ್ಲಿ ನೆರೆದು ದೇವರನ್ನು ಕುರಿತು ಪ್ರಾರ್ಥನೆ ಮಾಡುವದು

ಅವರ ಉಪಾಸನೆಯಲ್ಲಿ ಮಹತ್ವದ್ದಾಗಿ ಎಣಿಸಲ್ಪಟ್ಟಿರುವದು. ಮಹಮ್ಮ ದೀ ಧರ್ಮದಲ್ಲಿ ನಮಾಜಕ್ಕೆ ಮಹತ್ವ ಕೊಟ್ಟಿರುವರು. ವೇದಗಳ ಕಾಲ ಕ್ಕೆ ನಮ್ಮ ಹಿಂದೂ ಧರ್ಮದಲ್ಲಿ ಯಜ್ಞಯಾಗಾದಿಗಳಿಗೆ ಮಹತ್ವ ಕೊಡ ಲ್ಪಟ್ಟಿತ್ತು. ಹಿಂದುಗಡೆ ಪೌರಾಣಿಕ ಕಾಲದಲ್ಲಿ ನಾನಾದೇವತೆಗಳು ಕಲ್ಪಿ ಸಲ್ಪಟ್ಟು ಮೂರ್ತಿ ಪೂಜೆಗೆ ಮಹತ್ವ ಕೊಡಲ್ಪಡಹತ್ತಿತು. ಹೀಗೆ ನಾನಾ ವಿಧ ಉಪಾಸನೆಗಳು ಬೇರೆ ಬೇರೆ ಧರ್ಮಗಳಲ್ಲಿ ಪ್ರಚಾರವಾಗಿವೆ. ಆದರೆ ವೀರಶೈವ ಧರ್ಮದಲ್ಲಿ ಅಷ್ಟಾವರಣಗಳು ಕಲ್ಪಿಸಲ್ಪಟ್ಟು, ಇವುಗಳನ್ನು ಅನುಸರಿಸುವದೇ ಅವರ ಉಪಾಸನೆಯ ಕ್ರಮವಾಗಿದೆ. ಶಿವಾನುಭವ ವಿಷಯವಲ್ಲಿ ಈ ಅಷ್ಟಾವರಣದ ಜ್ಞಾನವು ಮಹತ್ವದ್ದಿರುತ್ತದೆ.

## ಅಷ್ಟಾವರಣಗಳು.

ಅಷ್ಟಾವರಣಗಳ ಉದ್ದೇಶವು ಷಟ್ಸ್ಥಲಜ್ಞಾನ ಮಾಡಿಕೊಳ್ಳುವದೇ ಇರು ತ್ತದೆ. ಹೀಗೆ ಜ್ಞಾನ ಮಾಡಿಕೊಂಡು ಇವುಗಳ ಸಹಾಯದಿಂದ ಸ್ಥೂಲ ಸೂಕ್ಷ್ಮ ಮತ್ತು ಕಾರಣ ಶರೀರಗಳಲ್ಲಿ ನಡೆಯುವ ವ್ಯಾಪಾರಗಳನ್ನು ಶ್ರೇಷ್ಠಸ್ಥಿತಿಗೆ ತರತಕ್ಕದ್ದಾಗಿರುತ್ತದೆ. ಉಪಾಸನೆಯ ಉದ್ದೇಶವು ಧಾರ್ಮಿಕ ತತ್ವಗಳ ನೆನಪನ್ನು ಮೇಲಿಂದಮೇಲೆ ಮಾಡಿಕೊಳ್ಳುವದೇ ಇರುತ್ತದೆ. ವೀರಶೈವನು ಅಷ್ಟಾವರಣಗಳನ್ನು ಪಾಲಿಸುವದರಿಂದ ಅವನಿಗೆ ಇಂಥ ನೆನಪು ಮೇಲಿಂದಮೇಲೆ ಆಗತಕ್ಕದ್ದು. ಈ ಪ್ರಕಾರ ಜ್ಞಾನವನ್ನು ಅವು ಹ್ಯಾಗೆ ಮಾಡಿಕೊಡುತ್ತವೆ ಎಂಬದರ ವಿಚಾರವೇ ಅಷ್ಟಾವರ ಣದ ಜ್ಞಾನವು.

**ಅಷ್ಟಾವರಣದಲ್ಲಿಯ ಎರಡು ಭೇದಗಳು:—** ವೀರಶೈವ ಷಟ್ಸ್ಥ ಲಜ್ಞಾನಿಗಳು ಸ್ಥೂಲಅಷ್ಟಾವರಣವೆಂತಲೂ ಸೂಕ್ಷ್ಮ(ಜ್ಞಾನ) ಅಷ್ಟಾವರಣ ವೆಂತಲೂ ಎರಡು ವಿಭಾಗಗಳನ್ನು ಕಲ್ಪಿಸಿದ್ದಾರೆ ಸ್ಥೂಲ ಅಷ್ಟಾವರ ಣವು ಬಹಿರಂಗದ ಉಪಾಸನೆಯಾಗಿರುವದು. ಜ್ಞಾನಅಷ್ಟಾವರಣವು ಸ್ಥೂಲಅಷ್ಟಾವರಣಗಳು ತನ್ನ ಶರೀರದೊಳಗಿನ ಯಾವ ಯಾವ ಭಾಗ ಗಳಿಗೆ ಹ್ಯಾಗೆ ಸಂಬಂಧವೆಂಬುದನ್ನು ತಿಳಿದುಕೊಂಡು ಅವುಗಳನ್ನು ಒಳಕೊಂಬುವದೇ ಇರುತ್ತದೆ.

**ಅಷ್ಟಾವರಣದಲ್ಲಿಯ ಮೂರು ಭೇದಗಳು—:** ಅಷ್ಟಾವರಣಗಳು

ಮನುಷ್ಯನ ಕಾರಣ ಸೂಕ್ಷ್ಮ ಮತ್ತು ಸ್ಥೂಲ ಶರೀರಗಳಿಗೆ ಅನುಸಾರ ವಾಗಿ, ಅವುಗಳ ಸ್ವರೂಪವನ್ನು ತಿಳಿಯುಕೊಳ್ಳುವದೇ ಈ ಭಾಗದ ಉದ್ದೇಶವಾಗಿರುತ್ತದೆ.

**ಷಟ್ಸ್ಥಲಾನುಸಾರ ಅಷ್ಟಾವರಣಃ**— ಆರು ಸ್ಥಲಗಳಿಗೆ ಅನುಸಾರವಾಗಿ ಈ ಅಷ್ಟಾವರಣದ ವಿವೇಚನೆಯು ಇರುತ್ತದೆ. ಹೀಗೆ ಅಷ್ಟಾವರಣಗಳನ್ನು ಪಾಲಿಸುವವರಿಂದ ಮನುಷ್ಯನಲ್ಲಿ ಷಡ್ಲಿಂಗಗಳು ಜಾಗ್ರತವಾಗಹತ್ತುವವು.

ಈ ಮೇರೆಗೆ ಶಿವಾನುಭವ ಶಾಸ್ತ್ರಜ್ಞರು ವೀರಶೈವರು ಮಾಡತಕ್ಕ ಉಪಾಸನೆಯನ್ನು ವಿವೇಚಿಸಿರುತ್ತಾರೆ. ಇದರ ಮೇಲಿಂದ ವೀರಶೈವರ ಉಪಾಸನೆಯ ವಿಷಯುಗಳು ಎಷ್ಟು ತಾತ್ವಿಕವಾಗಿರುತ್ತವೆಂಬುದನ್ನು ವಾಚಕರು ಸಹಜವಾಗಿಯೇ ಅರಿಯಬಹುದು. ದಿನಾಲು ಸ್ಥಾವರ ದೇವರಿಗೆ ಹೋಗಿ ಷೋಡಶೋಪಚಾರಗಳಿಂದ ಒಂದು ಮೂರ್ತಿಯನ್ನು ಪೂಜಿಸುವದಕ್ಕೆ ಅವರು ಏನೂ ಮಹತ್ವ ಕೊಟ್ಟಿಲ್ಲ. ಅವರಲ್ಲಿ ಉಪಾಸನೆ ಎಂದರೆ ಆತ್ಮಿಕ ಶಕ್ತಿಗಳನ್ನು ಬೆಳಿಸುವದೇ ಇರುತ್ತದೆ. ಇದರ ವಿವರಣೆಯೇ ಅಷ್ಟಾವರಣ ಜ್ಞಾನವು.

## ಅಷ್ಟಾವರಣದ ಭಾಗಗಳು.

**ಗುರುಲಿಂಗ ಜಂಗಮಃ—** ಇವುಗಳ ಭೇದ ವಿಭೇದಗಳನ್ನು ವಚನಕಾರರು ಅತ್ಯಂತ ಸೂಕ್ಷ್ಮರೀತಿಯಿಂದ ವಿವರಿಸಿರುತ್ತಾರೆ. ಇವುಗಳ ವಿಸ್ತೃತ ವಿವೇಚನೆಯು ವಚನ ಶಾಸ್ತ್ರದಲ್ಲಿ ವಿಶೇಷವಾಗಿ ಮಾಡಲ್ಪಟ್ಟಿರುತ್ತದೆ.

**ಪ್ರಸಾದ ಮತ್ತು ಪಾದೋದಕಃ**— ಇವುಗಳ ವಿವರಣೆಯು ತಾತ್ವಿಕದೃಷ್ಟಿಯಿಂದಲೂ ಉಪಾಸನೆಯ ದೃಷ್ಟಿಯಿಂದಲೂ ಮಾಡಲ್ಪಟ್ಟಿರುತ್ತದೆ- ಪ್ರಸಾದದಲ್ಲಿ ಮೂರು ಭಾಗಗಳಿಂದ ಹಿಡಿದು ಒಂದು ಸಾವಿರದ ಮೇಲ್ಪಟ್ಟು ವಿಭಾಗಗಳು ಇರುತ್ತವೆ. ಅವುಗಳನ್ನೆಲ್ಲ ಈ ಲೇಖದಲ್ಲಿ ವಿವರಿಸುವದು ಅಶಕ್ಯವಿರುತ್ತದೆ.

ಇದರಂತೆಯೇ ಪಾದೋದಕದ ವಿವರಣೆಯಾದರೂ ಅತ್ಯಂತ ಸೂಕ್ಷ್ಮತರವಾಗಿರುತ್ತದೆ. ನಾನಾವಿಧವಾದ ಪಾದೋದಕದ ಜ್ಞಾನವು ಷಟ್ಸ್ಥಲ ಶಾಸ್ತ್ರದ ಮರ್ಮ ಮತ್ತು ಮಂತ್ರದ ಅರ್ಥ ಇವುಗಳನ್ನು ತಿಳಿಯದ

ಹೊರ್ತು ಆಗಲಾರದು.

ಸ್ಥೂಲರೀತಿಯಿಂದ ಪಾದೋದಕಗಳು ದಶವಿಧವಾಗಿರುತ್ತವೆ. ಮತ್ತು ಪ್ರಸಾದಗಳು ದ್ವಾದಶವಿಧವಾಗಿರುತ್ತವೆ.

**ವಿಭೂತಿ ರುದ್ರಾಕ್ಷಿ**:— ವಿಭೂತಿಯಲ್ಲಿ ಬೇರೆ ಬೇರೆ ಸ್ಥಲಗಳಿಗನು ಸಾರವಾಗಿ ಹ್ಯಾಗೆ ಮತ್ತು ಯಾವ ಭಾವನೆಯಿಂದ ಧರಿಸಬೇಕು ಎಂಬದು ಕಾಣಿಸಲ್ಪಟ್ಟಿರುತ್ತದೆ. ರುದ್ರಾಕ್ಷ ಧಾರಣೆಯಲ್ಲಿಯೂ ಇದೇ ಕ್ರಮವು ಇರುತ್ತದೆ. ಇವು ದೇಹಶುದ್ಧಿ ಮತ್ತು ಮನಶುದ್ಧಿ ಇವೆ ರಡನ್ನೂ ಒಳಕೊಂಡಿವೆ.

**ಮಂತ್ರ**:— ಶಿವಾನುಭವ ಶಾಸ್ತ್ರಜ್ಞರು ಇದರ ಮರ್ಮವನ್ನು ಅತ್ಯಂತ ಗೂಢವಾಗಿಯೂ ಗರ್ಭಿತವಾಗಿಯೂ ಇಟ್ಟಿರುವರು. ಷಟ್ಸ್ಥಲ ಜ್ಞಾನದ ನೆನಪನ್ನು ಈ ಮಂತ್ರೋಚ್ಚಾರಣೆಯಿಂದ ಮಾಡಿಕೊಳ್ಳುವದು ಇರುತ್ತದೆ. ಮಂತ್ರದ ಉದ್ದೇಶವು ಲೈಂಗಿಕ ಶಕ್ತಿಗಳನ್ನು ಒಳಕೊಳ್ಳು ವವೇ ಇರುತ್ತದೆ. ಆದ್ದರಿಂದ ಇದರ ಮರ್ಮದ ಜ್ಞಾನ ಮಾಡಿಕೊ ಳ್ಳುವದೇ ಈ ಆವರಣದ ಉದ್ದೇಶವು ಇರುತ್ತದೆ. ಇದರಲ್ಲಿ ಪಂಚಾ ಕ್ಷರಿಯ ಭೇಧಾಭೇದಗಳ ವಿವರಣೆ, ಮನುಷ್ಯನ ಶರೀರದಲ್ಲಿಯ ಲಿಂಗ ಗಳನ್ನು ಜಾಗ್ರತಪಡಿಸುವ ಸಾಧನೆಗಳು, ಜಪವಿಭೇದಗಳು, ಶರೀರಕ್ಕೆ ಮಂತ್ರಗಳನ್ನು ಸಂಬಂಧಿಸುವ ಜ್ಞಾನ ಇವೇ ಮೊದಲಾದ ವಿಷಯಗಳು ಬರುತ್ತವೆ.

ಶಿವಾನುಭವ ಶಾಸ್ತ್ರಜ್ಞರು ಮೇಲ್ಕಂಡ ರೀತಿಯಿಂದ ಅಷ್ಟಾವರಣದ ಮರ್ಮಗಳನ್ನು ವಚನಗಳಲ್ಲಿ ನಿರೂಪಿಸಿರುವರು. ಇದರ ಮೇಲಿಂದ ವೀರ ಶೈವರಲ್ಲಿ ಉಪಾಸನೆಯ ಪದ್ಧತಿ ಎಷ್ಟು ಗಹನ ಮತ್ತು ಉದಾತ್ತ ಇರು ತ್ತದೆಂಬದರ ಕಲ್ಪನೆಯು ವಾಚಕರಿಗೆ ಸಹಜವಾಗಿಯೇ ಬರಬಹುದು. ಹೀಗೆ ಶಿವಾನುಭವ ಶಾಸ್ತ್ರಕಾರರು ಧರ್ಮಜ್ಞಾನವನ್ನೂ ಉಪಾಸನೆ ಯನ್ನೂ ವಿವರಿಸಿ ಅವುಗಳನ್ನು ತಿಳಿಯಲು ಸಹಾಯವಾಗಬೇಕೆಂದು ಇನ್ನೂ ಅನೇಕ ಅವಾಂತರ ಭೇದಗಳನ್ನು ಕಲ್ಪಿಸಿದ್ದಾರೆ. ಇವುಗಳ ಉದ್ದೇಶವು ಆತ್ಮ ಪ್ರಗತಿಯನ್ನು ತೀವ್ರವಾಗಿ ಮಾಡಿಕೊಳ್ಳಲಿಕ್ಕೆ ಸಹಾ ಯಕಾರಿಯಾಗಬೇಕೆಂಬುದೇ ಇರುತ್ತದೆ. ಈ ಉದ್ದೇಶದಿಂದ ಕೆಳಗೆ ಕಾಣಿಸಿದ ಭೇದವಿಭೇದಗಳನ್ನು ಅವರು ಮಾಡಿರುವರು.

**ಪಂಚಾಚಾರಗಳು**:— ಇವು ಯಾವವೆಂದರೆ, ಲಿಂಗಾಚಾರ,

ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ. ಈ ಆಚಾರಗಳಿಂದ ಮನುಷ್ಯನು ವ್ಯವಹಾರದಲ್ಲಿ ಹ್ಯಾಗೆ ನಡೆಯಬೇಕೆಂಬುದನ್ನು ತಿಳಿಯಬಹುದು.

**ಸಪ್ತಾಚಾರಗಳು:** ಅವು ಯಾವವೆಂದರೆ, ಕ್ರಿಯಾಚಾರ, ಜ್ಞಾನಾಚಾರ, ಭಾವಾಚಾರ, ಸತ್ಯಾಚಾರ, ನಿತ್ಯಾಚಾರ, ಧರ್ಮಾಚಾರ, ಸರ್ವಾಚಾರ. ಇವುಗಳು ಮೇಲಿನವುಗಳಿಗಿಂತಲೂ ಸೂಕ್ಷ್ಮವಾದವುಗಳು. ಇವುಗಳನ್ನು ಅರಿದು ಆಚರಿಸುವದರಿಂದ ಮನುಷ್ಯನಲ್ಲಿ ಲಿಂಗದ ಗುಣಗಳು ದೃಢವಾಗುವವು.

**ಷಡ್ವಿಧ ವ್ರತಗಳು:**— ಗುರುವ್ರತ, ಲಿಂಗವ್ರತ, ಚರವ್ರತ, ಪ್ರಸಾದವ್ರತ, ಪಾದೋದಕವ್ರತ, ಭಾಕ್ತಿಕವ್ರತ. ಪಂಚಾಚಾರ ಸಪ್ತಾಚಾರಗಳು ಮನುಷ್ಯನ ವ್ಯವಹಾರಿಕ ಧರ್ಮಗಳಿಗೆ ಅನುಸರಿಸಿ ಮಾಡಿದವು ಇರುತ್ತವೆ. ಆದರೆ ಈ ಷಡ್ವಿಧ ವ್ರತಗಳು ಅವನ ಉಪಾಸನೆಗೆ ಸಂಬಂಧಪಟ್ಟವುಗಳು ಇರುತ್ತವೆ.

## ಲಿಂಗಸಾಧನೆಗಳು.

ಶಿವಾನುಭವ ಶಾಸ್ತ್ರಜ್ಞರು ಲಿಂಗದ ಗುಣಗಳನ್ನು ಒಳಕೊಳ್ಳುವದರ ಉದ್ದಿಶ್ಯವಾಗಿ ನಾನಾವಿಧವಾಗಿ ವಿವರಣೆಗಳನ್ನು ಮಾಡಿರುವರು. ಮನುಷ್ಯನ ಆರು ಚಕ್ರಗಳಲ್ಲಿ ಆರು ಲಿಂಗಗಳನ್ನು ಒಳಕೊಳ್ಳಬೇಕೆಂದು ಅವರು ಅನೇಕ ಸಾಧನೆಗಳನ್ನು ಕಲ್ಪಿಸಿರುವರು. ಅವರು ಕೆಳಗೆ ಕಾಣಿಸಿದ ವಿಭಾಗಗಳನ್ನು ಮಾಡಿ ಆ ಪ್ರಕಾರ ಮನುಷ್ಯನು ವರ್ತಿಸಿದರೆ, ಆಯಾಲಿಂಗದ ಗುಣಗಳು ತನ್ನೊಳಗೆ ಬರುವವೆಂದು ಹೇಳಿರುವರು. ಅವು ಯಾವವೆಂದರೆ, ಮಾಹೇ,ಭಕ್ತ, ಪೂಜಕ, ವೀರ, ಪ್ರಸಾದೀ, ಪ್ರಾಣಿ. ಈ ಮೇರೆಗೆ, ಆಚಾರಲಿಂಗ, ಗುರುಲಿಂಗ ಮೊದಲಾದ ಆರು ಲಿಂಗಗಳನ್ನು ಸಾಧಿಸಬೇಕೆಂದು ಅವರು ಸೂಚಿಸಿದ್ದಾರೆ. ಮೇಲ್ಕಂಡ ಆರು ವಿಷಯಗಳಅರ್ಥಗಳನ್ನು ವಾಚಕರು ಸ್ಥೂಲರೀತಿಯಿಂದ ಅವುಗಳಿಗೆ ಕೊಟ್ಟ ಹೆಸರುಗಳಮೇಲಿಂದಲೇ ಕಂಡು ಹಿಡಿಯಬಹುದು.

ಮೇಲ್ಕಂಡ ರೀತಿಯಲ್ಲದೆ ಇನ್ನೂ ಎರಡು ರೀತಿಗಳನ್ನು ವಚನಕಾರರು ವಿವರಿಸಿರುವರು. ಈ ಪ್ರತಿಯೊಂದು ರೀತಿಯಲ್ಲಿಯೂ ಮೂವತ್ತಾರು

ಸ್ಥಲಗಳು ಇರುತ್ತವೆ. ಈ ಯಾವತ್ತೂ ಸ್ಥಲಗಳ ಹೆಸರುಗಳನ್ನು ಇಲ್ಲಿ ವಿಸ್ತಾರಭಯಕ್ಕಾಗಿ ಕೊಟ್ಟಿಲ್ಲ. ಇವೆಲ್ಲವುಗಳವಿವರಣೆಯಲ್ಲಿ ಶಿವಾನುಭವ ಶಾಸ್ತ್ರಜ್ಞರು ಮನುಷ್ಯನ ಆಚರಣೆಗಳ ನಿಜಸ್ಥಿತಿಯನ್ನು ಕಂಡು ಹಿಡಿದು ಆರಂಭದ ದೆಶೆಯಲ್ಲಿ ಸುಲಭ ಆಚಾರಗಳನ್ನು ವಿವರಿಸಿ, ಆ ಮೇಲೆ ಬರ ಬರುತ್ತ ಹೆಚ್ಚೆಚ್ಚಿನ ಬಿಗಿಯಾದ ಆಚಾರಗಳನ್ನು ಹೇಳುತ್ತ ಹೋಗಿ ರುವರು.

ಮೇಲ್ಕಂಡ ವಿಷಯಗಳ ವಿವರಣೆಗಳ ಮೇಲಿಂದ ಅನೇಕ ಭೇದಾ ಭೇದಗಳು ಷಟ್‌ಸ್ಥಲ ಶಾಸ್ತ್ರದಲ್ಲಿ ಮಾಡಲ್ಪಟ್ಟಿರುವದಾಗಿ ತೋರಿಬರು ತ್ತದೆ. ಇವೆಲ್ಲವುಗಳನ್ನು ನಾವು ಎಣಿಸಹೋದರೆ, ಇವುಗಳ ಸಂಖ್ಯೆಯು ಸಾವಿರದಮೇಲೆ ಹೋಗುತ್ತದೆ. ಇದರಿಂದ ಷಟ್ಸ್ಥಲ ವಿಚಾರಗಳು ಮತ್ತು ಭಾಗಗಳು ಬಹಳ ಗೊಂದಲದವುಗಳು ಆಗುವದು ಸಹಜಿಕವು. ಈ ಸಂಗ ತಿಯನ್ನು ಶಿವಾನುಭವ ಶಾಸ್ತ್ರಕಾರರು ತಿಳಿದು, ಈ ಯಾವತ್ತು ವಿಷ ಯಗಳನ್ನು ಸುಲಭವಾಗಿ ಕಂಡು ಹಿಡಿಯಬೇಕೆಂದು ಒಂದು ಯೋಜ ನೆಯನ್ನು ಮಾಡಿರುವರು. ಈ ಯೋಜನೆಗೆ ಸಕೀಲಜ್ಞಾನವೆಂಬ ಹೆಸರು.

## ಸಕೀಲಗಳು.

ಈ ಸಕೀಲಗಳ ಜ್ಞಾನದಿಂದ ಆಯಾ ಸ್ಥಲಗಳ ಪರಸ್ಪರ ಸಂಬಂ ಧವನ್ನು ಕಂಡು ಹಿಡಿಯಬಹುದು. ಇದರಲ್ಲಿ ಪ್ರತಿಯೊಂದು ಸ್ಥಲದ ವಿವರಣೆಯೂ ವ್ಯಾಖ್ಯೆಯೂ ಇರುತ್ತವೆ. ಈ ಸಕೀಲಗಳಲ್ಲಿಯಾದರೂ ನಾನಾ ಭಾಗಗಳು ಇವೆ. ಅವುಗಳಲ್ಲಿ ಷಡ್ವಿಧ ಸಕೀಲಗಳು, ಅಷ್ಟ ವಿಧ ಸಕೀಲಗಳು, ನೂರೆಂಟು ಸಕೀಲಗಳು, ಇನ್ನೂರಾಹದಿನಾರು ಸಕೀ ಲಗಳು ಮುಖ್ಯವಾದವುಗಳು. ಇವೂ ಅಲ್ಲದೆ ಅರುವತ್ತಾರು ಸಕೀಲ ಗಳು, ಮತ್ತು ತೊಂಬತ್ತಾರು ಸಕೀಲಗಳು ಎಂತಲೂ ಅವಾಂತರ ಭೇದಗಳಿವೆ. ಈ ಸಕೀಲಗಳು ಜ್ಞಾನ ಸಂಬಂಧವವು ಇರುತ್ತವೆ. ಇವೂ ಅಲ್ಲದೆ ಉಪಾಸನಾ ಸಂಬಂಧದ ಸಕೀಲಗಳೂ ಬೇರೆ ಇವೆ. ಉದಾ:— ಇಷ್ಟಲಿಂಗದ ಸಕೀಲಗಳು, ಮಂತ್ರ ಸಕೀಲಗಳು, ಇತ್ಯಾದಿ.

## ಶಿವಯೋಗ.

ಇದಾವದರೂ ಲಿಂಗವನ್ನು ಒಳಕೊಳ್ಳುವ ಕ್ರಮವು. ಇವರ ವಿವರಣೆಯನ್ನು ಶಿವಾನುಭವ ಶಾಸ್ತ್ರಜ್ಞರು ಪ್ರಾಣಲಿಂಗಿ ಸ್ಥಲದಲ್ಲಿ ವಿಶೇಷವಾಗಿ ಮಾಡಿರುವರು. ಯೋಗ ಶಾಸ್ತ್ರದ ತತ್ವಗಳು ಷಟ್ಸ್ಥಲಗಳಲ್ಲಿ ತೆಗೆದುಕೊಳ್ಳಲ್ಪಟ್ಟಿವೆ. ಈ ವಿಷಯುದ ಬಗ್ಗೆಯೂ ಶಿವಾನುಭವದಲ್ಲಿ ವಿವರಣೆಯು ಬಹಳ ಬರುವದುಂಟು. ಶಿವಯೋಗದ ಉದ್ದೇಶವು ಲಿಂಗದಲ್ಲಿ ಸ್ಥಿರ ಮನಸ್ಸಿನವನಾಗಿ ಅದರ ಗುಣಗಳನ್ನು ಮನುಷ್ಯನ ಎಲ್ಲ ಶರೀರಗಳಲ್ಲಿಯೂ ವ್ಯಕ್ತಪಡಿಸುವದೇ ಇರುತ್ತದೆ.

## ನೂರೊಂದು ಸ್ಥಲಗಳು.

ನಾನು ಹಿಂದೆ ವಿವರಿಸಿದ ಷಟ್ಸ್ಥಲದ ಭೇದಾಭೇದಗಳ ವಿಚಾರಗಳನ್ನು ಅರುಹಿಸಿ ಕೊಡಲಿಕ್ಕೆ ಇದೊಂದು ಬೇರೊಂದು ಕ್ರಮವಿರುತ್ತದೆ. ಇದರಲ್ಲಿ ಷಟ್ಸ್ಥಲದ ತಾತ್ವಿಕ ವಿಚಾರಗಳಲ್ಲದೆ ಉಪಾಸನೆಯು ಮತ್ತು ಆಚಾರದ ನಾನಾ ವಿಷಯಗಳೂ ಶೇರಿಸಲ್ಪಟ್ಟಿರುತ್ತವೆ. ಆದ್ದರಿಂದ ಇದರಲ್ಲಿ ಕೇವಲ ಷಟ್ಸ್ಥಲ ವಿಚಾರಗಳಷ್ಟೇ ಅಲ್ಲ, ಅಷ್ಟಾವರಣ ವಿಚಾರಗಳೂ ಸಹ ಬರುತ್ತವೆ. ಆದ್ದರಿಂದ ಈ ನೂರೊಂದು ಸ್ಥಲಗಳಿಗೆ ವೀರಶೈವರು ಬಹಳ ಮಹತ್ವ ಕೊಡುತ್ತಾರೆ. ಇದರಲ್ಲಿ ಅಂಗ ಸ್ಥಲಗಳೂ ಲಿಂಗ ಸ್ಥಲಗಳೂ ಎಂದು ಕಲ್ಪಿಸಿ, ಅಂಗ ಸ್ಥಲದಲ್ಲಿ ೪೪ ವಿಭೇದಗಳೂ ಲಿಂಗ ಸ್ಥಲವಲ್ಲಿ ೫೭ ವಿಭೇದಗಳೂ ಮಾಡಲ್ಪಟ್ಟಿವೆ. ಇವುಗಳಲ್ಲಿ ೪೪ ಅಂಗ ಸ್ಥಲಗಳು ಭಕ್ತ ಮಹೇಶ ಮೊದಲಾದ ಆರು ಸ್ಥಲಗಳಲ್ಲಿ ಬೇರೆ ಬೇರೆಯಾಗಿ ಹಂಚಿ ಹಾಕಲ್ಪಟ್ಟಿರುತ್ತವೆ. ಅದರಂತೆಯೇ ೫೭ ಲಿಂಗ ಸ್ಥಲಗಳು ಆರು ಲಿಂಗ ಸ್ಥಲಗಳಲ್ಲಿ ಹಂಚಿ ಹಾಕಲ್ಪಟ್ಟಿರುತ್ತವೆ.

## ವಿವಿಧ ಕರ್ಮಗಳು.

ಬ್ರಾಹ್ಮಣರು ರಚಿಸಿದ ಧರ್ಮ ಶಾಸ್ತ್ರಗಳಲ್ಲಿ ಷೋಡಶ ಕರ್ಮಗಳ ವಿವರಣೆಯು ಮೇಲಿಂದ ಮೇಲೆ ಬರುತ್ತದೆ. ಇದರಲ್ಲಿ ಜಾತ

ಕರ್ಮ, ಲಗ್ನ, ಗರ್ಭಾದಾನ, ಅಂತ್ಯಕರ್ಮ ಇಂಥ ಮೊದಲಾದ ವಿಧಿಗಳ ವರ್ಣನೆಯು ಇರುತ್ತದೆ. ಇವುಗಳ ವಿವರಣೆಯು ಕ್ರಾಯಿಸ್ತ, ಮುಸಲ್ಮಾನೀ, ಬೌದ್ಧ ಮೊದಲಾದ ಧರ್ಮಗಳಲ್ಲಿ ಸಹ ಬಂದರೂ, ಅವುಗಳಿಗೆ ಈ ಧರ್ಮಗಳಲ್ಲಿ ಮಹತ್ವದ ಸ್ಥಾನವು ಕೊಡಲ್ಪಟ್ಟಿಲ್ಲ. ಆದರೆ ಇಂಥ ವಿಧಿಗಳಿಂದ ಪುರೋಹಿತ ವರ್ಗದವರಿಗೆ ದ್ರವ್ಯದ ಲಾಭವಾಗುವದರಿಂದ ಬ್ರಾಹ್ಮಣ ವರ್ಗದವರಿಂದ ರಚಿಸಲ್ಪಟ್ಟ ಗ್ರಂಥಗಳಲ್ಲಿ ಇವುಗಳಿಗೆ ಅಗ್ರ ಸ್ಥಾನವು ಕೊಡಲ್ಪಟ್ಟಿರುತ್ತದೆ. ಇದರಂತೆಯೇ ಪ್ರಾಯಶ್ಚಿತ್ತದ ವಿಧಿಗಳಿಗೂ ಅವರು ಮಹತ್ವ ಕೊಟ್ಟಿರುತ್ತಾರೆ. ಆದರೆ ಶಿವಾನುಭವ ಶಾಸ್ತ್ರಜ್ಞರು ಇಂಥ ಕರ್ಮಗಳಿಗೆ ಮಹತ್ವ ಕೊಟ್ಟಿಲ್ಲ. ಯಾಕಂದರೆ ಅವು ಕೇವಲ ವ್ಯವಹಾರಕ್ಕೆ ಸಂಬಂಧ ಪಟ್ಟಂಥವು ಇದ್ದು, ಧಾರ್ಮಿಕಾಚರಣೆಗೆ ಸಂಬಂಧ ಪಟ್ಟವಲ್ಲ. ಈ ವಿಧಿಗಳನ್ನು ನೆರೆವೇರಿಸುವದರಿಂದ ಮನುಷ್ಯನಿಗೆ ಮೋಕ್ಷ ಪ್ರಾಪ್ತಿಯು ಆಗುತ್ತದೆಂದು ಹೇಳಲಿಕ್ಕೆ ಬರಲಾರದು. ಈ ತೆರದ ವ್ಯವಹಾರಗಳು ಪ್ರಾಣಿ ಮಾತ್ರಕ್ಕೂ ಸಾಮಾನ್ಯವಾಗಿರುವ ಧರ್ಮಗಳು. ಆದ್ದರಿಂದ ಇಂಥ ಕರ್ಮಗಳಿಗೆ ಅವರು ಯಾವ ನಿರ್ಬಂಧನೆಗಳನ್ನು ಕಲ್ಪಿಸದೆ ಜನರೂಢಿಯಂತೆ ನಡಿಯಲಿಕ್ಕೆ ಅನುಕೂಲ ಮಾಡಿರುತ್ತಾರೆ. ಆದರೂ ಈ ಷೋಡಶ ಕರ್ಮಗಳಲ್ಲಿ ಶಿವಾನುಭವ ಶಾಸ್ತ್ರಜ್ಞರು ಎರಡು ಕರ್ಮಗಳ ಬಗ್ಗೆ ಮಾತ್ರ ಅಪವಾದಗಳನ್ನು ಮಾಡಿದ್ದಾರೆ. ಅವುಗಳಿಗೋಸ್ಕರ ಅವರು ವಿಶೇಷ ವಿವರಣೆಯನ್ನು ಮಾಡಿರುತ್ತಾರೆ. ಅವು ಯಾವವೆಂದರೆ:-- ದೀಕ್ಷಾವಿಧಿ ಮತ್ತು ಅಂತ್ಯವಿಧಿ.

## ದೀಕ್ಷಾ ವಿಧಿಗಳು.

ದೀಕ್ಷಾಕ್ರಮದಲ್ಲಿ ಅವರು ಕ್ರಿಯಾದೀಕ್ಷಾ ಮಂತ್ರದೀಕ್ಷಾ ವೇಧಾದೀಕ್ಷಾ ಎಂದು ಮೂರು ಭಾಗಗಳನ್ನು ಮನುಷ್ಯನ ಮೂರು ಶರೀರಗಳ ಪ್ರಕಾರ ಮಾಡಿರುವರು. ಈ ಪ್ರತಿಯೊಂದು ವಿಧಿಗಳಲ್ಲಿಯೂ ಪುನಃ ಏಳು ವಿಭಾಗಗಳನ್ನು ಮಾಡಿ, ಹೀಗೆ ಒಟ್ಟಿಗೆ ೨೧ ದೀಕ್ಷೆಗಳನ್ನು ಮಾಡಿದ್ದಾರೆ.

# ಅಂತ್ಯವಿಧಿ.

ವೀರಶೈವನ ಅಂತ್ಯಕಾಲವು ದುಃಖಪಡತಕ್ಕ ಸಮಯವಲ್ಲ. ಒಬ್ಬ ಮನುಷ್ಯನು ಜಗತ್ತಿನಲ್ಲಿ ತನ್ನ ಆಚರಣೆಗಳನ್ನು ಜರಗಿಸಿ, ಮತ್ತೊಂದು ಶ್ರೇಷ್ಠಸ್ಥಾನಕ್ಕೆ ತೆರಳಿದನೆಂದು ಭಾವಿಸಲ್ಪಟ್ಟಿದ್ದು, ಅದೊಂದು ಪುಣ್ಯ ಸಮಯವೆಂದು ತಿಳಿದು ಅಂತ್ಯ ವಿಧಿಯು ನೆರವೇರಿಸಲ್ಪಡುತ್ತದೆ. ಈ ದೃಷ್ಟಿಯಿಂದ ಶಿವಾನುಭವ ಶಾಸ್ತ್ರಜ್ಞರು ಈ ವಿಷಯವನ್ನು ವಿವೇಚಿಸಿ, ಮರಣ ಹೊಂದಿದವನು ಸಮಾಧಿಸ್ಥನಾದನೆಂದು ತಿಳಿಯುತ್ತಾರೆ. ಹೀಗೆ ಅವರು ಕಲ್ಪಿಸಿ ಇದರಲ್ಲಿ ಎಂಟು ವಿಧಗಳನ್ನು ಮಾಡಿದ್ದಾರೆ. ಅವು ಯಾವವೆಂದರೆ, ಸಹಜಕ್ರಿಯಾ, ಗೋಮುಖ, ಗೋಳಕ, ಬಯಲ, ನಿಜಶಿವ, ನಿರವಯ, ಚಿದಾನಂದ, ಮತ್ತು ನಿರ್ವಾಣ. ಈ ಹೆಸರುಗಳ ಮೇಲಿಂದ ವಾಚಕರು ಸಮಾಧಿಗಳೆಂದರೇನು ಎಂಬದರ ಸ್ಥೂಲ ಕಲ್ಪನೆಯನ್ನು ಕೆಲಮಟ್ಟಿಗೆ ಮಾಡಿಕೊಳ್ಳಬಹುದು.

ಈ ಮೇರೆಗೆ ಶಿವಾನುಭವ ಶಾಸ್ತ್ರದ ವಿಸ್ತಾರವಿರುತ್ತದೆ. ಇದರ ಮೇಲಿಂದ ಈ ಜ್ಞಾನವು ಎಷ್ಟು ಮಹತ್ವದ್ದಿರುತ್ತದೆಂಬದರ ಅರಿಕೆಯು ವಾಚಕರಿಗೆ ಕೆಲಮಟ್ಟಿಗೆ ಆಗಬಹುದು. ಈ ವಿಷಯಗಳ ಮೇಲೆ ಬೇರೆ ಬೇರೆ ಸ್ವತಂತ್ರ ಗ್ರಂಥಗಳನ್ನೇ ರಚಿಸಬಹುದು. ಶಿವಾನುಭವವು ಮನುಷ್ಯನ ನಿಜ ಧರ್ಮದ ಸಾರವಿರುತ್ತದೆ. ಇದು ಅವನ ಪ್ರಗತಿಗೆ ಕಾರಣವಾಗಿರುತ್ತದೆ. ಇದರ ವಿವರಣೆಯನ್ನು ಶಿವಶರಣರು ತಮ್ಮ ವಚನ ಗ್ರಂಥಗಳಲ್ಲಿ ಸುಬೋಧವಾಗಿ ಮಾಡಿದ್ದಾರೆ. ಇದರಂತೆ ಆಚರಿಸುವದು ವೀರಶೈವರ ಸ್ವೋನ್ನತಿಯ ಮಾರ್ಗವಾಗಿದೆ. ಇದರ ಮರ್ಮವನ್ನು ತಿಳಿಯುವದು ಈಗಿನ ಕಾಲಕ್ಕೆ ವೀರಶೈವರ ಮುಖ್ಯ ಕಾರ್ಯವಾಗಿದೆ.

# ಕರ್ನಾಟಕದ ಮೊದಲನೆಯ ರಾಣಿ.
## (ಚನ್ನಮ್ಮಾಜಿ)

ಕರ್ನಾಟಕದ ರಾಜ್ಯಗಳಲ್ಲಿ ಚಾಲುಕ್ಯ ವಿಕ್ರಮಾದಿತ್ಯನ ಸಹೋದರಿಯಾದ ಅಕ್ಕಾದೇವಿಯನ್ನು ಹಿಡಿದು ಈವರೆಗೂ ಅನೇಕ ಶೂರ ಸ್ತ್ರೀಯರು ಆಗಿ ಹೋಗಿರುವರು. ಆದರೆ ವಿಧಿಯುಕ್ತ ಪಟ್ಟಾಭಿಷೇಕವನ್ನು ಹೊಂದಿ, ರಾಜ್ಯವಾಳಿದ ಮೊದಲನೇ ರಾಣಿ ಎಂದರೆ, ಬಿದನೂರಿನ ಚನ್ನಮ್ಮಾಜಿಯೇ ಎಂದು ಹೇಳಬಹುದು. ಈಕೆಯು ಬಿದನೂರ ರಾಜ್ಯವನ್ನು ೧೬೭೨ರಿಂದ ೧೬೯೭ ವರೆಗೆ ೨೬ ವರುಷ ಆಳಿದಳು. ಈ ರಾಣಿಯು ಸಂಕ್ಷಿಪ್ತ ವೃತ್ತಾಂತವನ್ನು ಈ ಲೇಖದಲ್ಲಿ ಕೊಡಲೆಣಿಸಿರುವೆವು.

ವೀರಶೈವ ಧರ್ಮದ ಪ್ರಕಾರ ಸ್ತ್ರೀಪುರುಷರು ಸಮಾನ ಹಕ್ಕುಳ್ಳವರು. ಸ್ತ್ರೀಯಳು ಮೋಕ್ಷ ಹೊಂದಬೇಕಾದರೆ, ಆಕೆಯು ತನ್ನ ಪತಿಯ ಆಚರಣೆಯ ಮೇಲೆ ಅವಲಂಬಿಸದೆ ತನ್ನ ಸ್ವಂತ ಆಚರಣೆಗಳಿಂದಲೇ ಅದನ್ನು ಪಡೆಯತಕ್ಕದ್ದು. ಬೇರೆ ಹಿಂದೂ ಮತಗಳ ಪ್ರಕಾರ ಸ್ತ್ರೀಯಳು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ. ಆಕೆಯು ತನ್ನ ಮನೆತನದ ಆಸ್ತಿಗೆ ಸಹ ಸ್ವತಂತ್ರ ಹಕ್ಕುದಾರಳಲ್ಲ. ಆದರೆ ವೀರಶೈವ ಧರ್ಮದ ಪ್ರಕಾರ ಈ ಸ್ಥಿತಿಯು ಇರುವದಿಲ್ಲ. ಆಕೆಯು ಈ ಎಲ್ಲಸಂಗತಿಗಳಲ್ಲಿ ಸ್ವತಂತ್ರ ಹಕ್ಕುದಾರಳು ಇರುತ್ತಾಳೆ. ಆದ್ದರಿಂದ ಬಸವೇಶ್ವರನ ಕಾಲದಲ್ಲಿ ಅನೇಕ ಸ್ತ್ರೀಯರು ಅವಿವಾಹಿತರಾಗಿ ಉಳಿದು, ಧರ್ಮ ತತ್ವ ಪ್ರಸಾರದಲ್ಲಿ ಮುಂದಾಗಿದ್ದರು. ಆದ್ದರಿಂದ ಒಬ್ಬ ವೀರಶೈವ ಸ್ತ್ರೀಯಳು ಒಂದು ರಾಜ್ಯದ ಪಟ್ಟಾಭಿಷೇಕವನ್ನು ಹೊಂದಿ ರಾಜ್ಯವಾಳಿದ್ದರಲ್ಲಿ ಏನೂ ಆಶ್ಚರ್ಯವಲ್ಲ. ಈ ದೃಷ್ಟಿಯಿಂದ ಚನ್ನಮ್ಮಾಜಿಯು ಬರೆ ಕರ್ನಾಟಕದಲ್ಲಷ್ಟೇ ಅಲ್ಲ, ಇಡೀ ಹಿಂದುಸ್ತಾನದಲ್ಲಿ ಸಹ ಹಿಂದೂ ಜನಾಂಗದ ಮೊದಲನೇ ರಾಣಿಯೆಂದು ಸಹ ಹೇಳಬಹುದು.

ಚನ್ನಮ್ಮಾಜಿಯು ಪಟ್ಟವೇರಿದ ಕಾಲವು ಬಹಳ ಅವ್ಯವಸ್ಥೆಯುಳ್ಳದ್ದಿತ್ತು. ಆಕೆಯ ಗಂಡನಾದ ಸೋಮಶೇಖರ ನಾಯಿಕನ ಅಂತ್ಯ ಕಾಲಕ್ಕೆ ರಾಜ್ಯದಲ್ಲೆಲ್ಲ. ಅಂತಸ್ಥ ಕಲಹಗಳೇ ಹೆಚ್ಚಾಗಿದ್ದವು. ಆಕೆಯ ಗಂಡನು ಈ ಕಲಹಗಳ ಮೂಲಕ ತನ್ನ ಬಿದನೂರು ರಾಜಧಾನಿಯನ್ನು ಬಿಟ್ಟುಕೊಟ್ಟು, ಭುವನದುರ್ಗವೆಂಬ ಒಂದು ಬಂದುಕಟ್ಟಿನ ಕೋಟೆಗೆ ಹೋಗಿ ಆಶ್ರಯಿಸಿರಬೇಕಾಯಿತು. ಆದರೆ ಈ ಕಾಲಕ್ಕೆ ಚನ್ನಮ್ಮಾಜಿಯು

ಬಹು ಜಾಣತನದಿಂದ ತನ್ನ ವಿರುದ್ಧ ನಿಂತಿದ್ದ ಕಾಸರಗೋಡದ ತಿಮ್ಮಣ್ಣ ಮತ್ತು ಸಬ್ಬನೀಸ ಕೃಷ್ಣಪ್ಪ ಎಂಬವರನ್ನು ತನ್ನಾಧೀನ ಮಾಡಿಕೊಂಡು ತನಗೆ ಎದುರಾಳಿಯಾಗಿದ್ದ ಕುತ್ಸಿತ ಶಿವಪ್ಪ ನಾಯಕನನ್ನು ತಗ್ಗಿಸಿದಳು. ಮತ್ತು ಪುನಃ ಬಿದನೂರಿಗೆ ಬಂದು ರಾಜ್ಯವಾಳ ತೊಡಗಿದಳು.

ಈ ಅವ್ಯವಸ್ಥೆಯ ಸಮಯವನ್ನು ಸಾಧಿಸಿ ಆಕೆಯ ಕೈಕೆಳಗಿನ ಪಾಳೆಯಗಾರರು ರಾಜ್ಯದಲ್ಲೆಲ್ಲ ದಂಗೆ ಎಬ್ಬಿಸಿದರು. ಇದರಲ್ಲಿ ಘಟ್ಟದ ಕೆಳಗಿನ ತುಳುವರೂ ಚೌಟರೂ ಬಂಗಾಜಲರೂ ಮುಖ್ಯರಾಗಿದ್ದರು. ಇದರಿಂದ ಪಶ್ಚಿಮ ಸಮುದ್ರದ ಬಂದರದೊಳಗಿಂದ ಹಾಯ್ದು ಹೋಗುತ್ತಿದ್ದ ದೇಶದ ವ್ಯಾಪಾರವು ಕಟ್ಟಾಗಿ ಹೋಗಿತ್ತು. ಈ ಆತಂಕವನ್ನು ದೂರಮಾಡುವದು ಚನ್ನಮ್ಮಾಜಿಯ ಮೊದಲನೇ ಕರ್ತವ್ಯವಾಯಿತು. ಆಗ ಆಕೆಯು ಒಂದು ಸೈನ್ಯವನ್ನು ತೆಗೆದುಕೊಂಡು ಹೋಗಿ, ಕಾರ್ಕಳ, ಮಲ್ಲಿಕಾರ್ಜುನಗಿರಿ ಮೊದಲಾದ ಕೋಟೆಗಳಿಗೆ ಮುತ್ತಿಗೆ ಹಾಕಿ, ಅವುಗಳನ್ನು ಸ್ವಾಧೀನ ಪಡಿಸಿಕೊಂಡಳು. ಹೀಗೆ ಚನ್ನಮ್ಮಾಜಿಯು ದಕ್ಷಿಣ ಕನ್ನಡ ಜಿಲ್ಹೆಯಲ್ಲಿ ಸ್ವಾಸ್ಥತೆಯನ್ನುಂಟು ಮಾಡಿದಳು.

ಬಿದನೂರ ರಾಜ್ಯದ ಉತ್ತರದ ಕಡೆಗೆ ಸ್ವಾದಿಯ ಅರಸರು ರಾಜ್ಯವಾಳುತ್ತಿದ್ದರು. ಆ ಕಾಲಕ್ಕೆ ರಾಮಚಂದ್ರ ನಾಯಕನು ಸ್ವಾದಿಯ ಅರಸನಾಗಿದ್ದನು. ಇವನೂ ಬಿದನೂರ ರಾಜ್ಯವನ್ನು ಒಳಹೊಕ್ಕು ದಂಗೆ ಎಬ್ಬಿಸಿದ್ದರಿಂದ, ಚನ್ನಮ್ಮಾಜಿಗೆ ಅವನ ಕೂಡ ಯುದ್ಧ ಹೂಡುವ ಪ್ರಸಂಗವು ಬಂದಿತು. ಈ ಕಾಲಕ್ಕೆ ರಾಮಚಂದ್ರ ನಾಯಕನು ಆಕೆಯ ಮಿಡಿಜೆಯ ಕೋಟೆಯನ್ನು ತೆಗೆದುಕೊಂಡಿದ್ದನು. ಆ ಕೋಟೆಯನ್ನು ಚನ್ನಮ್ಮಾಜಿಯು ಪುನಃ ಅವನ ಕಡೆಯಿಂದ ತಿರುಗಿ ತೆಗೆದುಕೊಂಡಳು. ಮತ್ತು ಸ್ವಾದಿಯ ರಾಜ್ಯವನ್ನು ಒಳನುಗ್ಗಿದಳು. ಆಕೆಯು ಸಿರಸಿಯನ್ನು ತೆಗೆದುಕೊಂಡು, ಸ್ವಾದಿಯ ರಾಜಧಾನಿಯನ್ನು ಸಹ ಮುತ್ತಿಗೆ ಹಾಕಿ, ಅದನ್ನು ಹಿಡಿದುಕೊಂಡಳು. ಆಗ ರಾಮಚಂದ್ರ ನಾಯಕನು ಓಡಿ ಹೋಗಬೇಕಾಯಿತು. ಆಗ ಚನ್ನಮ್ಮಾಜಿಯು ಬನವಸೆ, ಬದನೆಗೂಡು, ಕರವೂರು ಮುಂತಾದ ಸೀಮೆಗಳನ್ನು ಸ್ವಾಧೀನ ಪಡಿಸಿಕೊಂಡು, ಸ್ವಾದಿಯ ಅರಸನ ಬಿರುದಾದ ನೀಲಛತ್ರವನ್ನು ಸಹ ಹಿಡಿದುಕೊಂಡಳು. ಮತ್ತು ಆಕೆಯು ಅದನ್ನು ಕೆಳದಿಯ ವೀರಭದ್ರ

ದೇವರಿಗೆ ಕಾಣಿಕೆಯಾಗಿ ಕಳುಹಿಸಿ ಕೊಟ್ಟಳು. ಆಗ ರಾಮಚಂದ್ರ ನಾಯಕನು ಚನ್ನಮ್ಮಾಜಿಯ ಕೂಡ ಸಂಧಿಯನ್ನು ಮಾಡಿಕೊಂಡು, ಚನ್ನಮ್ಮಾಜಿಗೆ ಬನವಸೆ ಮುಂತಾದ ಸೀಮೆಗಳನ್ನು ಬಿಟ್ಟು ಕೊಡ ಬೇಕಾಯಿತು.

ಈ ಕಾಲಕ್ಕೆ ದಕ್ಷಿಣದ ಕಡೆಗೆ ಮೈಸೂರ ರಾಜ್ಯಕ್ಕೆ ಒಡೆಯನಾದ ಚಿಕ್ಕದೇವರಾಜನು (೧೬೭೨ — ೧೭೦೪) ಆಳುತ್ತಿದ್ದನು. ಈತನು ಮೈ ಸೂರ ಅರಸರಲ್ಲಿ ಬಹು ಪ್ರತಾಪಶಾಲಿಯಾದ ಅರಸನು. ಈ ಕಾಲಕ್ಕೆ ದೇಶದಲ್ಲೆಲ್ಲ ಚಿಕ್ಕ ಚಿಕ್ಕ ಪಾಳೆಯಗಾರರೇ ತುಂಬಿಕೊಂಡಿದ್ದರು. ಇವರನ್ನು ದಕ್ಷಿಣದ ಕಡೆಗೆ ಮೈಸೂರ ರಾಜರೂ ಉತ್ತರ ಮೂಲೆಯಲ್ಲಿ ಚನ್ನಮ್ಮಾಜಿಯೂ ಆಕ್ರಮಿಸಿಕೊಂಡು, ತಮ್ಮ ತಮ್ಮ ರಾಜ್ಯಗಳನ್ನು ಪಸ ರಿಸುವದರಲ್ಲಿದ್ದರು. ಆ ಪ್ರಕಾರ ಚನ್ನಮ್ಮಾಜಿಯು ಬಸವಾಪಟ್ಟಣ, ಕಡವೂರ, ಹಾಸನ್ ಬೇಲೂರದವರೆಗೂ ತನ್ನ ರಾಜ್ಯವನ್ನು ಹಬ್ಬಿಸಿ ದಳು. ಇತ್ತಕಡೆಗೆ ಚಿಕ್ಕದೇವರಾಯನೂ ಕೊಯಿಮುತ್ತೂರ ಜಿಲ್ಹೆಯ ಪ್ರದೇಶ, ಬೆಂಗಳೂರ ಸೀಮೆಯನ್ನು ತೆಗೆದುಕೊಂಡು, ಉತ್ತರಕ್ಕೆ ಚನ್ನ ಮ್ಮಾಜಿಯ ರಾಜ್ಯದವರೆಗೂ ತನ್ನ ರಾಜ್ಯವನ್ನು ಹಬ್ಬಿಸಿದನು. ಇದರಿಂದ ಉಭಯರಾಜರ ನಡುವೆ ಯುದ್ಧ ಪ್ರಸಂಗಗಳು ಒದಗಿಬಂದವು. ಆಗ ಚನ್ನಮ್ಮಾಜಿಯ ಸೇನಾನಾಯಕನಾದ ಕೋಳಿವಾಡದ ಬೊಮ್ಮರಸ ಮತ್ತು ದೇವರಾಜನ ಸೇನಾನಾಯಕ ತಿಮ್ಮಪ್ಪ ಇವರೊಳಗೆ ಯುದ್ಧಗಳು ನಡೆ ದವೆಂತಲೂ, ಇದರಲ್ಲಿ ತಿಮ್ಮಪ್ಪನು ಸೋತು, ಆತನ ಮಗನು ಕೈಸೆರೆ ಹೋದನೆಂತಲೂ ಕೆಳದಿ ನೃಪವಿಜಯದಲ್ಲಿ ಬರೆದದೆ- ಆದರೆ ಕಡೆಗೆ ಉಭಯ ರಾಜರಲ್ಲಿ ಒಪ್ಪಂದವಾದಂತೆ ವಿಲ್ಕ ಸಾಹೇಬರು ತಮ್ಮ ಇತಿ ಹಾಸದಲ್ಲಿ ಉಲ್ಲೇಖಿಸಿದ್ದಾರೆ. ಇದರಿಂದ ಚನ್ನಮ್ಮಾಜಿಯು ಆ ವರೆಗೆ ಕೈವಶ ಮಾಡಿಕೊಂಡಿದ್ದ ಪರಗಣೆಗಳಲ್ಲಿ ಐಗೂರು ಮತ್ತು ವಸ್ತರ ಈ ಎರಡು ಪರಗಣೆಗಳನ್ನು ಬಿಟ್ಟು, ಉಳಿದವುಗಳನ್ನು ಚಿಕ್ಕದೇವರಾಜ ನಿಗೆ ಆಕೆಯು ಒಪ್ಪಿಸಿ ಬಿಟ್ಟಂತೆ ತಿಳಿದುಬರುತ್ತದೆ.

ಈ ಮೇರೆಗೆ ಚನ್ನಮ್ಮಾಜಿಯು ತನ್ನ ರಾಜ್ಯವನ್ನು ಭದ್ರಪಡಿಸಿ ಕೊಂಡು, ತನ್ನ ಮನೆತನದ ಅರಸರುಗಳಿಗೆ ವಾಡಿಕೆಯಾದ ಧರ್ಮಕೃ ತ್ಯಗಳನ್ನು ಮಾಡುವದರಲ್ಲಿ ನಿರತಳಾದಳು. ಆಕೆಯು ಗೋಕರ್ಣ ಮತ್ತು ಸುಬ್ರಹ್ಮಣ್ಯ ಈ ಕಡೆಗೆ ಯಾತ್ರೆಗಳನ್ನು ಮಾಡಿ, ಅನೇಕ ದಾನಧರ್ಮ

ಗಳನ್ನು ಮಾಡಿದಳು. ಮತ್ತು ತುಂಗಭದ್ರಾತೀರದಲ್ಲಿ ತನ್ನ ಗಂಡನ ಜ್ಞಾಪಕಾರ್ಥವಾಗಿ ಸೋಮಶೇಖರಪುರ ಎಂಬ ಹೆಸರಿನ ಅಗ್ರಹಾರ ವನ್ನು ಸ್ಥಾಪಿಸಿ ಅಲ್ಲಿ ಅನೇಕ ಬ್ರಾಹ್ಮಣ ವಿದ್ವಾಂಸರಿಗೆ ಆಶ್ರಯಕೊ ಟ್ಟಳು. ಮತ್ತು ಹೂಲಿಕೆರೆಯ ಕೋಟೆಯನ್ನು ಭದ್ರಪಡಿಸಿ, ಅದಕ್ಕೆ ಚನ್ನಗಿ ರಿಎಂಬ ಹೆಸರನ್ನು ತನ್ನ ಜ್ಞಾಪಕಾರ್ಥವಾಗಿ ಇಟ್ಟಳು.

ಈ ಕಾಲಕ್ಕೆ ಔರಂಗಜೇಬ ಬಾದಹಶನು ವಿಜಾಪುರ ರಾಜ್ಯವನ್ನು ನಾಶಗೊಳಿಸಿ, ಮರಾಟರಗೂಡ ಯುದ್ಧನಡಿಸಿದ್ದನು. ಮರಾಟರಿಗೆ ಅವ ನೊಡನೆ ಬಹಿರಂಗವಾಗಿ ಯುದ್ಧಮಾಡುವದು ಅಶಕ್ಯವಾದದ್ದರಿಂದ, ಪರ್ವತ ಪ್ರದೇಶಗಳಲ್ಲಿ ನಿಂತು ಕಾದಾಡುತ್ತಿದ್ದರು. ಈ ಕಾಲಕ್ಕೆ ಔರಂಗ ಜೇಬನು ಕೃಷ್ಣಾತಟಾಕದಲ್ಲಿರುವ ಗಲಗಲಿಯಲ್ಲಿ ತಳವೂರಿದ್ದನು. ಈ ಸ್ಥಿತಿ ಯಿಂದ ದಕ್ಷಿಣದೇಶದಲ್ಲಿ ಔರಂಗಜೇಬನ ಹಾವಳಿಯು ಹೆಚ್ಚಾಯಿತು. ಮೈಸೂರಿನ ಅರಸನಾದ ಚಿಕ್ಕದೇವರಾಜನು ಔರಂಗಜೇಬನನ್ನು ರೇಗಿ ಸದೆ ಉಪಾಯವಾಗಿದ್ದುಕೊಂಡನು. ಇತ್ತ ಚನ್ನಮ್ಮಾಜಿಯೂ ಗಿರಿ ದುರ್ಗಗಳಿಂದ ತುಂಬಿಕೊಂಡಿದ್ದ ತನ್ನ ಬಿಕ್ಕಟ್ಟಿನ ಪ್ರದೇಶದಲ್ಲಿ ಸಜ್ಜಾಗಿ ಕಾದುಕೊಂಡಿದ್ದಳು. ಈ ಕಾಲಕ್ಕೆ ರಾಜಾರಾಮನು ಮರಾಟರ ಅರಸನಾಗಿದ್ದನು. ಆತನು ಮೊಗಲರದಂಡಾಳುಗಳ ಉಪಟಳವನ್ನು ಸಹಿ ಸಲಾರದೆ, ದ್ರಾವಿಡದೇಶದಲ್ಲಿದ್ದ ಜಿಂಜೀಕೋಟೆಗೆ ಹೊರಟನು. ಅವನ್ನು ಕೆಲ ಬೆಂಗಾವಲರನ್ನು ಕೂಡಿಕೊಂಡು, ಮೊದಲು ಚನ್ನಮ್ಮಾಜಿಯ ರಾಜ್ಯ ವನ್ನು ಪ್ರವೇಶಿಸಿ, ಆಕೆಯ ಆಶ್ರಯವನ್ನು ಕೋರಿದನು. ಚನ್ನಮ್ಮಾಜಿಯು ಅವರು ಬಂದದ್ದನ್ನು ತಿಳಿದು, ಅವರಿಗೆ ಆಶ್ರಯ ಕೊಡುವದೇ ತನ್ನ ಧರ್ಮವೆಂದು ತಿಳಿದು ಅವರನ್ನು ಮೊದಲಿಗೆ ಶಿವಮೊಗ್ಗೆಗೆ ಕರೆದುಕೊಂಡು ಹೋಗಿ, ಅಲ್ಲಿಂದ ಗಾಜನೂರ ಹೊಳೆಯನ್ನು ದಾಟಿಸಿ, ತನ್ನ ರಾಜ್ಯದೊ ಳಗಿಂದ ಅವರನ್ನು ಸುರಕ್ಷಿತವಾಗಿ ಕಳುಹಿಸಿಕೊಟ್ಟಳು. ಮುಂದೆ ಅವರು ಬೆಂಗಳೂರಿನ ಮೇಲಿಂದ ಜಿಂಜಿಗೆ ಹೊರಟು ಹೋದರು. ರಾಜಾರಾ ಮನ ಬೆನ್ನು ಹತ್ತಿ ಬಂದ ಮೊಗಲ ಸೈನಿಕರಿಗೆ ಚನ್ನಮ್ಮಾಜಿಯು ಮಾಡಿದ ಈ ಸಹಾಯವು ತಿಳಿದುಬಂದಿತು. ಆಗ ಔರಂಗಜೇಬನು ಆಕೆಯ ರಾಜ್ಯವನ್ನು ಒಳನುಗ್ಗಲಿಕ್ಕೆ ಅಪ್ಪಣೆ ಕೊಟ್ಟನು. ಆಗ ಮೊಗಲರ ಸೈನ್ಯವು ಮದಗ ಮಾಸೂರಿನ ಕೆರೆಯಬಳಿಯಿಂದ ಹಾಯಿದು, ತಮ್ಮಾಯಿ ಕಣಿ ವೆಯೊಳಗಿಂದ ಮಹಾದೇವಪುರದ ಕೋಟೆಗೆ ಬಂದು, ಅದಕ್ಕೆ ಮುತ್ತಿಗೆ

ಹಾಕಿ ಅದನ್ನು ತೆಗೆದುಕೊಂಡರು. ಮತ್ತು ಅವರು ಬಿದನೂರನ್ನು ಸಹ ಮುತ್ತಿದರು. ಆಗ ಚನ್ನಮ್ಮಾಜಿಯು ತನ್ನ ರಾಜಧಾನಿಯನ್ನು ಬಿಟ್ಟು ಕೊಟ್ಟು, ತನ್ನ ಭದ್ರಸ್ಥಾನವಾದ ಭುವನಗಿರಿದುರ್ಗವನ್ನು ಸೇರ ಬೇಕಾಯಿತು. ಆಗ ಆಕೆಗೆ ತನ್ನ ರಾಜ್ಯಕ್ಕೆ ಈ ತರದ ಬಿಕ್ಕಟ್ಟಿನ ಪ್ರಸಂಗವು ಬಂದರೂ, ಆಕೆಯು ಹೆದರಲಿಲ್ಲ. ಮೊಗಲ ಸೈನಿಕರ ಕೂಡ ಧೈರ್ಯದಿಂದ ಯುದ್ಧವನ್ನು ಹೂಡಿದಳು. ಆಕೆಯು ಅನೇಕ ದಂಡಾಳುಗಳನ್ನು ಕೂಡಿಸಿ, ತನ್ನ ರಾಜ್ಯದಲ್ಲಿರುವ ಯಾವತ್ತೂ ಕಣಿವೆಯ ದಾರಿಗಳನ್ನು ಹಿಡಿದು, ಮೊಗಲರ ಸೇನೆಗೆ ಯಾವ ತರದ ಆಹಾರ ವಸ್ತುಗಳು ಸಿಗದಂತೆ ಮಾಡಿದಳು. ಆಗ ಮೊಗಲರ ದಂಡಾಳುಗಳು ಅನೇಕ ತರದಿಂದ ಕಷ್ಟಬಡಹತ್ತಲು, ಅವರು ಬಿದನೂರ ಮುತ್ತಿಗೆಯನ್ನು ಎಬ್ಬಿಸಿ ಹೊರಟು ಹೋಗ ಬೇಕಾಯಿತು. ಹೀಗೆ ಚನ್ನಮ್ಮಾಜಿಯು ತನ್ನ ರಾಜ್ಯಕ್ಕೆ ಬಂದ ಈ ಸಂಕಟವನ್ನು ದೂರ ಮಾಡಿ ಕೊಂಡಳು. ಈ ಸಂಗತಿಗಳು ೧೬೯೦ ನೇ ಇಸ್ವಿಯ ಸುಮಾರಕ್ಕೆ ಒದಗಿದವು.

ಈ ಸಂಗತಿಗಳು ಒದಗಿದ ಬಳಿಕ, ಚನ್ನಮ್ಮಾಜಿಯು ಶಾಂತತೆಯಿಂದ ರಾಜ್ಯವಾಳಹತ್ತಿದಳು. ಈ ಕಾಲಕ್ಕೆ ಆಕೆಯು ಅನೇಕ ಧರ್ಮಕಾರ್ಯಗಳನ್ನು ಮಾಡಿದಳು. ಆಕೆಯು ಬಿದನೂರಲ್ಲಿ ಇರುವ ನೀಲಕಂಠೇಶ್ವರ ದೇವರ ರಥೋತ್ಸವವು ಯಾವಾಗಲೂ ನಡೆಯುವಂತೆ ವ್ಯವಸ್ಥೆ ಮಾಡಿದಳು. ಇದರಂತೆ ಕೆಳದಿ ರಾಮೇಶ್ವರ ದೇವರು ಮತ್ತು ವೀರಭದ್ರೇಶ್ವರ ದೇವರು ಮತ್ತು ಕೊಲ್ಲೂರ ಮೂಕಾಂಬಿಕೆಯ ದೇವಸ್ಥಾನವು ಇವುಗಳಿಗೆ ಹೇರಳ ಭೂಸ್ವಾಸ್ಥೆಯನ್ನು ಕೊಟ್ಟಳು. ಕೆಳದಿಯ ವೀರಭದ್ರ ದೇವಸ್ಥಾನದ ಶಿಲಾಮಯ ಶಿಖರವನ್ನೂ ರಂಗಮಂಟಪವನ್ನೂ ಕಟ್ಟಿಸಿದಳು. ಇದಲ್ಲದೆ ಕಾಶೀ, ರಾಮೇಶ್ವರ, ಶ್ರೀಶೈಲ, ತಿರುಪತಿ ಮುಂತಾದ ಪುಣ್ಯ ಕ್ಷೇತ್ರಗಳಲ್ಲಿ ಸ್ಥಿರವಾಗಿ ನಡೆವ ಹಾಗೆ ವರ್ಷಾಶನಗಳನ್ನು ಮಾಡಿ ಕೊಟ್ಟಳು. ಅಲ್ಲದೆ ಬೇರೆ ಬೇರೆ ಸ್ಥಲಗಳಲ್ಲಿ ಮಠಗಳನ್ನು ಕಟ್ಟಿಸಿ, ಶಿವ ಜಂಗಮಾರ್ಥವಾಗಿ ಸ್ಥಿರ ಶಾಸನೆಗಳನ್ನು ಏರ್ಪಡಿಸಿದಳು. ಹೀಗೆಯೇ ಶೃಂಗೇರೀ ಸಂಸ್ಥಾನದ ಧರ್ಮವು ಸಾಂಗವಾಗಿ ನಡೆಯುವಂತೆ ಏರ್ಪಾಡು ಮಾಡಿದಳು. ಈ ಮೇರೆಗೆ ಚನ್ನಮ್ಮಾಜಿಯು ಧರ್ಮಾನುಸಾರವಾಗಿ ವರ್ತಿಸುತ್ತ, ೧೬೯೭ ರವರೆಗೂ ರಾಜ್ಯಪರಿಪಾಲನೆ

ಮಾಡಿದಳು. ಈಕೆಗೆ ಮಕ್ಕಳಿರಲಿಲ್ಲ. ಆದ್ದರಿಂದ ಹಿರಿಯ ಬಸವಪ್ಪ ನೆಂಬವನನ್ನು ಚಿಕ್ಕಂದಿನಲ್ಲಿಯೇ ದತ್ತಕ ತೆಗೆದು ಕೊಂಡಿದ್ದಳು. ಈ ಬಸವಪ್ಪ ನಾಯಕರೇ ಮುಂದೆ ಶಿವ ತತ್ವರತ್ನಾಕರವನ್ನು ಬರೆದು, ತಮ್ಮ ಆಸ್ಥಾನದಲ್ಲಿ ಅನೇಕ ವಿದ್ವಾಂಸರನ್ನು ಪೋಷಿಸಿ, ಕರ್ನಾಟಕದ ಅರಸರುಗಳಲ್ಲಿ ಬಹಳ ಪ್ರಸಿದ್ಧಿಯನ್ನು ಹೊಂದಿದರು. ಬಸವಪ್ಪ ನಾಯಕರು ಈ ಸ್ಥಿತಿಯನ್ನು ಹೊಂದಲು ಚನ್ನಮಾಜಿಯವರೇ ಕಾರಣರೆಂದು ಹೇಳಬಹುದು. ಚನ್ನಮ್ಮಾಜಿಯವರ ಸಮಾಧಿಯು ಬಿದನೂರಲ್ಲಿ ಕೊಪ್ಪಲು ಮಠದಲ್ಲಿಇರುತ್ತವೆ.

ಮೇಲಿನ ವೃತ್ತಾಂತದಿಂದ ಚನ್ನಮ್ಮಾಜಿಯು ಬಹಳ ಚಾಣಾಕ್ಷಳಾದ ರಾಣಿಯಾಗಿದ್ದಳೆಂದು ತಿಳಿದು ಬರುತ್ತದೆ. ತನ್ನ ಸುತ್ತಲೂ ಬಲಾಢ್ಯ ವೈರಿಗಳಿದ್ದವರಿಂದ, ಅವರೊಡನೆ ಬಹಳ ಎಚ್ಚರಿಕೆಯಿಂದ ವರ್ತಿಸಿ ತನ್ನ ರಾಜ್ಯವನ್ನು ಕಾಯ್ದು ಕೊಂಡಳು. ತನ್ನ ರಾಜ್ಯದಲ್ಲಿ ಸುವ್ಯವಸ್ಥೆಯನ್ನು ಇಟ್ಟು, ಪ್ರಜೆಗಳನ್ನು ಸರಿಯಾಗಿ ನಡಿಸಿಕೊಂಡಳು. ಆಕೆಯು ಬಹಳ ಧರ್ಮಿಷ್ಠಳಾಗಿದ್ದಳು. ತನ್ನ ವೇಳೆಯನ್ನು ದಾನ ಧರ್ಮಮಾಡುವದರಲ್ಲಿಯೂ ಧರ್ಮ ಕಾರ್ಯಗಳಲ್ಲಿಯೂ ತೊಡಗಿಸುತ್ತಿದ್ದಳು. ತಾನು ವೀರಶೈವ ಮತಸ್ಥಳಾದರೂ, ತಮ್ಮ ರಾಜಧರ್ಮಕ್ಕೆ ಸರಿಯಾಗಿ, ಎಲ್ಲ ಮತಸ್ಥರನ್ನು ಸರಿಯಾಗಿ ನಡಿಸಿಕೊಂಡಳು. ಹೀಗೆ, ಚನ್ನಮ್ಮಾಜಿಯು ೨೬ ವರ್ಷ ರಾಜ್ಯಭಾರ ವಹಿಸಿ ಕರ್ನಾಟಕದ ಪ್ರಸಿದ ಹೆಂಗಳೆಯರಲ್ಲಿ ಶ್ರೇಷ್ಠ ಸ್ಥಾನವನ್ನು ಹೊಂದಿದ್ದಾಳೆ.

# ಬಸವೇಶ್ವರನ ವಚನಗಳು

## ಪಿಂಡಸ್ಥಲ.

೧. ಉದಕದೊಳಗೆ ಬಚ್ಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು. ಶಶಿಯೊಳಗಣ ರಸದ ರುಚಿಯಂತೆ ಇದ್ದಿತ್ತು. ನನೆಯೊಳಗಣ ಪರಿಮಳದಂತೆ ಇದ್ದಿತ್ತು. ಕೂಡಲಸಂಗಮದೇವರ ನಿಲವು ಕನ್ನೆಯ ಸ್ನೇಹದಂತಿದ್ದಿತ್ತು.

## ಪಿಂಡ ಜ್ಞಾನಸ್ಥಲ.

೧. ಕಾಳಿ ಕಂಕಣದಿಂದ ಮುನ್ನ, ತ್ರಿಪುರ ಸಂಹಾರದಿಂದ ಮುನ್ನ, ಹರಿವಿರಿಂಚಿಗಳಿಲ್ಲದ ಮುನ್ನ, ಉಮೆಯ ಕಲ್ಯಾಣದಿಂದ ಮುನ್ನ, ಮುನ್ನ, ಮುನ್ನ, ಆದಿ ಉಳಿವಿನ ಕೆಳೆಯನೀನು ಹಳೆಯನಾನು, ಮಹಾದಾನಿ ಕೂಡಲಸಂಗಮದೇವಾ.

೨. ಅಯ್ಯಾ, ನೀನು ನಿರಾಕಾರವಾಗಿದ್ದಲ್ಲಿ, ನಾನು ಜ್ಞಾನವೆಂಬ ವಾಹನವಾಗಿದ್ದೆ, ಕಾಣಾ! ಅಯ್ಯಾ ನೀನು ನಾಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯವೆಂಬ ವಾಹನವಾಗಿದ್ದೆ, ಕಾಣಾ! ಅಯ್ಯಾ, ನೀನು ಆಕಾರವಾಗಿದ್ದಲ್ಲಿ, ನಾನು ವೃಷಭನೆಂಬ ವಾಹನವಾಗಿದ್ದೆ, ಕಾಣಾ! ಅಯ್ಯಾ, ನೀನೆನ್ನ ಭವವ ಕೊಂದಿತೆನೆಂಬ ಜಂಗಮ ಲಾಂಛನವಾಗಿ ಬಂದರೆ, ನಾನು ಭಕ್ತನೆಂಬ ವಾಹನವಾಗಿದ್ದೆ ಕಾಣಾ, ಕೂಡಲಸಂಗಮದೇವಾ.

೩. ಅಯ್ಯಾ, ಏಳೇಳು ಜನ್ಮದಲ್ಲಿ ಶಿವಭಕ್ತನಾಗಿ ಬಾರದಿದ್ದರೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ನಿಮ್ಮ ಪ್ರಸಾದಕ್ಕಲ್ಲದೆ, ಬಾಯ್ದೆರೆಯೆನಯ್ಯಾ. ಪ್ರಥಮ ಭವಾಂತರದಲ್ಲಿ ಶಿಲಾದನೆಂಬ ಗಣೇಶ್ವರನಮಾಡಿ, ಹೆಸರಿಟ್ಟು ಕರೆದು, ನಿಮ್ಮ ಭೃತ್ಯನಮಾಡಿ, ಎನ್ನನಿರಿಸಿಕೊಂಡಿದ್ದಿರಯ್ಯಾ! ಎರಡನೆಯ ಭವಾಂತರದಲ್ಲಿ ಸ್ಕಂದನೆಂಬ ಗಣೇಶ್ವರನಮಾಡಿ, ಹೆಸರಿಟ್ಟು

ಕರೆದು, ನಿಮ್ಮ ಕಾರುಣ್ಯವ ಮಾಡಿಕೊಂಡಿದ್ದಿರಯ್ಯಾ! ಮೂರನೆಯ ಭವಾಂತರದಲ್ಲಿ ನೀಲಲೋಹಿತನೆಂಬ ಗಣೇಶ್ವರನಮಾಡಿ, ಹೆಸರಿಟ್ಟುಕರೆದು, ನಿಮ್ಮ ಲೀಲಾ ವಿನೋದದಿಂದಿರಿಸಿ ಕೊಂಡಿದ್ದಿರಯ್ಯಾ! ನಾಲ್ಕನೆಯ ಭವಾಂತರದಲ್ಲಿ ಮನೋಹರನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು, ನಿಮ್ಮ ಮನಃಪ್ರೇರಕನಾಗಲೆಂದು ಇರಿಸಿಕೊಂಡಿದ್ದಿರಯ್ಯಾ! ಐದನೆಯ ಭವಾಂತರದಲ್ಲಿ ಕಾಲಲೋಚನನೆಂಬ ಗಣೇಶ್ವರನ ಮಾಡಿ ಹೆಸರಿಟ್ಟುಕರೆದು, ಸರ್ವಕಾಲ ಸಂಸಾರವ ಮಾಡಿಸುತ್ತಿದ್ದಿರಯ್ಯಾ. ಆರನೆಯ ಭವಾಂತರದಲ್ಲಿ ವೃಷಭನೆಂಬ ಗಣೇಶ್ವರನಮಾಡಿ, ಹೆಸರಿಟ್ಟು ಕರೆದು ನಿಮಗೇರಲು ವಾಹನವಾಗಲೆಂದು ಇರಿಸಿಕೊಂಡಿದ್ದಿರಯ್ಯಾ! ಏಳನೆಯ ಭವಾಂತರದಲ್ಲಿ ಬಸವನೆಂಬ ಗಣೇಶ್ವರನಮಾಡಿ, ಹೆಸರಿಟ್ಟು ಕರೆದು ನಿಮ್ಮ ಒಕ್ಕುಮಿಕ್ಕುದಕ್ಕೆ ಯೋಗ್ಯನಾಗಲೆಂದು ಇರಿಸಿಕೊಂಡಿದ್ದಿರಯ್ಯಾ! ಇದು ಕಾರಣ ಕೂಡಲಸಂಗಮದೇವಾ ನೀವು ಬರಿಸಿದ ಭವಾಂತರದಲ್ಲಿ ನಾನು ಬದುಕಲಿದ್ದೆನಯ್ಯಾ.

೪. ಅಯ್ಯಾ, ನಿಮ್ಮ ಶರಣನ ಮರ್ತ್ಯಲೋಕಕ್ಕೆ ತಂದೆಯಾಗಿ, ನೆನನೆನೆದು ಸುಖಿಯಾಗಿ, ಆನು ಬದುಕಿದೆನಯ್ಯಾ! ಅದೇನು ಕಾರಣ ತಂದೆ ಎಂದರಿದೆನಯ್ಯಾ? ಎನ್ನಕಾರಣ ತಂದೆ ಎಂದರಿದೆನಯ್ಯಾ. ಅರಿದರಿದು ನಿಮ್ಮ ಶರಣನು ಆಚರಿಸುವಾಚರಣೆಯ ಕಂಡು ಕಣ್ದೆರೆದೆನಯ್ಯಾ ಕೂಡಲಸಂಗಮದೇವಾ

೫. ಕರಿಘನ, ಅಂಕುರ ಕಿರಿದೆನ್ನಬಹುದೆ? ಬಾರದಯ್ಯಾ. ಗಿರಿಘನ, ವಜ್ರ ಕಿರಿದೆನ್ನಬಹುದೇ! ಬಾರದಯ್ಯಾ! ತಮಂಧ ಘನ, ಜ್ಯೋತಿ ಕಿರಿದೆನ್ನಬಹುದೆ? ಬಾರದಯ್ಯಾ! ಮರಹು ಘನ, ನಿಮ್ಮ ನೆನೆವಮನ ಕಿರಿದೆನ್ನಬಹುದೇ? ಬಾರದಯ್ಯಾ! ಕೂಡಲಸಂಗಮದೇವಾ

## ಸಂಸಾರ ಹೇಯ ಸ್ಥಲ.

೧. ಭವಬಂಧನ ಭವ ಪಾಶಂಗಳಾದ ಕಾರಣವೇನಯ್ಯಾ! ಹಿಂದಣ ಜನ್ಮದಲ್ಲಿ ಲಿಂಗವಮರೆದೆನಾಗಿ, ಹಿಂದಣ ಸಿರಿಯಲ್ಲಿ ಜಂಗಮವ ಮರೆದೆನಾಗಿ, ಅರಿದಡೀ ಸಂಸಾರವ ಹೊದ್ದಲೀವನೆ ಕೂಡಲಸಂಗಮದೇವಾ?

೨. ಸಂಸಾರ ಸಾಗರದ ತೆರೆ ಕೊಬ್ಬಿ, ಮುಖದ ಮೇಲಲೆವುತ್ತಲಿದ್ದು

ವರ್ಗಗ್ರಾಸಿಯಾಗಿ ನುಂಗಿತ್ತಯ್ಯಾ. ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು. ಇನ್ನೆಂದಿಂಗೆ ಮೋಕ್ಷವಹುದೋ ಕೂಡಲಸಂಗಮದೇವಾ?

೪. ಇಲಿಗಡಹನ್ನೊಡ್ಡಿದಲ್ಲಿ ಇರ್ಪಂತೆ, ಎನ್ನ ಸಂಸಾರ ಕೆಡುವನ್ನಕ್ಕ ಮಾಣದು. ಹೆರರಬಾಧಿಸುವದು ತನುಕೆಡುವನ್ನಕ್ಕ ಮಾಣದು. ಹೆ-ರರ ಛಿದ್ರಿಸುವದನು ತನು ಕೆಡುವನ್ನಕ್ಕ ಮಾಣದು. ಅಕಟಕಟ, ಸಂಸಾರ ಅಸತ್ಯ, ಕೂಡಲಸಂಗಮದೇವಾ

೫. ಕಪ್ಪೆ ಸರ್ಪನ ನೆರಳಲ್ಲಿ ಇರ್ಪಂತೆ ಎನಗಾಯಿತ್ತಯ್ಯಾ! ಅಕಟಕಟ, ಸಂಸಾರ ವೃಥಾ ಹೋಯಿತ್ತಲ್ಲಾ! ಕರ್ತೃ ಕೂಡಲಸಂಗಮದೇವಾ, ಇವನು ತಪ್ಪಿಸಿ, ಎನ್ನನು ರಕ್ಷಿಸಯ್ಯಾ ಪ್ರಭುವೇ

೬. ಶೂಲವ ಮೇಲಣ ಭೋಗವೇನಾಮೊಡೇನೋ ನಾನಾವರ್ಣವ ಸಂಸಾರ ಹಾವಹಾವಡಿಗನ ಸ್ನೇಹದಂತೆ ತನ್ನಾತ್ಮವೇ ತನಗೆ ಹಗೆಯಾದಬಳಿಕ, ಬಿನ್ನಾಣ ಉಂಟೇ ಮಹಾದಾನಿ ಕೂಡಲಸಂಗಮದೇವಾ?

೭. ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ! ಕಾಯಯ್ಯಾ ಎನ್ನವನು, ಕಾಯಯ್ಯಾ, ಕಾಯಯ್ಯಾ. ಪುರುಳಿಲ್ಲ, ಪುರುಳಿಲ್ಲ. ಕೂಡಲಸಂಗಮದೇವಾ, ಶಿವಧೋ ಶಿವಧೋ

೮. ನಾನೊಂದ ನೆನೆದರೆ, ತಾನೊಂದ ನೆನೆವುದು. ನಾನಿತ್ತಲೆಳೆದರೆ, ತಾನತ್ತಲೆಳೆವುದು. ತಾ ಬೇರೆ ಎನ್ನನಳಲಿಸಿಕಾಡಿತ್ತು. ತಾ ಬೇರೆ ಎನ ಬಳಲಿಸಿ ಕಾಡಿತು. ಕೂಡಲಸಂಗಮದೇವಾ...

**ಟೀಪು.**

**ಪುಟ ೨. ಅಂತ್ಯವಳಿಯಿಂದ ಮುಂದೆ ಸಾಗಿದ್ದು. ಪ್ರತಿಯಲ್ಲಿ ತಪ್ಪಿ ಉಳಿದಿದೆ.**

ದೇ? ಸಂಸಾರಸಾಗರ ಉರದುದ್ದವೇಹೇಳಾ! ಸಂಸಾರಸಾಗರ ಕೊರಳುದ್ದವೇ ಹೇಳಾ! ಸಂಸಾರಸಾಗರ ಶಿರದುದ್ದವಾದಬಳಿಕ, ಏನುಹೇಳುವೆನಯ್ಯಾ! ಅಯ್ಯೋ! ಅಯ್ಯೋ! ಎನ್ನಹುಯ್ಯಲಕೇಳಯ್ಯಾ, ಕೂಡಲಸಂಗಮದೇವಾ.

೩. **ಚಂದ್ರಮನಂತೆ ಕಳೆ ಸಮನಿಸಿತ್ತೆನಗೆ** ಸಂಸಾರವೆಂಬ ರಾಹು ಸ-

ನಿಮ್ಮ ಹೆಸರಿಲ್ಲದ ಹೆಸರು.

೧೧. ಇಂದಿಂಗೆಂತು, ನಾಳಿಂಗೆಂತು ಬೆಂದೊಡಲ ಹೊರೆಯ ಹೊತ್ತಿತ್ತೆನ್ನ ಸಂಸಾರ. ಹಿಂದೆ ನಾನಾ ಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ. ಮುಂದೆ ಮುಕ್ತಿಯಾಗಬೇಕೆಂಬಯುಕ್ತಿ ಇಲ್ಲ. ಎಂದೆಂದು ಸದಾಶಿವನ ಕುಂದದೆ ನೆನೆಯಲೀಯದೆ, ಕೊಂದುದಯ್ಯಾ ಈ ಮಾಯೆ ಕೂಡಲಸಂಗಮದೇವಾ.

೧೨. ಡಿಟಪುಟ ಭಕುತಿ ಸಂಪುಟ ನೆಲೆಗೊಳ್ಳದಾಗಿ, ಟಿಂಬಕನ ನಾಡಿಸುತಲಿದ್ದಿತಯ್ಯಾ ನಿನ್ನ ಮಾಯೆ, ಟೀವಕ ಟಿಂಬಕನಾಡಿಸುತ್ತಿದ್ದಿತಯ್ಯ ನಿನ್ನ ಮಾಯೆ, ಕೂಡಲಸಂಗಮದೇವಯ್ಯಾ, ಹೊನ್ನು, ಹೆಣ್ಣು, ಮಣ್ಣು, ತೋರಿ.

೧೩. ಅಸತ್ಯವ ನಿಲ್ಲಿಸುವೆನೆಂದರೆ ಮಾಣದು. ಬೇಸತ್ತು ಬಿದ್ದಿಹೆನೆಂದರೆ ಮಾಣದು. ಏವೆನೇವೆನೆಂದರೆ ಮಾಣದು, ಕಾಯದ ಕರ್ಮದ ಫಲ ಭೋಗ. ಕೂಡಲಸಂಗನ ಶರಣರು ಬಂದು, ಹೋ, ಹೋ, ಅಂಜದಿರೆಂದಡೆ, ನಾನು ಬದುಕುವೆನು

೧೪. ಸಂಸಾರವೆಂಬ ಸರ್ಪ ಮುಟ್ಟಲು, ಪಂಚೇಂದ್ರಿಯ ವಿಷಯವೆಂಬ ವಿಷದಿಂದ ನಾನು ಮುಂದುಗೆಟ್ಟೆನಯ್ಯಾ! ನಾನು ಹೊರಳಿಬೀಳುತ್ತಿದ್ದೆನಯ್ಯಾ! "ಓಂನಮಃಶಿವಾಯ"ಎಂಬ ಮಂತ್ರವ ಜಪಿಸುತ್ತಿದ್ದೆನಯ್ಯಾ ಕೂಡಲಸಂಗಮದೇವಾ.

೧೫. ಅರಿಯದ ಜನನಿಯ ಜಠರದಲ್ಲಿ, ಬಾರದ ಭವಂಗಳಲ್ಲಿ ಬರಿಸಿದೆ ತಂದೆ. ಹುಟ್ಟಿದುದೆ ತಪ್ಪಾಯಿತೆಲೆಲಿಂಗವೇ. ಮುನ್ನ ಹುಟ್ಟಿದ್ದಕ್ಕೆ ಕೃಪೆಯ ಮಾಡು ಲಿಂಗವೇ. ಇನ್ನು ಹುಟ್ಟಿದೆನೆಂದರೆ, ಕೂಡಲಸಂಗಮದೇವನೇ ನಿಮ್ಮಾಣೆ.

೧೬. ಎಂದೋ ಸಂಸಾರದ ದಂದುಗ ಹಿಂಗುವದು. ಎಂದೋ ಮನದಲ್ಲಿ ಪರಿಣಾಮವಹುದೆನಗೆ, ಎಂದೋ, ಎಂದೋ, ಕೂಡಲಸಂಗಮದೇವಾ ಇನ್ನೆಂದೋ, ಪರಮ ಸಂತೋಷದಲ್ಲಿಹುದೆನಗೆಂದೋ.

೧೭. ಲೇಸ ಕಂಡು, ಮನದಲ್ಲಿ ಬಯಸಿ, ಆಸೆಮಾಡಿದಡಿಲ್ಲ, ಕಂಡಯ್ಯಾ. ತಾಳಮರಕ್ಕೆ ಕೈಯ್ಯನೀಡಿ, ಮೇಲೆನೋಡಿ ಗೋಣುನೊಂದುದಯ್ಯ. ಕೂಡಲಸಂಗಮದೇವಕೇಳಯ್ಯಾ, ನೀನೀವಕಾಲಕ್ಕಲ್ಲದೆ ಇಲ್ಲಕಂಡಯ್ಯಾ.

೧೮. ಮುನ್ನ ಮಾಡಿದ ಪಾಪ ಬೆನ್ನಬಿಡದನ್ನಕ್ಕ, ಇನ್ನು ಬಯಸಿದ

ರುಂಟೆ ? ಭಕ್ತಿಯುಳ್ಳವರನೋಡಿ ಬಯಸಿದರುಂಟೆ, ಕೂಡಲಸಂಗಮದೇವರಲ್ಲಿ ಮುನ್ನ ವರವ ಹಡೆಯದನ್ನಕ್ಕರ ?

೧೯. ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವದಯ್ಯಾ ! ಚಂದ್ರ ಕುಂದೆ, ಕುಂದುವುದಯ್ಯಾ ! ಚಂದ್ರಂಗೆ ರಾಹು ಅಡ್ಡಬಂದಲ್ಲಿ , ಅಂಬುಧಿಬೊಬ್ಬಿಟ್ಟೀತೆ ? ಅಂಬುಧಿಯ ಮುನಿಯು ಆಪೋಷಣೆವ ಮಾಡಿಕೊಂಬಲ್ಲಿ , ಚಂದ್ರಮನಡ್ಡಬಂದನೆ ? ಆರಿಗಾರು ಇಲ್ಲ , ಕೆಟ್ಟವಂಗೆ ಕೆಳೆ ಇಲ್ಲ . ಜಗದ ನಂಟ ನೀನೇ ದೇವಾ ಕೂಡಲಸಂಗಮಪ್ರಭುವೇ .

೨೦. ಒಲೆ ಹತ್ತಿಉರಿದರೆ, ನಿಲ್ಲಬಹುದಲ್ಲದೆ, ಧರೆ ಹತ್ತಿ ಉರಿದರೆ ನಿಲ್ಲಬಾರದು. ಏರಿ ನೀರುಂಬರೆ, ಬೇಲಿ ಕೆಯ್ಯ ಮೇವರೆ, ನಾರಿ ತನ್ನಯ ಮನೆಯಲ್ಲಿ ತಾ ಕಳವರೆ, ತಾಯಿ ಮೊಲೆವಾಲು, ನಂಜಾಗಿಕೊಲುವರೆ, ಇನ್ನಾರಿಗೆ ದೂರುವೆನಯ್ಯಾ , ಕೂಡಲಸಂಗಮದೇವಾ ?

೨೧. ಎನ್ನ ಗುಣ ಅವಗುಣವ ಸಂಪಾದಿಸುವ ಅಯ್ಯಾ! ಪ್ರತಿಯೇ? ಅಪ್ರತಿಮ ಮಹಿಮ, ನಿಮಗಾನುಪ್ರತಿಯೇ? ಕೂಡಲಸಂಗಮದೇವಾ , ನೀವು ಮಾಡಲಾಗಿ ನಾನಾದೆನು .

೨೨. ಬೆದಕದಿರು , ಬೆದಕದಿರು . ಬೆದಕಿದಿರೆ ಹುರುಳಿಲ್ಲ . ಚಿತ್ತರುಟ್ಟೆಯಕಾಯಲ್ಲಿ ಮತ್ತೇನನರಸುವಿರಯ್ಯಾ ? ನಿಮ್ಮತ್ತ ಮಿಗಿಯ ಪೂರಯಿಸುವುದು , ಕೂಡಲಸಂಗಮದೇವಾ.

೨೩. ಎನ್ನಚಿತ್ತ ಅತ್ತಿಯ ಹಣ್ಣು ನೋಡಯ್ಯಾ! ವಿಚಾರಿಸಿದರೆ ಏನು ಹುರುಳಿಲ್ಲವಯ್ಯಾ ! ಪ್ರಪಂಚಿನ ಡಂಭಿನಲ್ಲಿ ಎನ್ನನೊಂದು ರೂಪವಮಾಡಿ, ನೀವಿರಿಸಿದಿರಯ್ಯಾ ಕೂಡಲಸಂಗಮದೇವಾ .

೨೪ ಎನ್ನ ನಡೆಯೊಂದು ಪರಿ , ಎನ್ನನುಡಿಯೊಂದು ಪರಿ. ಎನ್ನೊಳಗೇನು ಶುದ್ಧವಿಲ್ಲ , ನೋಡಯ್ಯಾ! ನುಡಿಗೆ ತಕ್ಕ ನಡೆಯ ಕಂಡರೆ, ಕೂಡಲಸಂಗಮದೇವ ಎನ್ನೊಳಗಿಪ್ಪ ನೋಡಯ್ಯಾ

೨೫. ಮುಂಗಯ್ಯ ಕಂಕಣಕ್ಕೆ ಕನ್ನಡಿಯ ತೋರುವಂತೆ , ಎನ್ನಮನವು ನಿಧಾನವನೊಲ್ಲದೆ ಜಲಗರವ ಮೆಚ್ಚಿತ್ತು ನೋಡಾ . ನಾಯಿಂಗೆ ನಾರಿವಾಣವಕ್ಕುದೇ ಕೂಡಲಸಂಗಮದೇವಾ ?

೨೬. ಕೊಂಬೆಯ ಮೇಲಣ ಮರ್ಕಟನಂತೆ, ಲಂಘಿಸುವದು ಎನ್ನ

ಮನವು. ನಿಂದಲ್ಲಿ. ನಿಲ್ಲಲೀಯದೆನ್ನ ಮನವು. ಹೊಂದಿದಲ್ಲಿ ಹೊಂದಲೀಯದೆನ್ನ ಮನವು. ಕೂಡಲಸಂಗಮದೇವಾ. ನಿಮ್ಮ ಚರಣಕಮಲದಲ್ಲಿ ಭ್ರಮರನಾಗಿರಿಸು ನಿಮ್ಮ ಧರ್ಮ

೨೭. ಮರನನೇರಿದ ಮರ್ಕಟನಂತೆ, ಹಲವು ಕೊಂಬಿಂಗೆ ಹಾಯು ತಲಿದ್ದೇನೆ. ಬೆಂದಮನವ ನಾನೆಂತು ನಂಬುವೆನಯ್ಯಾ! ಎಂತುನೆಚ್ಚುವೆನಯ್ಯಾ! ಎನ್ನ ತಂದೆ ಕೂಡಲಸಂಗಮದೇವನಲ್ಲಿಗೆ ಹೋಗಲೀಯದಯ್ಯಾ.

೨೮. ಅಂದಣವನೇರಿದ ಸೊಣಗನಂತೆ, ಕಂಡಡೆ ಬಿಡದು, ತನ್ನ ಮುನ್ನಿನ ಸ್ವಭಾವವನು. ಸುಡು, ಸುಡು. ಮನವಿದು ವಿಷಯಕ್ಕೆ ಹರಿವುದು. ವೃಡ, ನಿಮ್ಮನನುದಿನ ನೆನೆಯಲೀಯದು. ಎನ್ನೊಡೆಯ ಕೂಡಲಸಂಗಮ ದೇವಾ, ನಿಮ್ಮಚರಣವ ನೆನೆವಂತೆ ಕರುಣಿಸು. ಸೆರೆಗೊಡ್ಡಿ ಬೇಡುವೆ ನಿಮ್ಮ ಧರ್ಮ.

೨೯. ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ, ಎನ್ನ ಬಾಳುವೆ. ಸಂಸಾರಸಂಗ ಬಿಡದು ನೋಡೆನ್ನ ಮನವು. ಈನಾಯಿತನವ ಮಾಣಿಸು, ಕೂಡಲಸಂಗಮದೇವಯ್ಯ, ನಿಮ್ಮ ಧರ್ಮ.

೩೦. ಒಂದು ಮೊಲಕ್ಕೆ ನಾಯಿಗಳನೊಂಬತ್ತು ಬಿಡುವಂತೆ, ಎನ್ನ ಬಿಡೆಂಬುದು, ತನ್ನ ಬಿಡೆಂಬುದು ಕಾಯವಿಕಾರ. ಎನ್ನಬಿಡು, ತನ್ನ ಬಿಡು, ಎಂಬುದು ಮನವಿಕಾರ. ಕರಣೇಂದ್ರಿಯಂಗಳೆಂಬ ಸೊಣಗಮುಟ್ಟದ ಮುನ್ನ, ಮನ ನಿಮ್ಮನೈದುಗೆ, ಕೂಡಲಸಂಗಮದೇವಾ.

೩೧. ದಂದುಗ ಬಿಡದು, ಮನದ ಸಂದೇಹ ಹಿಂಗದಾಗಿ. ಮುನ್ನಲಿಂಗವ ಕಂಡೆಹೆನೆಂದರೆ, ಹುಸಿ ನೋಡಾ! ಬೆಂದ ಕರಣಾದಿಗಳು ಒಂದು ಪಥವನರಿಯವು. ಎಂತು ಶಿವಪಥ ಸೆನಗೆ ಸಾಧ್ಯವಪ್ಪುದಯ್ಯಾ! ಎನ್ನ ತಂದೆ ಕೂಡಲಸಂಗಮದೇವಾ, ನಿಮ್ಮ ಶರಣರ ಬಳಿವಿಡಿದರೆ, ಎನ್ನ ದಂದುಗ ಹಿಂಗುವದು.

೩೨. ತನ್ನ ವಿಚಾರಿಸಲೊಲ್ಲದು, ಇದಿರ ವಿಚಾರಿಸ ಹೋಹುದೀ ಮನವು. ಏನುಮಾಡುವೆನೀಮನವನು, ಎಂತು ಮಾಡುವೆ ನೀಮನವನು, ಕೂಡಲಸಂಗಮದೇವಾ, ಶರಣರ ನಚ್ಚ ಮಚ್ಚದ ಬೇದ ಮನವನು?

೩೩. ತನ್ನಿಚ್ಛೆಯ ನುಡಿದರೆ ಮೆಚ್ಚುವುದೀ ಮನವು. ಇದಿರಿಚ್ಛೆಯ ನು

ಡಿದರೆ, ಮೆಚ್ಚದೀಮನವು. ಕೂಡಲಸಂಗನ ಶರಣರ ನೆಚ್ಚದ ಮೆಚ್ಚದ ಮನವ ಕಿಚ್ಚಿನೊಳಗಿಕ್ಕು.

೩೪. ಸುಡಲೀ ಮನವೆನ್ನನುಡಹನ ಮಾಡಿತ್ತು. ನಡೆವಲ್ಲಿ ನುಡಿವಲ್ಲಿ ಅಧಿಕನೆಂದೆನಿಸಿತ್ತು. ಬೆಡಗಿನ ಕೀಲಕೆಡೆದು ಕಳೆದ ಬಳಿಕ, ಕಡುಗೋಪದ ಮಡದಿ ತಾ ಮುಟ್ಟಲಮ್ಮಳು. ಒಡಲನುರಿ ಕೊಂಬುದು. ಒಡವೆಯನರಸುಕೊಂಬ, ಕಡುಗೋಪದ ಮಡದಿಯು ಮತ್ತೊಬ್ಬ ಚೆನ್ನಿಗಕೊಂಬ. ಮುನ್ನಮಾಡಿದುದು ತನ್ನ ಬೆನ್ನ ಬಿಡದನ್ನಕ್ಕರ, ಇನ್ನು ಬಯಸಿ ಮಾಡಿದರಳವೆ ಕೂಡಲಸಂಗಮದೇವಾ?

೩೫. ವಚನದ ಹುಸಿ ನುಸುಳೆಂತು ಮಾಬುದೆನ್ನ? ಮನದ ಮರ್ಕಟತನವೆಂತು ಮಾಬುದೆನ್ನ? ಹೃದಯ ಕಲ್ಮಷವೆಂತು ಮಾಬುದೆನ್ನ? ಕಾಯವಿಕಾರಕ್ಕೆ ತೋರಿ ಸಲುವಾದೆನು. ಎನಗಿದು ವಿಧಿಯೇ ಕೂಡಲಸಂಗಮದೇವಾ?

೩೬. ಲಿಂಗವ ನೋಟವು ಸಿಂಗರದ ಗಾತ್ರವು ಹಿಂಗದು ಮನದಲ್ಲಿ. ನಾನಾವಿಕಾರದಿ ಬೆಂದಿಹೆನೆಂದರಿಯಲಿಕ್ಕಿಲ್ಲಾಗಿ, ಸಂದೇಹ ಬಿಡದು. ಮುಂದುಗಾಣದು ಲೋಕ. ಬೆಂದ ಮಾಯಕ್ಕಂಜಿ ನಿಮ್ಮ ಮರೆಯೊಕ್ಕೆ ಕೂಡಲಸಂಗಮದೇವಾ.

೩೭. ವಿಕಳನಾದೆನು ಪಂಚೇಂದ್ರಿಯ ಧಾತುವಿನಿಂದ. ಮತಿಗೆಟ್ಟೆನು ಮನದ ವಿಕಾರದಿಂದ. ಧೃತಿಗೆಟ್ಟೆನು ಧನದವಿಕಾರದಿಂದ. ಗತಿಗೆಟ್ಟೆನು ಕಾಯವಿಕಾರದಿಂದ. ಶರಣುವೊಕ್ಕೆನು ಕೂಡಲಸಂಗಮದೇವಯ್ಯ.

೩೮ ಮುನಿದೆಯಾದೊಡೆ ಒಮ್ಮೆ ಜರಿದಡೆ ಸಾಲದೆ? ಅಕಟಕಟಾ, ಮದನಂಗೆ ಮಾರುಗುಡುವರೆ? ಹಗೆಗೆ ಮಾರುಗೊಟ್ಟು, ನಿನ್ನವರನೊಪ್ಪಿಸುವರೆ ಕೂಡಲಸಂಗಮದೇವ?

೩೯. ಆನು ಒಬ್ಬನು, ಸುಡುವವೈವರು. ಮೇಲೆ ಕಿಚ್ಚುಘನ. ನಿಲ್ಲಲು ಬಾರದು. ಕಾಡಬಸವನ ಹುಲಿ ಕೊಂಡೊಯ್ದರೆ, ಆರೈಯ್ಯಲಾಗವೇ ಕೂಡಲಸಂಗಮದೇವಾ?

೪೦. ಆಸೆಯಾಮಿಷ, ತಾಮಸ, ಹುಸಿ, ವಿಷಯ, ಕುಟಿಲ, ಕುಹಕ, ಕ್ರೋಧ, ಕ್ಷುದ್ರ, ಮಿಥ್ಯ, ಇವನೆನ್ನ ನಾಲಿಗೆಯ ಮೇಲಿಂದತ್ತತೆಗೆದು ಕಳೆಯಯ್ಯಾ? ಅದೆಂತೆಂದೊಡೆ, ನಿಮ್ಮತ್ತಲೆನ್ನ ಬರಲೀಯವು. ಇದು

ಕಾರಣ ಇವೆಲ್ಲವ ಕಳೆದು, ಎನ್ನ ನಿಮ್ಮಯ ಭಕ್ತನ ಮಾಡು ಕೂಡ ಲಸಂಗಮದೇವಾ.

೪೧. ಎಂತು ಶಿವಭಕ್ತಿಯ ನಾನುಪಮಿಸುವೆನಯ್ಯ! ಎಂತು ಶಿವಾ-ಚಾರವೆನಗೆ ಸಾಧ್ಯವಪ್ಪುದಯ್ಯ! ಕಾಮ, ಕ್ರೋಧ, ಲೋಭ, ಮೋ-ಹ ಮದ ಮತ್ಸರಂಗಳಿಂದ ಕಟ್ಟ ವಡೆದೆನು. ಹಸಿವು, ತೃಷೆ, ವ್ಯಸನ ಗಳಿಂದ ಕುದಿವುತ್ತಿದ್ದೇನೆ. ಪಂಚೇಂದ್ರಿಯ ಸಪ್ತಧಾತು ಹುರಿಹಂಚು ಮಾಡಿ ಕಾಡಿಹವಯ್ಯ ಅಯ್ಯೋ, ಅಯ್ಯೋ, ಎನ್ನ ಹುಯ್ಯಲ ಕೇಳಯ್ಯ ಕೂಡಲಸಂಗಮದೇವಾ

೪೨. ಕಾಯವಿಕಾರ ಕಾಡಿಹವಯ್ಯಾ! ಮನದವಿಕಾರ ಕೂಡಿಹವಯ್ಯಾ! ಇಂದ್ರಿಯವಿಕಾರ ಸುಳಿಹವಯ್ಯಾ! ಸುಳಿವಿನೊಳಗೆ ಸುಳಿವುತ್ತಲಿದ್ದೇನೆ. ಸಿಲುಕಿಸದಿರಯ್ಯಾ! ಅನ್ಯಚಿತ್ತವನಿರಿಸದಿರಯ್ಯಾ! ನಿಮ್ಮ ಚಿತ್ತದಿರಿಸಯ್ಯ! ಅನುಪಮ ಸುಖ ಸಾರಾಯ ಶರಣರಲ್ಲಿ ಕೂಡಿಸು ಕೂ-ಡಲಸಂಗಮದೇವಯ್ಯ! ಇದನೆ ಬೇಡುವೆನಯ್ಯಾ.

೪೩. ಬಂದ ಯೋನಿಯನರಿದು ಸಲಹೆನ್ನತಂದೆ. ಬಂದಮನವೆನ್ನ ಗತಿಗೆಡಿಸಿ ಕಾಡಿತ್ತು. ಎನ್ನತಂದೆ, ಕೂಡಲಸಂಗಮದೇವಾ, ಇವನು ಮಾ-ಣಿಸು ನಿಮ್ಮ ಧರ್ಮ

೪೪. ಬೆಳೆಯುವ ಭೂಮಿಯುಲೊಂದು ಪ್ರಳಯದ ಕಸಹುಟ್ಟಿ, ತಿ-ಳಿಯಲೀಯ್ಯದು, ಎಚ್ಚರಲೀಯ್ಯದು. ಎನ್ನವಗುಣವೆಂಬ ಕಸವಕಿತ್ತು, ಸಲಹಯ್ಯ ಲಿಂಗತಂದೆ ಸುಳಿ ತೆಗೆದು ಬೆಳೆವೆನು, ಕೂಡಲಸಂಗಮದೇವಾ.

೪೫. ವಿಷಯವೆಂಬ ಹಸರನೆನ್ನಮುಂದೆ ತಂದು ಪಸರಿಸದಿರಯ್ಯ! ಪ-ಶುವೇನಬಲ್ಲದು, ಹಸುರೆಂದೆಳಸುವುದಲ್ಲದೆ? ವಿಷಯರಹಿತನಮಾಡಿ, ಭಕ್ತಿರಸವದಣಿಯ ಮೇಯಿಸಿ, ಸುಬುದ್ಧಿಎಂಬ ಉದಕವನೆರೆದು, ನೋ-ಡಿ ಸಲಹಯ್ಯ, ಕೂಡಲಸಂಗಮದೇವಾ.

೪೬. ಕೆಸರಲ್ಲಿ ಬಿದ್ದ ಪಶುವಿನಂತೆ, ನಾನು ದೆಸೆದೆಸೆಗೆ ಬಾಯಬಿಡುತಿದ್ದೆನಯ್ಯಾ! ಆರೈವರಿಲ್ಲ, ಅಕಟಕಟಾ! ಪಶುವೆಂದೆನ್ನ ಕೂಡಲಸಂಗಮದೇವ ಕೊಂಬುಹಿಡಿದೆತ್ತುವನ್ನಕ್ಕ

೪೭. ಬಡಪಶು ಪಂಕದಲ್ಲಿ ಬಿದ್ದರೆ, ಕಾಲಬಡಿವುದಲ್ಲದೆ, ಬೇರೆಗತಿಯುಂಟೆ? ಶಿವ, ಶಿವಾ! ಹೋದೆಹೆ ಹೋದೆಹೆನಯ್ಯಾ! ನಿಮ್ಮ ಮನದತ್ತ

ಬೆನ್ನ ತೆಗೆಯಯ್ಯ. ಪಶುವಾನು, ಪಶುಪತಿ ನೀನು. ತುಡುಗುಣಿ ಎಂದು ಎನ್ನಹಿಡಿದು ಬಡಿಯದ ಮುನ್ನ, ಒಡೆಯ, ನಿಮ್ಮ ಬಯ್ಯದಂತೆ ಮಾಡು, ಕೂಡಲಸಂಗಮ ದೇವಾ.

೪೮. ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ, ಅಂಬಾ, ಅಂಬಾ, ಎಂದು ಕರೆವುತ್ತಲಿದ್ದೇನೆ, ಅಂಬಾ, ಅಂಬಾ ಎಂದು ಒರಲುತ್ತಲಿದ್ದೇನೆ, ಕೂಡಲಸಂಗಮದೇವಾ! ಬಾಳು ಬಾಳೆಂಬನ್ನಕ್ಕರ.

೪೯. ಸಮುದ್ರ ದೊಳಗಣ ಸಿಂಪಿನಂತೆ, ಬಾಯ ಬಿಡುತ್ತಲಿದ್ದೆನಯ್ಯಾ! ನೀವಲ್ಲದೆ ಮತ್ತಾರೂ ಎನ್ನನರಿವರಿಲ್ಲ, ನೋಡಯ್ಯ, ಕೂಡಲಸಂಗಮ ದೇವಾ! ನೀವಲ್ಲದೊಳಕೊಂಬುವರಿಲ್ಲ ನೋಡಯ್ಯ.

೫೦. ಅಯ್ಯಾ! ಅಯ್ಯಾ! ಎಂದು ಕರೆಯುತ್ತಲಿದ್ದೇನೆ. ಅಯ್ಯಾ, ಅಯ್ಯಾ ಎಂದು ಒರಲುತ್ತಲಿದ್ದೇನೆ. ಎನ್ನಲಾಗದೆ ಅಯ್ಯಾ! ಆವಾಗಳೂ ನಿಮ್ಮ ಕರೆವುತ್ತಲಿದ್ದೇನೆ. ಓ ಎನ್ನದೆ, ಮೌನವೇ ಕೂಡಲಸಂಗಮ ದೇವಾ?

೫೧. ನೀವು ಹುಟ್ಟಿಸಿದಲ್ಲಿ ಹುಟ್ಟದೆ, ನೀ ಕೊಂದಲ್ಲಿ ಸಾಯದೆ, ಎನ್ನಳವೇ ಅಯ್ಯ! ನೀವಿರಿಸಿದಲ್ಲಿ ಇರದೆ, ಎನ್ನಳವೇ ಅಯ್ಯಾ? ಅಕಟಕಟಾ, ಎನ್ನವನೆನ್ನವನೆನ್ನಯ್ಯಾ ಕೂಡಲಸಂಗಮದೇವಯ್ಯ.

೫೨. ನರವಿಂಧ್ಯದೊಳಗೆನ್ನ ಹುಲುಗಿಳಿಯ ಮಾಡಿ ಸಲುಹುತ್ತ, ಶಿವಾ ಎಂದೋದಿಸಯ್ಯ. ಭಕ್ತಿ ಎಂಬ ಪಂಜರದೊಳಗಿಕ್ಕಿ ಸಲುಹು, ಕೂಡಲ ಸಂಗಮದೇವಾ.

೫೩. ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯಾ ತಂದೆ! ಸುತ್ತಿಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ. ಮತ್ತೊಂದ ಕೇಳದಂತೆ, ಕಿವುಡನ ಮಾಡಯ್ಯಾ ತಂದೆ. ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಸದಂತೆ ಇರಿಸು ಕೂಡಲಸಂಗಮದೇವಾ.

೫೪. ಎನ್ನ ಯೋಗಕ್ಷೇಮ ನಿಮ್ಮದಯ್ಯಾ! ಎನ್ನ ಹಾನಿವೃದ್ಧಿನಿಮ್ಮದಯ್ಯಾ! ಎನ್ನ ಮಾನಾಪಮಾನ ನಿಮ್ಮದಯ್ಯಾ! ಬಳ್ಳಿಗೆ ಕಾಯಿ ದಿ[illegible] ಕೂಡಲಸಂಗಮದೇವಾ?

೫೫. ಸತಿ ಇಲ್ಲದಂತೆ, ಪ್ರಪಂಚವಿಲ್ಲದಂತೆ, ವೈಸಿಕವಿಲ್ಲದಂತೆ, ನಡಿಸಯ್ಯಾ, ಲಿಂಗ ತಂದೆ. ಒಂದು ನಿಮಿಷವಾದರೆಯೂ, ನಿಮ್ಮ ಶರಣರ ಸಂ

ಗದಲ್ಲಿರಿಸಯ್ಯಾ. ಬೇರೆ ಮತ್ತೆನ್ನವ ತೋರದಿರಯ್ಯಾ! ಹೊಲಬುಗೆಟ್ಟಿನಯ್ಯಾ ಕೂಡಲಸಂಗಮದೇವಾ.

೫೬. ಇವನಾರವನಿವನಾರವ, ಇವನಾರವನೆಂದೆನಿಸದಿರಯ್ಯಾ! ಇವನಮ್ಮವ ಇವ ನಮ್ಮವನೆಂದೆನಿಸಯ್ಯಾ! ಕೂಡಲಸಂಗಮ ದೇವಯ್ಯಾ! ನಿಮ್ಮನೆಯ ಮಗನೆಂದೆನಿಸಯ್ಯಾ.

೫೭. ಹುಟ್ಟಿಂದು ಲೋಕವಲ್ಲಿ ಹುಟ್ಟಿಸಿ ಇಳಿಯಬಿಟ್ಟರೆ, ನಿಮ್ಮ ನಗುವರಯ್ಯಾ. ಶಿವಬಟ್ಟೆಯುಲೆನ್ನನು ಇರಿಸಯ್ಯಾ. ಹರನೇ, ಹೊಲಬುಗೆಟ್ಟೆನು. ಬಟ್ಟೆಯ ತೋರಯ್ಯ. ಹುಯ್ಯಲಿಟ್ಟೆನು. ಗಣಂಗಳು ಕೇಳಿರಯ್ಯಾ! ಕೂಡಲಸಂಗಮದೇವಯ್ಯ ಎನ್ನಕಾಡಿಹನಯ್ಯ.

೫೮. ಅಕಟಕಟ, ಶಿವನಿನಗಿನಿತು ಕರುಣವಿಲ್ಲ. ಅಕಟಕಟ, ಶಿವನಿನಗಿನಿತು ಕೃಪೆಇಲ್ಲ. ಯಾಕೆ ಹುಟ್ಟಿಸಿದೆ ಇಹಲೋಕ ದುಃಖಿಯ? ಯಾಕೆ ಹುಟ್ಟಿಸಿದೆ ಪರಲೋಕ ದೂರನ? ಯಾಕೆ ಹುಟ್ಟಿಸಿದೆ? ಕೂಡಲಸಂಗಮದೇವಾ, ಕೇಳಯ್ಯಾ, ಎನಗಾಗಿ ಮತ್ತೊಂದು ತರುಮರಾದಿಗಳಿದ್ದಿಲ್ಲವೆ?

೫೯. ನರಕೂರಂಬಿನಲ್ಲಿ ಎಚ್ಚವಂಗೊಲಿದೆಯಯ್ಯ! ಅರಳಂಬಿನಲ್ಲೆಚ್ಚಕಾಮನನುರುಪಿದೆ, ಇರುಳು ಹಗಲೆನ್ನದೆ ಪ್ರಾಣಘಾತಕವ ಮಾಡಿದ ಬೇಡನ ಕೈಲಾಸಕ್ಕೊಯ್ದೆಯಯ್ಯಾ! ಎನ್ನನೇತಕ್ಕೊಲ್ಲೆ ಕೂಡಲಸಂಗಮದೇವಾ?

೬೦. ನೀನೊಲಿದರೆ, ಕೊರಡು ಕೊನರುವವಯ್ಯಾ! ನೀನೊಲಿದರೆ ಬರಡು ಹಯನಹುದಯ್ಯಾ! ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯಾ! ನೀನೊಲಿದರೆ, ಸಕಲ ಪಡಿಪದಾರ್ಥ ಇದಿರಲ್ಲಿಪ್ಪುವು, ಕೂಡಲಸಂಗಮದೇವಾ.

೬೧. ಮೇರು ಗುಣವನರಸುವುದೇ ಕಾಗೆಯಲ್ಲಿ? ಪರುಷ ಗುಣವನರಸುವುದೆ ಕಬ್ಬುನದಲ್ಲಿ? ಸಾಧು ಗುಣವನರಸುವನೇ ಅವಗುಣಿಯಲ್ಲಿ? ಚಂದನ ಗುಣವನರಸುವದೆ ತರುಗಳಲ್ಲಿ? ಸರ್ವಗುಣ ಸಂಪನ್ನ ಲಿಂಗವೇ, ನೀವೆನ್ನಲ್ಲಿ ಅವಗುಣವ ನರಸುವುದೇ ಕೂಡಲಸಂಗಮ ದೇವಾ?

೬೨. ಭವಭವದಲ್ಲಿಯೇ, ಎನ್ನಮನವು ನೀವಲ್ಲದೆ, ಸಿಲುಕುವುದೇ? ಭವ

ರಾಟಳದೊಳು ತುಂಬದೆ ಕೆಡಹದೆ, ಭವರೋಗ ವೈದ್ಯ ನೀನು, ಭವರ ಹಿತ ನೀನು, ಅವಧಾರು ಕರುಣಿಸುವುದಯ್ಯ ಕೂಡಲಸಂಗಮದೇವಾ.

೬೩. ಆಶೆಎಂಬ ಪಾಶದಲ್ಲಿ ಭವಬಂಧನನಾಗಿದ್ದೆನಯ್ಯಾ! ಸಕೃತ್ ನಿಮ್ಮ ನೆನೆಯಲು, ಎನಗೆ ತೆರಹಿಲ್ಲವಯ್ಯ! ಕರುಣಾಕರ ಅಭಯಕರ ವರದಾನಿ ಕರುಣಿಸಯ್ಯ! ಸಂಸಾರ ಬಂಧನವನು ಮಾಣಿಸಿ ಎನಗೆ ಕೃಪೆಮಾಡಿ, ನಿಮ್ಮ ಶ್ರೀಪಾದ ಪದ್ಮದಲ್ಲಿ ಭ್ರಮರನಾಗಿರಿಸು, ಭಕ್ತಜನ ಮನೋವಲ್ಲಭ ಕೂಡಲಸಂಗಮದೇವಾ.

## ಗುರುಕರುಣಸ್ಥಲ

೧. ಮಡಿಕೆಯ ಮಾಡುವರೆ ಮಣ್ಣೇ ಮೊದಲು, ತೊಡಿಗೆಯ ಮಾಡುವರೆ, ಹೊನ್ನೇಮೊದಲು, ಶಿವಪಥವ ಸಾಧಿಸುವಡೆ ಗುರುಪಥವೇ ಮೊದಲು, ಕೂಡಲಸಂಗಮದೇವರನರಿವಡೆ, ಶರಣರ ಸಂಗವೇ ಮೊದಲು.

೨. ನೋಡಿ, ನೋಡಿ, ಮಾಡುವ ನೇಮ ಸಲ್ಲ, ಸಲ್ಲದು. ತನ್ನ ಉದ್ದೇಶ ಮನ ಉದ್ದೇಶ ನೀ ಮಾಡುವ ನೇಮ ಸಲ್ಲ, ಸಲ್ಲದು. ಕೂಡಲಸಂಗಮದೇವಯ್ಯ , ಇವು ನಿಮ್ಮ ನಿಜದೊಳಗೆ ನಿಲ್ಲವು. ನಿಲ್ಲವು.

೩. ಗುರುವಚನದಿಂದಲ್ಲದೆ ಲಿಂಗವೆಂದೆನಸದು. ಗುರುವಚನದಿಂದಲ್ಲದೆ ನಿತ್ಯವೆಂದೆನಿಸದು. ಗುರುವಚನದಿಂದಲ್ಲದೆ ನೇಮವೆಂದೆನಿಸದು. ತಲೆ ಇಲ್ಲದಟ್ಟೆಗೆ ಪಟ್ಟವ ಕಟ್ಟುವ ಉಭಯಭ್ರಷ್ಟರ ಮೆಚ್ಚುವನೇ ನಮ್ಮ ಕೂಡಲಸಂಗಮದೇವಾ?

## ವಿಭೂತಿಯ ಸ್ಥಲ

೧. ಮುನ್ನಮಾಡಿದ ಪಾಪವೆಂತು ಪೋಪುದೆಂದು ಚಿಂತಿಸಬೇಡ. ಕಪಿಸೋರೆಯ ಕಾಯತಂದು, ವಿಭೂತಿಯ ತುಂಬಿದರೆ ಸಿಹಿಯಾಗದೇ ಮೂರುದಿವಸಕ್ಕಯ್ಯ! ಹಲವು ಕಾಲಕೊಂದ ಸೂನೆಗಾರನ ಕೆಯ್ಯ ಕತ್ತಿಯಾದರೇನು? ಪರುಷ ಮುಟ್ಟಲಿಕ್ಕೆ ಹೊನ್ನಾಗದೇನಯ್ಯಾ! ಲಲಾಟದಲ್ಲಿ ವಿಭೂತಿಯ ಬರೆಯಲಿಕ್ಕೆ, ಪಾಪ ಪಲ್ಲಟವಾಗದೆ ಕೂಡಲಸಂಗಮದೇವಾ?

೨. ನೀರಿಂಗೆ ನೈದಿಲೆ ಶೃಂಗಾರ, ಊರಿಗೆ ಅರಸನೇ ಶೃಂಗಾರ,

ಸಮುದ್ರಕ್ಕೆ ತೆರೆಯೇ ಶೃಂಗಾರ, ನಾರಿಗೆ ಗುಣವೇ ಶೃಂಗಾರ, ಗಗನಕ್ಕೆ ಚಂದ್ರಮನೇ ಶೃಂಗಾರ, ಕೂಡಲಸಂಗನ ಶರಣರ ನೊಸಲಿಗೆ ವಿಭೂತಿಯೇ ಶೃಂಗಾರ.

## ಪಂಚಾಕ್ಷರಿಯ ಸ್ಥಲ

೧. ಕರಿಯಂಜುವದು ಅಂಕುಶಕಯ್ಯಾ! ಗಿರಿಯಂಜುವದು ಕುಲಿಶಕ್ಕಯ್ಯಾ! ತಮಂಧ ವಂಜುವದು ಜ್ಯೋತಿಗಯ್ಯಾ! ಕಾನನವಂಜುವದು ಬೇಗೆಗೆ ಅಯ್ಯಾ! ಪಂಚಮಹಾ ಪಾತಕಂಗಳಂಜುವವು ಕೂಡಲಸಂಗಮದೇವನ ನಾಮಕ್ಕಯ್ಯಾ.

೨. ಮಂತ್ರತಂತ್ರ ಜಪತಪ, ನಿತ್ಯನೇಮವೆನಗೆ ಗುರು ಉಪದೇಶ. ನಿಮ್ಮ ನಾಮವೆನಗೆ ಮಂತ್ರ. ಶಿವನಾಮ ಎನಗೆ ತಂತ್ರ, ಕೂಡಲಸಂಗಮದೇವಯ್ಯ ನಿಮ್ಮ ನಾಮ ಕಾಮಧೇನು ಎನಗೆ.

೩. ಅಕಟಕಟಾ! ಬೆಡಗು ಬಿನ್ನಾಣ ವೆಂಬುವದೇನೋ? ಓಂನಮಃಶಿವಾಯ ವೆಂಬುದೇ ಮಂತ್ರ, ಓಂನಮಃಶಿವಾಯವೆಂಬುದೇ ತಂತ್ರ, ನಮ್ಮ ಕೂಡಲಸಂಗಮ ದೇವರ ನೆನೆವುದೇ ಮಂತ್ರ.

೪. ವಶ್ಯವಬಲ್ಲೆವೆಂದೆಂಬಿರಯ್ಯಾ! ಬುದ್ಧಿಯನರಿಯದ ಮನುಜರು ನೀವು ಕೇಳಿರಯ್ಯ. ವಶ್ಯವಾವುದೆಂದರಿಯದೆ, ಮರುಳುಗೊಂಬಿರೆಲೆ ಗಾವಿಲ ಮನಜರಿರಾ! ಓಂನಮಃಶಿವಾಯ ಎಂಬುದೇ ದಿವ್ಯಮಂತ್ರ, ಸರ್ವಜನವಶ್ಯ, ಕೂಡಲಸಂಗಮದೇವಯ್ಯ.

೫. ಎನ್ನಭವಬಂಧನ ದುರಿತಂಗಳ ಗೆಲುವಡೆ, ಓಂನಮಶ್ಶಿವಾಯ ಶಿವಶರಣೆಂದರೆ ಸಾಲದೆ? ಜಯಜಯ ಶಂಕರ, ಹರಹರ ಶಂಕರ, ಶಿವಶಿವ ಶಂಕರ, ಜಯಜಯ ಶಂಕರ, ಶರಣೆನ್ನುತ್ತಿದ್ದೇನೆ, ಎನ್ನಪಾತಕಕೋಟಿಪರಿಹರ ಕೂಡಲಸಂಗಯ್ಯ ಶರಣೆನ್ನುತ್ತಿದ್ದೇನೆ.

೬. ಎನ್ನಮನದಲ್ಲಿ ಮತ್ತೊಂದನರಿಯೆನಯ್ಯಾ! „ ಓಂನಮಃಶಿವಾಯ" ಓಂನಮಃಶಿವಾಯ" ಎನುತಿದ್ದೆನಯ್ಯಾ! ಎನಗಿದೇಮಂತ್ರ, ಇದೇ ಜಪ ಕೂಡಲಸಂಗಮದೇವಾ, ನೀನೇಬಲ್ಲೆ, ಎಲೆ ಲಿಂಗವೇ.

೭. ಓಂನಮಃಶಿವಾಯ ಎಂಬ ಮಂತ್ರವ ಮೀರಲಮ್ಮದೆ, ನಿಂದುವು ವೇದ. ಓಂನಮಃಶಿವಾಯ ಎಂಬ ಮಂತ್ರವ ಮೀರಲಮ್ಮದೆ ನಿಂದುವುಶಾಸ್ತ್ರ

ಓಂನಮಃಶಿವಾಯ ಎಂಬ ಮಂತ್ರವ ಮೀರಲಮ್ಮದೆ ನಿಂದುವು ತರ್ಕ. ಭಯಂಕರ ಭ್ರಮೆಗೊಂಡಿತ್ತು ಮಂತ್ರತಂತ್ರ. ಶಿವನಂತು ವಸರಿಯದೆ, ಚಿಂತಿಸುತ್ತಿದ್ದಿತ್ತು ಲೋಕ ಕೂಡಲಸಂಗಮದೇವ. ಸ್ವಜನ ನೆರೆದರೆ, ಜಾತಿಭೇದವ ಮಾಡಲಮ್ಮದೆ ನಿಂದವು.

೮. ಬೇಲಿಯು ಕಲಿಕೆಯು ಕಣಗಿಲೆಯು, ತೊರೆಯುತಡಿಯು ಮಳಲ ತಂದು, ಗೌರಿಯು ನೋನುವ ಬನ್ನಿರೆ, ಚಿಕ್ಕಚಿಕ್ಕ ಮಕ್ಕಳೆಲ್ಲರು ನೆರೆದು, ಅನುಪಮದಾಸಿ ಕೂಡಲಸಂಗಮದೇವನೆಮ್ಮ ಗಂಡನಾಗಬೇಕೆಂದು.

೯. ನಿಮ್ಮವರು ಬೆಸಗೊಂಡರೆ, ಶುಭಲಗ್ನ ವೆಂದೆನ್ನಿರಯ್ಯಾ! ರಾಶಿಕೂಟಗಣ ಸಂಬಂಧ ಉಂಟೆಂದು ಹೇಳಿರಯ್ಯಾ? ಚಂದ್ರಬಲ, ತಾರಾಬಲ ಉಂಟೆಂದು ಹೇಳಿರಯ್ಯಾ! ನಾಳಿನದಿನಕ್ಕೆ ಇಂದಿನದಿನ ಲೇಸೆಂದು ಹೇಳಿರಯ್ಯಾ! ಕೂಡಲಸಂಗಮ ದೇವನ ಪೂಜಿಸಿದಫಲ ನಿಮ್ಮದಯ್ಯಾ.

೧೦. ಪಾತಕಶತಕೋಟಿಗಳನೊರಸಲು, ಸಾಲದೆ ಒಂದೆ ಶಿವನ ನಾಮ, ಸಾಲದೆ ಒಂದೇ ಹರನ ನಾಮ, ಕೂಡಲಸಂಗಮದೇವ ನಿಮ್ಮ ಉಂಡಿಗೆಯ ಪಶುವ ಮಾಡಿದೆಯಾಗಿ?

೧೧- ಲಿಂಗದುಂಡಿಗೆಯ ಪಶುವಾನಯ್ಯಾ! ವೇಷ ಧಾರಿಯಾನಯ್ಯಾ! ಉದರ ಪೋಷಕ ನಾನಯ್ಯಾ ಕೂಡಲಸಂಗನ ಶರಣರ ಧರ್ಮದ ಕಪ್ಪಲೆಯಾನು.

೧೨. ನಮಃಶಿವಾಯ, ನಮಃಶಿವಾಯ ನಮಃಶಿವಾಯ, ನಮಃಶಿವಾಯ ನಮಃಶಿವಾಯ ಶರಣೆಂದಿತ್ತು. ಲಲಾಟಲಿಖಿತ ಬರೆದಬಳಿಕ ಪಲ್ಲಟವ ಮಾಡಬಾರದಾರಿಗೆಯು. ಎನ್ನ ಉದಲು ಕೂಡಲಸಂಗಯ್ಯಾ ಶರಣೆಂದಿತ್ತು.

೧೩ ಅಷ್ಟವಿಭೂತಿ ಇಲ್ಲದವರ ಮುಖ ಹೊಲ್ಲ, ನೋಡಲಾಗದು. ಲಿಂಗಧ್ಯಾನವಿಲ್ಲದ ಠಾವು ನರವಿಂಧ್ಯ. ಹೋಗಲಾಗದು. ಶಿವಭಕ್ತನಿಲ್ಲದೂರು ಸಿಸಿಹಾಳು, ಕೂಡಲಸಂಗಮದೇವ.

## ತಾಮಸನಿರಸನ ಸ್ಥಲ

೧. ಆರಾಧ್ಯ ಪ್ರಾಣಲಿಂಗ ವೆಂದರಿದು ಪೂರ್ವಗುಣವಳಿದು, ಪುನರ್ಜಾತನಾದಬಳಿಕ, ಸಂಸಾರ ಬಂಧಗಳೆನ್ನವವೆಂದರೆ, ನಾಯಕನರಕ ಇಂತೆಂದುದು ಕೂಡಲಸಂಗನ ವಚನ.

೨. ತಾಳಮರದ ಕೆಳಗೆ ಒಂದು ಹಾಲಹರವಿ ಇದ್ದರೆ, ಅದು ಹಾಲ ಹರವಿ ಎನ್ನರು. ಸುರೆಯಹರವಿ ಎಂಬರು. ಈ ಭಾವನಿಂದೆ ಮಾಣಿಸೊ ಕೂಡಲಸಂಗಮದೇವಯ್ಯಾ.

೩. ಸುಪಥಮಂತ್ರದುಪದೇಶವ ಕಲಿತು, ಯುಕ್ತಿಗೆಟ್ಟು ನಡೆವಿರಯ್ಯಾ. ತತ್ವಮಸಿಎಂಬುದನರಿದು ಕತ್ತಲೆಗೊಡಹಿರಯ್ಯಾ! ವೇದವಿಪ್ರ ವಿಚಾರಿಸಿ ನೋಡಲು, ಉಪದೇಶ ಪರೀಕ್ಷೆ ನಾಯಕನರಕವೆಂಬುದು ಕೂಡಲಸಂಗನ ವಚನದ ಸೂಚನೆ.

೪. ಕುಂಬಳದ ಕಾಯಿಗೆ ಕಬ್ಬುನದಕಟ್ಟು ಕೊಟ್ಟರೆ ಕೊಳೆವುದಲ್ಲದೆ ಬಲುಹಾಗಬಲ್ಲುದೆ? ಅಳಿಮನದಂಗೆ ಶಿವದೀಕ್ಷೆ ಕೊಟ್ಟರೆ, ಭಕ್ತಿ, ಎಂತಹುದೊ? ಮುನ್ನಿನಂತೆ. ಕೂಡಲಸಂಗಯ್ಯ ಮಾನಹೀನನ ಮೊಸಲ ಕಾಯ್ಸಿರಿಸಿದಂತೆ.

೫. ಸಗಣಿಯ ಬೆನಕಂಗೆ ಸಂಪಿಗೆಯರಳಲ್ಲಿ ಪೂಜಿಸಿದರೆ, ರಂಜನೆಯಹುದಲ್ಲದೆ, ಅದರ ಗಂಜಳ ಬಿಡದಣ್ಣಾ. ಮಣ್ಣ ಪುತ್ಥಳಿಯ ಮಾಣದೆ ಜಲದಲ್ಲಿ ತೊಳೆದರೆ, ನಿಚ್ಚನಿಚ್ಚ ಕೆಸರಹುದಲ್ಲದೆ, ಅದರಚ್ಚುಗಬಿಡದಣ್ಣಾ. ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ, ಕೆಟ್ಟವನೇಕೆ ಸದ್ಭಕ್ತನಹನು ಕೂಡಲಸಂಗಮದೇವಾ?

೬. ಕಬ್ಬುನವ ಕೋಡಗವ ಪರುಷ ಮುಟ್ಟಲು, ಹೊನ್ನಾದರೇನು, ಮತ್ತೇನಾದರೇನು, ತನ್ನ ಮುನ್ನಿನ ರೂಪ ಬಿಡದನ್ನಕ್ಕರ ಕೂಡಲಸಂಗಮದೇವ ನಿಮ್ಮ ನಂಬಿಯೂ ನಂಬದ ಡಂಭಕರಿಗಯ್ಯಾ?

೭. ತನುವಿನಲ್ಲೊಂದಿಟ್ಟು ಮನದಲ್ಲಿ ಎರಡಿಟ್ಟರೆ, ಬಲ್ಲನೊಲ್ಲನಯ್ಯ ಲಿಂಗವು. ಬಲ್ಲನೊಲ್ಲನಯ್ಯಾ ಜಂಗಮವು. ಪರಚಿಂತೆಯನೊಲ್ಲ ಕೂಡಲಸಂಗಮ ದೇವ.

೮. ಒಳಗೆ ಕುಟಿಲ, ಹೊರಗೆ ವಿನಯವಾಗಿ, ಭಕ್ತರೆನಿಸಿಕೊಂಬವರ ಬಲ್ಲನೊಲ್ಲನಯ್ಯಾ ಲಿಂಗವು. ಅವರು ಶಿವಪಥಕ್ಕೆ ಸಲ್ಲರು, ಸಲ್ಲರಯ್ಯ. ಒಳಹೊರಗೊಂದಾಗದವರಿಗೆ, ಅಳಿಯಾಸೆದೋರಿ, ಬೇಸಾಡುವನವರ, ಜಗದೀಶ ಕೂಡಲಸಂಗಮದೇವ.

೯. ಮನೆಯೊಳಗೆ ಮನೆಯೊಡೆಯನಿದ್ದಾನೊ, ಇಲ್ಲವೊ? ಹೊಸ್ತಲಲ್ಲಿ ಹುಲ್ಲುಹುಟ್ಟಿ, ಮನೆಯೊಳಗೆ ರಜತುಂಬಿ, ಮನೆಯೊಳಗೆ ಮನೆಯೊಡೆಯನಿದ್ದಾನೋ, ಇಲ್ಲವೋ? ತನುವಿನಲ್ಲಿ ಹುಸಿತುಂಬಿ, ಮನದೊಳಗೆ ವಿಷಯತುಂಬಿ, ಮನದೊಳಗೆ ಮನೆಯೊಡೆಯನಿಲ್ಲ ಕೂಡಲಸಂ

ಗಮ ದೇವಾ.

೧೦. ಓಡೆತ್ತ ಒಲ್ಲದು ಅಪಲಕ್ಷ್ಮಿಯ ಸವಿಯ? ಕೋಡಗ ಪತ್ತ್ರಬಲ್ಲುದು ಸೆಳೆಮಂಚವ ಸುಖವ? ಕಾಗೆ ನಂದನವನದೊಳಗಿದ್ದರೇನು, ಕೋಗಿಲೆಯಾಗಬಲ್ಲುದೆಹೇಳಾ? ಕೊಳನ ತಡಿಯಲೊಂದು ಬಕಕುಳಿತಿದ್ದರೇನು, ಕಳಹಂಸನಾಗಬಲ್ಲುದೆ ಕೂಡಲಸಂಗಮದೇವಾ?

೧೧. ಎನಿಸುಕಾಲ ಕಲ್ಲು ನೀರೊಳಗಿದ್ದರೇನು? ನೆನೆದು ಮೃದುವಾಗಬಲ್ಲುದೆ? ಎನಿಸುಕಾಲ ನಿಮ್ಮ ಪೂಜಿಸುವೆನಯ್ಯಾ, ಮನದಲ್ಲಿ ದೃಢವಿಲ್ಲವನ್ನಕ್ಕರ? ನಿಧಾನವ ಕಾಯುತಿರ್ದ ಬೆಂತರನಂತೆ, ಅದರ ವಿಧಿ ಎನಗಾಯಿತ್ತು ಕೂಡಲಸಂಗಮದೇವಾ.

೧೨. ಸಂತವಿದ್ದಮನೆಗೆ ಕೊಂತವ ತಂದಂತೆ, ಇದನೆಂತು ಸೈರಿಸುವೆನು? ಸಂತೆಯ ಗುಡಿಸಲ ಸೂಳೆಗೆ ಕೊಂತವಳವಡುವವೆ? ಕೂಡಲಸಂಗಮ ದೇವರ ಮಹತ್ವ ಆರಿಗೆ ಅಳವಡುವುದು?

೧೩ ಕೂಸುಳ್ಳ ಸೂಳೆ ಧನದಾಸೆಗೆ ಒತ್ತೆಯಕೊಂಡರೆ, ಕೂಸಿಂಗಲ್ಲ, ಭುಜಗಂಗಲ್ಲ. ಕೂಸಿನೊಮ್ಮೆ ಸಂತವಿಡುವಳು, ಭುಜಗನನೊಮ್ಮೆ ನೆರೆವಳು. ಧನದಾಸೆ ಬಿಡದು ಕೂಡಲಸಂಗಮದೇವ.

೧೪ ಎರಡೆಲೆಯಂತೆ ಒಳಗೊಂದು ಹೊರಗೊಂದಾದರೆ, ಮೆಚ್ಚುವನೆ ಶಿವನು? ಬಾರದ ಭವಂಗಳಲ್ಲಿ ಬರಿಸುವನಲ್ಲದೆ ಮೆಚ್ಚುವನೆ? ಅಘೋರ ನರಕವನುಣಿಸುವನಲ್ಲದೆ ಮೆಚ್ಚುವನೆ? ಉಡುವಿನ ನಾಲಿಗೆಯಂತೆ ಎರಡಾದರೆ, ಕೂಡಲಸಂಗಯ್ಯ ಮೆಚ್ಚುವನೆ?

೧೫. ಭಕ್ತರ ಕಂಡರೆ ಬೋಳರಪ್ಪರಯ್ಯ! ಶ್ರವಣರ ಕಂಡರೆ, ಬತ್ತಲೆಯಪ್ಪರಯ್ಯ! ಹಾರುವರ ಕಂಡರೆ, ಹರಿನಾಮವೆಂಬುವರಯ್ಯ! ಅವರವರ ಕಂಡರೆ, ಅವರವರಂತೆ. ಅವರ ಸೂಳಿಗೆ ಹುಟ್ಟಿದವರ ತೋರದಿರಯ್ಯ! ಕೂಡಲಸಂಗಯ್ಯನ ಪೂಜಿಸಿ ಅನ್ಯದೈವಂಗಳಿಗೆರಗಿ ಭಕ್ತರೆನಿಸಿಕೊಂಬ ಅಜ್ಞಾನಿಗಳ ನಾನೇನೆಂಬೆನಯ್ಯ?

೧೬ ಗಂಡ ಶಿವಲಿಂಗದೇವರ ಭಕ್ತ. ಹೆಂಡಿತಿ ಮಾರಿ ಮಸಣಿಯ ಭಕ್ತೆ. ಗಂಡ ಕೊಂಬುದು ಪಾದೋದಕ ಪ್ರಸಾದ. ಹೆಂಡತಿ ಕೊಂಬುದು ಸುರೆ ಮಾಂಸ. ಈ ಭಾಂಡಭಾಜನ ಶುದ್ಧಿ ಇಲ್ಲದವರ ಭಕ್ತಿ, ಹೆಂಡದ ಮಡಿಕೆಯ ಹೊರಗೆ ತೊಳೆದಂತೆ, ಕೂಡಲಸಂಗಮದೇವಾ.

೧೭. ಹಾವಾಡಿಗನು ಮೂಕೊರೆಯು ತಮ್ಮ ಮಗನ ಮದುವೆಗೆ ಶಕುನವ

ನೋಡ ಹೋಗುವಾಗ, ಇದಿರಲೊಬ್ಬ ಮೂಕೊರತಿಯು ಹಾವಾಡಿಗನ ಕಂಡು ಶಕುನ ಹೊಲ್ಲೆಂಬ ಚದುರನ ನೋಡಾ! ತನ್ನ ಸತಿಯು ಮೂಕೊರತಿ, ತನ್ನ ಕೈಯ್ಯಲ್ಲಿ ಹಾವು, ತನ್ನ ಬಿನ್ನತೆಯ ನರಿಯದವ್ವರ ನಂಬ ಕುನ್ನಿಯ ನೇನಂಜಿನಯ್ಯಾ ಕೂಡಲಸಂಗಮದೇವಾ?

೧೮. ಅಂಗವಿಚ್ಛೆಗೆ ಮದ್ಯಮಾಂಸಗಳ ತಿನ್ನುವರು. ಕಂಗಳಿಚ್ಛೆಗೆ ಪರವಧುವ ನೆರೆವರು. ಲಿಂಗಲಾಂಛನ ಧಾರಿಯಾದಲ್ಲಿ ಫಲವೇನು? ಲಿಂಗಪಥವ ತಪ್ಪಿ ನಡೆವವರು ಜಂಗಮ ಮುಖದಿಂದ ನಿಂದೆಬಂದರೆ ಕೊಂಡ ಮಾರಿಂಗೆ ಹೋಹುದು ತಪ್ಪದು ಕೂಡಲಸಂಗಮದೇವಾ.

೧೯. ಶಿವಜನ್ಮದಲ್ಲಿ ಹುಟ್ಟಿ ಲಿಂಗೈಕ್ಯರಾಗಿ, ತಮ್ಮಂಗದ ಮೇಲೆ ಲಿಂಗ ಇರುತಿರಲು, ಅನ್ಯರನೆ ಹಾಡಿ, ಅನ್ಯರನೆ ಹೊಗಳಿ, ಅನ್ಯರ ವಚನವ ಕೊಂಡಾಡಲು ಕರ್ಮ ಬಿಡದು. ಭವಬಂಧನ ಶ್ವಾನಯೋನಿಯಲ್ಲಿ ಬಪ್ಪುದು ತಪ್ಪದು. ಇದು ಕಾರಣ, ಕೂಡಲಸಂಗಮದೇವಾ, ನಿಮ್ಮ ನಂಬಿಯೂ ನಂಬದ ಡಂಭಕರಿಗೆ ಮಳಲ ಗೋಡೆಯನಿಕ್ಕಿ ನೀರಲ್ಲಿ ತೊಳೆದಂತಾಯಿತ್ತಯ್ಯಾ.

೨೦. ವಿತ್ತ ಬಹುವಾಗಿದ್ದಲ್ಲಿ ಫಲವೇನು, ಆಯುಷ್ಯವಿಲ್ಲದಿದ್ದರೆ? ಹೇಡಿಯ ಕೈಯ್ಯಲ್ಲಿ ಚಂದ್ರಾಯುಧ ವಿದ್ದಲ್ಲಿ ಫಲವೇನು? ಅಂಧಕನ ಕೈಯಲ್ಲಿ ದರ್ಪಣವಿದ್ದು ಫಲವೇನು? ಮರ್ಕಟನ ಕೈಯ್ಯಲ್ಲಿ ಮಾಣಿಕ್ಯ ವಿದ್ದು ಫಲವೇನು? ನಮ್ಮ ಕೂಡಲಸಂಗನ ಶರಣರ ನರಿಯದವರ ಕೈಯ್ಯಲ್ಲಿ ಲಿಂಗವಿದ್ದು ಫಲವೇನು, ಶಿವಪಥವನರಿಯದನ್ನಕ್ಕರ.

೨೧. ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ, ಲಿಂಗದ ಮೇಲೆ ನಿಷ್ಠೆ ಇಲ್ಲದ ಭಕ್ತ ಇದ್ದರೇನೊ, ಶಿವಶಿವಾ, ಹೋದರೇನೋ? ಶಿವಶಿವ, ಕೂಡಲಸಂಗಮದೇವಯ್ಯ. ಬರಿದ ಆವಿಂಗೆ ಬಣ್ಣದ ಕರುವ ಬಿಟ್ಟಂತೆ.

೨೨. ಆವಳ ವಚನ ಬೆಲ್ಲದಂತೆ ಹೃದಯದಲ್ಲಿಪ್ಪುದು, ನೋಡಾ, ನಂಜು ಕಂಡಯ್ಯಾ! ಕಂಗಳಲೊಬ್ಬನ ಕರೆವಳು ಮನದಲೊಬ್ಬನ ನೆನೆವಳು, ಕೂಡಲಸಂಗಮದೇವ, ಮಾನಿಸ ಗಳ್ಳಿಯ ನಂಬದಿರಯ್ಯಾ.

೨೩. ಹಾದರಕ್ಕೆ ಹೋದರೆ, ಕಣ್ಣದಮ್ಮವಾಯಿತ್ತು. ಹಾಳು ಗೋಡೆಗೆ ಹೋದರೆ ಚೇಳೂರಿತ್ತು. ಅಬ್ಬರನ ಕೇಳಿ ತಳವಾರನುಟ್ಟ ಸೀರೆ

ಯ ಸುಲಿದ. ನಾಚಿ ಹೋದರೆ, ಮನೆಯ ಗಂಡ ಬೆನ್ನಬಾರನೆತ್ತಿದ. ಅರಸು ಕೂಡಲಸಂಗಮದೇವಾ ದಂಡವ ಕೊಂಡ.

೨೪. ಗರಿದೋರಿ ಗಂಡರೆಂಬವರ ಕಾಣೆ. ನಿರಿ ಸೋಂಕಿ, ಮುನಿಸಿಲ್ಲ, ನೋಡಯ್ಯಾ! ನಂಟುತನವೇನವನ ಬಂಟತನವೇನವನ? ಹುಲ್ಲು ಗಿಚ್ಚು ಹೊಲೆಯನ ಮೇಳಾಪ, ಅಲ್ಲಿ ಹುರುಳಿಲ್ಲ, ಕೂಡಲಸಂಗಮದೇವಾ.

೨೫. ಅಳಿಯುತ್ತಲಳಿಯುತ್ತ ಬಳಲುವರಲ್ಲದೆ, ಕೊಳಗ ಬಳಲುವದೆ? ಪಥವ ನಡೆಯುತ್ತ ನಡೆಯುತ್ತ ಬಳಲುವರಲ್ಲದೆ, ಬಟ್ಟೆ ಬಳಲುವುದೆ? ಶ್ರಮವ ಮಾಡುತ್ತ, ಮಾಡುತ್ತ ಬಳಲುವರಲ್ಲದೆ, ಕೋಲು ಬಳಲುವದೆ? ನಿಜವನರಿಯದ ಭಕ್ತ ಬಳಲುವನಲ್ಲದೆ, ಲಿಂಗ ಬಳಲುವದೆ? ಕೂಡಲಸಂಗಮದೇವ ಅರಸರರಿಯದ ಬಿಟ್ಟಿಯೇ?

# ಭಕ್ತಸ್ಥಲ.

೧. ಒಲೆಯ ಬೂದಿಯ ಬಳಿಯಲುಬೇಡ. ಒಲೆಯಂತೆ ಹೊಸಿ ಕೊಂಡಿಪ್ಪುದು ಹುಸಿ. ಏನುಫಲ, ಮನದಲ್ಲಿ ಲೇಸಿಲ್ಲದನ್ನಕ್ಕರ? ಒಂದ ನಾಡಹೋಗಿ ಒಂಬತ್ತನಾಡುವ ಡಂಭಕರ ಮೆಚ್ಚ ಕೂಡಲಸಂಗಮದೇವಯ್ಯ.

೨. ಧಾರುಣಿಯ ಮೇಲೊಂದು ಅಂಗಡಿಯನಿಕ್ಕಿ, ಹರದ ಕುಳ್ಳಿರ್ದ ನಮ್ಮ ಮಹಾದೇವಸೆಟ್ಟಿ. ಒಮ್ಮನವಾದಡೆ, ಒಡನೆ ನುಡಿವನು, ಇಮ್ಮನವಾದರೆ ನುಡಿಯನು. ಕಾಣಿಯಸೋಲ, ಅರ್ಧಗಾಣಿಯ ಗೆಲ. ಜಾಣ ನೋಡಾ, ನಮ್ಮ ಕೂಡಲಸಂಗಮದೇವಾ.

೩. ನಂಬರು, ನೆಚ್ಚರು, ಬರಿದೆ ಕರೆವರು. ನಂಬಲರಿಯರು ಲೋಕದ ಮನುಜರು. ನಂಬಿ ಕರೆದರೆ, ಓ ಎನ್ನನೆ ಶಿವನು? ನಂಬದೆ, ನೆಚ್ಚದೆ, ಬರಿದೆ ಕರೆವರ ಕೊಂಬ ಮೆಟ್ಟಿ ಕೂಗೆಂದ ನಮ್ಮ ಕೂಡಲಸಂಗಮದೇವಾ

೪. ಹುತ್ತ ಬಡಿದಡೆ, ಹಾವು ಸಾಯಬಲ್ಲುದೇನಯ್ಯ? ಅಘೋರತಪವ ಮಾಡಿದಡೇನು? ಅಂತರಂಗದ ಆತ್ಮಶುದ್ಧವಿಲ್ಲದವರನೆಂತು ನಂಬುವನಯ್ಯ ಕೂಡಲಸಂಗಮದೇವಾ?

೫. ಕಾಮವೇಕೊ ಲಿಂಗಪ್ರೇಮಿ ಎನಿಸುವಂಗೆ? ಕ್ರೋಧವೇಕೊ ಶರಣವೇದ್ಯನೆನಿಸುವಂಗೆ? ಲೋಭವೇಕೊ ಭಕ್ತಿಯ ಲಾಭ ಬಯಸುವಂಗೆ? ಮೋಹವೇಕೊ ಪ್ರಸಾದ ವೇದ್ಯನೆನಿಸುವಂಗೆ? ಮದಮತ್ಸರವುಳ್ಳವಂಗೆ ಹೃದಯ ಶುದ್ಧವೆಲ್ಲಿಯದೊ? ಹಮುಳಿಗರಾದವರನೊಲ್ಲ ಕೂಡಲಸಂಗಮದೇವಾ.

೬. ಸಾರ ಸಜ್ಜನರ ಸಂಗವ ಮಾಡುವದು. ದುರುಳ ದುರ್ಜನರ ಸಂಗ ಬೇಡವೈಯ್ಯ! ಆವ ಹಾವಾದಡೇನು, ವಿಷ ಒಂದೆ. ಅಂತವರ ಸಂಗ ಬೇಡವಯ್ಯ! ಅಂತರಂಗದ ಆತ್ಮ ಶುದ್ಧವಿಲ್ಲದವರ ಸಂಗವು ಸಿಂಗಿಕಾಳಕೂಟವಿಷವು, ಕೂಡಲಸಂಗಮದೇವಾ.

೭. ಹಸಿದು ಎಕ್ಕೆಯಕಾಯ ಮೆಲಬಹುದೆ? ನೀರಡಸಿ ವಿಷವ ಕುಡಿಯಬಹುದೆ? ಸುಣ್ಣದ ತುಯ್ಯಲ ಬಣ್ಣವೆಂದರೆ ನೆಂಟತನಕ್ಕೆ ಉಣಬಹುದೆ? ಲಿಂಗಸಾರಾಯ ಸಜ್ಜನರಲ್ಲದವರನೊಲ್ಲ ಕೂಡಲಸಂಗಮದೇವ.

೮. ಪುಲಸದ ಮರ ಹೂತು ಫಲವಾದ ತೆರನಂತೆ, ಸಿರಿಯಾದರೇನು, ಶಿವಭಕ್ತಿ ಇಲ್ಲದನ್ನಕ್ಕ? ಫಲವಾದರೇನು ಹಾವು ಮೆಕ್ಕೆಯ ಕಾಯಿ? ಕುಲವಿಲ್ಲದ ರೂಹು ಎಲ್ಲಿದ್ದರೇನು? ಬಚ್ಚಲ ನೀರು ತಿಳಿಯಾದರೇನು? ಅವಗುಣಿಗಳ ಮೆಚ್ಚ ನಮ್ಮ ಕೂಡಲಸಂಗಮದೇವಾ.

೯. ಬಚ್ಚಲ ನೀರು ತಿಳಿಯಾದರೇನು? ಸಲ್ಲದ ಹೊನ್ನು ಮತ್ತೆಲ್ಲಿದ್ದರೇನು? ಆಕಾಶದ ಮಾವಿನ ಫಲ ಎಂದರೇನು? ಕೊಯ್ಯಲಿಲ್ಲ, ಮೆಲ್ಲಲಿಲ್ಲ. ಕೂಡಲಸಂಗನ ಅನುಭಾವವಿಲ್ಲದವರೆಲ್ಲಿದ್ದರೇನು, ಎಂತಾದರೇನು?

೧೦ ಗಿಳಿಯೋದಿ ಫಲವೇನು? ಬೆಕ್ಕ ಬಾಹದು ಹೇಳಲರಿಯದು. ಜಗವೆಲ್ಲ ಕಾಂಬ ಕಣ್ಣು ತನ್ನ ಕೊಂಬ ಕೊಯ್ಲಿಯ ಕಾಣಲರಿಯದು. ಇದಿರಗುಣವ ಬಲ್ಲೆನೆಂಬರು ತಮ್ಮ ಗುಣವನರಿಯರು, ಕೂಡಲಸಂಗಮದೇವಾ.

೧೧. ಲೋಕದ ಡೊಂಕ ನೀವೇತಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ, ನೆರೆ ಮನೆಯವರ ದುಃಖಕ್ಕೆ ಅಳುವರ ಮೆಚ್ಚ ಕೂಡಲಸಂಗಮದೇವ.

೧೨. ಏತ ತಲೆ ಬಾಗಿದರೇನು, ಗುರುಭಕ್ತನಾಗಬಲ್ಲುದೆ? ಇಕ್ಕುಳು ಕೈಮುಗಿದರೇನು, ಭೃತ್ಯಾಚಾರಿ ಯಾಗಬಲ್ಲುದೆ? ಗಿಳಿಯೋದಿದರೇನು, ಲಿಂಗವೇದಿಯಾಗಬಲ್ಲುದೆ? ಕೂಡಲಸಂಗನ ಶರಣರು ಬಂದ ಬರವ ನಿಂದ ನಿಲವ ಅಂಗಸಂಗಿಗಳೆತ್ತ ಬಲ್ಲರು?

೧೩. ನಿಲವಿಲ್ಲದ ಪೂಜೆ, ಸ್ನೇಹವಿಲ್ಲದ ಊಟ, ಆ ಪೂಜೆಯು, ಆ ಮಾಟವು ಚಿತ್ರದ ರೂಹು ಕಾಣಿರಣ್ಣ! ಅಪ್ಪಿದಡೇನು ಸುಖವಿಲ್ಲ. ಮೆಲಿದರೆ ಸವಿ ಇಲ್ಲ. ಕೂಡಲಸಂಗಮದೇವಾ ನಿಜವಿಲ್ಲದವರ ಭಕ್ತಿ ಇಂತುಟು.

೧೪. ಸ್ನೇಹ ತಪ್ಪಿದ ಠಾವಿನಲ್ಲಿ ಗುಣವನರಸುವರೇ ಅಯ್ಯ?

ಹೂವು ಬಾಡಿದಲ್ಲಿ ಪರಿಮಳವ ನರಸುವರೇನಯ್ಯಾ? ಎನ್ನ ತಂದೆ, ಕೂಡಲಸಂಗಮದೇವಾ, ತೊರೆ ಇಳಿದ ಬಳಿಕ ಅಂಬಿಗಂಗೇನುಂಟು?

೧೫. ಆಸೆಗೆ ಪುಟ್ಟಿದ ಪ್ರಾಣಿ ಆಸೆಯನೆ ಕಲಿತು, ಪುಣ್ಯ ಪದವಿಯ ಬಯಸಿದರೆ, ಭವಮಾಲೆಯ ಬರವು ತಪ್ಪದು. ಬೆಡಲು ಹುಟ್ಟಿದ ಪ್ರಾಣಿಗೆ, ಬೇಡಲು ವಿಧಿಯೆ? ಸೂಳೆಯಲ್ಲಿ ಹುಟ್ಟಿದ ಪ್ರಾಣಿಗೆ ನಿಜಗುಣ ವಳವಡುವುದೆ? ಲಿಂಗದುದಯ ಶರಣವಿಸ್ತಾರವ ಬಯಸಿದರಳವೆ ಕೂಡಲಸಂಗಮದೇವಾ, ನಿಮ್ಮಲ್ಲಿ?

೧೬. ಹಬ್ಬಕ್ಕೆ ತಂದ ಹರಿಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯಿತ್ತು. ಕೊಂದಿಹರೆಂಬುದನರಿಯದೆ, ಬೆಂದೊಡಲ ಹೊರೆವುತ್ತಲಿದೆ. ಅದೆಂತು ಹುಟ್ಟಿತ್ತು, ಅದೆಂತು ಹೊಂದಿತ್ತು, ಕೊಂದವರುಳಿದರೆ ಕೂಡಲಸಂಗಮದೇವಾ?

೧೭. ಹಾವಿನ ಬಾಯಕಪ್ಪೆ ಹಸಿದು, ಹಾರುವ ನೊಣಕ್ಕೆ ಆಶೆ ಮಾಡುವಂತೆ, ಶೂಲವನೇರುವ ಕಳ್ಳನು ಹಾಲು ತುಪ್ಪವ ಕುಡಿದು ಮೇಲೇಸುಕಾಲ ಬದುಕುವನೋ? ಕೆಡುವ ಒಡಲ ನೆಚ್ಚಿ, ಕಡು ಹುಸಿಯನೆ ಹುಸಿದು, ಒಡಲ ಹೊರೆವವರ ಕೂಡಲಸಂಗಮದೇವನವರನೊಲ್ಲ ಕಾಣಿರಣ್ಣ.

೧೮. ಅರ್ಥವಡಗದು, ಕ್ರೋಧ ತೊಲಗದು. ಕ್ರೂರ ಕುಹಕ ಕುಭಾಷೆ ಬಿಡದನ್ನಕ್ಕ, ನೀನೆತ್ತಲು ಶಿವನೆತ್ತಲು, ಹೋಗುತ್ತ ಮರುಳೆ. ಭವರೋಗವೆಂಬ ತಿಮಿರ ತಿಳಿಯದನ್ನಕ್ಕರ, ಕೂಡಲಸಂಗಯ್ಯನೆತ್ತ ನೀನೆತ್ತ ಮರುಳೇ.

೧೯. ಹಾವ ತಿಂದವರ ನುಡಿಸಬಹುದು. ಗ್ರಹ ಹೊಡೆದವರ ನುಡಿಸಬಹುದು. ಸಿರಿಯ ಹೊದ್ದವರ ನುಡಿಸಬಾರದು, ನೋಡಯ್ಯ! ಬಡತನವೆಂಬ ಮಂತ್ರವಾದಿ ಹೋಗಲೊಡನೆ, ತಾವೆ ನುಡಿವರಯ್ಯಾ, ಕೂಡಲಸಂಗಮದೇವಾ.

೨೦. ಅರೆಭಕ್ತರಾದವರ ನೆರೆಬೇಡ, ಹೊರೆಬೇಡ, ದಾರಿಸಂಗ ಬೇಡ, ದೂರದಲಿದ್ದು ನುಡಿಸಲುಬೇಡ. ಕೂಡಲಸಂಗನ ಶರಣರಲ್ಲಿ ಅಚ್ಚಲಿಂಗೈಕ್ಯಂಗೆ ತೊತ್ತಾಗಿಹುದಯ್ಯಾ.

೨೧. ಸಾರ ಸುಜನರ ಸಂಗ ಲೇಸು ಕಂಡಯ್ಯ! ದೂರ ದುರ್ಜ

ಸರ ಸಂಗವದು ಭಂಗವಯ್ಯಾ! ಸಂಗವೆರಡುಂಟು, ಒಂದು ಬಿಡುವುದು. ಒಂದಿ ಮಂಗಳಮೂರ್ತಿ ನಮ್ಮ ಕೂಡಲಸಂಗನ ಶರಣರ.

೨೨. ಹೊಲೆಯ ಹೊಲಬಿಗನಾದೊಡೆ, ಅವನ ಹೊರೆಯಲ್ಲಿಪ್ಪುದು ಲೇಸು ಕಂಡಯ್ಯಾ. ಹೊಲಬುಗೆಡದೆ ಲಿಂಗ ಶರಣೆನ್ನಿರಯ್ಯಾ! ಹೊಲಬುಗೆಡಬೇಡ, ಶಿವಶರಣೆನ್ನಿರಯ್ಯಾ! ನಮ್ಮ ಕೂಡಲಸಂಗನ ಮಹಾಮನೆಯಲ್ಲು ಮಾದಾರ ಚನ್ನಯ್ಯ ಹೊಲಬಿಗನಯ್ಯಾ.

೨೩. ದೂಷಕನವನೊಬ್ಬ ದೇಶವ ಕೊಟ್ಟರೆ, ಆಶೆಮಾಡಿ ಅವನ ಹೊರೆಯಲ್ಲಿರಬೇಡ. ಮಾದರ ಶಿವಭಕ್ತನಾದರೆ, ಆತನ ಹೊರೆಯಲ್ಲಿ ಭೃತ್ಯನಾಗಿರ್ಪುದು ಕಡುಲೇಸಯ್ಯಾ! ಕಾಡಸೊಪ್ಪ ತಂದು, ಒಲೆಯಲ್ಲಿ ಹುರಿದಿಟ್ಟುಕೊಂಡಿಪ್ಪುದೀಗ ನಮ್ಮ ಕೂಡಲಸಂಗನ ಶರಣರು.

೨೪. ಪರುಷ ಮುಟ್ಟಿದಬಳಿಕ, ಕಬ್ಬುನವಾಗದು ನೋಡಾ! ಲಿಂಗ ಮುಟ್ಟಿದಬಳಿಕ, ಕುಚಿತ್ತಾಚಾರವಾಗದು ನೋಡಾ! ಕೂಡಲಸಂಗನ ಶರಣರು ಅನ್ಯವನರಿಯರಾಗಿ.

೨೫. ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೆ? ಈ ಲೋಕದೊಳಗೆ ಮತ್ತನಂತಲೋಕ. ಶಿವಲೋಕ ಶಿವಾಚಾರವಯ್ಯಾ. ಶಿವಭಕ್ತನಿದ್ದ ಠಾವೇ ದೇವಲೋಕ. ಶಿವಭಕ್ತನಂಗಣವೇ ವಾರಣಾಸಿ. ಕಾಯುವೇ ಕೈಲಾಸ. ಇದು ಸತ್ಯ ಕೂಡಲಸಂಗಮದೇವಾ.

೨೬. ಪಟ್ಟವ ಕಟ್ಟಿದ ಬಳಿಕ, ಲಕ್ಷಣವನರಸುವರೆ? ಲಿಂಗದೇವನ ಪೂಜಿಸಿ ಕುಲವನರಸುವರೆ, ಅಯ್ಯಾ? ಕೂಡಲಸಂಗಮದೇವರ ಭಕ್ತಕಾಯ ಮಮಕಾಯ ವೆಂದುದಾಗಿ.

೨೭. ಕಟ್ಟಿದಿರಲ್ಲಿ ಶಿವಭಕ್ತನ ಕಂಡು, ದೃಷ್ಟಿಯಾರೆ ಶರಣೆಂದರೆ, ಹುಟ್ಟಿದೇಳು ಜನ್ಮದ ಪಾಪ ಬಿಟ್ಟು ಪರಿದು ಪೋವುದು ನೋಡಯ್ಯಾ! ಮುಟ್ಟಿ ಚರಣಕ್ಕೆರಗಿದರೆ, ತನುವಪ್ಪಿದಂತಹುದು, ಪರುಷ ಮುಟ್ಟಿದಂತೆ. ಕರ್ತ ಕೂಡಲಸಂಗನ ಶರಣರ ಸಂಗವು ಭವಮಾಲೆಯ ಹೊದ್ದಲೀಯ್ಯದು ನೋಡಾ.

೨೮. ಆರಾರ ಸಂಗವೇನೇನ ಮಾಡುವುದೈಯ್ಯಾ. ಕೀಡಿ ಕುಂಡಲಿಗನಾಗದೇನಯ್ಯಾ! ಚಂದನದ ಸನ್ನಿಧಿಯಲ್ಲಿ ಪರಿಮಳ ತಾಗಿ ಬೇವು ಬೊಬ್ಬಿಲಿ ತರುವಿನ ಗಂಧಗಳಾಗವೆ? ನಮ್ಮ ಕೂಡಲಸಂಗನ ಶರಣರ

ಸನ್ನಿಧಿಯಿಂದ ಕರ್ಮ ನಿರ್ಮೂಳವಾಗದಿಹುದೇ?

೨೯. ಎಂತವನಾದೊಡೇನು? ಲಿಂಗ ಮುಟ್ಟಿದವನೇ ಕೇಳು ಜಾತಿ. ಕುಲವಹುದು ತಪ್ಪದು, ಲಿಂಗವ ಮುಟ್ಟಲೊಡನೆ. ಹೊನ್ನಹುದು ತಪ್ಪದು, ಪರುಷ ಮುಟ್ಟಲೊಡನೆ. ಕೂಡಲಸಂಗಮದೇವನೊಲ್ಲನು ಸರ್ವ ಸಂದೇಹಿಗಳನು.

೩೦. ಓದಿದರೇನು, ಕೇಳಿದರೇನು, ಶಿವಪಥವನರಿಯದನ್ನಕ್ಕರ? ಓದಿತ್ತು ಕಾಣಿರೋ ಶುಕನು. ಶಿವಜ್ಞಾನವ ನರಿಯದನ್ನಕ್ಕರ, ಓದಿದ ಫಲವು ನಮ್ಮ ಮಾದರ ಚನ್ನಗಾಯಿತ್ತು, ಕೂಡಲಸಂಗಮದೇವಾ.

೩೧. ಹಾವಿನ ಡೊಂಕು ಹುತ್ತಕ್ಕೆ ಸಸಿನ. ನದಿಯ ಡೊಂಕು ಸಮುದ್ರಕ್ಕೆ ಸಸಿನ. ನಮ್ಮ ಕೂಡಲಲಿಂಗನ ಶರಣರ ಡೊಂಕು ಲಿಂಗಕ್ಕೆ ಸಸಿನ.

೩೨. ಭಕ್ತನ ಮುಖದರ್ಪಣದಲ್ಲಿ ಲಿಂಗವ ಕಾಣಬಹುದು. ಭಕ್ತದೇಹಿಕದೇವನನುಮಿಷನಾಗಿ ಕೂಡಲಸಂಗಮದೇವ ಭಕ್ತನ ನುಡಿಯ ನಡುವೆ ರಾಶಿಯಾಗಿಪ್ಪನು.

೩೩. ಭಕ್ತಿ ಎಂತಹದಯ್ಯ? ದಾಸಯ್ಯ ಮಾಡಿದಂಥಾದ್ದಯ್ಯಾ! ಭಕ್ತಿ ಎಂತಹದಯ್ಯ? ಸಿರಿಯಾಳ ಮಾಡಿದಂಥಾದ್ದಯ್ಯಾ! ಭಕ್ತಿ ಎಂತಹದಯ್ಯಾ? ಸಿಂಧು ಬಲ್ಲಾಳ ಮಾಡಿದಂಥಾದ್ದಯ್ಯಾ! ಭಕ್ತಿ ಎಂತಹದಯ್ಯ? ಕೂಡಲಸಂಗಮದೇವಾ, ನೀನು ಬಾಣನ ಬಾಗಿಲ ಕಾದಂಥಾದ್ದಯ್ಯ.

೩೪. ದೇವನೊಲ್ಲಿದನೆಂದು ಮುಯ್ಯೊನಲುಬೇಡ. ತರಕಟ ಕಾಡಿಹನೊಲ್ಲಿದನೆ? ಅಳಿಸುವ ನಗಿಸುವ ನೊಲ್ಲಿದನೆ? ಬೆಚ್ಚದೆ ಬೆದರದೆ ತೊತ್ತುಗೆಲಸವ ಮಾಡಲು, ತನ್ನ ನೊಚ್ಚತ ತಾನೀವ ಕೂಡಲಸಂಗಮದೇವ.

೩೫. ನೆರೆನಂಬೋ, ನೆರೆನಂಬೋ, ದರದುರ ವಿಲ್ಲದೆ ಸಾಮವೇದಿಗಳಂತೆ. ನೆರೆನಂಬೋ, ನೆರೆನಂಬೋ, ದಾಸ ದುಗ್ಗಳೆಯಂತೆ. ನೆರೆನಂಬೋ ನೆರೆನಂಬೋ ಸಿರಿಯಾಳ ಚಂಗಳೆಯಂತೆ. ನೆರೆನಂಬೋ, ನೆರೆನಂಬೋ, ಸಿಂಧು ಬಲ್ಲಾಳನಂತೆ. ನಂಬಿದೆಯಾದರೆ, ತನ್ನನೀವ ಕೂಡಲಸಂಗಮದೇವ.

೩೬. ಬಲ್ಲಿದರೊಡನೆ ಬವರವಾದಡೆ, ಗೆಲಲುಂಟೆ? ನೋಲ

ಲುಂಟು, ಕಳ್ಳನೊಳಗೆ ಭಾಷೆ ಪುರಾಯುವಯ್ಯ! ನಮ್ಮ ಕೂಡಲಸಂಗನ ಶರಣರಿಗೆ ಮಾಡಿ, ಧನವ ಸವಿದೊಡೆ, ಆ ಭಕ್ತನಾಲಿಂಗಕ್ಕೆ ಪೂಜ್ಯನಹನು.

೩೭. ಗಿರಿಗಳಮೇಲೆ ಹಲವು ತರುಮರಾದಿಗಳಿದ್ದು, ಶ್ರೀ ಗಂಧದ ಸನ್ನಿಧಿಯಲ್ಲಿ ಪರಿಮಳವಾಗದೆ? ಲಿಂಗವಂತನ ಸನ್ನಧಿಯಿಂದ ಹಿಂದಣ ದುಸ್ಸಂಗ ಕೆಡುವುದು. ಕೂಡಲಸಂಗಮದೇವಯ್ಯ! ಸಿರಿಯಾಳನ ಸಾರಿದ್ದ ನರರೆಲ್ಲಾ ಸುರರಾಗರೆ?

೩೮. ಪರುಷದ ಹೊರೆಯಲ್ಲಿ ಕಬ್ಬುನವಿದ್ದು ಹೊನ್ನಾಯಿತ್ತುನೋಡಿರೆ. ಅದ್ವೈತಂಗಳೆ, ನೀನಿದ್ದೀರೇಳು ಕೇರಿಯುವರು, ಲಿಂಗದನೋಂಪಿಯು ನೋಂತರೇಹೇಳಾ? ಕೂಡಲಸಂಗಮದೇವಂಗೆ ಚಿಲ್ಲಾಳನೆಂಬ ಮಗನ ಬಾಗಿನವನಿಕ್ಕಿದರೆ ಹೇಳಾ?

೩೯. ಗೀತವಬಲ್ಲಾತ ಜಾಣನಲ್ಲ ಮಾತಬಲ್ಲಾತ ಜಾಣನಲ್ಲ. ಜಾಣನು ಜಾಣನು, ಆತಜಾಣನು. ಲಿಂಗವನೆರೆನಂಬಿದಾತಜಾಣನು. ಜಂಗಮಕ್ಕೆ ಸವಿಸುವಾತಜಾಣನು, ಜಾಣಕೇಳ್, ಜವನಬಾಯು ಬಾಲವ ಕೊಯ್ದು ಹೋದಾತ ಜಾಣ ನಮ್ಮ ಕೂಡಲಸಂಗನ ಶರಣರು.

೪೦. ಲೇಸೆನಿಸಿಕ್ಕೊಂಡು ಐಮದಿನ ಬದುಕಿದರೇನು? ಲೇಸೆನಿಸಿಕ್ಕೊಂಡು ನಾಲ್ಕುದಿನ ಬದುಕಿದರೇನು? ಲೇಸೆನಿಸಿಕ್ಕೊಂಡು ಮೂರುದಿನ ಬದುಕಿದರೇನು? ಲೇಸೆನಿಸಿಕ್ಕೊಂಡು ಎರಡುದಿನ ಬದುಕಿದರೇನು? ಶ್ಲೋಕ॥ ಜೀವಿತಂ ಶಿವಭಕ್ತಾನಾಂ । ವರಂ ಪಂಚದಿನಾನಿಚ ।

ಅಜಕಲ್ಪ ಸಹಸ್ರೇಭ್ಯೋ ಭಕ್ತಿಹೀನಂತು ಶಾಂಕರಿ ॥

ಎಂದುದಾಗಿ ಕೂಡಲಸಂಗನ ವಚನದಲ್ಲಿ, ಲೇಸೆನಿಸಿಕ್ಕೊಂಡು, ಒಂದುದಿನ ಬದುಕಿದಡೆ ಸಾಲದೆ?

೪೧. ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ! ಇಲ್ಲಿ ಸಲ್ಲುವರು, ಅಲ್ಲಿಯೂ ಸಲ್ಲುವರಯ್ಯ! ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ, ಕೂಡಲಸಂಮದೇವಾ.

೪೨. ಶಿವಚಿಂತೆ ಶಿವಜ್ಞಾನವಿಲ್ಲದ ಮನುಜರು, ಸಗಣಿಲಿ ಸಾಸಿರಹುಳು ಹುಟ್ಟವೇ ದೇವಾ? ಕಾಡಮೃಗ ಒಂದಾಗಿ ಇರವೇದೇವಾ? ಊರ ಮೃಗ ಒಂದಾಗಿ ಇರವೇ ಹರನೇ? ನಮ್ಮ ಕೂಡಲಸಂಗನ ಶರಣ

ರು ಇಲ್ಲದವರು ದೇಶ ವನವಾಸ ನರವಿಂಧ್ಯ ಕಾಣಿರಣ್ಣಾ.

೪೩. ಹೊತ್ತಾರೆ ಎದ್ದು ಶಿವಲಿಂಗದೇವನ ದೃಷ್ಟಿಯಾರೆ ನೋಡ ದವನ, ಸಂಸಾರವೇನವನ, ಬಾಳುವೇನವನ, ಬೀಳುವೇನವನ, ಸಂ ಸಾರವೇನವನ, ನಡೆವೇನವನ, ನುಡಿಯೇನವನ, ಸಂಸಾರವೇನವನ, ಕರ್ತು ಕೂಡಲಸಂಗ, ನಿಮ್ಮ ತೊತ್ತುಗೆಲಸವ ಮಾಡದವನ ಸಂಸಾರ ವೇನವನ?

೪೪. ವ್ಯಾಧನೊಂದು ಮೊಲನ ತಂದರೆ, ಸಲುವಹಾಗಕ್ಕೆ ಬೆಲೆ ಗೈವರಯ್ಯ! ನೆಲನಾಳ್ವನ ಹೆಣನೆಂದರೆ, ಅಂದು ಅಡಿಕೆಗೆ ಕೊಂಬವ ರಿಲ್ಲ, ನೋಡಯ್ಯ! ಮೊಲನಿಂದ ಕರಕಷ್ಟ ನರನ ಬಾಳುವೆ. ಸಲೆನಂ ಬು ನಮ್ಮ ಕೂಡಸಂಗಮದೇವನ.

೪೫. ಉತ್ಪತ್ತಿ ಶುಕ್ಲಶೋಣಿತದಿಂದಾದ ಲಜ್ಜೆಸಾಲದೆ? ಮತ್ತೆ ದುರಿತಂಗಳ ಹೊರೆವ ಎಗ್ಗತನವೇತಕಯ್ಯಾ! ಮೃತ್ಯುವಿನ ಬಾಯ ಒ ಳಗಾಗಲೇಕೆ? ಒತ್ತೊತ್ತೆಯ ಜನನವ ಗೆಲುವರೆ, ಕರ್ತನ ಪೂಜಿಸು ನ ಮ್ಮ ಕೂಡಲಸಂಗಮದೇವನ.

೪೬. ಮನವೇಸರ್ಪ ತನುವೇಹೇಳಿಗೆ ಹಾವಿನೊಡತಣವಹುದು ಹುದುವಾಳಿಗೆ. ಇನ್ನಾವಾಗ ಕೊಂದಿಹುದೆಂದರಿಯೆ. ಇನ್ನಾವಾಗಲೆಂದಿ ಹುದೆಂದರಿಯೆ. ನಿಚ್ಚಕ್ಕೆ ನಿಮ್ಮ ಪೂಜಿಸಬಲ್ಲರೆ, ಅದೇ ಗರುಡ ಕೂಡ ಲಸಂಗಮದೇವಾ.

೪೭. ನೆರೆಕೆನ್ನೆಗೆ, ತೆರೆಗಲ್ಲಕ್ಕೆ, ಶರೀರಗೂಡು ಹೋಗದಮುನ್ನ, ಹಲ್ಲುಹೋಗಿ ಬೆನ್ನುಬಾಗಿ, ಅನ್ಯರಿಗೆ ಹಂಗಾಗದ ಮುನ್ನ, ಕಾಲಮೇ ಲೆ ಕೈಯ್ಯನೂರಿ, ಕೋಲು ಹಿಡಿಯದಮುನ್ನ, ಮುಪ್ಪಿಂದೊಪ್ಪವಳಿಯ ದ ಮುನ್ನ, ಮೃತ್ಯು ಮುಟ್ಟದಮುನ್ನ, ಪೂಜಿಸು ಕೂಡಲಸಂಗಮ ದೇವನ.

೪೮ ನೀರಲ್ಲಿ ಪುಟ್ಟಿದ ಗುಳ್ಳೆಗೆ ಕಬ್ಬುನದ ಕಟ್ಟು ಕೊಟ್ಟು ಸುರ ಕ್ಷಿತವ ಮಾಡುವ ಭರವನೋಡಾ! ಮಹಾದಾನಿ ಕೂಡಲಸಂಗಯ್ಯನ ಪೂಜಿಸಿ ಬದುಕೋ ಕಾಯುಗ ನಿಶ್ಚಯಿಸದೇ

೪೯ ಪಂಜರದಲ್ಲಿ ... ಅಂಜದೆ ಓದುವ ಗಿಳಿಯೋ, ಎಂದೆಂ ದುಅಳಿಯೆನೆಂದು ಗೂಡ ... ಯಲ್ಲಾ! ನಿನ್ನ ಮನದಲ್ಲಿ ಮಾಯಾ

ಮಂಜರ ಕೊಲುವರೆ, ನಿನ್ನ ಪಂಜರ ಕಾವುದೆ ಕೂಡಲಸಂಗಮದೇವ ನಲ್ಲದೆ ?

೫೦. ಸಂಸಾರವೆಂಬುದೊಂದು ಗಾಳಿಯ ಸೊಡರು, ಸಿರಿ ಎಂಬುದೊಂದು ಸಂತೆಯ ಮಂದಿ ಕಂಡೈಯ್ಯ. ಇದನು ನೆಚ್ಚಿ ಕೆಡ ಬೇಡ ಸಿರಿ ಎಂಬುದ ಮರೆದು, ಪೂಜಿಸು ನಮ್ಮ ಕೂಡಲಸಂಗಮದೇವನ

೫೧. ಎಲೆ ಎಲೆ ಮಾನವ, ಅಳಿಯಾಸೆ ಬೇಡೆಲೊ. ಕಾಡಬೆ ಳದಿಂಗಳ ಸಿರಿಯು ಸ್ಥಿರವಲ್ಲ: ಕೇಡಿಲ್ಲದ ಪದವಿಯ ಕೊಡಲು, ಕೂಡ ಲಸಂಗಮದೇವನ ಮರೆಯದೆ ಪೂಜಿಸು

೫೨. ಎಂತಕ್ಕೆ? ಎಂತಕ್ಕೆ? ಹಡೆದ ಕಾಯ ಬೀಯವಾಗದ ಮುನ್ನ, ಅಟ್ಟುಣ್ಣೋ ಬೆರಣಿಯುಳ್ಳಲ್ಲಿ, ಹೊತ್ತುಹೋಗದಮುನ್ನ, ಅಟ್ಟುಣ್ಣೋ. ಮರಳಿ ಭವಕ್ಕೆ ಬಾಹೆ, ಬಾರದಿಹೆ. ಕರ್ತ ಕೂಡಲಸಂ ಗಮದೇವಂಗೆ ಶರಣೆನ್ನಿ ಭೋ

೫೩. ಶಕುನವೆಂತೆಂಬೆ, ಅವಶಕುನವೆಂತೆಂಬೆ ನಿಮ್ಮವರು ಅಳಲಿಕೆ ಅಂದೇಕೆ ಬಂದೆ? ನಿಮ್ಮವರು ಅಳಲಿಕೆ ಇಂದೇಕೆ ಹೋದೆ? ನೀನು ಹೋಹಾಗಳಿಕ್ಕೆ, ನೀನು ಬಾಹಾಗಳಿಕ್ಕೆ ಅಕ್ಕೆ ಬಾರದ ಮುನ್ನ ಪೂಜಿಸು, ಕೂಡಲಸಂಗಮದೇವನ.

೫೪. ನಿಮಿಷಾರ್ಧ ನಿಮಿಷೆಂಬೋ ಕ್ಷಣವೊಳಗರ್ಧೆಂಬೋ ಕಣ್ಣಮುಚ್ಚಿ ಬಿಚ್ಚುವನಿಸು ಬೇಗೆಂಬೋ. ಸಂಸಾರದಾಗೆಂಬೋ. ಸಂಸಾ ರವಹೋಗೆಂಬೋ ಸಂಸಾರದೊಪ್ಪಂಬೋ ಕೂಡಲಸಂಗಮದೇವ ಮಾಡಿದ ಮಾಯೆಂಬೋ ಅಭ್ರಚ ೧

೫೫. ಹರನೀವ ಕಾಲಕ್ಕೆ ಸಿರಿಯು ಬೆನ್ನಲ್ಲಿ ಬಕ್ಕು. ಹರಿದು ಹೆದ್ದೊರೆ ಕೆರೆತುಂಬಿದಂತಯ್ಯಾ. ನೆರೆಯಪ ಪತ್ತ ನೆರೆವುದು ನೋಡಯ್ಯಾ. ಅರಸು ಪರಿವಾರ ಕೈಸಾರ ನೋಡಯ್ಯ. ಹರನು ನಿರಂಜನನು ಮರೆವ ಕಾಲಕ್ಕೆ ತುಂಬಿದ ಹರವಿಯ ಕಲು ಕೊಂಡಂತೆ, ಕೂಡಲಸಂಗಮ ದೇವಾ.

೫೬. ಹೊಯ್ವರೆ ಹೋಯ್ಯಗಳು ಕೈಯ್ಯಮೇಲೆ ಬಯ್ವರೆ, ಬಯ್ಗಳು ಕೈಯ್ಯಮೇಲೆ. ಹಿಂದಣ ಜನ್ಮವೇನಾದರಾಗಲಿ. ಇಂದಿನ

ಭೋಗವು ಕೈಯ್ಯಮೇಲೆ. ಕೂಡಲಸಂಗಮದೇವಾ, ನಿಮ್ಮ ಪೂಜಿಸಿದ ಫಲ ಕೈಯ್ಯಮೇಲೆ.

೫೭. ಆದ್ಯರ ವಚನ ಪರುಷ ಕಂಡಯ್ಯ! ಸದಾಶಿವನೆಂಬ ಲಿಂಗವ ನಂಬುವುದು. ನಂಬಲೊಡನೆ ನೀ ವಿಜಯ ಕಂಡಯ್ಯ! ಅಧರಕ್ಕೆ ಕಹಿ, ಉದರಕ್ಕೆ ಸಿಹಿ. ಕೂಡಲಸಂಗನ ಶರಣರ ವಚನ ಬೇವ ಸವಿದಂತೆ.

೫೮. ಹೊತ್ತಾರೆ ಎದ್ದು ಅಗ್ಗವಣಿ ಪತ್ರೆಯ ತಂದು, ಹೊತ್ತು ಹೋಗದ ಮುನ್ನ, ಪೂಜಿಸು ಲಿಂಗವ. ಹೊತ್ತು ಹೋದಬಳಿಕ ನಿನ್ನ ನಾರು ಬಲ್ಲರು? ಹೊತ್ತು ಹೋಗದ ಮುನ್ನ, ಮೃತ್ಯು ಒಯ್ಯದ ಮುನ್ನ, ತೊತ್ತು ಗೆಲಸವ ಮಾಡು ಕೂಡಲಸಂಗಮದೇವನ.

೫೯. ಅಚ್ಚುಗವೇಕಯ್ಯ ಸಂಸಾರದೊಡನೆ? ನಿಚ್ಚ ನಿಚ್ಚ ಶಿವ ರಾತ್ರಿಯ ಮಾಡುವದು, ಬೇಗ ಬೇಗ ಅರ್ಚನೆ ಪೂಜೆಯ ಮಾಡುವದು, ಕೂಡಲಸಂಗನ ಕೂಡುವದು.

೬೦. ಅಂದು, ಇಂದು, ಮತ್ತೊಂದು ಎನಬೇಡ. ದಿನ ಒಂದೇ ಶಿವಶರಣೆಂಬುವಂಗೆ. ದಿನ ಒಂದೆ ಹರಶರಣೆಂಬುವಂಗೆ. ದಿನ ಒಂದೇ, ನಮ್ಮ ಕೂಡಲಸಂಗನ ಮಾಣದೆ ಮಾಣದೆ ನೆನೆಯುವಂಗೆ.

೬೧. ಅಷ್ಟ ವಿಧಾರ್ಚನೆ ಷೋಡಶೋಪಚಾರವ ಮಾಡುವುದು, ಮಾಡಿದ ಪೂಜೆಯ ನೋಡುವದು, ಶಿವತತ್ವಗೀತವ ಪಾಡುವದು, ಶಿವನಮುಂದೆ ನಲಿದಾಡುವದು, ಭಕ್ತಿ ಸಂಭಾಷಣೆಯ ಮಾಡುವುದು, ನಮ್ಮಸಂಗಮ್ಮಯ್ಯನ ಕೂಡುವುದು.

೬೨. ಅಳಿಗೊಂಡಿಹರೆಂದು ಅಂಜಲದೇಕೆ? ನಾಸ್ತಿಕವ ಮಾಡಿಹ ರೆಂದು, ನಾಚುವದೇಕೆ? ಆರಾದಡಾಗಲಿ, ಶ್ರೀ ಮಹಾದೇವಂಗೆ ಶರಣೆನ್ನಿರಿ. ಎನ್ನನು ಅರಿಯನೆಂದು ಮೌನಗೊಂಡಿರಬೇಡ. ಕೂಡಲಸಂಗಮ ದೇವರ ಶರಣರ ಮುಂದೆ ದಂಡಣ, ದತ್ತಣ ಎನ್ನಿ.

೬೩. ಸುಪ್ರಭಾತ ಸಮಯದಲ್ಲಿ ಅರ್ಘ್ಯಯಲ್ಲಿ ಲಿಂಗವ ನೆನೆದರೆ ತಪ್ಪುದು ಅಪಮೃತ್ಯು, ಕಾಲಕರ್ಮಂಗಳಯ್ಯ! ದೇವ ಪೂಜೆಯ ಮಾಟ, ದುರಿತ ಬಂಧನದೋಟ. ಶಂಭುಲಿಂಗ ನಿಮ್ಮಯ ನೋಟ ಹಿಂಗದ ಕಣ್ಬೇಟ. ಸದಾ ಸನ್ನಿಹಿತನಾಗಿ, ಶರಣೆಂಬು ನಂಬುವುದು. ಜಂಗಮಾರ್ಚನೆಯ ಮಾಟ ಕೂಡಲಸಂಗನ ಕೂಟ.

೬೪. ಅಂಕ ಕಳನೇರಿ ಕೈಮರೆದಿರ್ದಡೆ, ಮೂರಾಂತಕ ಬಂದು ಇರಿಯದೆ ಮಾಣ್ಬನೇ? ನಿಮ್ಮ ನೆನೆವ ಮತಿ ಮರೆದಿರ್ದರೆ, ಪಾಪ ತನುವನಂಡಲೆವುದು ಮಾಣ್ಬುದೇ? ಕೂಡಲಸಂಗಯ್ಯನ ನೆನೆದರೆ, ಪಾಪ ಉರಿಗೊಡ್ಡಿದರಗಿನಂತೆ ಕರಗುವದೈಯ್ಯ.

೬೫. ಆಡಿಹರಯ್ಯ, ಆಡಿಹರಯ್ಯ, ಮನಬಂದ ಪರಿಯಲಿ. ಶಿವ ಶರಣರ ಮುಂದೆ, ಆಡಿಹರಯ್ಯ, ಹಾಡಿಹರಯ್ಯ! ಕೋಡಂಗಿ ಯಾಟವ ನಾಡಿದ ಭಕ್ತಂಗೆ ಬೇಡಿದ್ದನೀವ ನಮ್ಮ ಕೂಡಲಸಂಗಮದೇವ.

೬೬. ಹೊಲಬುಗೊಂಡರಸಬೇಡ. ಬರಿದು ಕೆರಬೇಡ. ಒಲಿದ ರೊಮ್ಮೆ ಶಿವಶರಣೆನ್ನಿರಯ್ಯಾ. ಒಂದು ಸೊಲ್ಲಿಂಗೆ ಮುಕ್ತಿ ಸಿದ್ಧಿ, ಕೂಡ ಲಸಂಗಮದೇವ ಭಕ್ತಿಲಂಪಟನಾಗಿ.

೬೭. ನಾದಪ್ರಿಯನು ಶಿವನೆಂಬರು, ನಾದಪ್ರಿಯ ಶಿವನಲ್ಲವಯ್ಯ. ವೇದಪ್ರಿಯ ಶಿವನೆಂಬರು, ವೇದಪ್ರಿಯ ಶಿವನಲ್ಲವಯ್ಯ. ನಾದವ ನುಡಿಸಿದ ರಾವಣಂಗೆ ಅರೆ ಆಯುಷ್ಯವಾಯಿತ್ತು. ವೇದವನೋದಿದ ಬ್ರಹ್ಮಂಗೆ ಶಿರವು ಹೋಯಿತ್ತು. ನಾದಪ್ರಿಯನು ಅಲ್ಲ. ವೇದಪ್ರಿಯನು ಅಲ್ಲ. ಭಕ್ತಿಪ್ರಿಯನು ನಮ್ಮ ಕೂಡಲಸಂಗಮದೇವಾ.

೬೮. ಹಸಿವಾದಡುಂಬುದನು, ಸತಿಯ ಸಂಭೋಗವನು, ಆನಾಗಿ ನೀ ಮಾಡೆಂಬುವರುಂಟೆ? ಮಾಡುವುದು, ಮಾಡುವುದು ಮನಮುಟ್ಟಿ. ಮಾಡುವುದು, ಮಾಡುವುದು ತನುಮುಟ್ಟಿ. ತನುಮುಟ್ಟ, ಮನಮುಟ್ಟ ದಿರ್ದರೆ, ಕೂಡಲಸಂಗಮದೇವನೇತರಲ್ಲಿ ಮೆಚ್ಚುವ?

೬೯. ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು, ಬೇರೆ ಮತ್ತೊಬ್ಬರ ಕೈಯ್ಯಲ್ಲಿ ಮಾಡಿಸಬಹುದೆ? ತನ್ನ ಲಿಂಗಕ್ಕೆ ತಾಮಾ ಡುವ ನೇಮವನು ತಾ ಮಾಡಬೇಕಲ್ಲದೆ, ಬೇರೆ ಮತ್ತೊಬ್ಬರ ಕೈಯ್ಯಲ್ಲಿ ಮಾಡಿಸಬಹುದೆ? ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ, ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವಾ?

೭೦. ಬಂಡಿತುಂಬ ಪತ್ರೆಯತಂದು, ಕಂಡ ಕಂಡಲಿ ಮಜ್ಜನ ಕೆರೆವಿರಿ. ತಾಪತ್ರಯವ ಕಳೆದು ಪೂಜಿಸಿ, ತಾಪತ್ರಯವ ಲಿಂಗನೊಲ್ಲ, ಕೂಡಲಸಂಗಮದೇವ ಬರಿಯ ಉದಕದಲ್ಲಿ ನೆನೆವನೆ?

೭೧. ಭಕ್ತನಾಗಿ ಲಿಂಗಜಂಗಮವ ಪೂಜಿಸಬೇಕು. ಭಕ್ತನಾಗಿ

ತನ್ನತಾ ಪೂಜಿಸಿಕೊಬುದೆಂತಯ್ಯ ? ಸ್ವಾಮಿ ಭೃತ್ಯಸಂಬಂಧವೆಂತಯ್ಯ. ಪೂಜಿಸುವುದು ಕೂಡಲಸಂಗಮದೇವಾ , ಕಣ್ಣು ಕಟ್ಟಿ ಕನ್ನಡಿಯ ತೋರುವಂತೆ .

೭೨, ಭೂಮಿಯೊಳಗೆ ನಿಧಾನವಿದ್ದುದ ಅಂಜನಸಿದ್ಧರು ತೋರುವರಯ್ಯ. ಅಂಜಲುಬೇಡ ಕಂಡಯ್ಯ ಮನದಲ್ಲಿ ಸಂದೇಹವ ಮಾಡದಿರಾ ! ಜಂಗಮದೊಳಗೆ ಲಿಂಗವಿದ್ದಾನೆಂದು ನಂಬಿಗೆಯುಳ್ಳರೆ, ತನ್ನ ತೋರುವ ಕೂಡಲಸಂಗಯ್ಯ

೭೩. ಕನ್ನಡಿಯ ನೋಡುವ ಅಣ್ಣಗಳಿರಾ , ಜಂಗಮದೊಳಗೆ ನೋಡಿದರೆ, ಜಂಗಮದೊಳಗೆ ಲಿಂಗಯ್ಯ ಸನ್ನಿಹಿತನಾಗಿರ್ಪ. ಸ್ಥಾವರಜಂಗಮ ಒಂದೇಎಂದುದು ಕೂಡಲಸಂಗಯ್ಯನ ವಚನ .

೭೪. ಗೀತವ ಹಾಡಿದಡೇನು, ಶಾಸ್ತ್ರ ಪುರಾಣಗಳಕೇಳಿದಡೇನು, ವೇದವೇದಾಂತವ ನೋಡಿದಡೇನು, ಮನವರಿದು ಲಿಂಗಜಂಗಮವ ಪೂಜಿಸಲರಿಯದವರು ? ಎಲ್ಲರಲ್ಲಿ ಅನುಭಾವಿಯಾದರೇನು? ಭಕ್ತಿಯಿಲ್ಲದವರ ನೊಲ್ಲ ಕೂಡಲಸಂಗಮದೇವಾ .

೭೫. ಲಿಂಗವ ಪೂಜಿಸಿದ ಬಳಿಕ ಜಂಗಮಕ್ಕಂಜಲೇಬೇಕು. ದಕ್ಕನೆ ನುಂಗಿದಂತೆ ಬೆರೆತುಕೊಂಡಿರಬೇಡ ಬೀಗಿಬೆಳೆದ ಕೊನೆವಾಳೆಯಂತೆ ಬಾಗಿಕೊಂಡಿದ್ದರೆ , ಬೇಡಿದ ಪದವಿಯನೀವ ಕೂಡಲಸಂಗಮದೇವಾ.

೭೬. ಹಮ್ಮಿನಭಕ್ತಿ ಕರ್ಮಕ್ಕೆ ಮೊದಲು ಧರ್ಮವನರಿಯದ ಮಾಟ ಸುವಿಧಾನದಕೇಡು. ಬಂದಸಮಯೋಚಿತವನರಿಯದಿದ್ದರೆ, ನಿಂದಿರಲೊಲ್ಲ ಕೂಡಲಸಂಗಮದೇವಾ

೭೭. ದ್ವೈತಾ ದ್ವೈತವನೋದಿ ಏನುಮಾಡುವಿರಯ್ಯಾ , ನಮ್ಮ ಶರಣರಿಗೆ ಉರಿಗೊಡ್ಡಿದರಗಿನಂತೆ ಕರಗದನ್ನಕ್ಕ ? ಕೂಡಲಸಂಗಮದೇವಾ, ಬರಿಯ ಮಾತಿನ ಮಾಲೆಯುಲೇನಹುದು ?

೭೮. ಕಲ್ಲನಾಗರಕಂಡರೆ ಹಾಲನೆರೆಎಂಬರಯ್ಯಾ. ದಿಟವನಾಗರ ಕಂಡರೆ ಕೊಲ್ಲೆಂಬರಯ್ಯ ಉಂಬುವ ಜಂಗಮಬಂದರೆ ನಡೆ ಎಂಬರಯ್ಯ. ಉಣ್ಣದಲಿಂಗಕ್ಕೆ ಬೋನವ ಹಿಡಿ ಎಂಬರಯ್ಯಾ! ನಮ್ಮ ಕೂಡಲಸಂಗನ ಶರಣರಕಂಡು, ಉದಾಸೀನವ ಮಾಡಿದರೆ, ಕಲ್ಲು ತಾಗಿದ ಮಿಟ್ಟೆಯಂತಪ್ಪರಯ್ಯಾ .

೭೯. ಎರೆದರೆ ನೆನೆಯದು , ಮರೆದರೆ ಬಾಡದು. ಹುರುಳಿಲ್ಲ ,

ಹುರುಳಿಲ್ಲ ಲಿಂಗಾರ್ಚನೆ. ಕೂಡಲಸಂಗಮದೇವ, ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು.

೮೦. ಅಗ್ನಿಯಾಧಾರದಲ್ಲಿ ಕಬ್ಬುನ ನೀರುಂಬುದಯ್ಯ. ಭೂಮಿಯಾಧಾರದಲ್ಲಿ ವೃಕ್ಷ ನೀರುಂಬುದಯ್ಯ ಜಂಗಮವಾಪ್ಯಾಯನವಾದರೆ, ಲಿಂಗ ಸಂತೃಪ್ತಿಯಹುದಯ್ಯ, ॥ ಶ್ಲೋ. ॥ ವೃಕ್ಷಸ್ಯವದನಂ ಭೂಮಿಃ ಸ್ಥಾವರಸ್ಯತು ಜಂಗಮಃ। ಅಹಂತುಷೊ(ೇ)ಸ್ಯ್ಯಮಾದೇವಿ ಉಭಯೋರ್ಲಿಂಗ ಜಂಗಮಃ॥ ಇದುಕಾರಣ ಕೂಡಲಸಂಗಮದೇವರಲ್ಲಿ, ಜಂಗಮವಾಪ್ಯಾಯನವಾದರೆ ಲಿಂಗಸಂತುಷ್ಟಿ.

೮೧. ಮಾಡಿ ನೀಡಿ ಲಿಂಗವ ಪೂಜಿಸಿಹೆನೆಂಬರು. ನೀವೆಲ್ಲಾ ಕೇಳಿರಣ್ಣಾ! ಹಾಗದ ಕೆರಹ ಹೊರಗೆ ಕಳೆದು ದೇಗುಲಕ್ಕೆ ಹೋಗಿ ನಮಸ್ಕಾರವ ಮಾಡುವನಂತೆ; ತನ್ನ ಕೆರಹಿನ ಧ್ಯಾನವಲ್ಲದೆ, ದೇವರಧ್ಯಾನವಿಲ್ಲ. ಧನವ ನಿರಿಸದಿರಿ. ಇರಿಸಿದರೆ ಭವತಪ್ಪದು, ತಪ್ಪದು ಕೂಡಲಸಂಗಮನ ಶರಣರಿಗೆ ಒಡವೆಯ ಸವಿಸಲೇಬೇಕು.

೮೨. ಉಂಡುದು ಬಂದಿತ್ತೆಂಬ ಸಂದೆಹ ಮಾನವ ನೀಕೇಳು. ಉಂಡುದೇನಾಯಿತ್ತೆಂಬುದ ನಿನ್ನೊಳಗೆ ನೀತಿಳಿದು ನೋಡು ಉಂಡುದು ಆಗಳೇ ಆಪ್ಯಾಯನವಾಯಿತ್ತು. ಉಂಡುದ ಉಣಬಂದ ಹಂದಿಯ ಬಾಳುವೆಯವರ ಕಂಡು ನಾ ಮರುಗುವೆನಯ್ಯ ಕೂಡಲಸಂಗಮದೇವಾ.

೮೩. ಆಯುಷ್ಯಉಂಟು, ಪ್ರಳಯವಿಲ್ಲೆಂದು, ಅರ್ಥವ ಮಡಗುವಿರಿ ಆಯುಷ್ಯ ತೀರಿ, ಪ್ರಳಯಬಂದರೆ, ಆ ಅರ್ಥವ ನುಂಬುವರಿಲ್ಲ ನೆಲನನಗಿದು ಮಡುಗದಿರಾ ನೆಲನುಂಗಿ ರುಗುಳುವುದೆ? ಕಣ್ಣಿನಲ್ಲಿ ನೋಡಿ ಮಣ್ಣಿನಲ್ಲಿ ನೆರಹಿ, ಉಣ್ಣದೆ ಹೋಗದಿರಾ ನಿನ್ನ ಮಡದಿಗಿರಲೆಂದರೆ, ನಿನ್ನಮಡದಿಯ ಕೃತಕಬೇರೆ ನಿನ್ನ ಒಡಲು ಕೆಡೆಯಲು, ಮತ್ತೊಬ್ಬನಲ್ಲಿಗೆ ಅಡಕದೆ ಮಾಬುವಳೆ? ಹೆರರಿಗಿಕ್ಕಿ ಹೆಗ್ಗುರಿಯಾಗಿ ಕೆಡಬೇಡ. ಕೂಡಲಸಂಗನ ಶರಣರಿಗೆ ಒಡವೆಯ ಸವಿ ಸವಿವುದು.

೮೪. ತನು, ಮನ, ಧನವ ಹಿಂಬಿಕ್ಕಿಕೊಂಡು, ಮಾತಿನ ಬಣಬೆಯ ಮಳಲೊಟ್ಟಿಯ ನುಡಿವನರು, ನೀವೆಲ್ಲರು ಕೇಳಿರೆ, ತಲೆ ಇಲ್ಲದ ಕೋಲು ಹೊಳ್ಳುಹಾರುವನಲ್ಲದೆ, ಗುರಿಯ ತಾಕಬಲ್ಲುದೆ? ಮಾ

ಯಾ ಪಾಶಹಿಂಗಿ ಮನದಗಂಟು ಬಿಡದನ್ನಕ್ಕರ ಕೂಡಲಸಂಗಮದೇವ ನೆಂತೊಲಿವನಯ್ಯ ?

೮೫. ಸರ್ವ ಭೂತಾತ್ಮನೆಂಬ ಮಾತಿನ ಮಾಲೆಯಲ್ಲಿ ಹೋಗ ದು . ತನುಮನಧನವ ಗುರುಲಿಂಗ ಜಂಗಮಕ್ಕೆ ಸವಿಸಲೇಬೇಕು . ನಮ್ಮ ಕೂಡಲಸಂಗನ ಶರಣರಿಗೆ ಅಂಜಲೇಬೇಕು .

೮೬. ಹಲವು ಮಣಿಯ ಕಟ್ಟಿ ಕುಣಿಕುಣಿದಾಡಿ , ಹಲವುಪರಿಯ ವಿಭೂತಿಯ ಧರಿಸಿ , ಗಣಾಡಂಬರದ ನಡುವೆ ನಲಿನಲಿದಾಡಿ , ಉಂಡು ತಾಂಬೂಲವ ಕೊಂಡು , ಹೋಗುವನಲ್ಲಾ ! ತನುಮನಧನವ ಸಮರ್ಪಿ ಸದವರ ಕೂಡಲಸಂಗಮದೇವನೆಂತೊಲಿವಾ ?

೮೭. ತನುವ ಮುಟ್ಟಿ ಗುರುವ ನೋಲೈಸಬೇಕು . ಮನವ ಮುಟ್ಟಿ ಲಿಂಗವ ನೋಲೈಸಬೇಕು . ಧನವಮುಟ್ಟಿ ಜಂಗಮವ ನೋ ಲೈಸಬೇಕು · ಇಂತೀ ತ್ರಿವಿಧವ ಹೊರಗೆ ಮಾಡಿ , ಹರಿಯ ಹೊಯಿ ಸಿ , ಕುರುಹ ಪೂಜಿಸುವವರ ಮೆಚ್ಚ ಕೂಡಲಸಂಗಮದೇವಾ .

೮೮. ಆಡಿದರೇನು , ಹಾಡಿದರೇನು , ಓದಿದರೇನು, ತ್ರಿವಿಧ ದಾಸೋಹವಿಲ್ಲದನ್ನಕ್ಕರ? ಆಡದ ನವಿಲು, ಹಾಡದ ತಂತಿ, ಓದದ ಗಿಳಿ, ಭಕ್ತಿ ಇಲ್ಲದವರನೊಲ್ಲ ಕೂಡಲಸಂಗಮದೇವಾ.

೮೯ ಶಾಸ್ತ್ರ ಘನವೆಂಬೆನೆ , ಕರ್ಮವ ಭಜಿಸುತ್ತಿಹುದು . ವೇದ ಘನವೆಂಬೆನೆ , ಪ್ರಾಣ ವಧೆಯ ಹೇಳುತ್ತಿದೆ ಶ್ರುತಿಯು ಘನ ವೆಂಬೆನೆ , ಮುಂದಿಟ್ಟು ಅರಸುತ್ತಲಿದ್ದೀನೆ ಅಲ್ಲೆಲ್ಲಿಯು ನೀನಿ , ದಕಾರಣ , ತ್ರಿವಿಧ ದಾಸೋಹದಲ್ಲದೆ , ಕಾಣಬಾರದು , ಕೂಡಲ ಸಂಗಮದೇವ

೯೦. ಮಾತಿನ ಮಾಲೆಯಲ್ಲಿಪ್ಪುದೆ ಭಕ್ತಿ ? ಮಾಡಿ ತನು ಸವೆ ಯದನ್ನಕ್ಕರ , ಮನ ಸವೆಯದನ್ನಕ್ಕರ, ಧನ ಸವೆಯದನ್ನಕ್ಕರ , ಅಪ್ಪುದೆ ಭಕ್ತಿ ? ಕೂಡಲಸಂಗಮದೇವ ನೊಲಿದರೆ ಸರಸವಾಡುವನು . ಸೈರಿಸದನ್ನಕ್ಕರ ಅಪ್ಪುದೆ ಭಕ್ತಿ ?

೯೧ ಹಾವಸೆಗಲ್ಲ ಮೆಟ್ಟಿ ಹರಿದು ಗೊತ್ತ ಮುಟ್ಟ ಬಾರದ ಯ್ಯಾ! ನುಡಿದಂತೆ ನಡೆಯಲು ಬಾರದಯ್ಯ ! ಕೂಡಲಸಂಗನ ಶರಣರ ಭಕ್ತಿ ಬಾಳಬಾಯಧಾರೆ

೯೨. ಭಕ್ತಿ ಯೆಂಬುದ ಮಾಡಬಾರದು. ಕರಗಸದಂತೆ ಹೋಗುತ್ತ ಕೊಯ್ವುದು. ಬರುತ್ತ ಕೊರೆವುದು. ಘಟಸರ್ಪನಲ್ಲಿ ಕೈದುಡುಕಿದರೆ, ಹಿಡಿವುದು ಮಾಬುದೆ ಕೂಡಲಸಂಗಮದೇವಾ ?

೯೩. ಹಲವು ಕಾಲ ಧಾವತಿಗೊಂಡು ಒಟ್ಟಿದರೆಯು ಒಂದು ಕಿಡಿಯಲ್ಲಿ ಬೇವಂತೆ, ಸಲೆ ಸನ್ನಿಹಿತನಾಗಿಪ್ಪ ಶರಣನ ಒಂದನಾಯತದಿಂದ ಕೆಡುವುದು. ಸ್ವಧರ್ಮದಲ್ಲಿ ಗಳಿಸಿದ ಪಿತನ ಧನವ ಅಧರ್ಮದಲ್ಲಿ ಕೆಡಿಸುವ ಸುತನಂತೆ, ಶಿವನ ಸೊಮ್ಮ ಶಿವಂಗೆ ಮಾಡದೆ ಅನ್ಯಕ್ಕೆ ಮಾಡಿವಡೆ ತನ್ನ ಭಕ್ತಿ ತನ್ನನೆ ಕೆಡಿಸುವದು ಕೂಡಲ ಸಂಗಮದೇವಾ.

೯೪. ನೆಚ್ಚಿದೆನೆಂದರೆ, ಮೆಚ್ಚಿದೆನೆಂದರೆ, ಸಲೆ ಮಾರುವೋದೆನೆಂದರೆ, ತನುವನಲ್ಲಾಡಿಸಿ ನೋಡುವೆ ನೀನು, ಮನವನಲ್ಲಾಡಿಸಿ ನೋಡುವೆ ನೀನು, ಧನವನಲ್ಲಾಡಿಸಿ ನೋಡುವೆ ನೀನು. ಇವೆಲ್ಲಕ್ಕಂಜದಿದ್ದರೆ, ಭಕ್ತಿಕಂಪಿತ ನಮ್ಮ ಕೂಡಲಸಂಗಮದೇವ.

೯೫. ಕಳಕೋಲು ಹಿಡಿದುಶ್ರಮವ ಮಾಡಬಹುದಲ್ಲದೆ, ಕಳನನೇರಿ ಕಾದುದರಿದು ನೋಡಾ! ಬಣ್ಣವಿಟ್ಟು ನುಡಿವಲ್ಲಿ ಫಲವೇನು? ಚಿನ್ನ ಗೊಯ್ಕುವ ಮಾಡುವನಂತೆ, ಬಂದ ಸಮಯವನರಿತು, ಇದ್ದುದ ವಂಚಿಸದಿದ್ದರೆ, ಕೂಡಲಸಂಗಮದೇವನೊಲಿದು ಸಲುಹುವನು.

೯೬. ಧನಕ್ಕೆ ಮನವ ನೊಡ್ಡಿದರೇನು? ಮನಕ್ಕೆಧನವನೊಡ್ಡಿದರೇನು? ತನು ಮನ ಧನವ ಮೀರಿ ಮಾತಾಡಬಲ್ಲರೆ, ಆತನಿಸ್ಸೀಮನು. ಆತನಿಜೈಕ್ಯನು. ತನು ಮನ ಧನವ ಸವಿಸರೆ ಕೂಡಲಸಂಗಮದೇವನೊಲಿವ.

೯೭. ಅರ್ಥಪ್ರಾಣಾಭಿಮಾನದಲ್ಲಿ ವಂಚನೆಯಿಲ್ಲದ ಭಕ್ತಿ ಸಮಯಾಚಾರ. ಜಂಗಮವೇ ಲಿಂಗವೆಂಬುದಕ್ಕೆ ಏನುಗುಣ? ಮನದ ಲಂಪಟತನ ಹಿಂಗದಾಗಿ, ಒಡೆಯರ ಬರವಿಂಗೆ ಕುನ್ನಿಬಾಲವ ಬಡಿದರೆ ವೆಚ್ಚವೇನು ಹತ್ತದು ಕೂಡಲಸಂಗಮದೇವಾ.

೯೮. ಉದಯದ ಮಾಗಿಯ ಬಿಸಿಲು, ಅಂಗಕ್ಕೆ ಹಿತವಾಗಿತ್ತು. ಮಧ್ಯಾಹ್ನದ ಬಿಸಿಲು, ಅಂಗಕ್ಕೆ ಕಠಿಣವಾಯಿತ್ತು. ಮೊದಲಲ್ಲಿ ಲಿಂಗಭಕ್ತಿ ಹಿತವಾಯಿತ್ತು. ಕಡೆಯಲ್ಲಿ ಜಂಗಮ ಭಕ್ತಿಕಠಿಣವಾಯಿತ್ತು ಇಮ

ಕಾರಣ ಕೂಡಲಸಂಗಮದೇವನವರ ಬಲ್ಲನಾಗಿ ಒಲ್ಲನಯ್ಯ

೯೯. ಹಸಿದು ಬಂದ ಗಂಡಂಗೆ ಉಣಲಿಕ್ಕದೆ, ಬಡವಾದನೆಂದು ಮರುಗುವ ಸತಿಯ ಸ್ನೇಹದಂತೆ, ಬಂದುದನರಿಯಳು, ಇದ್ದುದ ಸವಿಯಳು. ದುಃಖವಿಲ್ಲದ ಅಕ್ಕೆ ಹಗರಣಿಗನ ತೆರನಂತೆ, ಕೂಡಲಸಂಗಮದೇವಾ.

೧೦೦. ಬರಬರಭಕ್ತಿ ಅರೆಯಾಯಿತ್ತು ಕಾಣಿರಣ್ಣಾ! ಮೊದಲು ದಿನ ಹಣೆ ಮುಟ್ಟಿ, ಮರುದಿನ ಕೈಮುಟ್ಟಿ, ಮೂರೆಂಬುದಿನಕ್ಕೆ ತೂಗಡಿಕೆ ಕಾಣಿರಣ್ಣಾ ಹಿಡಿದು ಬಿಡದಿದ್ದರೆ, ಕಡೆಗೆ ಚಾಚುವ ಅಲ್ಲದಿದ್ದರೆ ನಡುನೀರಲ್ಲದ್ದುವ ನಮ್ಮ ಕೂಡಲಸಂಗಮದೇವಾ.

೧೦೧. ಬಿದಿರ ಅಂದಣವಕ್ಕು. ಬಿದಿರಸತ್ತಿಗೆಯಕ್ಕು. ಬಿದಿರಲ್ಲಿ ಗುಡಿಗುಡಾರವಕ್ಕು ಬಿದಿರಲ್ಲಿ ಸಕಲಸಂಪದವಕ್ಕು ಎಲ್ಲಬಿದಿರೆಂಬೋ, ಬಿದಿರೆಂಬೋ ಬಿದಿರದವರ ಮೆಚ್ಚನಮ್ಮ ಕೂಡಲಸಂಗಮದೇವಾ.

೧೦೨. ಉಂಬಾಗಳಿಲ್ಲೆನ್ನ, ಉಡುವಾಗಳಿಲ್ಲೆನ್ನ, ಬಂಧುಗಳುಬಂದಾಗಳಿಲ್ಲೆನ್ನ, ಲಿಂಗಕ್ಕೆ ಇಲ್ಲೆಂಬ, ಜಂಗಮಕ್ಕೆ ಇಲ್ಲೆಂಬ, ಬಂದ ಪುರಾತನರಿಗಿಲ್ಲೆಂಬ, ಸಾವಾಗ ದೇಹವ ದೇಗುಲಕ್ಕೆ ಒಯ್ಯೆಂಬ. ದೇವರಿಗೆ ಹೆಣ ಬಿಟ್ಟಿಯ ಹೇಳಿತ್ತೆ ಕೂಡಲಂಗಮದೇವಾ

೧೦೩. ಪಾಪಿಯಧನ ಪ್ರಾಯಶ್ಚಿತ್ತಕ್ಕಲ್ಲದೆ, ಸತ್ಪಾತ್ರಕ್ಕೆ ಸಲ್ಲದಯ್ಯ! ನಾಯಹಾಲು ನಾಯಿಂಗಲ್ಲದೆ, ಪಂಚಾಮೃತಕ್ಕೆ ಸಲ್ಲದಯ್ಯ! ನಮ್ಮ ಕೂಡಲಸಂಗನ ಶರಣರಿಗಲ್ಲದೆ, ಮಾಡುವ ಅರ್ಥವ್ಯರ್ಥ ಕಂಡಯ್ಯ.

೧೦೪. ಬಲಿಯಭೂಮಿ, ಕರ್ಣನ ಕವಚ, ಖಚರನ ಅಸ್ಥಿ; ಶಿಬಿಯಮಾಂಸ ವೃಥಾ ಹೋಯಿತ್ತಲ್ಲಾ! ॥ ಶಿವಭಕ್ತಿ ಮತಿಕ್ರಮ್ಯ । ಯಸ್ತು ದಾನಂಕರೋತಿಸಃ । ನಿಷ್ಫಲಂತ [illegible] ಪ್ರದಾನಂ । ರೌರವಂನರಕಂ ವ್ರಜೇತ್ ॥ ಎಂದುದಾಗಿ ಕೂಡಲಸಂಗನ [illegible]ರಣರ ನೆರಿಯದೆ ಕೀರ್ತಿವಾರ್ತೆಗಾಗಿ ಮಾಡಿದವನ ಧನವು ವೃಥಾಹೋಯಿತ್ತಲ್ಲಾ.

೧೦೫. ಹತ್ತು ಮತ್ತರ ಭೂಮಿ, ಒತ್ತುವ ಹಯನ, ನಂದಾದೀವಿಗೆಯ ನಡಸಿಹೆನೆಂಬವರಮುಖವನೋಡಲಾಗದು. ಅವರ ನುಡಿಯಕೇಳಲಾಗದು. ಅಂಡಜ, ಸ್ವೇದಜ, ಉದ್ಭಿಜ, ಜರಾಯುಜವೆಂ

ಬಪ್ರಾಣಿಗಳಿಗೆ ಭವಿತವ್ಯವ ಕೊಟ್ಟವರಾರೋ ? ಒಡೆಯರಿಗೆ ಉಂಡಿಗೆ ಯಮುರಿದಿಕ್ಕಿದಂತೆ ಎನ್ನಿಂದಲೇ ಆಯಿತ್ತು , ಎನ್ನಿಂದಲೇ ಹೋಯಿತ್ತೆಂಬ ವನಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಬನೆ ಕೂಡಲಸಂಗಮ ದೇವಾ ?

೧೦೬. ಅನವರತ ಮಾಡಿಹೆನೆಂದು , ಉಪ್ಪರಗುಡಿಯ ಕಟ್ಟಿ ಮಾಡುವ ಭಕ್ತನ ಮನೆಯದು ಅಂದಣಗಿತ್ತಿಯಮನೆ ಸರ್ವಜೀವದ ಯಾಪರನೆಂದು ಭೂತದೈವಕ್ಕಿಕ್ಕುವನ ಮನೆ ಸುಯಿಧಾನದ ಕೇಡು ಸೂಳೆಯಮಗ ಮಾಳವಿಯ ಮಾಡಿದರೆ , ತಾಯಹೆಸರಾಯಿತ್ತಲ್ಲದೆ, ತಂದೆಯಹೆಸರಿಲ್ಲ ಕೂಡಲಸಂಗಮದೇವಾ

೧೦೭. ಕಾಲಾಗ್ನಿ ರುದ್ರನ ಮೋಹಾಪವನರಿಯದವರು , ಕಾಳು ಬೆಳೆ ಎನುತಿಪ್ಪರಯ್ಯ ಕಾನನದೊಳಗಣ ಕಿಚ್ಚು ಬಾಳುವೆಯಾಗಿ ಮಿಕ್ಕೊಡೆ ಒರಲುವ ಬಳ್ಳುವಿನಂತಿಪ್ಪರಯ್ಯ ಮನುಜರು ನರವಿಂಧ್ಯ ದೊಳಗೆ ತತ್ಕಾಲಪ್ರೇಮವನರಿಯದೆ , ವಿಭವಕ್ಕೆ ಮಾಡಿದ ಭಕ್ತಿ , ಇರುಳು ಸತ್ತಿಗೆಯ ಹಿಡಿಸಿಕೊಂಡಂತೆ ಕೂಡಲಸಂಗಮದೇವಾ

೧೦೮. ಹರಿಸಿ ಮಾಡುವದು ಹರಿಕೆಯದಂಡ ! ನೆರಹಿಮಾಡುವದು ಡಂಭಿನ ಭಕ್ತಿ . ಹರಿಸಬೇಡ, ನೆರಿಸಬೇಡ ಬಂದಬರವನರಿದರೆ, ಕೂಡಿ ಕೊಂಡಿಪ್ಪ ನಮ್ಮ ಕೂಡಲಸಂಗಮದೇವಾ

೧೦೯. ಓಡಲಾರದ ಮೃಗವು ಸೊಣಗಂಗೆ ಮಾಂಸವ ಕೊಡು ವಂತೆ , ಮಾಡಲಾಗದು ಭಕ್ತ , ಕೊಳಲಾಗದು ಜಂಗಮ . ಹಿರಿ ಯರು ನರಮಾಂಸವ ಭುಂಜಿಸುವರೆ, ತನು ಉಕ್ಕಿ ಮನಉಕ್ಕಿ ಮಾಡ ಬೇಕು , ಭಕ್ತಿಯ ಮಾಡಿಸಿಕೊಳ್ಳಬೇಕು ಜಂಗಮ , ಕೂಡಲಸಂಗಮ ದೇವಾ

೧೧೦. ಬಂದುದ ಕೈಕೊಳ್ಳ ಬಲ್ಲರೆ ನೇಮ ಇದ್ದುದ ವಂಚನೆಯ ಮಾಡದಿದ್ದರೆ ಅದುನೇಮ ನಡೆದು ತಪ್ಪಿದರೆ ಅದುನೇಮ. ನುಡಿದು ಹುಸಿಯದಿದ್ದರೆ ಅದುನೇಮ . ನಮ್ಮ ಕೂಡಲಸಂಗನ ಶರಣರು ಬಂದರೆ ಒಡೆಯರಿಗೆ ಒಡವೆಯನರ್ಪಿಸುವದು ಅದು ಮುನ್ನ ನೇಮ .

೧೧೧. ಹಾಲನೇಮ , ಹಾಲಕೆನೆಯನೇಮ , ಕೆನೆಯು ತಪ್ಪಿದಬ ಳಿಕ ಕಿಚ್ಚಡಿಯನೇಮ , ಬೆಣ್ಣೆಯನೇಮ , ಬೆಲ್ಲದನೇಮ ಅಂಬಿಲಿಯ

ನ್ನೇಮುಪವರನಾರನೂಕಾಣೆ , ಕೂಡಲಸಂಗಮದೇವರಲ್ಲಿ ಅಂಬಲಿಯನೇ ಸುದವ ಮಾದಾರ ಚನ್ನಯ್ಯ

೧೧೨. ಮಾಡಿ, ಮಾಡಿ, ಕೆಟ್ಟರು ಮನವಿಲ್ಲದೆ ನೀಡಿನೀಡಿ ಕೆಟ್ಟರು ನಿಜವಿಲ್ಲದೆ . ಮಾಡುವನೀಡುವ ನಿಜಗುಣವುಳ್ಳರೆ , ಕೂಡಿಕೊಂಡಿಪ್ಪ ನಮ್ಮ ಕೂಡಲಸಂಗಮದೇವಾ

೧೧೩. ಮಾಡಿದೆನೆಂಬುದು ಮನದಲ್ಲಿ ಹೊಳೆದರೆ , ಏಡಿಸಿ ಕಾಡಿತ್ತು ಶಿವನ ಡಂಗುರ ಮಾಡಿದೆನೆನ್ನದಿರಾ ಲಿಂಗಕ್ಕೆ ಮಾಡಿದೆನೆನ್ನದಿರಾ ಜಂಗಮಕ್ಕೆ ಮಾಡಿದೆನೆಂಬುದು ಮನದಲ್ಲಿ ಇಲ್ಲದಿದ್ದರೆ , ಬೇಡಿದ್ದನೀವ ಕೂಡಲಸಂಗಮದೇವಾ

೧೧೪. ಕಳಬೇಡ , ಕೊಲಬೇಡ , ಹುಸಿಯ ನುಡಿಯಲುಬೇಡ, ಮುನಿಯಬೇಡ , ಅನ್ಯರಿಗೆ ಅಸಹ್ಯ ಬೇಡ, ತನ್ನ ಬಣ್ಣಿಸಬೇಡ , ಇದಿರ ಹಳಿಯಲುಬೇಡ ಇದೇ ಅಂತರಂಗ ಶುದ್ಧಿ , ಇದೇ ಬಹಿರಂಗ ಶುದ್ಧಿ , ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ

೧೧೫. ಕೆಡೆ ನಡೆಯದೆ , ಕೆಡೆ ನುಡಿಯದೆ , ಅನ್ಯರ ಪ್ರತಿಪಾದಿಸದೆ ಇದ್ದಡೆ , ಏನ ಕೊಡನಯ್ಯ ಲಿಂಗವು ? ತಾನೇನ ಬೇಡಿದ್ದನೀವನಾಗಿ , ನಂಬಿಕೆಯುಳ್ಳ ಶಿವಭಕ್ತಂಗೆ ಇದೇ ದಿಬ್ಯ ಕೂಡಲಸಂಗಮದೇವಾ

೧೧೬. ಸ್ವಾಮಿಭೃತ್ಯ ಸಂಬಂಧಕ್ಕೆ ಆವುದು ಪಥವೆಂದರೆ , ದಿಟವನುಡಿವುದು , ನುಡಿದಂತೆ ನಡೆವುದು ನುಡಿದು ಹುಸಿವ , ನಡೆದು ತಪ್ಪುವ ಪ್ರಪಂಚಿಯನೊಲ್ಲ ಕೂಡಲಸಂಗಮದೇವಾ

೧೧೭. ಸತ್ಯವುಳ್ಳ ಭಂಡವ ತುಂಬುವುದಯ್ಯ ! ಸುಯಿಧಾನವಯ್ಯ ! ಸುಯಿಧಾನವಯ್ಯಾ ! ಮನ ಘಾರಿವಟ್ಟಲು ಕೂಡಲಸಂಗನ ಶರಣರು ಹಿಡಿದ ಭಂಡವನು ಆರಾವಡಾಗಲಿ ಹೋಗಲೀಯರಯ್ಯಾ

೧೧೮. ದೇವಲೋಕ , ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರಣ್ಣಾ ಸತ್ಯವ ನುಡಿವುದೇ ದೇವಲೋಕ ಮಿಥ್ಯವ ನುಡಿವುದೇ ಮರ್ತ್ಯಲೋಕ ಆಚಾರವೇ ಸ್ವರ್ಗ , ಅನಾಚಾರವೇ ನರಕ ಇವಕ್ಕೆ ನೀವೇ ಪ್ರಮಾಣು ಕೂಡಲಸಂಗಮದೇವಾ .

೧೧೯ ಪುಣ್ಯ ಪಾಪಂಗಳೆಂಬುವು ತಮ್ಮ ಇಷ್ಟವು ಕಂಡಿರಯ್ಯ !

ಅಯ್ಯಾ, ಎಂದರೆ ಸ್ವರ್ಗ ಎಲವೋ ಎಂದರೆ ನರಕ ದೇವಭಕ್ತ, ಜಯುಜಯು, ಎಂಬ ನುಡಿಯೊಳಗೆ ಕೈಲಾಸವೈದುದು ಕೂಡಲಸಂಗಮದೇವಾ

೧೨೦. ಬಂದಿರಿ, ಹದುಳವಿದ್ದಿರೆಂದರೆ, ನಿಮ್ಮ ವೈಸಿರಿ ಹಾರಿ ಹೋಹುದೇ? ಕುಳ್ಳಿರೆಂದರೆ, ನೆಲ ಉರುಳಿ ಹೋಹುದೇ? ಒಡನೆ ನುಡಿದರೆ, ಶಿರಹೊಟ್ಟೆಯೊಡೆವುದೇ? ಕೊಡಲಿಲ್ಲದಿದ್ದರೆ, ಒಂದು ಗುಣವಿಲ್ಲದಿದ್ದರೆ, ಮೂಗ ಕೊಯ್ಯದೆ ಮಾಬನೇ ಕೂಡಲಸಂಗಯ್ಯ?

೧೨೧. ಸಂಸಾರದಲ್ಲಿ ಹುಟ್ಟಿ ಮತ್ತೊಂದ ಬಯಸಲೇಕಯ್ಯ? ನಗುವುದು, ನುಡಿವುದು ಶಿವಭಕ್ತರೊಡನೆ ಸುಮ್ಮನೆ ಹಮ್ಮು ಬಿಮ್ಮುಗಿರಲೇಕಯ್ಯ? ॥ಶ್ಲೋ॥ ಅಭ್ಯಾಸಸ್ಯ ವಿಹೀನಸ್ಯ। ತಸ್ಯಜನ್ಮ ನಿರರ್ಥಕಂ। ಗುರಾವಪಿಸಮಂ ಹಾಸ್ಯಂ। ಕರ್ತವ್ಯಂ ಕುಟಿಲಂ ವಿನಾ॥ ಎಂದುದಾಗಿ, ನಮ್ಮ ಕೂಡಲಸಂಗನ ಶರಣರೊಡನೆ ಮನದೆರೆದು ಮಾತನಾಡುವುದಯ್ಯಾ

೧೨೨. ಭಕ್ತಿ ಎಂಬ ನಿಧಾನವ ಸಾಧಿಸುವರೆ, ಶಿವಪ್ರೇಮವೆಂಬ ಅಂಜನವ ಹಚ್ಚಿಕೊಂಬುದು. ಭಕ್ತನಾದವಂಗೆ ಇದೇ ಪಥವಾಗಿರಬೇಕು. ನಮ್ಮ ಕೂಡಲಸಂಗನ ಶರಣರ ಅನುಭಾವವೇ ರಾಜವೈದ್ಯ.

೧೨೩. ಕಂಡ ಭಕ್ತಂಗೆ ಕೈಮುಗಿವಾತನೇ ಭಕ್ತ ಮೃದುವಚನವೇ ಸಕಲ ಜಪಂಗಳಯ್ಯಾ! ಮೃದು ವಚನವೇ ಸಕಲ ತಪಂಗಳಯ್ಯ. ಸದುವಿನಯವೇ ಸದಾಶಿವನ ಒಲುಮೆಯಯ್ಯ! ಕೂಡಲಸಂಗಮದೇವಯ್ಯನಂತಲ್ಲದೊಲ್ಲನಯ್ಯ

೧೨೪. ಇತ್ತಬಾರಯ್ಯ, ಇತ್ತಬಾರಯ್ಯ, ಎಂದು ಭಕ್ತರೆಲ್ಲರು ಕೂರ್ತು ಹತ್ತೆ ಕರೆವುತ್ತಿರಲು, ಮತ್ತೆಕೆಲಕ್ಕೆ ಹೋಗಿ, ಶರಣೆಂದು ಹಸ್ತಬಾಯನೆ ಮುಚ್ಚಿ, ಕಿರಿದಾಗಿ ಭೃತ್ಯಾಚಾರವ ನುಡಿದು, ವಿನಯ ಧ್ಯಾನವುಳ್ಳರೆ, ಎತ್ತಿಕೊಂಬನಯ್ಯ, ಕೂಡಲಸಂಗಮದೇವರು, ಪ್ರಮಥರ ಮುಂದೆ

೧೨೫. ಭಕ್ತ ಭಕ್ತನ ಮನೆಗೆ ಬಂದರೆ, ಭೃತ್ಯಾಚಾರವ ಮಾಡಬೇಕು ಕರ್ತನಾಗಿ ಕಾಲ ತೊಳೆಯಿಸಿಕೊಂಡರೆ, ಹಿಂದೆ ಮಾಡಿದ ಭಕ್ತಿಗೆ ಹಾನಿ ಲಕ್ಷ ಗಾವುದ ದಾರಿಯು ಹೋಗಿ, ಭಕ್ತನು ಭಕ್ತನ ಕಾಂ

ಬುದು ಸದಾಚಾರ ಅಲ್ಲಿ ಕೂಡಿ ದಾಸೋಹವ ಮಾಡಿದರೆ, ಕೂಡಿಕೊ್ಳಂ ಬನು ನಮ್ಮ ಕೂಡಲಸಂಗಮದೇವಯ್ಯ

೧೨೬. ದಯವಿಲ್ಲದ ಧರ್ಮವದಾವುದಯ್ಯ? ದಯವೇ ಬೇಕು, ಸಕಲ ಪ್ರಾಣಿಗಳೆಲ್ಲರಲ್ಲಿ ದಯವೇ ಧರ್ಮದ ಮೂಲವಯ್ಯ! ಕೂಡ ಲಸಂಗಯ್ಯನಂತಲ್ಲದೊಲ್ಲನಯ್ಯ

೧೨೭. ತನಗೆ ಮುನಿವರಿಗೆ ತಾ ಮುನಿಯಲೇಕಯ್ಯ! ಅವರಿಗಾ ವಡೆಗೇನು? ತನಗಾದಡೆಗೇನು? ತನುವಿನ ಕೋಪ ತನ್ನ ಹಿರಿ ಯತನದ ಕೇಡು ಮನದಕೋಪ. ತನ್ನ ಅರುವಿನ ಕೇಡು ಮನೆ ಯೊಳಗಣಕಿಚ್ಚು ಮನೆಯ ಸುಟ್ಟಲ್ಲದೆ, ನೆರೆಮನೆ ಬೇವುದೇ, ಕೂಡ ಲಸಂಗಮದೇವಾ?

೧೨೮. ಅರ್ಥಕ್ಕೆ ತಪ್ಪಿದರೇನು? ಪ್ರಾಣಕ್ಕೆ ತಪ್ಪಿದರೇನು? ಅಭಿ ಮಾನಕ್ಕೆ ತಪ್ಪಿದರೇನು? ಶರಣರು ಶರಣರಲ್ಲಿ ಗುಣವನರಸುವರೆ? ಕೂಡಲಸಂಗನಶರಣರು ನೊಂದರೆ, ಸೈರಿಸುವದು

## ಭಕ್ತನ ಭಕ್ತಿ.

೧. ಕಾಣದ ಠಾವಿನಲ್ಲಿ ಜರಿದರೆ, ಕೇಳಿ ಪರಿಣಾಮಿಸಬೇಕು. ಅದೇನುಕಾರಣ? ಕೊಳ್ಳದೆ ಕೊಡದೆ ಅವರಿಗೆ ಸಂತೋಷವಹುದಾಗಿ. ಎನ್ನಮನದ ತದ್ವೇಷವಳಿದು, ನಿಮ್ಮ ಶರಣರಿಗೆ ಶರಣೆಂಬುದ ಕರು ಣಿಸು ಕೂಡಲಸಂಗಮದೇವಾ

೨. ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯ! ಒರೆಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯ! ಕಡಿಹಕ್ಕೆ ಬಡಿಹಕ್ಕೆ ತಂದೆ ನ್ನ ಕಡಿಯಾಣಿಯ ಮಾಡಿ, ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲುಹುವದಯ್ಯಾ ಕೂಡಲಸಂಗಮದೇವಾ

೩. ॥ಶ್ಲೋಕ॥ ವೇದಾದಿ ನಾಮ ನಿರ್ನ್ನಾಮ। ಮಹತ್ತತ್ವಂಮದೀ ಶ್ವರಂ। ಗುರೂಕ್ತ ಮನ್ತ್ರ ಮಾರ್ಗೇಣ। ಇಷ್ಟ ಲಿಂಗಂತು ಶಾಂಕರೀ॥ ಎಂದುದಾಗಿ, ವಚನಸಾತಕವೆನ್ನ, ವಚನದೋಷಗಳೆನ್ನ ಕಾಡಿಕಾಡಿ ಕೆಡಿ ಸಿಹವೆನ್ನ, ಕೂಡಲಸಂಗಮದೇವಾ ಅಹನೆಂಬ ಅಹಂಕಾರವೆನ್ನ

೪. ಅವರಿವರೆನ್ನದೆ, ಚರಣಕ್ಕೆರಗಲು, ಅಯ್ಯ, ತನುವೇರಿ ಬೆಬ್ಬನೆ ಬೆರೆವೆ ನಾನು ಕೆಚ್ಚು ಬೆಳೆಯಿತಯ್ಯ! ಆ ಕೆಚ್ಚಿಂಗೆ ಕಿಚ್ಚನಿಕ್ಕಿ ಸುಟ್ಟು, ಬೆಳ್ಳುಕನ ಮಾಡಿ, ಬೆಳಗಾರದಂತೆ ಮಾಡು ಕೂಡಲಸಂಗಮ ದೇವಾ.

೫. ನಡೆಯಕಂಡು ನಂಬೆ ನುಡಿಯೆಲ್ಲ ಉಪಚಾರ ಮಿಗಿಲೊಂದು ಮಾತು ಬಂದರೆ, ಸೈರಿಸಲಾರೆನು ತುಯ್ಯಲಾದೊಡೆ, ಉಂಬೆ. ಹುಯ್ಯಲಾದೊಡೆ ಓಡುವೆ ಆಳು ಬೇಡಿದರೆ, ಆಳ್ದನೇನನೀವನಯ್ಯ? ಆಳಾಗಿ ಹೊಕ್ಕು, ಅರಸಾಗಿ ನಡೆದರೆ, ಅಳಿಗೊಂಡಿತ್ತೆನ್ನ ಕೂಡಲಸಂಗನ ಭಕ್ತಿ.

೬. ಇರಿಸಿಕೊಂಡು ಭಕ್ತರಾದರೆನ್ನುವರು ಕೊರಿಸಿಕೊಂಡು ಭಕ್ತರಾದರೆನ್ನುವರು ಜರಿಸಿಕೊಂಡು ಭಕ್ತರಾದರೆನ್ನುವರು ಕೂಡಲ ಸಂಗನ ಶರಣರಿಗೆ ಮುನಿಸತಾಳಿ ಎನ್ನ ಭಕ್ತಿ ಅರೆಯಾಯಿತ್ತು

೭. ಮನಕ್ಕೆ ನಾಚದ ವಚನ, ವಚನಕ್ಕೆ ನಾಚದ ಮನ ಕುಂದು ಹೆಚ್ಚು ನುಡಿವೆ. ಒಂದು ಮಾತಿನ ಗೆಲಕ್ಕೆ ಹಿಡಿದು ಹೋರುವೆ. ಕೂಡಲಸಂಗನ ಶರಣರು ಎನ್ನಾಳ್ದರೆಂಬೆ

೮. ಇಲ್ಲವೆಯ ಮೇಲೆ ಕಂಬೊಡೆದಂತೆ, ಬಡಮನ ವೆನ್ನ ಕಾಡಿಹುದಯ್ಯ ಮತಿ ಇಲ್ಲದ ಮರುಳ ನಾನಯ್ಯ! ಭಕ್ತಿ ಇಲ್ಲದ ಬಡವ ನಾನಯ್ಯ! ನಿಮ್ಮ ನೆನಹು ಇಲ್ಲದ ನಿರ್ಭಾಗ್ಯನಾದೆ, ಎನಗೆ ಕರುಣಿಸು ಕೂಡಲಸಂಗಮದೇವಾ

೯. ಲಿಂಗವ ನೆಚ್ಚದೀಮನವು ಜಂಗಮವ ನೆಚ್ಚದೀಮನವು. ಕೋಪರ ಕಂಡರೆ, ಒಲ್ಲದೀಮನವು. ಈ ಮನವ ಭ್ರಮೆಯನೆಲ್ಲವ ಮರೆ
ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸು ಕೂಡಲಸಂಗಮದೇವಾ.

೧೦. ಅಶನಕುಂದದು, ವ್ಯಸನ ಮಾಣದು, ಅರ್ಥವಡಗದು, ವ್ಯವಹಾರ ಮಾಣದು, ಮಜ್ಜನಕ್ಕೆ ರೆವೆನಯ್ಯ! ಕಾಯವಿಕಾರಿ ಯಾನು, ಮಜ್ಜನಕ್ಕೆರೆವೆನಯ್ಯ! ಜೀವವಿಕಾರಿಯಾನು, ಮಜ್ಜನಕ್ಕೆರೆವೆನಯ್ಯಾ! ಶರಣನಲ್ಲ ಲಿಂಗೈಕ್ಯನಲ್ಲ ಕೂಡಲಸಂಗಮದೇವರಲ್ಲಿ ಅಂತರಾಭ್ಯಂತರ ನಾನಯ್ಯಾ

೧೧. ಕುಧರವನೇಸುಕಾಲ ತೊಳೆದರೆಯು ಕೆಸರು ಮಾಬುದೇ?

ಎನ್ನ ಕಾಯದಲುಳ್ಳ ಅವಗುಣವ ಕಳೆದು , ಕೃಪೆಯ ಮಾಡಯ್ಯ! ಕಂಬ ಳಿಯಲ್ಲಿ ಕಣಕವ ನಾದಿದಂತೆ , ಕಾಣಿರೆ ಎನ್ನ ಮನ . ಕೂಡಲಸಂಗಮ ದೇವ , ನಿಮಗೆ ಶರಣೆಂದು ಶುದ್ಧ ಕಾಣಯ್ಯ .

೧೨. ಕಾಮಧೇನು ನಿಮ್ಮ ಸಾರಿರಲು , ಪರರ ಬೇಡಲಾರೆನಯ್ಯಾ! ನಿಮ್ಮ ಪೂಜಿಸಿ ಭವಬಂಧನ ಬಿಡದೇಕಯ್ಯಾ ? ಹಿಂದಣ ಜನ್ಮದ ಚಿನ್ಹ ಬಿಡದನ್ನಕ್ಕರ , ನಿಮ್ಮ ಪೂಜಿಸುನೆನಯ್ಯ ! ಎನ್ನ ಮನದ ಅವಗುಣವ ಕಳೆದು ನಿಮ್ಮ ಶರಣರಿಗೆ ಶರಣೆಂಬುದನು ಕರುಣಿಸು ಕೂಡಲಸಂಗಮ ದೇವಾ

೧೩. ದುರ್ವ್ಯಸನಿ , ದುರಾಚಾರಿ ಎಂದೆನಿಸದಿರಯ್ಯಾ ! " ಅವಶ್ಯ ಮನುಭೋಕ್ತವ್ಯಂ " ಎಂದೆನಿಸದಿರಯ್ಯ ! ಎನ್ನ ಲಿಂಗವ್ಯಸನಿ ಜಂಗಮ ಪ್ರೇಮಿ ಎಂವೆನಿಸಯ್ಯಾ ? ಕೂಡಲಸಂಗಮದೇವಾ , ಸೆರೆಗೊಡ್ಡಿ ಬೇಡು ವೆನು

೧೪. ಧೃತಿಗೆಟ್ಟು ಅನ್ಯರ ಬೇಡದಂತೆ , ಮತಿಗೆಟ್ಟು , ಪರರ ಹೊಗಳದಂತೆ , ಪರಸತಿಯರ ರತಿಗೆ ಮನವೆಳಿಸದಂತೆ , ಶಿವಪಥ ಒಲ್ಲ ದವರೊಡನಾಡದಂತೆ , ಅನ್ಯಜಾತಿಯ ಸಂಗವ ಮಾಡದಂತೆ , ಎನ್ನಪ ರಿಪಾಲಿಸು ಕೂಡಲಸಂಗಮದೇವಾ .

೧೫. ಮತ್ತೊಂದ ಕಾಣದೆ , ಮತ್ತೊಂದಕೇಳದೆ , ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಿಸದಂತಿರಿಸಯ್ಯಾ , ಕೂಡಲಸಂಗಮದೇ ವಾ .

೧೬. ಮತಿಮಾಂದ್ಯ ನಾಗಿ ಗತಿಯ ಕಾಣದೆಇದ್ದೆನಯ್ಯ ! ಹುಟ್ಟು ಗುರುಡನ ಕೈಯ್ಯಕೋಲು ಕೊಟ್ಟು ನಡಿಸುವಂತೆ , ನಡಿಸಯ್ಯ ಎನ್ನ ನಿಮ್ಮಚ್ಚ ಶರಣರ ಒಕ್ಕುದ ನಚ್ಚಿಸು ಮಚ್ಚಿಸು ಕೂಡಲಸಂಗಮದೇವಾ.

೧೭. ಕಾಣದುದನೆಲ್ಲವ ಕಾಣಲಾರೆ ನೋಡಾ ! ಕೇಳದುದ ನೆಲ್ಲ ವ ಕೇಳಲಾರೆನಯ್ಯ ! ದ್ರೋಹವಿಲ್ಲ ಎಮ್ಮಶಿವನಲ್ಲಿ ಸೀಮೆಯಯ್ಯಾ ! ಒಲೆಯ ಮುಂದಿದ್ದು , ಮಾಡದ ಕನಸ ಕಾಂಬುವರನೊಲ್ಲನಯ್ಯ ಕೂಡಲ ಸಂಗಮದೇವಾ .

೧೮. ಕಾಣಬಹುದೆ ಪರುಷದಗಿರಿಯಂಧಕಂಗೆ ? ಅರಿಯಬಹು ದೆ ರಸದ ಭಾವಿ ನಿರ್ಭಾಗ್ಯಂಗೆ ? ತೆಗೆಯಬಹುದೆ ಕಡವರವ ದರಿದ್ರಂಗೆ?

ಕರೆಯಬಹುದೆ ಕಾಮಧೇನುವಶುದ್ಧಂಗೆ ? ಹೊನ್ನಹುಳುವ ಕಂಡು , ನರಿ ತನ್ನ ಬಾಲವ ಹುಣ್ಣುಮಾಡಿಕೊಂಡರೆ , ಹೋಲಬಹುದೆ ? ಎನ್ನೊಡೆಯ ಕೂಡಲಸಂಗನ ಶರಣರನು ಪುಣ್ಯವಿಲ್ಲದೆ ಕಾಣಬಹುದೆ ?

೧೯ ಯಾತಕ್ಕೆ ನಿಮ್ಮ ದೇವರೆಂದರಿಪೆನು ? ಇಂತಾಗಿ ನೀವೆನ್ನ ನಾರೆಂದು ಅರಿಯರಿ ಸಂಬಲರಿಯೆ, ನಂಬಿಸಲರಿಯೆ. ಒಲಿಯಲರಿಯೆ, ಒಲಿಸಲರಿಯೆ. || ಶ್ಲೋ. || ಯಥಾಭಾವಸ್ತಥಾಲಿಂಗಂ ಸತ್ಯಂಸತ್ಯಂನ ಸಂಶಯಃ॥ ಯಥಾಭಕ್ತಿ ಸ್ತಥಾಸಿದ್ಧಿಃ ಸತ್ಯಂಸತ್ಯಂನಸಂಶಯಃ॥ ಎಂದುದಾಗಿ ಕೂಡಲಸಂಗಮದೇವಯ್ಯ ಕೇಳಯ್ಯ ! ಕೋಟಿ ಕೋಟಿ ವರುಷ ಕೋಟಲೆಗೊಂಡೆನಯ್ಯ

೨೦. ಅರಿಸಿನವನೇ ಮಿಂದು, ಹೊಂದೊಡಿಗೆಯನೆ ತೊಟ್ಟು, ಪುರುಷನ ಒಲವಿಲ್ಲದ ಲಲನೆಯಂತೆ ನಾನಿದ್ದೆನಯ್ಯಾ ! ವಿಭೂತಿಯನೆಧರಿಸಿ, ರುದ್ರಾಕ್ಷಿಯನೆ ಕಟ್ಟಿ , ಶಿವ, ನಿಮ್ಮ ಒಲವಿಲ್ಲದಂತೆ ಆಗಿದ್ದೆನಯ್ಯಾ! ಕೆಟ್ಟು ಬಾಳುವರಿಲ್ಲ ಎಮ್ಮವರ ಕುಲದಲ್ಲಿ. ನೀನೊಲಿದಂತೆ ಸಲಹಯ್ಯ , ಕೂಡಲಸಂಗಮದೇವಾ.

೨೧. ಉದಯಾಸ್ತಮಾನವೆನ್ನ ಬೆಂದ ಬಸುರಿಂಗೆ, ಕುದಿವೆನಲ್ಲದೆ, ನಿಮ್ಮ ನೆನೆಯಲು ತರಹಿಲ್ಲವಯ್ಯ ! ಎಂತೋ ಲಿಂಗತಂದೆ , ಎಂತಯ್ಯ ! ಎನ್ನ ಪೂರ್ವಲಿಖಿತ ಬೆರಣೆಯನಾಯಲೊಲ್ಲದೆ , ಅಟ್ಟುಣ್ಣ ತೆರಹಿಲ್ಲೆನಗೆ . ನೀಕರುಣಿಸು ಕೂಡಲಸಂಗಮದೇವಾ .

೨೨. ತಾಮಸ ಮುಸುಕಿ , ಕಂಗಳ ಕೆಡಿಸಿತ್ತೆನ್ನಭಕ್ತಿ ಕಾಮವೆಂಬ ಅಗ್ನಿಯಲ್ಲಿ ಮುರಿದಿಕ್ಕಿತ್ತೆನ್ನಭಕ್ತಿ ಉದರಕ್ಕೆ ಕುದಿಕುದಿದು ಮುಂದುಗೆಡಿಸಿತ್ತೆನ್ನಭಕ್ತಿ ಇದಿರನಾಶ್ರಯಿಸಿ ಹೋಯಿತ್ತೆನ್ನ ಭಕ್ತಿ ಹೆಣ್ಣಮೂಳ ನಾನು ಕೂಡಲಸಂಗಮದೇವರಲ್ಲಿ ಕ್ಷಣ ಹದುಳವಿರದೆ ಬಾಯ ಟೊಣೆದು **ಹೋಯಿತ್ತೆನ್ನಭಕ್ತಿ**

೨೩ ಏನಿದ್ದರೇನಿದ್ದರೊಲ್ಲದು ನಿಮ್ಮನುಭಾವಕ್ಕೆನ್ನ ಮನವು ಡಂಭಕನೆಂಬವ ನಾನು ಕಂಡೆಯ್ಯ ! ಕೂಡಲಸಂಗಮದೇವನ ಪೂಜಿಸಿ, ಮಾನವರಾಸೆ ಬಿಡದಾಗಿ

೨೪. ಬೆಲ್ಲವ ತಿಂದ ಕೋಡಗನಂತೆ, ಸಿಹಿಯ ನೆನೆಯದಿರಾ , ಮನವೇ ಕಬ್ಬುತಿಂದ ನರಿಯಂತೆ ಹಿಂದನೆಣಿಸದಿರಾ ಮನವೇ ಗಗನವ

ನಡರಿದ ಕಾಗೆಯಂತೆ , ದೆಸೆದೆಸೆಗೆ ಹಂಬಲಿಸದಿರಾ , ಮನವೇ ಕೂಡ ಲಸಂಗನ ಶರಣರ ಕಂಡು , ಲಿಂಗವೆಂದು ನಂಬು ಕಂಡ್ಯಾ ಮನವೇ

೨೫. ಒಡೆಯನ ಕಂಡರೆ , ಕಳ್ಳನಾಗದಿರು ಮನವೇ ಭವದ ಬಾಧೆಯ ತಪ್ಪಿಸಿಕೊಂಬುವರೆ , ನೀನು ನಿಯತವಾಗಿ , ಭಯಭರಿತ ನಾಗಿ , ಅಹಂಕಾರಿಯಾಗದೆ ಶರಣೆನ್ನುಮನವೇ ಕೂಡಲಸಂಗನ ಶರಣರಲ್ಲಿ ಭಕ್ತಿಯ ನೂನುವರೆ , ಕಿಂಕರನಾಗಿ ಬದುಕು ಮನವೇ

೨೬ . ಕೋಟ್ಯಾನುಕೋಟಿ ಜಪವ ಮಾಡಿ ಕೋಟಲೆಗೊಳ ಲೇಕೆ ಮನವೇ . ಕಿಂಚಿದ್ಗೀತವನಂತಕೋಟಿ ಜಪ. ಜಪವೆಂಬುದೇಕೆ ಮನವೇ ಕೂಡಲಸಂಗನ ಶರಣರ ಕಂಡು , ಆಡಿ , ಹಾಡಿ , ಬದು ಕು ಮನವೇ

೨೭. ಮನವೇ , ನಿನ್ನ , ಜನ್ಮದ ಪರಿಭವವ ಮರೆದೆಯಲ್ಲಾ , ಮನವೇ . ಲಿಂಗವ ನೆರೆನಂಬು ಕಂಡ್ಯಾ ಮನವೇ ಜಂಗಮವ ನಂಬು ಕಂಡ್ಯಾ ಮನವೇ ಕೂಡಲಸಂಗಮದೇವರ ಬಿಡದೆ ಬೆಂಬತ್ತು , ಕಂಡ್ಯಾ ಮನವೇ

೨೮. ಸುರರ ಬೇಡಿದರಿಲ್ಲ . ನರರ ಬೇಡಿದರಿಲ್ಲ . ಬರಿದೆ ಧೃತಿಗೆ ಡಬೇಡ , ಮನವೇ ಆರನಾದಡೆಯೂ ಬೇಡಿ , ಬೇಡಿ , ಬರಿದೆ ಧೃತಿ ಗೆಡಬೇಡ ಮನವೇ ಕೂಡಸಂಗಮದೇವನಲ್ಲದೆ ಆರಬೇಡಿದರಿಲ್ಲ ಮನವೇ .

೨೯. ಆಡಿ ಅಳುಪದಿರಾ ! ಲೇಸಮಾಡಿ , ಮರುಗದಿರಾ ಎಲೆ ಮನವೇ , ಕೂಡಿ ತಪ್ಪದಿರಾ ! ನಿನ್ನ ಬೇಡಿದವರಿಗೆ ಇಲ್ಲೆನ್ನದಿರು ಕಂಡ್ಯಾ ! ನಾಡಮಾತು ಬೇಡ , ಸೆರೆಗೊಡ್ಡಿ ಬೇಡು ಕೂಡಲಸಂಗನ ಶರಣರ

೩೦. ಹೃದಯದಿ ಕತ್ತುರಿ , ತುದಿ ನಾಲಿಗೆ ಬೆಲ್ಲೆಂಬೋ ! ಆಡಿ ಹೆವೆಂಬೋ , ಹಾಡಿಹೆವೆಂಬೋ ನಿಚ್ಚನಿಚ್ಚ ಶಿವರಾತ್ರಿಯ ಮಾಡಿಹೆ ನೆಂಬೋ ಆನು ನನ್ನಂತೆ , ಮನ ಮನದಂತೆ , ಕೂಡಲಸಂಗಮದೇ ವ , ತಾನು ತನ್ನಂತೆ .

೩೧. ಒಳ್ಳಿಹ ಮೈಲಾರನಲ್ಲಿ ಒಳಗೆಲ್ಲ ಸಣಬು ಹೊರಗಣ ಬಣ್ಣ ವೇ ಕರಲೇಸಾಯಿತ್ತಯ್ಯ ! ಶ್ವಾನನನಿದ್ದೆ ಅಜ್ಞಾನಿಯ ತಪದಂತೆ , ಆಯಿ ತ್ತಯ್ಯಾ ಎನ್ನ ಮತಿ , ಕೂಡಲಸಂಗಮದೇವಾ ,

೩೨. ಲೋಕೋಪಚಾರಕ್ಕೆ ಮಜ್ಜನಕ್ಕೆರೆವೆನಯ್ಯಾ! ಮನದ ತಾಮಸ ಬಿಡದು, ಮನದ ಕಪಟ ಬಿಡದು ಶಿವಶರಣೆಂಬುದು ಅಳವಡದಯ್ಯ! ಎನ್ನ ಮನದಲ್ಲಿ ಎರಡುಳ್ಳನಕ್ಕ ಕೂಡಲಸಂಗಮದೇವರೆಂತೊಲಿವ?

೩೩. ಕೆಲಕ್ಕೆ ಶುದ್ಧನಾದೆನಲ್ಲದೆ, ಮನಕ್ಕೆ ಶುದನಾಗೆನಯ್ಯ! ಕೈಮುಟ್ಟಿ ಪೂಜಿಸುವಡೆ, ಎನ್ನ ಕೈ ಶುದ್ಧಿ ಇಲ್ಲಿವಯ್ಯ! ಮನಮುಟ್ಟಿ ಪೂಜಿಸುವಡೆ, ಎನ್ನ ಮನ ಶುದ್ದವಿಲ್ಲವಯ್ಯ! ಭಾವ ಶುದ್ಧವಾದಡೆ, ಕೂಡಲಸಂಗಮದೆವಯ್ಯನಿತ್ತಬಾ, ಎಂದೆತ್ತಿಕೊಳ್ಳನೇಕಯ್ಯ?

೩೪. ಕುಲಮದಕ್ಕೆ ಹೋರಿ, ಜಂಗಮ ಭೇದವ ಮಾಡುವೆ. ಫಲವೇನು? ನಿತ್ಯ ಲಿಂಗಾರ್ಚನೆ ಪ್ರಾಯಶ್ಚಿತ್ತ ಛಲಮದಕ್ಕೆ ಹೋರಿ, ಲಿಂಗಭೇದವ ಮಾಡುವೆ ಜಂಗುಳಿಯ ಕಾವ ಗೋವಳ ಹಲವು ಪಶುವನಾಡಿಸುವಂತೆ, ತನು ಭಕ್ತನಾಯಿತ್ತು, ಎನ್ನ ಮನಭವಿ, ಕೂಡಲಸಂಗಮದೇವಾ.

೩೫. ಲಿಂಗದಲ್ಲಿ ಕಠಿಣ ಉಂಟೆ? ಜಂಗಮದಲ್ಲಿ ಕುಲ ಉಂಟೆ? ಪ್ರಸಾದದಲ್ಲಿ ಅರುಚಿಯುಂಟೇ? ಈ ತ್ರಿವಿಧದಲ್ಲಿ ಭಾವಭೇದವನರಸುವರೆ, ಕೂಡಲಸಂಗಮದೇವ, ಮನ ಧಾರೆವಟ್ಟಲೆನ್ನ ಭಕ್ತಿ

೩೬. ಲೌಕಿಕರಕಂಡು, ಆಡುವೆ ಹಾಡುವೆ. ತಾರ್ಕಿಕರಕಂಡು, ಆಡುವೆ ಹಾಡುವೆ. ಸಹಜ ಗುಣವೆನ್ನಲ್ಲಿಲ್ಲವಯ್ಯ ನಿಜಭಕ್ತಿ ಎನಗಿಲ್ಲ ತಂದೆ. ಏಕೋಭಾವ ಎನಗುಳ್ಳರೆ, ಯಾಕೆ ನೀಕರುಣಿಸೆಯಯ್ಯ, ಕೂಡಲಸಂಗಮದೇವಾ?

೩೭. ಓತಿ ಬೇಲಿವರಿದಂತೆ, ಎನ್ನಮನವಯ್ಯ. ಹೊತ್ತಿಗೊಂದು ಪರಿಯಪ್ಪ ಗೋಸುಂಬೆಯಂತೆ ಎನ್ನ ಮನವು. ಬಾವಲಬಾಳುವೆಯಂತೆ ಎನ್ನ ಮನವು. ನಡುವಿರುಳಿದ್ದ ಕುರುಡಂಗೆ ಅಗುಸೆಯಲ್ಲಿ ಬೆಳಗಾದಂತೆ, ಎನಗಿಲ್ಲದ ಭಕ್ತಿಯ ಬಯಸಿದರುಂಟೆ ಕೂಡಲಸಂಗಮದೇವಾ?

೩೮. ಸತ್ಯಸಂಬಂಧ ಸ್ವಯವಾದ ಭೃತ್ಯಾಚಾರವೆನಗಿಲ್ಲವಯ್ಯಾ ಅನುದಿನ ನಿಮ್ಮ ನೆನೆಯಲು ತೆರಹಿಲ್ಲವಯ್ಯ ಎನಗೆ. ಕೂಡಲಸಂಗಮದೇವಾ, ಕರುಣಿಸಿ ಕೃಪೆಯ ಮಾಡಯ್ಯ

೩೯. ಶಬ್ದಸಂಭಾಷಣೆಯ ನುಡಿಯ ವರ್ತಿಸಿ ನುಡಿವೆ ತೊಡೆಹದ ಕೆಲಸದ ಬಣ್ಣದಂತೆ, ಕಡಿಹಕ್ಕೆ ಒರೆಗೆ ಬಾರದು ನೋಡಾ! ಎನ್ನ

ಮನದಲೊಂದು , ಹೃದಯದಲೊಂದು , ವಚನದೊಳೊಂದು ನೋಡಾ ! ಕೂಡಲಸಂಗಮದೇವಾ ಆನು ಭಕ್ತನೆಂಬ ಹುಸಿಯ ಮಸಕವನೇನು ಬಣ್ಣಿಸುವೆನಯ್ಯ ?

೪೦ ಹಾಲತೊರೆಗೆ ಬೆಲ್ಲದ ಕೆಸರು , ಸಕ್ಕರೆಯ ಮಳಲು , ತವರಾಜದ ನೊರೆತೆರೆಯಂತೆ ಆದ್ಯರ ವಚನವಿರಲು , ಬೇರೆ ಬಾವಿಯ ತೋಡಿ , ಉಪ್ಪನೀರನುಂಬುವನ ವಿಧಿಯಂತೆ ಆಯಿತ್ತೆನ್ನ ಮತಿ ಕೂಡಲಸಂಗಮದೇವಾ .

೪೧. ಜನ್ಮಹೊಲ್ಲೆಂಬೆನೆ ? ಜನ್ಮವ ಬಿಡಲಿಹೆನು . ಭಕ್ತರೊಲವ ಪಡೆವೆನೆನೆ ? ಭಕ್ತಿಯ ಪಥವನರಿಯೆನು . ಲಿಂಗವೆಂದು ಬಲ್ಲೆನೆ ? ಜಂಗಮವೆಂದು ಕಾಂಬೆನು ನಿಚ್ಚನಿಚ್ಚ ಶಿವರಾತ್ರಿಯ ಮಾಡಬಲ್ಲೆನೆ ? ಕೈಲಾಸವ ಕಾಣಬಲ್ಲೆನು . ಎನ್ನಲ್ಲಿ ನಡೆ ಇಲ್ಲವಾಗಿ, ನಾನು ಭಕ್ತನೆಂತಪ್ಪೆನಯ್ಯ ಕೂಡಲಸಂಗಮದೇವಾ ?

೪೨ ಉಡುವಿನ ಭಾವದಲ್ಲಿ ಹಿಡಿದರೆಮ್ಮವರು . ಉಸಿರುಳ್ಳಿಯಂತೆ ಎನ್ನಿರವು ಬಾವಲ ಬಾಳುವೆಯ ತೆರನಂತೆ , ಹೊತ್ತಾರೆ ಎದ್ದು , ಕುರುಡಂಗೆ ಅಗುಸೆಯಲ್ಲಿ ಅಸ್ತಮಾನವಾದಂತೆ , ಆನುಭಕ್ತಿಯ ಬಯಸಿದರಹುದೆ ಕೂಡಲಸಂಗಮದೇವಾ ?

೪೩. ಬಸಿರ ಬಾಳುವೆಗೆ ನಿಮ್ಮಲ್ಲಿ ಮಸಿಯ ಹೂಸಿ , ನೇರಿಲ ಹಣ್ಣ ಮಾರುವಂತೆ, ಕಾಲಸಾಲ ದಾರಿದ್ರಕ್ಕಂಜಿ ನಿಮ್ಮ ಮರೆ ಹೊಕ್ಕೆನಯ್ಯ ! ಆವುದು ಹುಸಿ ಎಂಬೆನಾವುದು ನಿಜವೆಂಬೆ ? ಇದ ನೀವೇ ಬಲ್ಲಿರಿ ಕೂಡಲಸಂಗಮದೇವಾ , ನಾನು ಉದರ ಪೋಷಕನಯ್ಯಾ .

೪೪. ಮೂಗ ಕಂಡ ಕನಸಿನಂತಾಯಿತ್ತಯ್ಯ ಎನ್ನ ಭಕ್ತಿ ಗುಣವ ಹೇಳಬಾರದಾರಿಗೆಯೂ ಕೇಳಲೆಂತು ಬಾರದು . ಎನ್ನ ಎಗ್ಗತನವ ಮಾಣಿಸು , ಕೂಡಲಸಂಗಮದೇವಾ .

೪೫. ಕಾಣೆಯ ಲೋಭ , ಕೋಟಿಯ ಲಾಭ ಕೆಡಿಸಿದುದನಾನರಿಯೆ . ಭಕ್ತಿಯ ಕುಳವನಾನರಿಯದೆ ಮತಿಗೆಟ್ಟ ಪರಿಯನಾನರಿಯೆನಯ್ಯ . ಕೂಡಲಸಂಗನ ಶರಣರ ಸಂಗದಿಂದ ಅರಿದರೆ, ನಾನು ಬದುಕುವೆನಯ್ಯಾ .

೪೬. ಏನನೋದಿ , ಏನಕೇಳಿ , ಏನ ಮಾಡಿ ಫಲವೇನು , ನಿಮ್ಮವರೊಲಿಯದನ್ನಕ್ಕ ? ಶಿವಶಿವ , ಮಹಾದೇವ , ಬಾಯಿಲ್ಲದವನ ಮಾತಿ

ನಂತಾಯಿತ್ತೆನ್ನ ಬಾಳುವೆ ಕೂಡಲಸಂಗಮದೇವಾ.

೪೭. ಮುನ್ನೂರರುವತ್ತು ದಿನ ಪ್ರಮಾನ ಮಾಡಿ, ಕಳನನೇರಿ ಕೈಮರೆದಂತಾಯಿತ್ತೆನ್ನ ಭಕ್ತಿ ಎನಿಸು ಕಾಲ ಲಿಂಗಾರ್ಚನೆಯ ಮಾಡು ವೆನಯ್ಯ, ಮನದಲ್ಲಿ ಧೃಡವಿಲ್ಲದನ್ನಕ್ಕ? ಕೊಡನ ತುಂಬಿದ ಹಾಲಕೆಡಹಿ, ಉಡುಗಲೆನ್ನಳವೆ ಕೂಡಲಸಂಗಮದೇವಾ?

೪೮. ಶಬ್ದಸುಖಕ್ಕೆ ಮೆಚ್ಚಿ ಮಾತಿಂಗೆ ಮಾತುಕೊಟ್ಟು, ಕೆಟ್ಟೆ ನಯ್ಯಾ! ಅನುಭಾವಕ್ಕೆದೆಯಾಗದೆ ಜೆಬ್ಬನೇ ಜೆರೆತೆನಯ್ಯಾ! ಅಮೃತ ದಕೊಡನ ತುಂಬಿ ಒಡೆಯ ಹೊಯಿದು, ಅರಸಲುಂಟೇ? ಸ್ವಾಮಿ ಭೃತ್ಯ ಸಂಬಂಧವೆನ್ನ ಭಕ್ತಿ ಪ್ರತ್ಯುತ್ತರ ನಾಯಕನರಕ, ಕೂಡಲಸಂ ಗಮದೇವಾ.

೪೯. ಅಂಕ ಓಡಿದರೆ, ತೆತ್ತಿಗಂಗೆ ಭಂಗವಯ್ಯ. ಕಾದಿಗೆಲಿಸ ಯ್ಯ ಎನ್ನನು, ಕಾದಿಗೆಲಿಸಯ್ಯ! ಕೂಡಲಸಂಗಮದೇವಯ್ಯ, ಎನ್ನ ತನು ಮನಧನದಲ್ಲಿ ವಂಚನೆ ಇಲ್ಲದೆ

೫೦. ಹೇಡಿ ಬಿರಿದು ಕಟ್ಟಿದಂತಾಯಿತ್ತೆನ್ನ ವೇಷ. ಕಾದಬೇಕು. ಕಾದುವರೆ ಮನವಿಲ್ಲ. ಆಗಳೇ ಹೋಯಿತ್ತು ಬಿರಿದು ಹಗರಣಿಗನಂತೆ, ನಗೆಗೆಡೆ ಯಾಯಿತ್ತು ಮಾರಾಂತಕ ಜಂಗಮ ಮನೆಗೆ ಬಂದರೆ, ಕಾಣ ದಂತಡ್ಡ ಮುಸುಕಿ ಪೋಗೆ, ಕೂಡಲಸಂಗಮದೇವಾ ಜಾಣ ಮೂಗ ಕೊಯ್ವ, ಹಲ್ಲುದೋರಿ

೫೧. ಅಚ್ಚ ಶರಣರು ನಿಮ್ಮ ನಿಚ್ಚನಿಚ್ಚ ನೆನೆವರು. ಬಚ್ಚಬರಿ ಯ ಮಾತನಾಡುವೆ ನಾನು. ಒಪ್ಪಚ್ಚಿ ಅರೆಭಕ್ತಿ ನೆನೆಯಲೀಯ್ಯದು ನಿಮ್ಮ. ಮೆಚ್ಚರು ನಿಮ್ಮ ಶರಣರು ಕೂಡಲಸಂಗಮದೇವಾ.

೫೨. ಆಡುವದಳವಟ್ಟಿತ್ತು ಹಾಡುವದಳವಟ್ಟಿತ್ತು. ಅರ್ಚನೆ ಅಳವಟ್ಟಿತ್ತು, ನಿತ್ಯಲಿಂಗಾರ್ಚನೆ ಮುನ್ನವೇ ಅಳವಟ್ಟಿತ್ತು. ಕೂಡಲಸಂಗ ನ ಶರಣರು ಬಂದರೆ, ಆಗುದು ಬೆಸನು" ಎಂಬುದು ಒಪ್ಪಚ್ಚಿ ಯುಳವಡದು.

೫೩. ಒಡೆಯರಿಗೆ ಒಡವೆಯನೊಪ್ಪಿಸಲಾರದೆ, ಮೊರೆ ಇಡುವ ಮಾನವ ನಾನೇನೆಂಬೆ? ನೆತ್ತಿಯಲ್ಲಿ ಅಲಗು ತಿರುಹುವಂತಪ್ಪ ವೇದನೆ ಯಹುದೆನಗೆ. ಕೊಯ್ದ ಮೂಗಿಂಗೆ ಕನ್ನಡಿಯ ತೋರುವಂತೆ ವೇದ ನೆಯಹುದೆನಗೆ ಬೆಂದಹುಣ್ಣ ಕಂಬಿಯಲ್ಲಿ ಕೀಸುವಂತಪ್ಪ ವೇದನೆಯು

ಹುದೆನಗೆ. ಕೂಡಲಸಂಗಮದೇವ ಮಾಡಿನೋಡುವ ಹಗರಣವ ನಾ ಮಾಡಿಹೆನೆಂದರೆ ಮನಕ್ಕೆ ಮನ ನಾಚದೆಯಯ್ಯಾ

೫೪. ಹೊರಿಸಿಕೊಂಡ ಹೋದ ನಾಯಿ ಮೊಲನನೇನ ಹಿಡಿವುದಯ್ಯ? ಇರಿಯದ ವೀರ ಇಲ್ಲದ ಸೊಬಗುವ ಹೇಳುವುದೇ ನಾಚಿಕೆ. ಆನು ಭಕ್ತನೆಂತೆಂಬೆನಯ್ಯ, ಕೂಡಲಸಂಗಮದೇವಾ

೫೫. ಎನ್ನಭಕ್ತನೆಂದೆಂಬರು, ಎನ್ನ ಹೊರಹೊಂಪು ಒಳಜೊಳ್ಳಿ ತನವನರಿಯರಾಗಿ ಎನ್ನ ಮಾನಾಪಮಾನವು ಶರಣರಲ್ಲಿ, ಜಾತಿವಿಜಾತಿ ಶರಣರಲ್ಲಿ, ತನುಮನ ಧನವು ಶರಣರಲ್ಲಿ ವಂಚನೆಯುಳ್ಳ ಡಂಭಕ ನಾನು. ಶಿವಶಿವಾ ತಲೆಯೊಡೆಯಂಗೆ ಕಣ್ಣ ಬೈಚಿಡುವೆ ಕೂಡಲಸಂಗಮದೇವಾ.

೫೬. ನೋಡುವರುಳ್ಳರೆ ಮಾಡುವೆ ದೇಹಾರವ. ಎನಗೊಂದು ನಿಜವಿಲ್ಲ, ಎನಗೊಂದು ನಿಷ್ಪತ್ತಿ ಇಲ್ಲ. ಲಿಂಗವ ತೋರಿ ಉದರವ ಹೊರೆವ ಭಂಗಾರ ನಾನು ಕೂಡಸಂಗಮದೇವಾ.

೫೭. ಭಕ್ತಿ ಎಳ್ಳನಿತಿಲ್ಲ. ಯುಕ್ತಿ ಶೂನ್ಯನಯ್ಯ ನಾನು. ತನುವಂಚಕ ಮನವಂಚಕ ಧನವಂಚಕ ನಾನಯ್ಯ! ಕೂಡಲಸಂಗಮದೇವ ಮಳಲೊಟ್ಟಿಲೆನ್ನ ಮಾತು.

೫೮. ತನು ನಿಮ್ಮದೆಂಬೆ, ಮನ ನಿಮ್ಮದೆಂಬೆ, ಧನ ನಿಮ್ಮದೆಂಬೆ, ಮತ್ತೆಯೂ ವಂಚನೆ ಮಾಣದಯ್ಯಾ! ಪಡೆದೊಡವೆ ಹಡೆದರ್ಥ ನಿಮ್ಮದೆಂದರಿಯದೆ, ಕೆಮ್ಮನೆ ಕೆಟ್ಟೆ ಕೂಡಲಸಂಗಮದೇವಾ.

೫೯. ಊರಸೀರೆಗೆ ಅಸಗ ತಡಬಡಗೊಂಬಂತೆ, ಹೊನ್ನೆನ್ನದು ಮಣ್ಣೆನ್ನದು ಎಂದು ಮರುಳಾದೆ. ನಿಮ್ಮನರಿಯದ ಕಾರಣ ಕೆಮ್ಮನೆ ಕೆಟ್ಟೆ ಕೂಡಲಸಂಗಮದೇವಾ.

೬೦. ಅರ್ಥಪ್ರಾಣಾಭಿಮಾನ ನಿಮ್ಮದೆಂಬೆ. ಮತ್ತೆಯೂ ಆಶೆ ಬಿಡದನ್ನಕ್ಕರ, ಭಕ್ತನೆಂತಪ್ಪೆನಯ್ಯಾ! ಶರಣನೆಂತೆನಿಸುವೆನಯ್ಯಾ! ಕೂಡಲಸಂಗನ ಶರಣರ ಸಕಲರತಿಗೆ ಸಲ್ಲದನ್ನಕ್ಕ?

೬೧. ನಿಮ್ಮ ಭಕ್ತಿಯಲ್ಲಿ ಧುರಂಧರನೆಂಬೆ. ದಿಟಕ್ಕೆ ಬಂದರೆ, ಅಡ್ಡ ಮುಖವನಿಕ್ಕುವೆ. ಗರುಡಂಗೆ ಘಟಸರ್ಪನ ತೋರುವಂತೆ, ಶಿವಶರಣರೆಂದರೆ, ಕಿವಿ ಕೇಳದಂತಿಹೆನು. ಮನಕ್ಕೆ ಮನ ಸಾಕ್ಷಿಯಯ್ಯಾ,

ಕೂಡಲಸಂಗಮದೇವಾ.

೬೨. ಆರ್ಯರ ವಚನ ಪರುಷವೆಂದೆಂಬೆನು. ಆ ಪರುಷವೆನಗೆಂತು ದೊರಕುವದಯ್ಯ! ತನು ಮನಧನವ ವಿವರಿಸಿ ನುಡಿವೆ. ನೋಂಕಿಂಗೆ ಸೈರಿಸಲಾರೆ. ಹೊಲೆಯರ ಮದ್ದಳೆಯಂತೆ ನುಡಿವ ಡಂಭಕ ನಾನಯ್ಯ, ಕೂಡಲಸಂಗಮದೇವಾ,

೬೩. ಕಾಂಚನವೆಂಬ ನಾಯನೆಚ್ಚಿ ನಿಮ್ಮನು ನಾನು ಮರೆದೆನಯ್ಯ! ಕಾಂಚನಕ್ಕೆ ವೇಳೆಯಲ್ಲದೆ ಲಿಂಗಕ್ಕೆ ವೇಳೆ ಇಲ್ಲ. ಹಡಿಕಿಗೆ ಮೆಚ್ಚಿದ ಸೊಣಗನು ಅಮೃತದ ರುಚಿಯ ಬಲ್ಲುದೆ ಕೂಡಲಸಂಗಮದೇವಾ?

೬೪. ಒಲಿವಗಂಡನೊಮ್ಮೆ ಒಲ್ಲದಿಪ್ಪ ಕಂಡಪ್ಪಾ! ತಪ್ಪೆನ್ನದು ತಪ್ಪೆನ್ನದು. ತನುಮನ ಧನದಲ್ಲಿ ಮಾಟ ಕೂಟವರಿಯದೆ, ತಪ್ಪೆನ್ನದು, ತಪ್ಪೆನ್ನದು. ಕಡೆ ಇಲ್ಲದ ಹುಸಿ ಎನ್ನದು, ಕೂಡಲಸಂಗಮದೇವಾ.

೬೫. ಕಾಣುತ್ತ, ಕಾಣುತ್ತ, ಕಡೆಗಾಣಿಸಿ ಕೆಡಿಸಿಯರಸುವ ಮತಿಭ್ರಷ್ಟ ನಾನು, ಲಿಂಗಯ್ಯ! ತನುಲೋಭ, ಮನಲೋಭ, ಧನಲೋಭ ಮುಂದುಗೆಡಿಸಿ ಕಾಡಿಹವೆನ್ನ. ತನುಮನ ಧನವ ನಿವೇದಿಸಿದವರ, ಮನೆಯ ಮಗ ನಾನಯ್ಯ, ಕೂಡಲಸಂಗಮದೇವಾ.

೬೬. ಹಗೆಯಲ್ಲಿ ಬಿದ್ದವರ ಮೇಲೆ ಒರಳ ನೂಂಕುವರೆ? ಕೊಳದ ಮೇಲೆ ಸಂಕೋಲೆಯನಿಕ್ಕುವರೆ? ಜೆಂದಹುಣ್ಣ ಕಂಬಿಯಲಿ ಕೀಸುವರೆ ಕೂಡಲಸಂಗಯ್ಯ ಕಾಡುವ ಕಾಡ ಸಿರಿಯಾಳಂಗಲ್ಲದೆ ಸೈರಿಸಬಹುದೆ?

೬೭. ಸೋಲಬಲ್ಲರು, ಅವರು ಗೆಲಲರಿಯರಯ್ಯ! ತನುಮನ ಧನದಲ್ಲಿ ವಂಚನೆಯನರಿಯರಯ್ಯ! ದಾಸ ಸಿರಿಯಾಳನವರು ಕೂಡಲಸಂಗನ ಶರಣರು ಉಪಚಾರವನರಿಯರಯ್ಯ.

೬೮. ಮಾತಿನಲ್ಲಿ ಶ್ರೋತ್ರ ಸುಖವ ನುಡಿಯಬಹುದಲ್ಲದೆ, ಮಾಡುವ ಸತ್ಕ್ರಿಯೆಯಿಂದ ಭಕ್ತನೆನಿಸಬಾರದು. ಅರ್ಥ ಪ್ರಾಣಾಭಿಮಾನ ವಾರಿಗಿಯೂ ಸಮನಿಸದು. ಲಿಂಗ ಮುಖದಲ್ಲಿ ಉವಯವಾದ ಶರಣಂಗಲ್ಲದೆ, ಅಯ್ಯ! ಕೂಡಲಸಂಗನಶರಣರ ಭಕ್ತಿ ಭಂಡಾರವು ಎನಗೆಂತು ಸಾಧ್ಯವಪ್ಪುದು ಹೇಳೆನ್ನ ತಂದೆ.

೬೯. ಬಾಣಮಯೂರನಂತೆ ಬಣ್ಣಿಸಬಲ್ಲೆನೆ? ಸಿರಿಯಾಳನಂತೆ ಉಣಲಿಕ್ಕಬಲ್ಲೆನೆ? ದಾಸಿಮಯ್ಯನಂತೆ, ಉಡಕೊಡಬಲ್ಲೆನೆ? ಉಂಡುಟ್ಟು

ಕೊಟ್ಟರೆ ಮುಯ್ಯಿಗೆ ಮುಯ್ಯವಾಯಿತ್ತು. ಎನಗೆ ಕೊಟ್ಟರೆ, ನಿಮ್ಮ ಧರ್ಮ ಕೂಡಲಸಂಗಮದೇವಾ.

೭೦. ದಾಸದೇವ ತನ್ನ ವಸ್ತ್ರವನಿತ್ತು ತವನಿಧಿಯ ಪ್ರಸಾದವ ಪಡೆದ. ಸಿರಿಯಾಳ ತನ್ನ ಮಗನನಿತ್ತು ಪ್ರಾಣ ಪ್ರಸಾದವ ಪಡೆದ. ಬಲ್ಲಾಳ ತನ್ನ ವಧುವನಿತ್ತು ಸಮತೆ ಪ್ರಸಾದವ ಪಡೆದ. ಇವರೆಲ್ಲರು ತಮತಮಗೆ ಮಾಡಿ ಹಡೆದರು ಸಮ್ಯಕ್ಪದವಿಯನು. ನಾನೇನು ಅರಿಯದ ಭಕ್ತಿಯ ಬಡವಂಗೆ ಕರುಣಿಸು ಕೂಡಲಸಂಗಮದೇವಾ.

೭೧. ತ್ರಿವಿಧ ತ್ರಿವಿಧದಲ್ಲಿ ತಪ್ಪುಕ ನಾನಯ್ಯ! ಒಮ್ಮಿಂಗೆ ಕರುಣಿಸಯ್ಯ! ಒಮ್ಮಿಂಗೆ ಕರುಣಿಸಯ್ಯಾ! ಇದನರಿತು ಇನ್ನು ತಪ್ಪಿದೆನಾದರೆ, ನೀವು ಮಾಡಿತ್ತೆ ಸಲುವುದು ಕೂಡಲಸಂಗಮದೇವಾ.

೭೨. ಎನ್ನ ತಪ್ಪು ಅನಂತಕೋಟಿ. ನಿಮ್ಮ ಸೈರಣೆಗೆ ಲೆಕ್ಕವಿಲ್ಲ. ಇನ್ನು ತಪ್ಪಿದೆನಾದರೆ, ನಿಮ್ಮ ಪಾದವೇ ದಿಬ್ಯ. ಕೂಡಲಸಂಗಮದೇವಯ್ಯ ನಿಮ್ಮ ಪ್ರಮಥರ ಮುಂದೆ ಕಿನ್ನರೀ ಬೊಮ್ಮಣ್ಣನೇ ಸಾಕ್ಷಿ.

೭೩. ಅಡಿಗಡಿಗೆ ಎನ್ನ ಮನವ ಜಡಿದು ನೋಡದಿರಯ್ಯ! ಬಡವನೆಂದು ಕಾಡದಿರಯ್ಯ! ಎನ್ನ ಒಡೆಯರುಂಟು, ಕೂಡಲಸಂಗನ ಶರಣರು.

೭೪. ಭಕ್ತಿ ವಿಶೇಷವ ಮಾಡುವರೆ, ಹತ್ತು ಬೆರಳುಂಟು. ಹಾಸಿ ದುಡಿದರೆ, ತನಗುಂಟು, ತನ್ನ ಪ್ರಮಥರಿಗುಂಟು. ಮಾರಿತಂದೆಗಳಂತೆ, ಎನಗೇಕಹುದಯ್ಯಾ! ರತ್ನದ ಸಂಕೊಲೆಯನಿಕ್ಕಿ ಕಾಡಿಹ ಕೂಡಲಸಂಗಮದೇವ, ಶಿವಧೋ ಶಿವಧೋ.

೭೫. ಮನೆ ನೋಡಾ! ಬಡವರ ಮನೆ. ಮನ ನೋಡಾ, ಘನ. ಸೋಂಕಿನಲ್ಲಿ ಶುಚಿ, ಸರ್ವಾಂಗ ಕಲಿ ಪಸಾರಕ್ಕನುವಿಲ್ಲ. ಬಂದ ತತ್ಕಾಲಕ್ಕುಂಟು. ಕೂಡಲಸಂಗನಶರಣರು ಸ್ವತಂತ್ರರು ಧೀರರು.

೭೬. ತತ್ವವನರಿದಿಹೆನೆಂದು ವ್ಯತ್ಯಯವ ಕರೆಕೊಂಡೆನಯ್ಯ! ನಾನೆತ್ತಬಲ್ಲೆನು, ನಿಮ್ಮ ಶರಣರಂತುವನು? ಸರ್ವಾಪರಾಧಿ ನಾನು, ಎನ್ನ ಮನದ ಸೂತಕ ಹಿಂಗದಾಗಿ, ಕೂಡಲಸಂಗಮದೇವಾ.

೭೭. ಆನೆ ಆ ದಾರಿಯಲ್ಲಿ ಹೋಯಿತ್ತೆಂದರೆ, ಆಡು ಆ ದಾರಿಯಲ್ಲಿ ಹೋಯಿತ್ತೆನ್ನಬಹುದೆ? ಸಂಗನ ಶರಣರಿಗೆ ಆನು ಸರಿ ಎಂದು ಗಳಹ

ಲುಬಹುದೆ? ಜಂಗಮಕ್ಕೆ ಮಾಡುವ ಭಕ್ತರಿಗೆ ಆನು ಸರಿಯೇ, ಹೇಳಾ ಕೂಡಲಸಂಗಮದೇವಾ?

೭೮. ಆ ಕರಿಯಾಕೃತಿಯು ಸೂಕರನ ಹೋಲಿಸಿದರೆ, ಅದು ಸೂಕರನಾಗಲರಿವುದೆ? ಭೂನಾಗನಾಕೃತಿಯನು ವ್ಯಾಳೇಶನ ಹೋಲಿಸಿದರೆ, ಅದು ವ್ಯಾಳೇಶನಾಗಲರಿವುದೆ? ನಾನು ಭಕ್ತನಾದರೇನಯ್ಯ! ನಮ್ಮ ಕೂಡಲಸಂಗಮದೇವರ ಸದ್ಭಕ್ತರ ಹೋಲಲರಿವೆನೆ?

೭೯. ಮೋಟನ ಮೌಳಿ, ಮೂಕೊರೆತೆಯ ಶೃಂಗಾರ, ಬೇಟ ಕುರುಡಂಗೆ ನಗೆಗೆಡೆಯಾಯಿತ್ತು. ನಮ್ಮ ಕೂಡಲಸಂಗನ ಶರಣರಮುಂದೆ, ನಾನು ಭಕ್ತನೆಂಬ ನಾಚಿಕೆ ಸಾಲದೆ?

೮೦. ಮೂಗಿಲ್ಲದೆ, ಮುಖಕ್ಕೆ ಶೃಂಗಾರವೆ? ವಿಕೃತವೇಷಧಾರಿಯಾನು, ಭಂಡನು, ಲಜ್ಜೆಭಂಡನು. ಕೂಡಲಸಂಗಮದೇವನ ಶರಣರ ಮುಂದೆ ನಾನೆಂತು ಭಕ್ತನಪ್ಪೆನಯ್ಯಾ?

೮೧. ಮಾವಿನ ಕಾಯೊಳಗೊಂದು ಎಕ್ಕೆಯಕಾಯಿ ನಾನೈಯ್ಯ! ಆನು ಭಕ್ತನೆಂತೆಂಬೆನೆ, ನಿಮ್ಮ ಶರಣರ ಮುಂದೆ, ನಾಚಿಕೆಯಿಲ್ಲದೆ? ಕೂಡಲಸಂಗನ ಶರಣರ ಮುಂದೆ ನಾನೆಂತು ಭಕ್ತನಯ್ಯ?

೮೨. ಮರದನೆಳಲಲ್ಲಿದ್ದು ತನ್ನ ನೆಳಲನರಸಬಹುದೆ? ನಿಮ್ಮ ಶರಣರ ಮುಂದೆ ನಾನೇತರ ಭಕ್ತನಯ್ಯ? ನಿಮ್ಮ ಶರಣರ ಮುಂದೆ, ನಾನೇತರ ಯುಕ್ತನಯ್ಯ? ಆನುಭಕ್ತನೆಂಬ ನುಡಿ ಸುಡದೆ ಕೂಡಲಸಂಗಮದೇವಾ?

೮೩ ಎನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಿಲ್ಲ. ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ. ಕೂಡಲಸಂಗಮದೇವಾ ಎನಗಿದೇ ದಿಬ್ಯ.

೮೪. ಆನು ಭಕ್ತನಲ್ಲಯ್ಯ. ಆನು ವೇಷಧಾರಿಯಯ್ಯ. ಕಟಕ, ಕೆತ್ತುಗ, ಪೊಲ್ಲುಗನೆಂಬುದು ಎನ್ನ ಹೆಸರಯ್ಯ. ಕೂಡಲಸಂಗಮದೇವಾ, ನಿಮ್ಮ ಶರಣರ ಮನೆಯ ಮಗ ನಾನಯ್ಯ.

೮೫ ಡಂಬು ಡಳ್ಳು ಎನ್ನದಯ್ಯ! ಡಂಭಕನೆಂಬುವ ನಾನಯ್ಯ! ನಿಮ್ಮ ನಂಬಿದ ಶರಣರ ಡಿಂಗರಿಗ ನಾನು, ಕೂಡಲಸಂಗಮದೇವಾ.

೮೬. ಚನ ಚಾರಮನ ಬಂಟ ನಾನಯ್ಯ. ಎನ್ನ ಚಾಂಗು ಬೊಲ್ಲ

ಕೊಟ್ಟರೆ ಮುಯ್ಯಿಗೆ ಮುಯ್ಯವಾಯಿತ್ತು. ಎನಗೆ ಕೊಟ್ಟರೆ, ನಿಮ್ಮ ಧರ್ಮ ಕೂಡಲಸಂಗಮದೇವಾ.

೭೦. ದಾಸದೇವ ತನ್ನ ವಸ್ತ್ರವನಿತ್ತು ತವನಿಧಿಯ ಪ್ರಸಾದವ ಪಡೆದ. ಸಿರಿಯಾಳ ತನ್ನ ಮಗನನಿತ್ತು ಪ್ರಾಣ ಪ್ರಸಾದವ ಪಡೆದ. ಬಲ್ಲಾಳ ತನ್ನ ವಧುವನಿತ್ತು ಸಮತೆ ಪ್ರಸಾದವ ಪಡೆದ. ಇವರೆಲ್ಲರು ತಮತಮಗೆ ಮಾಡಿ ಹಡೆದರು ಸಮ್ಯಕ್ಪದವಿಯನು. ನಾನೇನು ಅರಿಯದ ಭಕ್ತಿಯ ಬಡವಂಗೆ ಕರುಣಿಸು ಕೂಡಲಸಂಗಮದೇವಾ.

೭೧. ತ್ರಿವಿಧ ತ್ರಿವಿಧದಲ್ಲಿ ತಪ್ಪುಕ ನಾನಯ್ಯ! ಒಮ್ಮೆಂಗೆ ಕರುಣಿಸಯ್ಯ! ಒಮ್ಮೆಂಗೆ ಕರುಣಿಸಯ್ಯಾ! ಇದನರಿತು ಇನ್ನು ತಪ್ಪಿದೆನಾದರೆ, ನೀವು ಮಾಡಿತ್ತೆ ಸಲುವುದು ಕೂಡಲಸಂಗಮದೇವಾ.

೭೨. ಎನ್ನ ತಪ್ಪು ಅನಂತಕೋಟಿ. ನಿಮ್ಮ ಸೈರಣೆಗೆ ಲೆಕ್ಕವಿಲ್ಲ. ಇನ್ನು ತಪ್ಪಿದೆನಾದರೆ, ನಿಮ್ಮ ಪಾದವೇ ದಿಬ್ಯ. ಕೂಡಲಸಂಗಮದೇವಯ್ಯ ನಿಮ್ಮ ಪ್ರಮಥರ ಮುಂದೆ ಕಿನ್ನರೀ ಬೊಮ್ಮಣ್ಣನೇ ಸಾಕ್ಷಿ.

೭೩. ಅಡಿಗಡಿಗೆ ಎನ್ನ ಮನವ ಜಡಿದು ನೋಡದಿರಯ್ಯ! ಬಡವನೆಂದು ಕಾಡದಿರಯ್ಯ! ಎನ್ನ ಒಡೆಯರುಂಟು, ಕೂಡಲಸಂಗನ ಶರಣರು.

೭೪. ಭಕ್ತಿ ವಿಶೇಷವ ಮಾಡುವರೆ, ಹತ್ತು ಬೆರುಳುಂಟು. ಹಾಸಿ ದುಡಿದರೆ, ತನಗುಂಟು, ತನ್ನ ಪ್ರಮಥರಿಗುಂಟು. ಮಾರಿತಂದೆಗಳಂತೆ, ಎನಗೇಕಹುದಯ್ಯಾ! ರತ್ನದ ಸಂಕೋಲೆಯನಿಕ್ಕಿ ಕಾಡಿಹ ಕೂಡಲಸಂಗಮದೇವ, ಶಿವಧೋ ಶಿವಧೋ.

೭೫. ಮನೆ ನೋಡಾ! ಬಡವರ ಮನೆ. ಮನ ನೋಡಾ, ಘನ. ಸೋಂಕಿನಲ್ಲಿ ಶುಚಿ, ಸರ್ವಾಂಗ ಕಲಿ. ಪಸಾರಕ್ಕನುವಿಲ್ಲ. ಬಂದ ತತ್ಕಾಲಕ್ಕುಂಟು. ಕೂಡಲಸಂಗನಶರಣರು ಸ್ವತಂತ್ರರು ಧೀರರು.

೭೬. ತತ್ವವನರಿದಿಹೆನೆಂದು ವೃತ್ಯುವ ಕರೆಕೊಂಡೆನಯ್ಯ! ನಾನೆತ್ತಬಲ್ಲೆನು, ನಿಮ್ಮ ಶರಣರಂತುವನು? ಸರ್ವಾಪರಾಧಿ ನಾನು, ಎನ್ನ ಮನದ ಸೂತಕ ಹಿಂಗದಾಗಿ, ಕೂಡಲಸಂಗಮದೇವಾ.

೭೭. ಆನೆ ಆ ದಾರಿಯಲ್ಲಿ ಹೋಯಿತ್ತೆಂದರೆ, ಆಡು ಆ ದಾರಿಯಲ್ಲಿ ಹೋಯಿತ್ತೆನ್ನಬಹುದೆ? ಸಂಗನ ಶರಣರಿಗೆ ಆನು ಸರಿ ಎಂದು ಗಳಹ

ಲುಬಹುದೆ? ಜಂಗಮಕ್ಕೆ ಮಾಡುವ ಭಕ್ತರಿಂಗೆ ಆನು ಸರಿಯೇ, ಹೇಳಾ ಕೂಡಲಸಂಗಮದೇವಾ?

೭೮. ಆ ಕರಿಯಾಕೃತಿಯು ಸೂಕರನ ಹೋಲಿಸಿದರೆ, ಅದು ಸೂಕರನಾಗಲರಿವುದೆ? ಭೂನಾಗನಾಕೃತಿಯನು ವ್ಯಾಳೇಶನ ಹೋಲಿಸಿದರೆ, ಅದು ವ್ಯಾಳೇಶನಾಗಲರಿವುದೆ? ನಾನು ಭಕ್ತನಾದರೇನಯ್ಯಾ! ನಮ್ಮ ಕೂಡಲಸಂಗಮದೇವರ ಸದ್ಭಕ್ತರ ಹೋಲಲರಿವೆನೆ?

೭೯. ಮೋಟನ ಮೌಳಿ, ಮೂಕೊರಿತೆಯ ಶೃಂಗಾರ, ಬೇಟ ಕುರುಡಂಗೆ ನಗೆಗೆಡೆಯಾಯಿತ್ತು. ನಮ್ಮ ಕೂಡಲಸಂಗನ ಶರಣರಮುಂದೆ, ನಾನು ಭಕ್ತನೆಂಬ ನಾಚಿಕೆ ಸಾಲದೆ?

೮೦. ಮೂಗಿಲ್ಲದೆ, ಮುಖಕ್ಕೆ ಶೃಂಗಾರವೆ? ವಿಕೃತವೇಷಧಾರಿಯಾನು, ಭಂಡನು, ಲಜ್ಜೆಭಂಡನು. ಕೂಡಲಸಂಗಮದೇವನ ಶರಣರ ಮುಂದೆ ನಾನೆಂತು ಭಕ್ತನಪ್ಪೆನಯ್ಯಾ?

೮೧. ಮಾವಿನ ಕಾಯೊಳಗೊಂದು ಎಕ್ಕೆಯಕಾಯಿ ನಾನೈಯ್ಯಾ! ಆನು ಭಕ್ತನೆಂತೆಂಬೆನೆ, ನಿಮ್ಮ ಶರಣರ ಮುಂದೆ, ನಾಚಿಕೆಯಿಲ್ಲದೆ? ಕೂಡಲಸಂಗನ ಶರಣರ ಮುಂದೆ ನಾನೆಂತು ಭಕ್ತನಯ್ಯಾ?

೮೨. ಮರದನೆಳಲಲ್ಲಿದ್ದು ತನ್ನ ನೆಳಲನರಸಬಹುದೆ? ನಿಮ್ಮ ಶರಣರ ಮುಂದೆ ನಾನೇತರ ಭಕ್ತನಯ್ಯಾ? ನಿಮ್ಮ ಶರಣರ ಮುಂದೆ, ನಾನೇತರ ಯುಕ್ತನಯ್ಯಾ? ಆನುಭಕ್ತನೆಂಬ ನುಡಿ ಸುಡದೆ ಕೂಡಲ ಸಂಗಮದೇವಾ?

೮೩. ಎನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಿಲ್ಲ. ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ. ಕೂಡಲಸಂಗಮದೇವಾ ಎನಗಿದೇ ದಿಬ್ಯ.

೮೪. ಆನು ಭಕ್ತನಲ್ಲಯ್ಯಾ. ಆನು ವೇಷಧಾರಿಯಯ್ಯಾ. ಕಟಕ, ಕೆತ್ತುಗ, ಪೊಲ್ಲುಗನೆಂಬುದು ಎನ್ನ ಹೆಸರಯ್ಯಾ. ಕೂಡಲಸಂಗಮದೇವಾ, ನಿಮ್ಮ ಶರಣರ ಮನೆಯ ಮಗ ನಾನಯ್ಯಾ.

೮೫. ಡಂಬು ಡಳ್ಳು ಎನ್ನದಯ್ಯಾ! ಡಂಭಕನೆಂಬುವ ನಾನಯ್ಯಾ! ನಿಮ್ಮ ನಂಬಿದ ಶರಣರ ಡಿಂಗರಿಗ ನಾನು, ಕೂಡಲಸಂಗಮದೇವಾ.

೮೬. ಚನ ಚಾರಮನ ಬಂಟ ನಾನಯ್ಯಾ. ಎನ್ನ ಚಾಂಗು ಬೊಲ್ಲ

ಳನ ಕಾವ ಗೋವನೆಂಬರು. ಕೂಡಲಸಂಗನಶರಣರು ಒಡೆಯರಾಗಿ, ತಮ್ಮ ತೊತ್ತಿನ ಮಗನೆಂದು ಒಲಿದಂತೆ ನುಡಿವರು.

೮೭. ಕಾಲಿಲೊದೆದು, ಜಡಿದು ಬಡಿವರಯ್ಯ! ಭಕ್ತಿಯೈದಲೆಂದೆನ್ನ ಜರಿವರಯ್ಯ. ನುಡಿವರಯ್ಯ, ಕೂಡಲಸಂಗನ ಶರಣರೊಡೆಯರಾಗಿ.

೮೮. ನಡೆವರೈಯ್ಯ ಒಡೆಯರು, ತನುಮನ ಧನದಮೇಲೆ. ನುಡಿವರಯ್ಯ ಒಡೆಯರು ಒಂದು ನಿಮಿಷ ಬಾರದಿದ್ದರೆ. ಜಡಿವರಯ್ಯ ಒಡೆಯರು, ಮನಬಂದಪರಿಯಲ್ಲಿ. ಶಿವಶಿವ ಹಣೆವರಯ್ಯ ಮುಂಡೆಯನೂರಿ, ಪ್ರಾಣದ ಒಡೆಯರಯ್ಯ ಕೂಡಲಸಂಗಮದೇವಾ ನಿಮ್ಮ ಶರಣರು.

೮೯. ಅರ್ಥಪ್ರಾಣಾಭಿಮಾನಕ್ಕೆ ಒಡೆಯರು. ಸದ್ಭಕ್ತರಲ್ಲದೆ ಎನಗಾರು ಇಲ್ಲವಯ್ಯ! ಭೃತ್ಯಾಪರಾಧ ಸ್ವಾಮಿನೋದಂಡ, ಕೂಡಲಸಂಗಮದೇವಾ, ನೀವೇ ಪ್ರಮಾಣು.

೯೦. ಅರ್ಚಿಸಲರಿಯೆ, ಪೂಜಿಸಲರಿಯೆ, ನಿಚ್ಚ ಶಿವರಾತ್ರಿಯ ನಾಮಾಡಲರಿಯೆ. ಕಪಟವೇಷದಿಂದ ನಾನು ಒಂದಾಡುವೆ. ಈಶ ನಿಮ್ಮ ದಾಸರ ದಾಸಿಯು ದಾಸ ನಾನಯ್ಯ! ಕೂಡಲಸಂಗಮದೇವ, ನಿಮ್ಮ ಲಾಂಛನವ ಧರಿಸಿಪ್ಪ ಉದರ ಪೋಷಕನಾನಯ್ಯ.

೯೧. ಅಪ್ಪನು ಡೋಹರ ಕಕ್ಕಯ್ಯನಾಗಿ, ಮುತ್ತೈಯ್ಯ ಚನ್ನಯ್ಯನಾದರೆ, ಆನು ಬದುಕುವೆ. ಮತ್ತಾಶ್ವಪಚಯ್ಯನ ಸನ್ನಿಧಿಯಿಂದ ಭಕ್ತಿಯ ಸದ್ಗುಣವ ನಾನು ಅರಿವೆನಯ್ಯ. ಕಷ್ಟ ಜಾತಿ ಜನ್ಮದಲ್ಲಿ ಜನಿಸಿದೆ. ಎನಗಿದು ವಿಧಿಯೋ ಕೂಡಲಸಂಗಮದೇವಾ?

೯೨. ಉತ್ತಮದ ಕುಲದಲ್ಲಿ ಹುಟ್ಟಿದೆನೆಂದು, ಕಷ್ಟತನದ ಹೊರೆಯ ಹೊರಿಸದಿರಯ್ಯ! ಕಕ್ಕಯ್ಯನೊಕ್ಕುದ ನಿಕ್ಕನೋಡಯ್ಯಾ. ದಾಸಯ್ಯ ಶಿವದಾನವ ನೆರೆಯ ನೋಡಯ್ಯ. ಮನ್ನಣೆಯ ಚನ್ನಯ್ಯನೆನ್ನುವ ಮನ್ನಿಸ. ಉನ್ನತಮಹಿಮ, ಕೂಡಲಸಂಗಮದೇವಾ, ಶಿವಧೋ ಶಿವಧೋ.

೯೩. ಸೆಟ್ಟಿಎಂಬೆನೆ ಸಿರಿಯಾಳನ? ಮಡಿವಾಳನೆಂಬೆನೆ ಮಾಚಯ್ಯನ? ಡೋಹರನೆಂಬೆನೆ ಕಕ್ಕಯ್ಯನ? ಮಾದಾರನೆಂಬೆನೆ ಚನ್ನಯ್ಯನ? ಆನುಹಾರುವನೆಂದಡೆ, ಕೂಡಲಸಂಗಯ್ಯ ನಗುವನಯ್ಯ.

೯೪. ಚನ್ನಯ್ಯನ ಮನೆಯ ದಾಸನ ಮಗನು, ಕಕ್ಕಯ್ಯನ

ಮನೆಯ ದಾಸಿಯ ಮಗಳು, ಇವರಿಬ್ಬರೂ ಹೊಲವಲ್ಲಿ ಬೆರಣಿಯನಾಯ ಹೋಗಿ, ಸಂಗವ ಮಾಡಿದರು. ಇವರಿಬ್ಬರಿಗೆ ಹುಟ್ಟಿದ ಮಗ ನಾನು, ಕೂಡಲಸಂಗಮದೇವರ ಸಾಕ್ಷಿಯಾಗಿ.

೯೫. ಸೂಳೆಗೆ ಹುಟ್ಟಿದ ಕೂಸಿನಂತೆ, ಆರನಾದರೆಯೂ ಅಯ್ಯ, ಅಯ್ಯ ಎನಲಾರೆನಯ್ಯ. ಚೆನ್ನಯ್ಯನಮ್ಮಯ್ಯನು, ಚೆನ್ನಯ್ಯನ ಮಗ ನಾನು, ಕೂಡಲಸಂಗನ ಮಹಾ ಮನೆಯಲ್ಲಿ ಧರ್ಮಸಂತಾನದ ಭಂಡಾರಿ ಬಸವನು.

೯೬. ಹರನು ಮೂಲಿಗನಾಗಿ, ಪುರಾತನರೊಳಗಾಗಿ, ಬಳಿಬಳಿಯುಬು ಬಂದ ಮಾದಾರನ ಮಗ ನಾನಯ್ಯ. ಕಳೆದ ಹೊಲೆಯ ನಮ್ಮಯ್ಯ ಜಾತಿ ಸೂತಕ. ಮಾದಾರನಮಗ ನಾನಯ್ಯ. ಪನ್ನಗ ಭೂಷಣ ಕೂಡಲ ಸಂಗಯ್ಯ, ಚನ್ನಯ್ಯ ಎನ್ನ ಮುತ್ತಯ್ಯನಜ್ಜನಪ್ಪನಯ್ಯ.

೯೭. ಅಪ್ಪನು ನಮ್ಮ ಮಾದಾರ ಚನ್ನಯ್ಯ. ಬೊಪ್ಪನು ನಮ್ಮ ಡೋಹರ ಕಕ್ಕಯ್ಯ ಚಿಕ್ಕಯ್ಯನೆಮ್ಮಯ್ಯ ಕಾಣಿರಯ್ಯ ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ! ಎನ್ನನೇತಕ್ಕರಿಯಿರಿ ಕೂಡಲಸಂಗಮದೇವಯ್ಯ?

೯೮. ಭಕ್ತಿ ಇಲ್ಲದ ಬಡವನಾನಯ್ಯ! ಕಕ್ಕಯ್ಯನ ಮನೆಯಲ್ಲು ಬೇಡಿದೆ. ದಾಸಯ್ಯನ ಮನೆಯಲ್ಲು ಬೇಡಿದೆ. ಚನ್ನಯ್ಯನ ಮನೆಯಲ್ಲು ಬೇಡಿದೆ. ಎಲ್ಲ ಪುರಾತನರು ನೆರೆದು ಭಕ್ತಿ ಭಿಕ್ಷವ ನೀಡಿದರೆ, ಎನ್ನ ಪಾತ್ರೆ ತುಂಬಿತ್ತು, ಕೂಡಲಸಂಗಮದೇವಾ.

೯೯. ಹಿರಿಯಯ್ಯ ಶ್ವಪಚಯ್ಯ. ಕಿರಿಯಯ್ಯ ಡೋಹರ ಕಕ್ಕಯ್ಯ. ಅಯ್ಯಗಳಯ್ಯ ನಮ್ಮ ಮಾದಾರ ಚನ್ನಯ್ಯ, ಕೂಡಲಸಂಗಮದೇವಾ ನಿಮ್ಮ ಶರಣರು ಎನ್ನ ಸಲಹುವರಾಗಿ,

೧೦೦. ನಮ್ಮ ತಾಯಿ ನಿಂಬೆವ್ವೆ. ನೀರನೆರೆದುಂಬಳು. ನಮ್ಮಯ್ಯ ಚನ್ನಯ್ಯರಾಯ ಕಂಪಣವ ಹೊರೆವ ಎಮಗಾರುವಿಲ್ಲವೆಂಬಿರಿ; ನಮ್ಮಕ್ಕ ಕಂಚಿಯಲ್ಲಿ ಬಾಣಸವ ಮಾಡುವಳು. ನಮಗೆ ಆರು ಇಲ್ಲವೆಂಬಿರಿ. ಎಮ್ಮಜ್ಜರಜ್ಜರು ಹಡೆದ ಭಕ್ತಿಯ ನಿಮ್ಮ ಕೈಯ್ಯಲ್ಲಿ ಕೊಂಬೆ, ಕಾಣಾ ಕೂಡಲಸಂಗಮದೇವಯ್ಯ.

೧೦೧. ಎನಗಾರು ಇಲ್ಲ, ಎನಗಾರು ಇಲ್ಲವೆಂಬರು. ಬಾಣಸವ

ನಾನು, ಮಯೂರನವ ನಾನು, ಕಾಳಿದಾಸನವ ನಾನು, ಕಕ್ಕಯ್ಯ ಹಿರಿಯಯ್ಯ, ಚಿಕ್ಕಯ್ಯ ಚೆನ್ನಯ್ಯ ಎತ್ತಿ ಮುದ್ದಾಡಿಸಿದರೆನ್ನ ಕೂಡಲಸಂಗಯ್ಯ

೧೦೨. ಅಯ್ಯ, ನಿಮ್ಮ ಮಂಚಿತಾವಳಿಯವಳು, ಬಿಬ್ಬ ತೊತ್ತಿನ ಮಗಗೆ ಹುಟ್ಟಿದಾತ ನಾನಯ್ಯ! ಬಳಿದೊತ್ತು, ಬೆಳಗಡೊತ್ತು, ವಂದದೊತ್ತ ನಾನಯ್ಯ. ಕೂಡಲಸಂಗಮದೇವಾ, ನಿಮ್ಮ ಒಡೆತನಕ್ಕೆ ಕೇಡಿಲ್ಲವಾಗಿ ಎನ್ನ ತೊತ್ತುತನಕ್ಕೆ ಕೇಡಿಲ್ಲವು.

೧೦೩. ಕೈಯ್ಯಲ್ಲಿ ಜೋರಿಗೆ, ಮಂಡೆಯ ಮೇಲೆ ಸಿಂಬಿ, ಸಿಂಬಕನ ಮನೆಯ ಮಗ ನಾನಯ್ಯ! ಕೂಡಲಸಂಗಮದೇವಯ್ಯಾ! ಮಂಚದ ಕೂಡೇರಿ ಬಂದ ತೊತ್ತಿನ ಮಗ ನಾನಯ್ಯ.

೧೦೪. ಅರಸರ ಮನೆಯಲ್ಲಿ ಅರಸಿಯಾಗಿಪ್ಪುದರಿಂದ, ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು ಕರಲೇಸಯ್ಯ! ತಾರೌ ಅಗ್ಗವಣಿಯ, ನೀಡೌ ಪತ್ರೆಯ, ಲಿಂಗಕ್ಕೆ ಜೋನಿಸ ಹಿಡಿಯೌ, ಎಂಬರು. ನಮ್ಮ ಕೂಡಲಸಂಗನ ಮಹಾಮನೆಯಲ್ಲೊಕ್ಕುದನುಣ್ಣೌ ತೊತ್ತೇ ಎಂಬರು.

೧೦೫. ಅನುದಿನ ನಿಮ್ಮ ಶರಣರಿಗೆ ಮಂಡೆಯ ಬೋಳಿಸಿಕೊಂಡು, ಗಂಡುದೊತ್ತಾದೆನಯ್ಯಾ, ಕೂಡಲಸಂಗಮದೇವಾ, ನಿಮ್ಮ ಶರಣರಿಗೆ.

೧೦೬. ಅನುದಿನ ಮನೆಹುಟ್ಟಿ, ಧನ್ಯನಯ್ಯ. ದಮ್ಮಯ್ಯ, ದಮ್ಮಯ್ಯ! ನಿಮ್ಮ ಧರ್ಮದ ಕವಿಲೆಯಾನಯ್ಯಾ! ಕೂಡಲಸಂಗಮದೇವಾ, ನಿಮ್ಮ ಶರಣರ ಮನೆಯ ಮಗ ನಾನಯ್ಯ.

೧೦೭. ಕಾಮವ ತೊರೆದಾತ, ಹೇಮವ ಜರಿದಾತ, ಭಾನುವಿನ ಉದಯಕ್ಕೆ ಒಳಗಾಗದಾತ ಶರಣನು. ಆವಾಗಳು ನಿಮ್ಮ ಮಾಣದೆ ನೆನೆವರ ಮನೆಯಲ್ಲಿ, ಶ್ವಾನನಾಗಿರಿಸೋ ಮಹಾದಾನಿ ಕೂಡಲಸಂಗಮದೇವಾ.

೧೦೮. ಮೇಲಾಗಲೊಲ್ಲೆನು, ಕೀಳಾಗಲೊಲ್ಲದೆ. ಕೀಳಿಂಗಲ್ಲದೆ ಹಯನ ಕರೆವುದೆ? ಮೇಲಾಗಿ ನರಕದೊಳಗೋಲಾಡಲಾರೆನು. ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು ಮಹಾದಾನಿ ಕೂಡಲಸಂಗಮದೇವಾ.

೧೦೯. ಬ್ರಹ್ಮಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ, ರುದ್ರಪದವಿಯನೊಲ್ಲೆ ನಾನು ಮತ್ತಾವ ಪದವಿಯನೊಲ್ಲೆನಯ್ಯ! ಕೂಡ

ಲಸಂಗಮದೇವಾ, ನಿಮ್ಮ ಸದ್ಭಕ್ತರ ಪಾದಪದ್ಮವಿರಿದಿಪ್ಪ ಮಹಾಫಲವಿ ಯನೆ ಕರುಣಿಸಯ್ಯ.

೧೧೦. ಕಾಗೆ ವೃಷ್ಟಿಸುವ ಹೊನ್ನ ಕಳಶವಹುದರಿಂದ, ಒಡೆ ಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯ! ಅಯ್ಯ ನಿಮ್ಮ ಶರಣರ ಪಾದಕ್ಕೆ ಚಮ್ಮಾವುಗೆಯ ಮಾಡಯ್ಯ. ॥ ಶ್ಲೋಕ ॥ ಕರ್ಮಾ ವಲಂಬನಂಕೇಚಿತ್ । ಕೇಚಿತ್ ಜ್ಞಾನಾವಲಂಬನಂ । ವಯಂತು ಶಿವ ಭಕ್ತಾನಾಂ । ಪಾದುಕಸ್ಯಾವಲಂಬನಂ ॥ ಎಂದುದಾಗಿ, ಕೂಡಲಸಂಗಮ ದೇವಾ ನಿಮ್ಮ ಸೆರೆಗೊಡ್ಡಿ ಬೇಡುವದೊಂದೇವರವ ಕರುಣಿಸಯ್ಯ.

೧೧೧. ಆವಾವಪರಿಯಲ್ಲಿ, ಆವಾವಭಾಗದಲ್ಲಿ, ಮಾಡಿಹೆಕೂಡಿ ದೆನೆಂಬವರ ಬಾಗಿಲತೋರಯ್ಯ! ತನುವನೊಪ್ಪಿಸಿದವರ ಮನವನೊಪ್ಪಿ ಸಿದವರ, ಧನವನೊಪ್ಪಿಸಿದವರ ಬಾಗಿಲವ ತೋರಯ್ಯ! ಇವೆಲ್ಲವನೊ ಪ್ಪಿಸಿ ಜಂಗಮರೆನ್ನವರೆನ್ನವರೆಂಬವರ ಕೆರಹಹೊತ್ತಿಲಿರಿಸೆನ್ನನು ಕೂಡಲ ಸಂಗಮದೇವಾ.

೧೧೨. ಆಯತ, ಸ್ವಾಯತ, ಸನ್ನಿಹಿತದನುಭಾವವ ನಾನೆತ್ತ ಬಲ್ಲೆನು? ಲಿಂಗಜಂಗಮಕ್ಕೆ ಮಾಡಿ ನೀಡುವ ಅಚ್ಚ ಶರಣರ ಮನೆ ಯಲ್ಲಿ ಭೃತ್ಯನಾಗಿರ್ಪೆನಯ್ಯಾ! ಇದು ಕಾರಣ, ಕೂಡಲಸಂಗಮದೇವಾ, ನಿಮ್ಮ ಶರಣರಲ್ಲದೆ ಅನ್ಯವನರಿಯೆನಾಗಿ.

೧೧೩. ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ, ಕಮಲಾಂಬು ಜಕ್ಕೆ ಭಾನುವಿನ ಉದಯದ ಚಿಂತೆ, ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ, ಎನಗೆ ಕೂಡಲಸಂಗಮದೇವರ ನೆನೆವ ಚಿಂತೆ.

೧೧೪. ಹೊಲಬುಗೆಟ್ಟ ಶಿಶುವು ತನ್ನ ತಾಯ ಬಯಸುವಂತೆ, ಬಟ್ಟೆದಪ್ಪಿದ ಕರು ತನ್ನ ಹಿಂಡತಾನರಸುವಂತೆ, ಬಯಸುತ್ತಿರ್ದೆನಯ್ಯ ನಿಮ್ಮ ಶರಣರ ಬರವನು ದಿನಕರನುದಯಕ್ಕೆ ಕಮಲವಿಕಸಿತವಾ ದಂತೆ, ಎನಗೆ ನಿಮ್ಮ ಶರಣರ ಬರವು ಕೂಡಲಸಂಗಮದೇವಾ.

೧೧೫. ಸೂರ್ಯನುದಯ ತಾವರೆಗೆ ಜೀವಾಳ, ಚಂದ್ರಮನು ದಯ ನೈದಿಲೆಗೆ ಜೀವಾಳ, ಕೂಪರ ಠಾವಿನಲ್ಲಿ ಕೂಟ ಜೀವಾಳ, ಒಲಿದ ಠಾವಿನಲ್ಲಿ ನೋಟವೆ ಜೀವಾಳ, ಕೂಡಲಸಂಗನಶರಣರ ಬರವೆನಗೆ ಪ್ರಾಣ ಜೀವಾಳವಯ್ಯ.

೧೧೭. ಜಲವ ತಪ್ಪಿದ ಮತ್ಸ್ಯ ಬದುಕುವದೇ ಸೋಜಿಗ. ಗಣ ತಿಂಥಿಣಿಯೊಳಗಿರಿಸೆನ್ನನು ಲಿಂಗವೇ. ಶಿವಶಿವ ಕೂಡಲಸಂಗಮದೇವನೇ ನಿಮ್ಮ ಸೆರೆಗೊಡ್ಡಿ ಬೇಡುವೆನು.

೧೧೭. ಅಯ್ಯಾ, ನಿಮ್ಮ ಮಹಾವ್ರತಿಗಳನಗಲಿ ಬದುಕಲಾರೆನು. ಶಿವಧೋ ಶಿವಧೋ. ಕಂಗಳಶೃಗಳಲ್ಲಿ ಮುಂದುಗಾಣೆನು. ಲಿಂಗಸಂಗಿ ಗಳನಗಲಿ, ಆನೆಂತು ಬದುಕುವೆನು ಕೂಡಲಸಂಗಮದೇವಾ?

೧೧೮. ಜಜ್ಜನೆ ಜರಿದೆನು, ಜಜ್ಜನೆ ಜರಿದೆನು, ಜಜ್ಜನೆ ಜರಿ ದೆನು, ನೋಡಯ್ಯ! ಬಿಬ್ಬನೆ ಬಿರಿದೆನು, ಬಿಬ್ಬನೆ ಬಿರಿದೆನು, ಬಿಬ್ಬನೆ ಬಿರಿದೆನು ನೋಡಯ್ಯ! ನಾನೊಬ್ಬನೆ ಉಳಿದೆನು ನಾನೊಬ್ಬನೆ ಉಳಿ ದೆನು. ಕೂಡಲಸಂಗಮದೇವಾ, ನಿಮ್ಮ ಶರಣರನಗಲಿದಕಾರಣ

೧೧೯. ಕಂಡರೆ ಮನೋಹರವಯ್ಯ! ಕಾಣದಿದ್ದರೆ ಅವಸ್ಥೆ ನೋಡ ಯ್ಯ! ಹಗಲು ಇರುಳಹುದು, ಇರುಳು ಹಗಲಹುದು. ಎಂತಯ್ಯ? ಕೂಡಲಸಂಗನಶರಣರ ನಗಲುವ ಧಾವತಿಯಿಂದ ಮರಣವೇಕರ ಲೇಸು ಕಂಡಯ್ಯ.

೧೨೦. ಅಂಗಯ್ಯತಿಂದುದೆನ್ನ ಕಂಗಳು. ಕೆತ್ತಿಹವಯ್ಯ. ಬಂದಿಹ ರಯ್ಯ ಪುರಾತನರೆನ್ನ ಮನೆಗೆ, ಬಂದಿಹರಯ್ಯ ಶರಣರೆನ್ನ ಮನೆಗೆ. ಕಂಡ ಕನಸು ದಿಟವಾಗಿ, ಜಂಗಮವೆನ್ನ ಮನೆಗೆ ಬಂದರೆ ಶಿವಾರ್ಚ ನೆಯ ಮಾಡಿಸುವೆ ಕೂಡಲಸಂಗಮದೇವಾ ನಿಮ್ಮ ಮುಂದೆ.

೧೨೧. ಲಿಂಗವ ಪೂಜಿಸುತ್ತ ಜಂಗಮದ ಮುಖವ ನೋಡು ತಿಪ್ಪ ಸುಖವ ಕೊಡು ಕಂಡೆಯಾ ಲಿಂಗವೇ. ಪರಮಸುಖವ ಕೊಡು ಕಂಡೆಯಾ ತಂದೆ, ಮಹಾಲಿಂಗವೇ. ಕೂಡಲಸಂಗಮದೇವಯ್ಯ, ಇದೇ ವರವ ನಿಮ್ಮಲ್ಲಿ ಬೇಡುವೆ.

೧೨೨. ಮನೆದೈವವು, ಕುಲದೈವವು, ನಿಮ್ಮವರಯ್ಯಾ! ತನು ಮೀಸಲು, ಮನಮೀಸಲು, ನಯನಮೀಸಲು, ಕೂಡಲಸಂಗಮದೇ ವೈಯ್ಯ ನಿಮ್ಮ ಶರಣರಿಗೆ.

೧೨೩. ಗಿಳಿಯ ಪಂಜರವನಿಕ್ಕಿ, ಸೊಡರಿಂಗೆಣ್ಣೆಯನೆರೆದು, ಬತ್ತಿ ಯನಿಕ್ಕಿ, ಬರವಹಾರುತ್ತಿದ್ದೆನೆಲಗವ್ವಾ! ತರಗೆಲೆ ಗಿರಕೆಂದಡೆ, ಹೊರಗೆ ಸಾನಾಲಿಸುವೆ. ಅಗಲಿದೆನೆಂದೆನ್ನ ಮನ ಧಿಗಿಲೆಂದಿತ್ತೆಲೆಗವ್ವ. ಕೂಡಲ

ಸಂಗಮದೇವನಶರಣರು ಬಂದು ಬಾಗಿಲಮುಂದೆ ನಿಂದು, ಶಿವಾ, ಎಂದರೆ ಸಂತೋಷಬಟ್ಟೆನೆಲಗವ್ವ.

೧೨೪. ಅಡವಿಯಲೊಬ್ಬ ಕಡು ನೀರಡಸಿ, ಕಡೆಯಲ್ಲಿ ನೀರಕಂಡಂತೆ, ಆಯಿತ್ತಯ್ಯಾ! ಕುರುಡ ಕಣ್ಣ ಹಡೆದಂತೆ, ಬಡವ ನಿಧಾನವ ಕಂಡಂತಾಯಿತ್ತಯ್ಯಾ! ನಮ್ಮ ಕೂಡಲಸಂಗಮದೇವರ ಬರವೆನ್ನ ಪ್ರಾಣ ಕಂಡಯ್ಯ.

೧೨೫. ಇಂದೆನ್ನಮನೆಗೆ ಪ್ರಮಥರು ಬಂದಿಹರೆಂದು, ಗುಡಿತೋರಣವ ಕಟ್ಟಿ, ಷಡುಸಮ್ಮಾರ್ಜನೆಯ ಮಾಡಿ, ರಂಗವೋಲೆಯನಿಕ್ಕಿ, ಉಘೇ, ಚಾಂಗು, ಭಲಾ, ಎಂಬೆ, ಕೂಡಲಸಂಗನಶರಣರು ತಮ್ಮ ಒಕ್ಕುದನಿಕ್ಕಿ ಸಲಹುವರಾಗಿ.

೧೨೬. ಸಾಸಿವೆಯ ಮೇಲೆ ಸಾಗರ ಹರಿದಂತಾಯಿತ್ತಯ್ಯಾ! ಆನಂದದಿಂದ ನಲಿನಲಿದಾಡುವೆನಯ್ಯ! ಆನಂದದಿಂದ ಕುಣಿಕುಣಿದಾಡುವೆ-ಕೂಡಲಸಂಗನಶರಣರು ಬಂದರೆ ಉಬ್ಬಿ ಕೊಬ್ಬಿ ಹರುಷದ ಲೋಲಾಡುವೆ.

೧೨೭. ಮನಮನ ಬೆರಿಸಿದಲ್ಲಿ, ತನುಕರಗದಿದ್ದಡೆ, ಸೋಂಕಿನಲ್ಲಿ ಪುಳಕಂಗಳು ಹೊರಹೊಮ್ಮದಿದ್ದಡೆ ಕಂಗಳಶ್ರುಜಲಂಗಳು ಸುರಿಯದಿದ್ದಡೆ, ನುಡಿವಲ್ಲಿಗದ್ಗದಂಗಳು ಹೊರಹೊಮ್ಮದಿದ್ದಡೆ ಕೂಡಲಸಂಗಮದೇವರ ಭಕ್ತಿಗಿದೇಚಿಹ್ನ, ಎನ್ನಲ್ಲಿ ಇಲ್ಲವಾಗಿ, ಆನು ಡಂಭಕ ಕಾಣಿರೇ.

೧೨೮. ಅಷ್ಟವಿಧಾರ್ಚನೆ, ಷೋಡಶೋಪಚಾರಂಗಳನು, ಅರಸರರಿಯದ ಬಿಟ್ಟಿಯ ಮಾಡುವೆನು. ಎನ್ನತಾಗಿದ ಸುಖವ ಜಂಗಮಕ್ಕೆ ಅರ್ಪಿಸಲರಿಯದ ಉಪಚಾರಿಯಾನು. ಸ್ಥಾವರ ಜಂಗಮವನರಿಯದ ಪೂಜಕ ನಾನು. ಮತ್ತೆ ನಾಚದೆ, ಕೂಡಲಸಂಗಮದೇವಯ್ಯ ಜಂಗಮವೆನ್ನ ಪ್ರಾಣಲಿಂಗವೆಂಬೆನು.

೧೨೯. ಸ್ಥಾವರ ಜಂಗಮ ಒಂದೇ ಎಂದು ಇದಿರ ನುಡಿವೆ. ನಾನೆಡಹುತಿಪ್ಪೆ. ಸಹಜನಲ್ಲಯ್ಯ. ಆನು ಸವ್ಯಕ್ಕನಲ್ಲಯ್ಯ. ಆನು ಉಭಯಲಿಂಗಸಂಗಿಎಂಬೆನು. ಈ ನುಡಿ ಸುಡದಿಹುದೆ ಕೂಡಲಸಂಗಮದೇವಾ?

೧೩೦ ಮಸಿಯುನೇಸುಕಾಲ ಬೆಳಗಿದರೆ, ಬಿಳಿದಾಗಬಲ್ಲುದೆ? ಕರ್ಮಸ್ಥಿತಿ ಬೆನ್ನಬಿಡದು. ಅನಂತಕೋಟಿ ಸನ್ಮಾನವ ಮಾಡಿದಡೇನು? ಒಂದು

ನಿಮಿಷ ಉದಾಸೀನವೇ ಕೆಡಿಸಿತ್ತು. ಕೂಡಲಸಂಗಮದೇವಾ ನಿಮ್ಮ ನಂ ಬಿಯೂ ನಂಬದ ಡಂಭಕ ನಾನಯ್ಯ.

೧೩೧ ಎಳ್ಳಿಲ್ಲದ ಗಾಣವನಾಡಿದೆತ್ತಿನಂತಾಯಿತ್ತೆನ್ನಭಕ್ತಿ. ಉಪ್ಪು ಅಪ್ಪುವಿನಲ್ಲಿ ಎದ್ದಿ ಮೆಲ್ಲಿದಂತಾಯಿತ್ತೆನ್ನಭಕ್ತಿ. ಕೂಡಲಸಂಗಮದೇವಾ ಆನು ಮಾಡಿದೆನೆಂಬ ಕಿಚ್ಚು ಸಾಲದೇ?

೧೩೨. ಅಷ್ಟವಿಧಾರ್ಚನೆ, ಷೋಡಶೋಪಚಾರವ ಮಾಡುವ ಹಮ್ಮಿನಲ್ಲಿ ಬೆಂದೆನಯ್ಯಾ! ಗುರುವೆಂಬರಿಯೆ, ಲಿಂಗವೆಂಬರಿಯೆ, ಜಂಗ ಮವೆಂದರಿಯೆ, ಪ್ರಸಾದವೆಂದರಿಯೆ. ಆನು ಬೆಂದೆನಯ್ಯಾ ಕೂಡಲಸಂ ಗಮದೇವಾ, ಆನುಮಾಡುವದೆಲ್ಲ ಬರಿಯುಪಚಾರವಯ್ಯ

೧೩೩. ಎನ್ನಲ್ಲಿ ನಿನ್ನ ಮೇಲಣ ಭಕ್ತಿ ಸಾಸುವೆಯ ಷಡ್ಭಾಗದಿನಿ ತಿಲ್ಲ. ಎನ್ನ ಭಕ್ತನೆಂದೆಂಬರು, ನಾನಾವ ಪಾಪವ ಮಾಡಿದೆನೊ? ಜೇಳ ಯುದಮುನ್ನ, ಕೊಯ್ಯುವರೇ ಹೇಳಾ? ಇರಿಯುದನೀರ, ಇಲ್ಲದ ಸ್ಥೊಬ ಗುವನು ಎಲ್ಲ ಒಡೆಯರು - ಏರಿಸಿ ನುಡಿವರು. ಎನಗಿದು ವಿಧಿಯೇ ಕೂಡ ಲಸಂಗಮದೇವಾ?

೧೩೪. ಎನ್ನವರೊಲಿದು, ಹೊನ್ನಶೂಲದಲಿಕ್ಕಿದರೆನ್ನ ಹೊಗಳಿ ಹೊಗಳಿ. ಎನ್ನ ಹೊಗಳತೆ ಎನ್ನ ಬೈಗೊಂಡಿತ್ತಲ್ಲಾ! ಅಯ್ಯ ನಿಮ್ಮ ಮನ್ನಣೆಯೇ ಮಸದಲಗಾಗಿ ತಾಗಿತ್ತಲ್ಲಾ! ಅಯ್ಯೋ! ನೊಂದೆನು, ಸೈರಿ ಸಲಾರೆನು. ಕೂಡಲಸಂಗಮದೇವಾ, ನೀನೆನಗೊಳ್ಳಿದನಾದರೆ, ಎನ್ನ ಹೊಗಳತೆಗಡ್ಡ ಬಾರಾ ಧರ್ಮಿ

೧೩೫. ಎನ್ನವರೆನಗೊಲಿದು, ಹೊನ್ನಶೂಲದಲಿಕ್ಕಿದರಯ್ಯಾ! ಅ ಹಂಕಾರ ಪೂರಾಯ ಗಾಯದಲ್ಲಿ ಆನೆಂತು ಬದುಕುವೆನೆಂತು ಜೀವಿ ಸುವೆನಯ್ಯಾ! ಜಂಗಮವಾಗಿ ಬಂದು, ಜರಿದು, ಶೂಲವನಿಳುಹಿ, ಪ್ರಸಾ ದದ ಮದ್ದನಿಕ್ಕಿ ಸಲಹು ಕೂಡಲಸಂಗಮದೇವಾ.

೧೩೬. ಎಡದ ಕೈಯ್ಯಲ್ಲಿ ಹಾಲಬಟ್ಟಲು, ಬಲದ ಕೈಯ್ಯಲ್ಲಿ ಓಜು ಗಟ್ಟಿಗೆ, ಆವಾಗ ಬಂದಾನೊ ನಮ್ಮಯ್ಯ ಬಡಿದು ಹಾಲ ಕುಡಿಸುವ ತಂದೆ? ಶ್ಲೋಕ॥ ದಂಡಸ್ಥೀರ ದ್ವಯೋರ್ಹಸ್ತಂ। ಜಂಗಮಂಭಕ್ತಿ ಮಂದಿರಂ। ಅತಿಭಕ್ತಿ ಲಿಂಗ ಸಂತುಷ್ಟಂ। ಅಪಹಾಸ್ಯಮೇವ ದಂಡನಂ॥ ಎಂದುದಾಗಿ, ಕೂಡಲಸಂಗಮದೇವಯ್ಯ ತಾನೇ ಭಕ್ತಿಪಥವ ತೋರುವ ತಂದೆ.

೧೩೭. ನಾನಾ ಸ್ಥಾನಂಗಳಲ್ಲಿ ತೊಳಲಿಬಂದು ಕುಳ್ಳಿರ್ದುದು ತೆರಳಿವುದೇ ಅಯ್ಯಾ? ಅದು ಉಭಯ ಕುಳಕ್ಕಲ್ಲದೆ ತೆರಳದು. ಬೀದಿಯಲ್ಲಿ ಬಿದ್ದ ಶಿಶುವನು ಹೆತ್ತತಾಯಿ ಹತ್ತಿರಲ್ಲಿ ಬರದು ಎತ್ತುವಂತೆ, ಎನ್ನನಾರು ಜನ್ಮಕ್ಕೆ ತಂದು ಅಘೋರ ನರಕದಲ್ಲಿಕ್ಕಿದುದ ನಾನು ಬಲ್ಲೆನಾಗಿ, ಕೂಡಲಸಂಗಮದೇವಾ ನಿಮ್ಮ ಹಂಗೇನು ಅರಿಯೆನು ಉಭಯ ಲಿಂಗಜಂಗಮದ ಮರೆಹೊಕ್ಕು ಭವಂನಾಸ್ತಿಯಾಗಿ ಬದುಕಿದೆನು.

೧೩೮. ಅಯ್ಯ, ನಿಮ್ಮ ದೇವರೆಂದು ಪೂಜಿಸಲಾಗದಯ್ಯ! ಮೊನ ಜರೋಮಜ ಮಹಾ ಮುನಿಗಳ ಲಯವ ಮಾಡಿದುದ ನಾ ಬಲ್ಲೆನಾಗಿ. ಅಯ್ಯ! ನಿಮ್ಮದೇವರೆಂದು ನಂಬಿ ಪೂಜಿಸಲಾಗದಯ್ಯ! ನವಕೋಟಿ ಬ್ರಹ್ಮರಿಗೆ ಪ್ರಳಯವ ಮಾಡಿದುದ ನಾ ಬಲ್ಲೆನಾಗಿ ಅಯ್ಯ! ನಿಮ್ಮದೇವರೆಂದು ನಂಬಿ ಪೂಜಿಸಲಾಗದಯ್ಯ! ದಶಕೋಟಿ ನಾರಾಯಣರಿಗೆ ಮರಣವ ಮಾಡಿದುದ ನಾ ಬಲ್ಲೆನಾಗಿ. ಅಯ್ಯ ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ! ಅನಂತಕೋಟಿ ರುದ್ರರಿಗೆ ಲಯವ ಮಾಡಿದುದ ನಾ ಬಲ್ಲೆನಾಗಿ. ಅಯ್ಯ! ನಿಮ್ಮ ದೇವರೆಂದು ಪೂಜಿಸಲಾಗದಯ್ಯ! ಎನ್ನ ಏಳೇಳು ಭವಕ್ಕೆ ತಂದಲ್ಲಿ ಆನು ಉಭಯ ಲಿಂಗಜಂಗಮದ ಮರೆಹೊಕ್ಕು, ಭವಂನಾಸ್ತಿಯಾಗಿ, ಬದುಕಿದೆನಯ್ಯಾ! ಕೂಡಲಸಂಗಮದೇವ

೧೩೯. ಲಿಂಗದಕುಶನ ಕಠವುಟ್ಟಿ, ಜಂಗಮದರುಶನ ಶಿರವುಟ್ಟಿ, ಆವುದು ಘನವೆಂಬೆ, ಆವುದು ಕಿರಿದೆಂಬೆ? ತಾಳಸಂಪುಟಕ್ಕೆ ಬಾರದ ಘನವನರ್ಪಿಸಹೋದರೆ, ಅರ್ಪಣಮುನ್ನವೇ ಇಲ್ಲ. ಗಮನ ನಿರ್ಗಮನವಾಯಿತ್ತು ಈ ಉಭಯ ಭೇದವನರಿಯದಾ ಜಂಗಮವೇ ಲಿಂಗ ಕೂಡಲಸಂಗಮದೇವಾ.

೧೪೦. ಎಲ್ಲರಿಗಿಂತಲು ಶಿವಭಕ್ತರೇ ಅಧಿಕರು ನೋಡಯ್ಯ. ಇವಕ್ಕೆ ಅಧಿಕವಾಗಿ ಜಂಗಮವ ಕಂಡೆ. ಈ ದ್ವಿವಿಧವನೊಂದೇ ಎಂದು ನಂಬಿದೆ, ಕೂಡಲಸಂಗಮದೇವಾ.

೧೪೧. ಕೃತುಯುಗದಲ್ಲಿ ಕೇದಾರವೆಂಬ ಮೂಲಸ್ಥಾನ, ತ್ರೇತಾಯುಗದಲ್ಲಿ ವಾರಣಾಸಿ ಎಂಬ ಮೂಲಸ್ಥಾನ, ದ್ವಾಪರಯುಗದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ, ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನ ನಾನಾಸ್ಥಾನಂಗಳ ಮುಟ್ಟಿದೆ, ಜಂಗಮವೇ ಲಿಂಗವೆಂದು ನಂಬಿದೆ ಕೂಡಲಸಂಗಮದೇವಾ.

೧೪೨. ಭಕ್ತದೇಹಿಕ ದೇವನಪ್ಪ ದೇವನು ಸದ್ಭಕ್ತರ ಬಳಿಯಲ್ಲಿ ಬಪ್ಪನಾಗಿ, ಆಳ್ದನು ಬರಲು, ಆಳುಮಂಚದ ಮೇಲೆ ಇಪ್ಪುದು ಗುಣವೇ ಪೇಳಾ? ಕೂಡಲಸಂಗಮದೇವಾ, ಜಂಗಮರೂಪಾಗಿ ಸಂಗಯ್ಯ ಬಂದಾನೆಂದು, ಎಂದೆಂದೂ ನಾನು ಮಂಚವನೇರದ ಭಾಷೆ.

೧೪೩. ಜಂಗಮ ವಿರಹಿತ ಲಿಂಗಾರ್ಚನೆ, ಮಳಲಲೆರದ ಜಲದಂತೆ. ಜಂಗಮ ಸನ್ನಿಹಿತ ಲಿಂಗಾರ್ಚನೆ ಇದೇ ಭಕ್ತಿಗೆ ಪಥವಯ್ಯ. ಜಂಗಮ ಪ್ರಸಾದ ಭೋಗೋಪಭೋಗವು ಎನಗಿದೇ ಲಿಂಗಾರ್ಚನೆ. ಮತ್ತೊಂದನರಿದೆನಾದರೆ, ಕೂಡಲಸಂಗಮದೇವ ನರಕದಲ್ಲಿಕ್ಕುವಾ

೧೪೪. ಭಿತ್ತಿ ಇಲ್ಲದೆ ಬರೆಯಬಹುದೆ ಚಿತ್ತಾರವ? ಬಿತ್ತಿಬೆಳೆಯಬಹುದೆ, ಧರೆ ಇಲ್ಲದೆ? ಜಂಗಮವಿಲ್ಲದೆ ಮಾಡುವ ಲಿಂಗಾರ್ಚನೆ ರೂಢೀಶನ ಭೇದಿಸಬಹುದೆ? ಒಡಲಿಲ್ಲದ ನಿರಾಳಕರ್ತೃ ಕೂಡಲಸಂಗಮದೇವ ಜಂಗಮ ಮುಖ ಲಿಂಗವಾದನಾಗಿ, ಮತ್ತೊಂದನರಿಯೆನಯ್ಯ.

೧೪೫. ಸಮಯೋಚಿತದಲ್ಲಿ ಲಿಂಗಾರ್ಚನೆಯ ಮಾಡುತಿರ್ಪನಾ ಭಕ್ತನು. ಮಾಡಿದರೆ ಮಾಡಲಿ. ಮಾಡಿದರೆ ತಪ್ಪೇನು? ಬಂದ ಜಂಗಮದ ಶಬ್ದವ ಕೇಳಿ, ಪ್ರಸಾದಕ್ಕೆ ಕೈದುಡುಕಿದರೆ, ಪ್ರಸಾದದಲ್ಲಿ ಕಿಲ್ಬಿಷ. ಸಮಯೋಚಿತದಲ್ಲಿ ಬಂದ ಜಂಗಮದ ಶಬ್ದವಕೇಳಿ, ಪ್ರಸಾದಕ್ಕೆ ಕೈದೆಗೆದರೆ ಅದು ಲಿಂಗಕ್ಕೆ ಬೋನ. ಇದುಕಾರಣ ಕೂಡಲಸಂಗಮದೇವಾ, ಇಂತಪ್ಪ ಸದಾಚಾರಿಗಳನೆನಗೆ ತೋರಯ್ಯ.

೧೪೬. ಉತ್ತಮ, ಮಧ್ಯಮ, ಕನಿಷ್ಠವೆಂದು, ಬಂದ ಜಂಗಮವ ನೆಂದೆನಾದರೆ ನೊಂದೆನಯ್ಯ ನಾನು ಬೆಂದೆನಯ್ಯ. ಎನ್ನಕಿಚ್ಚು ಎನ್ನ ಸುಟ್ಟಿತ್ತು. ಸುಖಿಜಂಗಮ, ಸಾಮಾನ್ಯ ಜಂಗಮವೆಂದುಂಟೆ ಕೂಡಲಸಂಗಮದೇವಾ?

೧೪೭. ಕೆಂಡದಲ್ಲಿಟ್ಟರೆ ಸ್ವೈಬೆಂದುದೆಂಬರು. ಕೊಂಡಿಟ್ಟವನ ಕೈ ಮುನ್ನವೇ ಬೆಂದುದು. ನೊಂದೆನಯ್ಯಾ ನಾನು, ಬೆಂದೆನಯ್ಯಾ ನಾನು. ಕೂಡಲಸಂಗನಶರಣರ ಕಂಡು, ಕಾಣದಂತಡ್ಡ ಮುಖವಿಟ್ಟರೆ ನಾನಂದೇ ಬೆಂದೆನಯ್ಯಾ.

೧೪೮. ಎಡದ ಕೈಯ್ಯಲ್ಲಿ ನಿಗಳವನಿಕ್ಕಿ, ಬಲದ ಕೈಯ್ಯನು ಕಡಿದುಕೊಂಡರೆ, ನೋಯದಿಪ್ಪದೇನಯ್ಯ? ಪ್ರಾಣ ಒಂದಾಗಿ ದೇಹಬೇ

ರಿಲ್ಲ. ಲಿಂಗವ ಪೂಜಿಸಿ, ಜಂಗಮವನುದಾಸೀನವ ಮಾಡಿದರೆ, ಬೆಂದೆನಯ್ಯ ನಾನು ಕೂಡಲಸಂಗಮದೇವಾ.

೧೪೯. ತನುವ ನೋಯಿಸಿ, ಮನವ ಬಳಲಿಸಿ, ನಿಮ್ಮ ಪಾದವ ಪಿಡಿದವರೊಳರೇ? ಈ ನುಡಿ ಸುಡದಿಹುದೆ? ಕೂಡಲಸಂಗಮದೇವಾ, ಶಿವಭಕ್ತರ ನೋವು ಲಿಂಗದ ನೋವು.

೧೫೦. ಆತ್ಮಸ್ತುತಿ, ಪರನಿಂದೆಯ ಕೇಳಿಸದಿರಯ್ಯ! ನಿಮ್ಮ ಧರ್ಮ. ಆನು ಭಕ್ತ ಎನ್ನಲ್ಲಿ ಲೇಸುಂಟೆಂದು ಪರಿಣಾಮಿಸಿದರೆ, ನಿಮಗಾನು ದ್ರೋಹಿಯಯ್ಯ! ಕೂಡಲಸಂಗಮದೇವಾ ನಿಮ್ಮ ಶರಣರ ಲೇಸೇ ಎನ್ನ ಲೇಸಯ್ಯ.

೧೫೧. ನಡೆಯಲರಿಯದೆ, ನುಡಿಯಲರಿಯದೆ, ಲಿಂಗವ ಪೂಜಿಸಿ ಫಲವೇನು? ಅವರ ಸುಖವೆನ್ನ ಸುಖ. ಅವರ ದುಃಖವೆನ್ನ ದುಃಖ. ಕೂಡಲಸಂಗನಶರಣರ ಮನ ನೊಂದರೆ, ನಾನು ಬೆಂದೆನಯ್ಯಾ

೧೫೨. ಬಂಜೆ ಬೇನೆಯನರಿಯದಂತೆ, ಒಬ್ಬರೊಂದು ನುಡಿವರಿ ಕೇಳಿರಯ್ಯ! ಎನ್ನಾಯುಷ್ಯ ಎನ್ನ ಭವಿಷ್ಯ ಎನ್ನ ಭಕ್ತರು, ಕಂಡಯ್ಯ! ಎನ್ನಾಯುಷ್ಯ ಎನ್ನ ಭವಿಷ್ಯ ಎನ್ನ ಪ್ರಮಥರು, ಕಂಡಯ್ಯ. ಕೂಡಲಸಂಗನಶರಣರು ಮುಖಲಿಂಗಿಗಳಯ್ಯ.

೧೫೩. ಬೇರೂರಿಂದ ಬಂದ ಜಂಗಮವೇ ಲಿಂಗವೆಂದು ಕಂಡು ಮನೆಯಲ್ಲಿದ್ದ ಜಂಗಮವನುದಾಸೀನವ ಮಾಡಿದರೆ, ನಾನು ಬೆಂದೆನಯ್ಯ! ನಾನು ಬೆಂದ ಬೇಗೆಯನರಿಯೆ ಕಾಣಾ ಕೂಡಲಸಂಗಮದೇವಾ.

೧೫೪. ಉಟ್ಟುತೊಟ್ಟು ಪೂಜ್ಯನಾಗಿ ಬಂದ ಜಂಗಮವೇ ವಿಶೇಷವೆಂದು ಕಂಡು, ಕಂಥೆಬೊಂತೆಯಾಗಿ ಬಂದ ಜಂಗಮವ ಹೀನವೆಂದು ಕಂಡೆನಾದರೆ, ಪಂಚಮಹಾಪಾತಕ. ಇದು ಕಾರಣ ಜಂಗಮಕ್ಕೆ ಅನ್ನ ವಸ್ತ್ರ ಧನ ಮಾಟದಲ್ಲಿ ಎರಡಾಗಿ ಕಂಡೆನಾದರೆ, ನರಕದಲ್ಲಿಕ್ಕುವ ಕೂಡಲಸಂಗಮದೇವಾ.

೧೫೫. ಅಡ್ಡದೊಡ್ಡ ನಾನಲ್ಲಯ್ಯ! ದೊಡ್ಡ ಬಸಿರು ಎನಗಿಲ್ಲವಯ್ಯ! ದೊಡ್ಡವರನಲ್ಲದೆ ನಿಮ್ಮ ಶರಣರು ಮನ್ನಿಸರಯ್ಯ! ಹಡೆದುಂಬ ಸೂಳೆಯಂತೆ, ಧನವುಳ್ಳವರನರಸಿಯರಸಿ ಬೋಧಿಸಲು, ಪ್ರಾರ್ಥಿಸಲು, ಮುನ್ನ ನಾನರಿಯೆನಯ್ಯ! ದೊಡ್ಡತನವೆನಗಿಲ್ಲ. ಅಂಜುವೆನಂಜುವೆ ನಿಮ್ಮ ಪ್ರಮಥರಿಗೆ. ಅನಾಥ ನಾನಯ್ಯ ಕೂಡಲಸಂಗಮದೇವಯ್ಯ.

೧೫೬. ಕುದುರೆಸತ್ತಿಗೆಯುವರ ಕಂಡರೆ ಹೊರಳಿಬಿದ್ದು ಕಾಲಹಿಡಿವರಯ್ಯ. ಬಡಭಕ್ತರು ಬಂದರೆ ಎಡೆಯಿಲ್ಲ, ಅತ್ತಸನ್ನಿ ಎಂಬರಯ್ಯ! ಎನ್ನೊಡೆಯ ಕೂಡಲಸಂಗಯ್ಯನವರು ತಡೆಗೆಡೆಹಿ ಮೂಗ ಕೊಯ್ಯದೆ ಮಾಬನೇ?

೧೫೭. ದೂರದಿಂದ ಬಂದ ಜಂಗಮಯ್ಯಗಳೆಂದು ಸಾರಿರ್ದ ಜಂಗಮವ ಪರಿಚಾರಕರೆಂಬ ಕೇಡಿಂಗೆ ಬೆರಗಾದೆನಯ್ಯ! ಸಾರಿರ್ದವರು ದೂರದವರೆಂದು ಬೇರೆ ಮಾಡಿ ಕಂಡರೆ, ಕೂಡಲಸಂಗಮದೇವ ಶೃಂಗಾರದ ಮೂಗ ಹಲುದೋರ ಕೊಯ್ಯುವ.

೧೫೮. ಹಿಡಿವೆಡೆಯನೆ ಕಾಸಿ, ಹಿಡಿದ ಕೈಬೆಂದು, ಮಿಡುಮಿಡನೆ ಮಿಡುಕುವ ಮರುಳು ಮಾನವನ ಬಡವನೆಂಪೆನಬೇಡ. ಲಾಂಛನಧಾರಿಯಾನು. ಕಡು ಸ್ನೇಹದಿಂದವರ ಪೂಜೆಯ ಮಾಡುವುದು. ನಿಜವಡಗಿದರೂಪು ನಿರ್ವಯಲಸ್ಥಾನ. ನಡೆ ಲಿಂಗಜಂಗಮ ಕೂಡಲಸಂಗಮದೇವಾ.

೧೫೯. ಹಾಲು ಕಂದಲು ತುಪ್ಪದ ಮಡಿಕೆಯ ಬೋಡ ಮುಕ್ಕಿನ ಬೇಡ. ಹಾಲು ಸೀ, ತುಪ್ಪ ಕಮ್ಮಗೆ, ಲಿಂಗಕ್ಕೆ ಬೋನ, ಕೂಡಲಸಂಗನಶರಣರು ಅಂಗಹೀನರೆಂದರೆ ನಾಯಕ ನರಕ.

೧೬೦. ಆಚಾರವನ್ನರಿಯರಿ. ವಿಚಾರವನ್ನರಿಯರಿ. ಜಂಗಮಸ್ಥಲ ಲಿಂಗ ಕಾಣಿರಯ್ಯ! ಜಾತಿಭೇದವಿಲ್ಲ. ಸೂತಕವಿಲ್ಲ. ಅಜಾತಂಗೆ ಕುಲವಿಲ್ಲ ನುಡಿದಂತೆ ನಡೆಯದಿದ್ದರೆ ಕೂಡಲಸಂಗಯ್ಯ ಮೆಚ್ಚನು ಕಾಣಿರಯ್ಯ.

೧೬೧ ಸ್ಥಾವರಭಕ್ತಂಗೆ ಸೀಮೆಯುಲ್ಲದೆ ಜಂಗಮಕ್ಕೆ ಸೀಮೆ ಎಲ್ಲಿಯದೋ? ಅಂಬುಧಿಗೆ ಸೀಮೆಯುಲ್ಲವೆ, ಹರಿವ ನದಿಗೆ ಸೀಮೆ ಎಲ್ಲಿಯದು? ಭಕ್ತಂಗೆ ಸೀಮೆಯಲ್ಲದೆ ಜಂಗಮಕ್ಕೆ ಸೀಮೆಯುಂಟೆ, ಕೂಡಲಸಂಗಮದೇವಾ?

೧೬೨. ಎತ್ತಿಕೊಳಲೇತಕೆ, ಮತ್ತಿಳುಹಲೇಕಯ್ಯಾ? ದರದುರ ಭಕ್ತಿಯ ಮತ್ತೆ ಮಾಡಲೇತಕಯ್ಯ? ನಿಂದಿಸಲೇತಕಯ್ಯ? ಸ್ತುತಿಸಲೇತಕಯ್ಯ? ಹೋಗಬಿಟ್ಟು ಜಂಗಮಕೆ ನಿಂದೆ ಆಡುವನ ಬಾಯಲ್ಲಿ ಮೆಟ್ಟಿಹುಡಿಯ ಹೊಯ್ಯದೆ ಮಾಬನೆ ಕೂಡಲಸಂಗಮದೇವಾ?

೧೬೩. ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರನೆರೆದರೆ, ಮೇಲೆ

ಪಲ್ಲವಿಸಿತ್ತು ನೋಡಾ! ಲಿಂಗದ ಬಾಯಿ ಜಂಗಮವೆಂದು ಪಡಿ ಪ ದಾರ್ಥವ ನೀಡಿದರೆ, ಮುಂದೆ ಸಕಲಾರ್ಥವನೀವನು. ಆ ಜಂಗಮು ವ ಹರನೆಂದು ಕಂಡು, ನರನೆಂದು ಭಾವಿಸಿದರೆ ನಾಯಕ ನರಕ ತ ಪ್ಪದು ಕಾಣಾ ಕೂಡಲಸಂಗಮದೇವಾ.

೧೬೪. ಆರಾಧನೆಯ ಮಾಡಿದರೆ, ಅಮೃತದ ಬೆಳಸು. ವಿರೋ ಧಿಸಿದರೆ ವಿಷದ ಬೆಳಸು. ಇದು ಕಾರಣ ಲಿಂಗಜಂಗಮಕ್ಕೆ ಅಂಜಲೇ ಬೇಕು. ಸ್ಥಾವರ ಜಂಗಮ ಒಂದೆಂದರಿದರೆ, ಕೂಡಲಸಂಗಮದೇವ ಶರ ಣಸನ್ನಿಹಿತ.

೧೬೫. ಹೊಸ್ತಿಲ ಪೂಜಿಸಿ, ಹೊರಹೊರಟು ಹೋದ ಒಕ್ಕಲ ಗಿತ್ತಿಯಂತಾಯಿತ್ತೆನ್ನ ಭಕ್ತಿ. ಜಂಗಮವೆನ್ನೊಡೆಯರೆಂದು ಒಕ್ಕುದಕೊಂಡು ಉದಾಸೀನವ ಮಾಡಿದರೆ ಇಹಲೋಕಕ್ಕೆ ದೂರ ಪರಲೋಕಕ್ಕೆ ದೂರ. ಕೂಡಲಸಂಗಮದೇವ ಅಘೋರನರಕದಲ್ಲಿಕ್ಕುವ.

೧೬೬. ಲಿಂಗಪೂಜೆಯಮಾಡಿ, ಜಂಗಮವ ಕಂಡು ಉದಾಸೀನವ ಮಾಡಿದರೆ, ಆ ಲಿಂಗಪೂಜಕರಿಗೆ ಮಾಡಿದ ಶಿವದೂತರ ದಂಡವೆಂಬುದು, ಲೋಕದ ಕರ್ಮಿಗಳಿಗೆ ಮಾಡಿದ ಯಮದೂತರ ದಂಡವೆಂಬುದು. ಇದು ಕಾರಣ ಲಿಂಗಜಂಗಮ ಒಂದೇ ಎಂದರಿಯದವರ ಎನಗೊಮ್ಮೆ ತೋರದಿರಯ್ಯ ಕೂಡಲಸಂಗಮದೇವಾ.

೧೬೭. ಜಂಗಮವ ನಿಂದೆಯಮಾಡಿ, ಲಿಂಗವ ಪೂಜಿಸುವ ಭಕ್ತನ ಅಂಗವಣೆ ಎಂತೋ? ಶಿವಶಿವ! ನಿಂದಿಸುವ ಪೂಜಿಸುವ ಪಾತಕವ ಕೇಳಲಾಗದು. ಗುರುವಿನ ಗುರು ಜಂಗಮ ಇಂತೆಂದುದು ಕೂಡಲಸಂ ಗನ ವಚನ-

೧೬೮. ಅರಸನ ಕಂಡು ತನ್ನ ಪುರುಷನ ಮರೆದರೆ, ಮರನನೇರಿ ಕೈಯ್ಯ ಬಿಟ್ಟಂತಾಯಿತ್ತಯ್ಯ! ಇಹಲೋಕಕ್ಕೆ ದೂರ ಪರಲೋಕಕ್ಕೆ ದೂರ, ನಮ್ಮ ಕೂಡಲಸಂಗಮದೇವಯ್ಯ ಜಂಗಮ ಮುಖ ಲಿಂಗವಾದಕಾರಣ.

೧೬೯. ಜಂಗಮವಿಲ್ಲದ ಮಾಟ, ಕಂಗಳಿಲ್ಲದ ನೋಟ. ಹಿಂಗಿತ್ತು ಶಿವಲೋಕ. ಇನ್ನೆಲ್ಲಿಯದಯ್ಯ? ಲಿಂಗಕ್ಕೆ ಮಾಡಿದ ಬೋನವ ಸಿಂಬಕ ತಿಂಬಂತೆ, ಸಮಯೋಚಿತವನರಿಯದೆ, ಉದರವ ಹೊರೆವವರ ಅಘೋರ ನರಕದಲ್ಲಿಕ್ಕದೆ ಮಾಬನೆ ಕೂಡಲಸಂಗಮದೇವಾ?

೧೭೦. ಲಿಂಗದಲ್ಲಿ ದಿಟವನರಸುವರೆ, ಜಂಗಮದ ನೆರೆನಂಬುವುದು. ನಡೆ ಲಿಂಗ, ನುಡಿ ಲಿಂಗ ಮುಖ ಲಿಂಗ ಒಂದೇ ನಂಬೋ. ಯತ್ರಮಹೇಶ್ವರಸ್ತತ್ರ ಸನ್ನಿಹಿತನಾಗಿ, ಅಧರತಾಗಿದರುಚಿಯು, ಉದರತಾಗಿದಸುಖವ ಉಂಬ ಉಡುವ ಕೂಡಲಸಂಗಮದೇವಾ, ಜಂಗಮ ಮುಖದಲ್ಲಿ.

೧೭೧. ಜಂಗಮದ ಮನ ಭಾವದಲ್ಲಿ ಭಕ್ತನೇ ಭೃತ್ಯನೆಂದು, ಭಕ್ತನ ಮನಭಾವದಲ್ಲಿ ಜಂಗಮವೇ ಕರ್ತನೆಂದು ಇದ್ದಬಳಿಕ ಬಂದುದು ಬಾರದುದು, ಇದ್ದುದು ಹೋಯಿತ್ತೆಂಬ ಸಂದೇಹವಿಲ್ಲದಿರಬೇಕು. ಹೋಯಿತ್ತೆಂಬ ಗುಣ ಉಳ್ಳನ್ನಕ್ಕರ, ನಿಮಗೆ ದೂರ, ನಿಮ್ಮವರಿಗೆ ಮುನ್ನವೇ ದೂರ, ಶಿವಾಚಾರಕ್ಕೆ ಅಲ್ಲಿಂದತ್ತತ್ತಲೆ ದೂರ. ಜಂಗಮ ಹರಿದ ಹರಿವು ಜಂಗಮದ ನಿಂದ ನಿಲವು ಜಂಗಮದ ಗಳಗರ್ಜನೆ, ಜಂಗಮದ ಕೋಳಾಹಳಕ್ಕೆ ಸೈರಿಸದಿದ್ದರೆ, ನೀನಂದೇ ಮೂಗ ಕೊಯ್ಯಿ ಕೂಡಲಸಂಗಮದೇವಾ.

೧೭೨. ನಯನದಾಹಾರವ ಜಂಗಮವ ನೋಡಿಸುವೆ. ಶ್ರೋತ್ರದಾಹಾರವ ಜಂಗಮವ ಕೇಳಿಸುವೆ. ಘ್ರಾಣದಾಹಾರವ ಜಂಗಮಕ್ಕೆ ವಾಸಿಸುವೆ. ಜಿಹ್ವೆಯಾಹಾರವ ಜಂಗಮಕೆ ಉಣ್ಣಿಸುವೆ, ಕವಚದಾಹಾರವ ಜಂಗಮಕೆ ಹೊದಿಸುವೆ, ಅಧಿಕಪ್ರೇಮ ಪ್ರಣಾಮಂಗಳ ಮಾಡುವೆ, ಸಕಲ ಪದಾರ್ಥಂಗಳ ನೀಡುವೆ, ಕೂಡಲಸಂಗಮದೇವಾ ನಿಮ್ಮ ಶರಣರಿಗೆ.

೧೭೩. ಜಂಗಮವ ನಂಬದೆ, ಬೇರೆಯ ನಂಬೆನು. ಜಂಗಮವ ಕೂಡದೆ ಬೇರೆಯ ಕೂಡೆನು, ಜಂಗಮವ ಬೆರೆಯದೆ ಬೇರೆಯ ಬೆರೆಯೆನು, ಜಂಗಮವ ನುಡಿಸದೆ ಬೇರೆಯ ನುಡಿಸೆನು. ಜಂಗಮವ ಲಾಲಿಸದೆ ಬೇರೆಯ ಲಾಲಿಸೆನು, ಜಂಗಮಕೆ ಮಣಿಯದೆ ಬೇರೆಗೆ ಮಣಿಯೆನು. ಜಂಗಮಕೆ ನೀಡದೆ, ಬೇರೆಗೆ ನೀಡೆನು. ಜಂಗಮಕೆ ಬೊಗ್ಗದೆ, ಬೇರೆಗೆ ಬೊಗ್ಗೆನು. ಪೊಂಗುತ ನಾನಿಂತು ಪೇಳುವೆ ಪೇಳುವೆ, ಸಿಂಗರದಿಂದ ನೀವು ಮಂಗಳ ಮತಿಗಳು. ನಿಶ್ಚಯ ನಿಶ್ಚಯವಿದು, ನಾನೆಂಬೆ. ಕೂಡಲಸಂಗಮದೇವಾ ನಿನ್ನನೇ ನಂಬಿರ್ಪೆ.

೧೭೪. ಕಂದಿದೆನಯ್ಯಾ ಎನ್ನ ನೋಡುವರಿಲ್ಲದೆ. ಕುಂದಿದೆನಯ್ಯಾ ಎನ್ನ ನುಡಿಸುವರಿಲ್ಲದೆ. ಬಡವನಾದೆನಯ್ಯಾ ಎನ್ನ ಬೇಡುವರಿಲ್ಲದೆ. ಕಾಡುವ ಬೇಡುವ ಶರಣರ ತಂದು ಕಾಡಿಸುಬೇಡಿಸಯ್ಯಾ ಕೂಡಲಸಂಗಮದೇವ.

# ಭಕ್ತನ ಮಹೇಶ.

೧. ಎಂಬತ್ತು ನಾಲ್ಕು ಲಕ್ಷ ಮುಖದೊಳಗೊಂದೇ ಮುಖವಾಗಿ. ಕಾಡಿ ನೋಡೆನ್ನನು. ಬೇಡಿ ನೋಡೆನ್ನನು. ಬೇಡದಿದ್ದರೆ, ಅಯ್ಯ ಪ್ರಮಥರಾಣೆ ನಿಮಗೆ. ನೀನಾವ ಮುಖದಲ್ಲಿ ಬಂದು ಬೇಡಿದೊಡೀವೆನು, ಕೂಡಲಸಂಗಮದೇವಯ್ಯ.

೨. ವೇಷ ಅವಿಚಾರದಲ್ಲಿ ನಡೆಯಿತ್ತೆಂದು ಆಸುರದಲ್ಲಿ ಬೊಗಳುವ ಕುನ್ನಿ ನೀ ಕೇಳಾ! ಹರಿಯನೆ ದಾಸನ ವಸ್ತ್ರವ? ಉಣ್ಣನೇ ಚನ್ನಯ್ಯನ ಸಂಗಡ? ಪರವಧುವ ಕೊಳ್ಳನೇ ಸಿಂಧು ಬಲ್ಲಾಳನ? ಬೇಡನೇ ಸಿರಿಯಾಳನ ಮಗನ? ನಡೆವುದು ನುಡಿವುದು ಅವಿಚಾರವೆಂದು ಭಾವವಿಭಾವವೆಂದು ಕಂಡೆನಾದರೆ, ತಪ್ಪೆನ್ನದು. ಮೂಗಕೊಯ್ಯಿ ಕೂಡಲಸಂಗಮದೇವಾ.

೩. ನೀನಿಕ್ಕಿದ ಬಿಯ್ಯದಲ್ಲಿ ವಂಚನೆಯುಳ್ಳೊಡೆ, ಸಂಗನಿಮ್ಮ ತೊತ್ತುತನಕ್ಕೆ ದೂರವಯ್ಯ. ಕದ್ದು ತಿಂದರೆ ಕೈ ಹಿಡಿದೊಮ್ಮೆ ಬಡಿದು ತುಡುಗುಣಿತನವ ಮಾಣಿಸಯ್ಯ. ಜಂಗಮವು ಮನೆಗೆ ಬಂದಲ್ಲಿ ಓಸರಿಸಿದರೆ ಹಿಡಿದು ಮೂಗ ಕೊಯ್ಯಯ್ಯ ಕೂಡಲಸಂಗಮದೇವ.

೪. ದೇವನಿಂತವನೆಂದು ತೋರಿ ಕೊಡುವೆ ಗಣಂಗಳಿಗೆ. ಬಲ್ಲಾಳನ ವಧುವ ಬೇಡಿದಾತ ನೀ ದೇವಾ! ದೇವನಿಂತವನೆಂದು ತೋರಿಕೊಡುವೆನು ನಾನು ಗಣಂಗಳಿಗೆ. ದಾಸನ ವಸ್ತ್ರವ ಬೇಡಿದಾತ ನೀ ದೇವಾ! ದೇವನಿಂತವನೆಂದು ತೋರಿಕೊಡುವೆನು ನಾನು ಗಣಂಗಳಿಗೆ. ಸಿರಿಯಾಳನ ಮಗನ ಬೇಡಿದಾತ ನೀ ದೇವಾ ಕೂಡಲಸಂಗಮದೇವಾ ಜಂಗಮ ಮುಖ ಲಿಂಗವಾದನಾಗಿ ಕಾಡಿ ನೋಡುವನು, ಮತ್ತೆ ಬೇಡಿ ನೋಡುವನು.

೫. ಹೊನ್ನಿನೊಳಗೊಂದೊರೆಯು, ಸೀರೆಯೊಳಗೊಂದೆಳೆಯು, ಅನ್ನದೊಳಗೊಂದಗುಳ ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ, ನಿಮ್ಮಾಣೆ ನಿಮ್ಮ ಪುರಾತನರಾಣೆ. ನಿಮ್ಮ ಶರಣರಿಗಲ್ಲದೆ, ಮತ್ತೊಂದಕ್ಕೆ ಮಾಡೆನು ಕೂಡಲಸಂಗಮದೇವಾ.

೬. ಆಲುತ್ತಲು ಹರೆಯು ಹೊಯಿಸಿ, ಅಂಕವ ಮಾಡಿದೆಲ್ಲರ ಕಂಡು, ಆನುಬೇಡೆಂದರೆ ಮಾಣೆ. ಕಲಿತನವ ಮಾಡಿದೆಲ್ಲರ ಕಂಡು,

ಅಲ್ಲಿ ಹೋಯಿತ್ತು. ಆಗಳೆ ಎಂದರೆ ಆಶೆಮಾಡೆನು, ಕೂಡಲಸಂಗ ಮದೇವಾ.

೭. ಕಾಗೆ ಒಂದಗಳು ಕಂಡರೆ, ಕರೆಯದೆ ತನ್ನ ಬಳಗವನೆಲ್ಲ ವನು? ಕೋಳಿ ಒಂದು ಗುಟಕವ ಕಂಡರೆ ಕರೆಯದೆ ತನ್ನ ಕುಲವನೆ ಲ್ಲವನು? ಶಿವಭಕ್ತನಾಗಿ, ಭಕ್ತಿ ಪಕ್ಷವಿಲ್ಲದಿದ್ದರೆ, ಕಾಗೆ ಕೋಳಿಗಿಂತ ಕರಕಷ್ಟ ಕೂಡಲಸಂಗಮದೇವಾ.

೮. ಆವನಾದರೇನು? ಹೇಮವಿಲ್ಲದಂಗೈಸಬಹುದೆ? ಕೊಡಲಿಲ್ಲೆಂಬುದರಿಂದ ಸಾಯಲುಬಹುದು. ಸೈರಿಸಬಾರದು. ಬೇಡುವರ ನೋಡಿ, ಈಯಲಿಲ್ಲದವನ ಜೀವನವದೇತಕೆ ಕೂಡಲಸಂಗಮದೇವಾ?

೯. ಹರಗಣಪಂಕ್ತಿಯ ನಡುವೆ ಕುಳ್ಳಿರ್ದು ನಾನು ಒಡೆತನದ ನಾಯಿತೇಜವ ಹೊತ್ತುಕೊಂಡು ಮಡದಿಯನ್ನಗಲೊಳಗೆ ಸಕಲದೇವಾನ್ನ ಒಡೆಯರಿಗಿಂದ ಮಿಗಿಲಾಗಿ ಇಕ್ಕಲು ತೆಗೆದಿರಿಸಿದೆನು. ಈ ಪರಿಯ ಆಕೆಂಗೆ ತೋರಲು ಕಿಲ್ಬಿಷವಾದವು. ಕರುಣಿ ಚೆನ್ನಬಸವಣ್ಣನ ಮರೆದು ಕೊಂಡೆನಾದರೆ ಒಡೆಯ ಕೂಡಲಸಂಗಯ್ಯ ಕೆಡಹಿ ನರಕದಲ್ಲಿಕ್ಕುವ.

೧೦. ಭಕ್ತಿ ಸಂಭಾಷಣೆಯ ನುಡಿಯ ನುಡಿವೆ. ನುಡಿದಂತೆ ನಡೆವೆ. ನಡೆಯೊಳಗೆ ನುಡಿಯ ಪೂರೈಸುವೆ. ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯ್ಯಲ್ಲಿ ಒಂದು ಜವೆ ಕೊರತೆಯಾದರೆ, ಎನ್ನನೆದ್ದಿ ನೀನೆದ್ದು ಹೋಗು ಕೂಡಲಸಂಗಮದೇವಾ.

೧೧. ಓಡುವಾತ ಲೆಂಕನಲ್ಲ. ಬೇಡುವಾತ ಭಕ್ತನಲ್ಲ. ಓಡಲಾಗದು ಲೆಂಕನು. ಬೇಡಲಾಗದು ಭಕ್ತನು. ಓಡೆನಯ್ಯಾ ಬೇಡೆನಯ್ಯಾ ಕೂಡಲಸಂಗಮದೇವಾ.

೧೨. ಚಂದ್ರಮನ ಶೈತ್ಯದಲ್ಲಿ, ಬೆಳೆವ ಕಾಯಕ್ಕೆ, ಬೆಳದಿಂಗಳ ಬಯಸುವ ಹಂಗೇಕಯ್ಯ? ಶರಣರ ಸಂಗದಲ್ಲಿರ್ದು ಶಿವನ ಬೇಡುವ ಹಂಗೇಕಯ್ಯ? ಕೂಡಲಸಂಗನಶರಣರು ಬಂದು ನಮ್ಮವರೆಂದರೆ, ಸಾಲದೇನಯ್ಯಾ?

೧೩. ದಾಸನ ವಸ್ತ್ರವ ಬೇಡದಮುನ್ನ, ತವನಿಧಿಯ ನಿತ್ತರೆ, ನಿಮ್ಮ ದೇವರೆಂಬೆ. ಸಿರಿಯಾಳನ ಮಗನ ಜೇಡದಮುನ್ನ, ಕಂಚಿಯ ಪುರವ ಕೈಲಾಸಕ್ಕೊಯ್ದರೆ, ನಿಮ್ಮ ದೇವರೆಂಬೆ. ಬಲ್ಲಾಳನ ವಧುವ

ಬೇಡದವಮುನ್ನ, ಸ್ವಯಂಲಿಂಗವಾದರೆ, ನಿಮ್ಮ ದೇವರೆಂಬೆ. ದೇಹಿನೀನು ವ್ಯಾಪಾರಿಗಳು ನಮ್ಮವರು. ಬೇಡು ಕೂಡಲಸಂಗಮದೇವಾ ಎಮ್ಮವರ ಕೈಯ್ಯಲ್ಲೂ.

೧೪. ಎಲ್ಲರೂ ವೀರರು. ಎಲ್ಲರೂ ಧೀರರು. ಎಲ್ಲರೂ ಮಹಿಮರು. ಎಲ್ಲರೂ ಪ್ರಮಥರು. ಕಾಳಗದ ಮುಖದಲ್ಲಿ ಕಾಣಬಹುದು. ಓಡುವ ಮುಖದಲ್ಲಿ ಕಾಣಬಾರದು. ನಮ್ಮ ಕೂಡಲಸಂಗನಶರಣರು ಧೀರರು, ಉಳಿದವರೆಲ್ಲ ಅಧೀರರು.

೧೫. ಎಲ್ಲ ನೋಡಿದಡಲ್ಲಿ ಮನವೆಳಿಸಿದಡೆ, ಆಣೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಪರವಧುವನು ಮಹಾದೇವಿ ಎಂದು ಕಾಂಬೆ ಕೂಡಲಸಂಗಮದೇವಾ.

೧೬. ಹರಿವ ಹಾವಿಂಗಂಜೆ, ಉರಿಯ ನಾಲಿಗೆಗಂಜೆ, ಸುರಿಗೆಯ ಮೊನೆಗಂಜೆ. ಒಂದಕ್ಕಂಜುವೆನೊಂದಕ್ಕಳುಕುವೆ. ಪರಸ್ತ್ರೀ ಪರಧನ ವೆಂಬ ಜೂಜಿಂಗಂಜುವೆ. ಮುನ್ನಂಜದ ರಾವಣನೇ ವಿಧಿಗೊಳಗಾದ? ಅಂಜುವೆನಯ್ಯಾ ಕೂಡಲಸಂಗಮದೇವಾ.

೧೭. ಒಂದಕ್ಕೊಂಬತ್ತು ನುಡಿವ, ಕಣ್ಣ ಕೆಂಚನೆಮಾಡಿ, ಗಂಡು ಗೆದರಿ, ಮುಡುಹಿಕ್ಕಿ ಕೆಲವರ ಕಂಡಂಜುವೆನೋಸರಿಸುವೆ. ಓಡಿದೆ ನೆಂಬ ಭಂಗವಾದಡಾಗಲಿ. ನಮ್ಮ ಕೂಡಲಸಂಗನಶರಣರನುಭಾವವಿ ಲ್ಲದವರ ಹೊಲಮೇರೆಯ ಹೊದ್ದೆ, ಹೊಲನ ಬಿಟ್ಟೋಡುವೆ.

೧೮ ಒಡೆಯರು ಬಂದರೆ ಗುಡಿತೋರಣವ ಕಟ್ಟಿ, ನಂಟರು ಬಂ ದರೆ, ಸಮಯವಿಲ್ಲೆಂಬೆ. ಅಂದೇಕೆ ಬಾರರು? ನೀರಿಂಗೆ ನೇಣಿಂಗೆ ಹೊ ರಗಾದಂದು ಸಮಯಾಚಾರಕ್ಕೆ ಒಳಗಾದಂದು, ಪರುಷಮುಟ್ಟಲು, ಕಬ್ಬುನ ಸುವರ್ಣವಾದುದು. ಬಳಿಕ ಬಂಧುಗಳುಂಟೇ, ಕೂಡಲಸಂಗ ಮದೇವಾ?

೧೯. ಒಡೆಯರಾಡುವ ಮಾತ ಕಡೆಯ ಪರಿಯಂತ ಕೇಳಿ, ಇದಿರ ಹೋಗಿ ಕಿಂಕರನಾಗಿ ನಡುಗುತ್ತ ಬಿನ್ನಹವಮಾಡುವ ಸದ್ಭಕ್ತನತೋ ರಯ್ಯ ಎನಗೆ. ಒಡೆಯರಾಡುವ ಮಾತಕಂಡು, ಕರದಲ್ಲಿ ಕಡೆಮೆಟ್ಟಿ ಬಾಯಿ ಘನವೆಂದು ಆಡುವನ ತೋರದಿರಯ್ಯ! ಅವನಸಂಗದೊಳಗಿ ರಿಸದಿರಯ್ಯ! ಅವನ ಸಹಪಂತಿಯಲ್ಲಿ ಕುಳ್ಳಿರಿಸದಿರಯ್ಯ ಕೂಡಲಸಂಗ ಮದೇವಯ್ಯ ನಿಮ್ಮ ಬೇಡುವದಿದೊಂದೇ ವರವ.

೨೦. ಬಡಹಾರುವನು ಏಸು ಭಕ್ತನಾದರೆಯು ನೇಣಿನ ಹಂಗಬಿಡ ಬಣಜಿಗನು ಏಸುಭಕ್ತನಾದೊಡೆಯು ವಟ್ಟಿಲ ಬೆನಕನ ಹಂಗ ಬಿಡ. ಮಾಲ ಗಾರನು ಏಸುಭಕ್ತನಾದರೆಯು, ಬಾವಿಯ ಬೊಮ್ಮನ ಹಂಗಬಿಡ. ಕಂಚು ಗಾರನು ಏಸು ಭಕ್ತನಾದರೆಯು ಕಾಳಿಕಾದೇವಿಯ ಹಂಗಬಿಡ. ನಾನಾ ವಹಂಗಿನವಲ್ಲ. ನಾ ನಿಮ್ಮ ಶರಣರ ಹಂಗಿನವನಯ್ಯಾ ಕೂಡಲಸಂಗಮ ದೇವಾ.

೨೧. ಶ್ರೀ ವಿಭೂತಿ ರುದ್ರಾಕ್ಷಿಲಿಂಗವಿದ್ದವರ ನೀನೆಂಬೆ. ಇಲ್ಲ ದವರನೆ ಭವಿ ಎಂಬೆ, ಕೂಡಲಸಂಗಮದೇವಾ.

೨೨. ದೇವ ಸಹಿತ ಭಕ್ತರು ಮನೆಗೆ ಬಂದರೆ, ಕಾಯಕವಾವು ದೆಂದು ಬೆಸಗೊಂಡೆನಾದರೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ತಲೆದಂಡ, ತಲೆದಂಡ ಕೂಡಲಸಂಗಮದೇವಾ, ಭಕ್ತರಲ್ಲಿ ಕುಲವನರಸಿದರೆ, ನಿಮ್ಮಾಣೆ, ನಿಮ್ಮ ರಾಣಿವಾಸದಾಣೆ.

೨೩. ಲಿಂಗಾಂಗಿಗಳಲ್ಲದವರ ಶರಣರ ಸಂಗದೊಳಗಿರದವರ ಕಂಡು ನಾಚುವೆ. ಅವರ ನುಡಿ ಎನಗೆ ಸಮನಿಸದಯ್ಯ! ಕೂಡಲಸಂಗಮದೇ ವಾ ನೀನು ಅಲ್ಲಿಲ್ಲದಕಾರಣ

೨೪. ಶ್ರೀ ವಿಭೂತಿಯ ಪೂಸದೇ ಇದ್ದವನ, ಶ್ರೀ ರುದ್ರಾಕ್ಷಿಯ ಧ ರಿಸದೇಇದ್ದವನ, ನಿತ್ಯಲಿಂಗಾರ್ಚನೆಯ ಮಾಡದವನ, ಜಂಗಮವೇ ಲಿಂಗವೆಂದರಿಯದವನ, ಸದ್ಭಕ್ತರಸಂಗದಲ್ಲಿರದವನ, ಎನಗೊಮ್ಮೆ ತೋರದಿರು ಕೂಡಲಸಂಗಮದೇವಾ.

೨೫. ಕೂಪರಿಗೆ ಹೇಳುವೆನು ಕುಲಸ್ಥಳಂಗಳನೆಲ್ಲವನು. ಕೂರ ದವರಿಗೆ ಹೇಳೆನು. ನಾನೇವೆನಯ್ಯಾ? ಕರಲ ಭೂಮಿಯಲ್ಲಿ ಕರೆದ ವೃ- ಷ್ಟಿಯತೆರನಂತೆ ಅವರೆತ್ತ ಬಲ್ಲರು ಎನ್ನ ಸುಖ ದುಃಖವ? ಅಂಗವಿಲ್ಲದ ಸಂಗವು, ಆಳಲಿಲ್ಲದ ಹುಯ್ಯಲಂತೆ. ಇದುಕಾರಣ ಕೂಡಲಸಂಗಮ ದೇವಾ, ನಿಮ್ಮ ಶರಣರಿಗಲ್ಲದೆ ಬಾಯ ತೆರೆಯೆನು

೨೬. ಒಡಪೋಡು ನಮ್ಮ ಮನೆಯಲ್ಲಿಲ್ಲದಂತೆ ಮಾಡಯ್ಯ! ಕೊಡು ದೇವ, ಎನ್ನ ಕೈಯ್ಯಲೊಂದು ಕರಿಕೆಯನು. ವೃಡದೇವ ಶರ ಣೆಂದು ಭಿಕ್ಷಕ್ಕೆ ಹೋದರೆ, ಅಲ್ಲಿ ನಡೆ ದೇವ ಎಂದೆನಿಸೋ, ಕೂಡಲ ಸಂಗಮದೇವಾ

೨೭. ಭವವಿರಹಿತ ಭಕ್ತನಾದಬಳಿಕ, ಭಕ್ತಿ ಭಾಜನದಲ್ಲಿ ಮಾಡಿ

ಭವಿಗಿಕ್ಕಲಾಗದಯ್ಯಾ ! ಯುಕ್ತಿಶೂನ್ಯರಿಗೆ ಮುಂದೆ ಪ್ರಸಾದ ದೂರ, ಮುಕ್ತಿ ಇಲ್ಲ. ಮುಂದೆ ನಾಯ ಬಸಿರಲ್ಲಿ ಬಪ್ಪುದು ತಪ್ಪದು. ಪೃಥ್ವಿಯೊಳಗೆ ಕೂಡಲಸಂಗಮದೇವಾ, ನಿಮ್ಮ ಶರಣರಿಗಲ್ಲದೆ ಅನಾಚಾರಿಗಳಿಗೆಲ್ಲಿಯದೋ ?

## ಭಕ್ತನಪ್ರಸಾದಿ.

೧. ಅಯ್ಯ ನಿಮ್ಮ ಶರಣರ ದಾಸೋಹಕ್ಕೆ ಎನ್ನ ತನುಮನ ಧನವು ಅಲಸದಂತೆ ಮಾಡಯ್ಯ ! ತನುದಾಸೋಹಕ್ಕೆ ಏಳುವಂತೆಮಾಡು. ಮನದಾಸೋಹಕ್ಕೆ ಲೀಯವಪ್ಪಂತೆಮಾಡು. ಧನದಾಸೋಹಕ್ಕೆ ಸವಿದು ನಿಮ್ಮ ಶರಣರ ಪ್ರಸಾದದಲ್ಲಿ ನಿರಂತರ ಆಡಿ, ಪಾಡಿ, ನೋಡಿ, ಕೂಡಿ, ಭಾವಿಸಿ, ಸುಖಿಸಿ, ಪರಿಣಾಮಿಸುವಂತೆ ಮಾಡಯ್ಯ, ಕೂಡಲಸಂಗಮದೇವಾ.

೨. ಹಾರುವ ಹಾರುವನಪ್ಪೆ ನಾನು ಭಕ್ತರೆನ್ನವರೆಂದು. ಹಾರುವೆ, ಹಾರುವೆನಪ್ಪೆ ನಾನು, ನಮ್ಮ ಶರಣರು ಎನ್ನವರೆನ್ನವರೆಂದು, ಕೂಡಲಸಂಗನಶರಣರು ತನ್ನೊಕ್ಕುದನಿಕ್ಕಿ ಸಲಹುವರೆಂದು

೩. ಒಕ್ಕುದ ಮಿಕ್ಕುದನುಂಡು, ಕಿವಿವಿಡಿದಾಡುವೆ. ಶರಣರ ಮನೆಯ ಲೆಂಕನ ಡಿಂಗರಿಗ ನಾನು, ಕೂಡಲಸಂಗನ ಶರಣರ ಮನೆಯಭಕ್ತಿಯ ಮರುಳ ನಾನು.

೪. ಗುರುಲಿಂಗ ಜಂಗಮದಿಂದ ಪಾದೋದಕ ಪ್ರಸಾದವಾಯಿತ್ತು. ಆ ಭಾವವೇ ಮಹಾ ಪ್ರಸಾದವಾಗಿ, ಎನಗೆ ಬೇರೆ ಪ್ರಸಾದವೆಂಬುದಿಲ್ಲ, ಕೂಡಲಸಂಗಮದೇವಾ

೫. ಅಹುದೆಂದರಿಯೆ, ಅಲ್ಲೆಂದರಿಯೆ, ಆವಿಯ ಪಥವ ತೋರಲರಿಯೆ, ಸತ್ಯವನರಿಯೆ, ಸಹಜವನರಿಯೆ, ಸಜ್ಜನಶುದ್ಧವ ಮುನ್ನವೇ ಅರಿಯೆ. ನಿಮ್ಮ ಶರಣರ ಒಕ್ಕುದನುಂಡಿಪ್ಪೆ, ಕೂಡಲಸಂಗಮದೇವಾ.

೬. ಆವನಾದೊಡೇನು, ಶ್ರೀ ಮಹಾದೇವನ ಬಾಯ ತಾಂಬೂಲವ ಬೀಳುಡಿಗೆಯ ಹೊದುವೆ, ಪಾದರಕ್ಷೆಯ ಕಾದು ಬದುಕುವೆ, ಕೂಡಲಸಂಗಮದೇವಾ.

೭. ಒಂದುವನರಿಯದ ಸಂದೇಹಿಯಾನಯ್ಯಾ! ನಂಬುಗೆ ಇಲ್ಲದ

ಡಂಭಕ ನಾನಯ್ಯ! ನಿಮ್ಮ ನಂಬಿದ ಶರಣರ ಡಿಂಗರಿಗ ನಾನಯ್ಯಾ, ಕೂಡಲಸಂಗಮದೇವಾ.

೮. ಬಿಡದೆ ಬಾಗಿಲ ಎಂಜಲ ಕಾಯ್ದಿರ್ಪೆನು. ಕಿಂಕರರ ಮನೆಯಲ್ಲಿ ಕಿಂಕರನು. ಆನು ಹಾರಿಕೊಂಡಿರ್ಪೆನು. ನಮ್ಮ ಕೂಡಲಸಂಗನ ಶರಣರು ಒಕ್ಕುದ ಮಿಕ್ಕುದನುಂಬ ಕಿಂಕರನು ನಾನು.

೯. ತೊತ್ತಿಂಗೇತಕೆ ಲಕ್ಷಣ? ಬಂಟಂಗೇತಕಾಚಾರ? ಆಗಮವೇಕೆ ಡಿಂಗರಿಗಂಗೆ, ನಿಮ್ಮ ಒಕ್ಕುದ ನುಂಬವಂಗೆ, ವಿಧಿನಿಷೇಧಗಳುಂಟೆ ಕೂಡಲಸಂಗಮದೇವಾ? ನಿಮ್ಮ ನಂಬುವದೊಂದೇ ಆಚಾರವಯ್ಯಾ-

೧೦. ತೊತ್ತಿಂಗೇತಕೆ ಲಕ್ಷಣ? ಶರಣರೊಕ್ಕುದನುಂಡು, ಮಿಕ್ಕುದ ಕಾದುಕೊಂಡಿರ್ಪವಳಿಗೆ ಸಾರೆ ಹೊರಸೇಕೆ? ಅವಳಿಗೆ ಮಾರುತ್ತರವೇತಕೆ? ಕೂಡಲಸಂಗನಶರಣರೊಡನೆ ಇದಿರುತ್ತರವೇಕೆ ಸಿಂಬಕಂಗೆ?

೧೧. ಪಾದೋದಕವ ಕೊಂಬೆ, ಪ್ರಸಾದವ ಕೊಂಬೆ, ಅರ್ಥ ಪ್ರಾಣಾಭಿಮಾನ ನಿಮ್ಮದೆಂಬೆ, ರಾತ್ರಿಯಲೊತ್ತೆಕೊಂಬ ಪಾತಕಿ ಸೂಳೆಯಂತೆ, ಬರಿಯಮಾತಿಂಗೊಲಿವನೇ ನಮ್ಮ ಕೂಡಲಸಂಗಮದೇವಾ?

೧೨. ಪಾತಕ ಮಹಾ ಪಾತಕವ ಮಾಡಿದವನು ಸದ್ಭಕ್ತರ ಮನೆಗೆ ಹೋಗಿ, ಅವರೊಕ್ಕುದ ಮಿಕ್ಕ ಪ್ರಸಾದವನು ಆಯಿದುಂಡರೆ ಸಕಲ ಬ್ರಹ್ಮಹತ್ಯಾದಿ ಪಾತಕ ಪರಿಹಾರ. ॥ ಶ್ಲೋ॥ ಪಾತಕೇಸಮನುಪ್ರಾಪ್ತೇ ಶಿವಭಕ್ತ ಗೃಹಂವ್ರಜೇತ್। ಯ್ಯಾಚಯೇ‌ದನ್ನಮಮೃತಂತದಲಾಭೆ ಜಲಂ ಪಿಬೇತ್॥ ಇತೆಂದುದಾಗಿ, ಕೂಡಲಸಂಗಮದೇವಾ ನಿಮ್ಮ ಭಕ್ತರಿಗೆ ನಮೋ ನಮೋ ಎಂಬೆನು.

೧೩. ನಾನು ಹೊತ್ತ ಹೊರೆಯನು ಆಂಬಿಲಿಗೆ ಕೊಂಬುವರಿಲ್ಲ ನೋಡಯ್ಯಾ. ಆನು ನಿಮ್ಮ ಶರಣರು ಒಕ್ಕುದನುಂಡು ಬದುಕಿದೆನಯ್ಯಾ! ಮೇರುವ ಸಾರಿದ ಕಾಗೆ ಹೊಂಬಣ್ಣವಪ್ಪುದು ತಪ್ಪದು, ಕೂಡಲಸಂಗಮದೇವಾ.

೧೪. ಭವಭವದಲ್ಲಿ ನಿಮ್ಮ ಜಂಗಮವೇ ಶರಣಯ್ಯಾ! ಅವರುಂಡು ಮಿಕ್ಕುದ ಉಡಿಗಿ, ಒಕ್ಕುಪ್ರಸಾದವನಾಯಿದುಕೊಂಬ ಮರುಳನಾನಯ್ಯ! ನಮ್ಮ ಕೂಡಲಸಂಗನ ಶರಣರ ಋಣವ ನಾ ಹಿಂಗಲಾರೆ.

೧೫. ದಾಸಿಯ ವರ್ಗದಲ್ಲಿರ್ಪೆನು. ಶಿವಶರಣರ ಮನೆಯಲ್ಲಿ ಅವ

ರೊಕ್ಕುದನುಂಡು, ಮಿಕ್ಕುದ ಕಾಯಿದುಕೊಂಡಿಪ್ಪ ಕಾರಣ, ಕಾಲ ಮುಟ್ಟಲಮ್ಮವು. ಕಲ್ಪಿತ ತೊಡೆಯಿತ್ತು. ಭವಬಂಧನ ಹಿಂಗಿತ್ತು. ಕರ್ಮ ನಿರ್ಮಳವಾಯಿತ್ತು. ಅವರ ತೊತ್ತಿನ ತೊತ್ತಿನ ಪಡಿದೊತ್ತಿನ ಮಗ ನಾನೆಂದು ಕೂಡಲಸಂಗಮದೇವಯ್ಯ ನಿತ್ತ ಬಾ ಎಂದು ಎತ್ತಿಕೊಂಬನು.

೧೬. ಜನ್ಮಜನ್ಮಕ್ಕೆ ಹೋಗಲೀಯ್ಯದೆ, ಸೋಹವೆಂದೆನಿಸದೆ, ದಾಸೋಹವೆಂದೆನಿಸಯ್ಯಾ! ಲಿಂಗಜಂಗಮದ ಪ್ರಸಾದವ ತೋರಿ ಬದುಕಿಸಯ್ಯಾ, ಕೂಡಲಸಂಗಮದೇವಾ.

೧೭. ಕರ್ತರು ನಿಮ್ಮ ಗಣಂಗಳು ಎನ್ನ ತೊತ್ತನೆ ಮಾಡಿ ಸಲಹಿದ ಸುಖವು ಸಾಲೋಕ್ಯ, ಸಾಮೀಪ್ಯ, ಸಾಯುಜ್ಯದಂತುಟಲ್ಲ ಕೇಳಯ್ಯಾ! ಕೂಡಲಸಂಗನಶರಣರು ತಮ್ಮ ಒಕ್ಕುದನಿಕ್ಕಿ ಸಲುಹುವ ನಿತ್ಯ ಸುಖವು ಮಿಕ್ಕ ಸುಖಂಗಳದಕೆ ಸರಿಬಾರವಯ್ಯಾ.

## ಭಕ್ತನ ಪ್ರಾಣಲಿಂಗಿ.

೧. ತೊತ್ತಿಂಗೆ ಬಲ್ಲಹನೊಲಿದರೆ, ಪದವಿಯ ಮಾಡದೆ ಮಾಣ್ಬನೆ? ಅಯ್ಯಾ! ಜೇಡರ ದಾಸಯ್ಯಂಗೊಲಿದಾತ ಮತ್ತೊಬ್ಬ ದೇವನೇ ಅಯ್ಯ? ಮಾದರ ಚನ್ನಯ್ಯಂಗೆ, ಡೋಹರ ಕಕ್ಕಯ್ಯ, ತೆಲುಗು ಜೊಮ್ಮಯ್ಯಂಗೆ ಒಲಿದಾತ ಮತ್ತೊಬ್ಬ ದೇವನೇ ಅಯ್ಯಾ? ಎನ್ನ ಮನದ ಪಂಚೇಂದ್ರಿಯಂಗಳು ನಿಮ್ಮತ್ತಲಾದರೆ, ತನ್ನತ್ತ ಮಾಡುವ ಕೂಡಲಸಂಗಮದೇವಾ.

೨. ಹೊರಗೆ ಹುಸಿವೆನಯ್ಯಾ, ಒಳಗೆ ಶುದ್ಧವಾಗದನ್ನಕ್ಕ. ಮಣಿಯ ಕಟ್ಟುವೆನಯ್ಯಾ ಮನಮುಟ್ಟದನ್ನಕ್ಕ. ನೂರನೋದಿ ಏವೆನಯ್ಯಾ ಭಕ್ತಿಯುಳ್ಳದನ್ನಕ್ಕ? ಸಾಸಿರ ಕ್ರಿಯೆಗಳು ಏನಿದ್ದರೇನು ನಮ್ಮ ಕೂಡಲ ಸಂಗಮದೇವನ ಮನ ಮುಟ್ಟದನ್ನಕ್ಕ?

೩. ಸುಚಿತ್ತದಿಂದ ಎನ್ನ ಮನವು ನಿಮ್ಮ ನೆನೆಯಲೊಲ್ಲದು. ನಾನೇಗೈವೆ? ನನಗಿನ್ನು ನೀನೆ ಗತಿಯಾದೆಯಯ್ಯಾ! ನೀನಲ್ಲದೆನಗೆ ಮತಿಯಾವುದಯ್ಯಾ? ಹರಹರಾ, ಕೂಡಲಸಂಗಮದೇವಾ, ನೀನೆನ್ನ ಮನವ ಸಂತವಿಡಯ್ಯಾ.

೪. ಅಷ್ಟದಳಕಮಲವ ಸುತ್ತುವ ಜೀವಾತ್ಮನು ತಾನು ಮೆಟ್ಟಿದ ದಳವನರಿಯದೆ, ಭಕ್ತನೆಂತೆಂಬೆ? ಆನು ಶರಣನೆಂತೆಂಬೆ? ಆನು ಲಿಂಗೈ

ಕ್ಯನೆಂತೆಂಬೆ? ಕೂಡಲಸಂಗಮದೇವಾ, ಎನ್ನ ಮನವು ಸಮಾಧಾನವಾಗದನ್ನಕ್ಕರ?

೫. ನಾ ನಿಮ್ಮ ನೆನೆವೆನು. ನೀವೆನ್ನನರಿಯಿರಿ. ನಾ ನಿನ್ನನೋಲೈಸುವೆ. ನೀವೆನ್ನ ಕಾಣಿರಿ. ನಾನೆಂತು ಬದುಕುವೆನು? ನಾನೆಂತು ಜೀವಿಸುವೆನಯ್ಯಾ? ಕೂಡಲಸಂಗಮದೇವಾ, ನೀವೇ ಪ್ರಾಣಗತಿಮತಿಗಳೆನಗೆ ನೋಡಯ್ಯಾ.

೬. ತಂದೆ ತಾಯಿ ನೀನು, ಬಂಧು ಬಳಗ ನೀನು, ಎನಗೆ ನೀನಲ್ಲದೆ, ಮತ್ತಾರು ಇಲ್ಲವಯ್ಯಾ. ಕೂಡಲಸಂಗಮದೇವಾ, ಹಾಲಲೆದ್ದು, ನೀರಲೆದ್ದು.

೭. ಎನ್ನ ಆಪತ್ತು ಸುಖದುಃಖ ನೀವೇ ಕಂಡಯ್ಯಾ! ಎನಗೆ ಮತ್ತಾರುವಿಲ್ಲ. ಹರಹರಾ, ನೀವೇ ಕಾಣಿರಯ್ಯಾ! ಎನ್ನ ಮಾತಾಪಿತನು ನೀವೇ ಕಾಣಿರಯ್ಯ ಕೂಡಲಸಂಗಮದೇವಾ.

೮. ಎನ್ನ ಜನ್ಮವ ತೊಡೆದ ನೀ ಧರ್ಮಿ, ಎನ್ನ ಜನ್ಮವನತಿಗಳೆದ ನೀ ಧರ್ಮಿ, ಎನ್ನ ಭವಬಂಧನವ ನಿರಾಕರಿಸಿದೆಯಾಗಿ, ಶಿವನೇ ಗತಿ ಎಂದು ನಂಬಿದೆನಯ್ಯಾ! ಎನ್ನಷ್ಟಮದಂಗಳ ಸುಟ್ಟುರುಹಿದೆ. ಕಟ್ಟುಗ್ರದಿಂದ ನಿಮ್ಮ ಶ್ರೀ ಚರಣವ ಕಂಡೆ ಸೃಷ್ಟಿಪ್ರತಿಪಾಲಕಾ, ನಿಮ್ಮ ನಂಬಿದೆ, ಕರುಣಿಸು ಕೂಡಲಸಂಗಮದೇವಾ

೯. ಭವರೋಗವೈದ್ಯನೆಂದು, ನಾ ನಿಮ್ಮ ಮರೆಹೊಕ್ಕೆ. ಭಕ್ತಿದಾಯಕ ನೀನು. ಕರುಣಿಸು ತಂದೆ ಲಿಂಗವೇ, ಜಯ ಜಯ ಶ್ರೀ ಮಹಾದೇವ, ಇಂತೆನುತಿದ್ದಿತೆನ್ನಮನವು. ಕೂಡಲಸಂಗಮದೇವಂಗೆ ಶರಣೆನ್ನುತಿದ್ದಿತೆನ್ನ ಮನವು.

## ಭಕ್ತನ ಶರಣ.

೧. ಅಂಗೈಯ್ಯೊಳಗಣ ಲಿಂಗವ ನೋಡುತ್ತ ಕಂಗಳುಕಡೆಗೋಡಿವರಿಯುತ್ತ ಎಂದಿಪ್ಪೆನೋ! ನೋಟವೇ ಪ್ರಾಣವಾಗಿ ಎಂದಿಪ್ಪೆನೋ! ಕೂಟವೇ ಪ್ರಾಣವಾಗಿ ಎಂದಿಪ್ಪೆನೋ! ಎನ್ನ ಅಂಗವಿಕಾರದ ಸಂಗವಳಿದು ಕೂಡಲಸಂಗಯ್ಯಾ ಲಿಂಗ ಲಿಂಗವೆನ್ನುತ್ತ?

೨. ಎದೆ ಬಿರಿವನಕ, ಮನದಣಿವನಕ, ನಾಲಿಗೆ ನಲಿನಲಿದೋಲಾಡುವನಕ, ನಿಮ್ಮ ನಾಮಾಮೃತವ ತಂದಿರಿಸು ಕಂಡಯ್ಯಾ ಎನಗೆ ಎನ್ನ ತಂದೆ. ಬಿರಿಮುಗುಳಂತೆ ಎನ್ನ ಹೃದಯ ನಿಮ್ಮ ಶ್ರೀ ಚರಣದ ಮೇಲೆ ಬಿದ್ದುರುಳುಗೆ ಕೂಡಲಸಂಗಮದೇವಯ್ಯಾ

೩. ಆಡಿ ಕಾಲು ದಣಿಯವು, ನೋಡಿ ಕಣ್ಣು ದಣಿಯವು, ಮಾಡಿ? ಕೈ ದಣಿಯವು, ಹಾಡಿ ನಾಲಿಗೆ ದಣಿಯದು, ಇನ್ನೇವೆ? ಇನ್ನೇವೆ? ನಾ ನಿಮ್ಮ ಕಯ್ಯಾರೆ ಪೂಜಿಸಿ, ಮನದಣಿಯಲೊಲ್ಲದು. ಇನ್ನೇವೆ? ಇನ್ನೇವೆ? ಕೂಡಲಸಂಗಮದೇವಾ, ಕೇಳಯ್ಯಾ, ನಿಮ್ಮುದರವ ಬಗಿದಾನು ಹೊಗುವ ಭರವೆನಗೆ.

೪. ಕಾಯಸಂಗ ನಿಸ್ಸಂಗವಾಗಿ, ಇನ್ನಾವ ಸಂಗವನರಿಯೆನಯ್ಯಾ. ಮಿಗೆ ಮಿಗೆ ಒಲಿದೆನಾಗಿ, ಅಗಲಲಾರೆನಯ್ಯಾ. ನಗೆಮೊಗದರಸಾ, ಅವಧಾರು. ಕೂಡಲಸಂಗಮದೇವಾ, ಬಗಿದು ಹೊಗುವೆನು ನಾ ನಿಮ್ಮ ಮನವ.

೫. ನೋಡಿ ನೋಡಿ ಲಿಂಗಧ್ಯಾನವೆನ್ನ ಮನರಾಗರಂಜನೆಯು. ಉತ್ಪತ್ತಿ ಸ್ಥಿತಿ ಲಯವೆಂಬವು ನಿಮಗೆಂಡಾದವು. ರಾಗರಂಜನೆಯ ಪೂಜೆ ಎನ್ನಮನ, ಕೂಡಲಸಂಗಮದೇವಾ.

೬. ವಾರವೆಂದರಿಯೆ, ದಿನವೆಂದರಿಯೆ, ಏನೆಂದರಿಯೆನಯ್ಯಾ! ಇರುಳೆಂದರಿಯೆ, ಹಗಲೆಂದರಿಯೆ, ಏನೆಂದರಿಯೆನಯ್ಯಾ! ನಿಮ್ಮುವ ಪೂಜಿಸಿ, ಎನ್ನವ ಮರೆವೆ ಕೂಡಲಸಂಗಮದೇವಾ.

೭. ನಿಮ್ಮ ನೋಟವನಂತ ಸುಖ. ಕೂಟ ಪರಮಸುಖವಯ್ಯಾ! ಅಷ್ಟಕೋಟಿ ರೋಮಂಗಳೆಲ್ಲ ಕಂಗಳಾಗಿ ನೋಡುತಿದ್ದೆನು. ಕೂಡಲಸಂಗಮದೇವಯ್ಯಾ! ನಿಮ್ಮ ನೋಡಿ, ಮನದಲ್ಲಿ ರತಿಹುಟ್ಟಿ, ನಿಮಿರ್ದವೆನ್ನ ಕಂಗಳು.

೮. ವಚನದಲ್ಲಿ ನಾಮಾಮೃತವ ತುಂಬಿ, ನಯನದಲ್ಲಿ ಮೂರುತಿ ತುಂಬಿ, ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿಯು ತುಂಬಿ, ಕೂಡಲಸಂಗಮದೇವಾ, ನಿಮ್ಮ ಚರಣಕಮಲದೊಳು ಸೊಗದ ಬಂಡನುಂಬ ತುಂಬಿಯಾಗಿರ್ಪೆನು.

೯. ಅಡಿಗಡಿಗೆ ಲಿಂಗವನಡರಿಯಡರಿ ನೋಡಿ, ಕಂಗಳು ಕಡೆ

ಗೋಡಿವರಿದವಯ್ಯಾ. ಎನ್ನಶ್ರುಜಲಂಗಳು. ಆಲಿಗಲ್ಲರೂಹಿನಂತೆ ಅರಗಿನ ಪುತ್ತಳಿಯಂತೆ ತನುಪುಳುಕಿತವಾದೆ ಬೆವರುಬಿಂದುಗಳೆಲ್ಲ. ಭಕ್ತಿರಸದ್ರವ ವಯ್ಯಾ! ಕೂಡಲಸಂಗಮದೇವಯ್ಯಾ, ನಿನ್ನ ದರುಶನ ಸ್ಪರ್ಶನದಿಂದ ಮನಒಲಿದು ನೆರೆವ ಭರವ ನಾನೇನೆಂಬೆನಯ್ಯಾ.

೧೦. ತಾಳವಮಾನ ಸರಸವ ನಾನರಿಯೆ. ವಜೆ ಬಜಾವಣಿಯ ಲೆಕ್ಕ ವನರಿಯೆ. ಅಮೃತಗಣ ದೇವಗಣವನರಿಯೆ. ಕೂಡಲಸಂಗಮದೇವಾ! ನಿನಗೆ ಕೇಡಿಲ್ಲವಾಗಿ, ಆನು ಒಲಿದಂತೆ ಹಾಡುವೆ.

೧೧. ಶ್ಲೋ॥ ವರಂಪ್ರಾಣ ಪರಿತ್ಯಾಗೋ ಛೇದನಂ ಶಿರಸೋಪಿವಾ। ನತ್ವಮಭ್ಯರ್ಚ್ಯ ಭುಂಜೀಯಾತ್ ಭಗವಂತಂ ತ್ರಿಲೋಚನಂ॥ ಎಂದು ದಾಗಿ ದೇಹಧರ್ಮ ತನ್ನಲ್ಲಾದುದಂತಾಗಲಿ ಕೂಡಲಸಂಗಮದೇವರ ಪೂಜಿಸಿದಲ್ಲದೆ ನಿಲ್ಲಲಾರೆನು.

೧೨ ಸುರರು, ಕಿನ್ನರರು, ಕಿಂಪುರುಷರೆಂಬುವರನಾರುಬಲ್ಲರು? ಎನ್ನ ಚಿತ್ತವು ನಿಮ್ಮ ಮೇಲೆ ಲಿಂಗಯ್ಯ. ಎನ್ನ ಭಾವವು ನಿಮ್ಮಮೇಲೆ ಸಂಗಯ್ಯಾ. ಕೂಡಲಸಂಗಮದೇವಾ, ನಾನನ್ಯವೆಂಬುದನರಿಯೆನಯ್ಯಾ.

೧೩. ಮಂಡೆಯ ಬೋಳಿಸಿಕೊಂಡು ಗಂಡು ತೊತ್ತಪ್ಪೆನಯ್ಯಾ. ಲಜ್ಜೆಗೆಟ್ಟಾದರೂ, ಲಿಂಗವನೊಲಿಸುವೆ. ನಾಣುಗೆಟ್ಟಾದರೂ ಲಿಂಗವ ನೊಲಿಸುವೆ. ಕೇವಲ ಸಂಸಾರಿಗಳು ನಗುತಿರ್ದರೆ, ಇರಲಿ. ಕೂಡಲ ಸಂಗಮದೇವಾ, ನಿನ್ನ ಶರಣು ಗತಿಯೊಕ್ಕೆನು.

೧೪. ಎನಗೆ ನಿಮ್ಮ ನೆನಹಾದಾಗಳೇ ಉದಯ. ಎನಗೆ ನಿಮ್ಮ ಮರಹಾದಾಗಳೇ ಅಸ್ತಮಾನ. ಎನಗೆ ನಿಮ್ಮ ನೆನಹನೇ ಜೀವಾಳ. ಎನಗೆ ನಿಮ್ಮ ನೆನಹವೇ ಪ್ರಾಣ, ಕಾಣಾ. ಎನ್ನ ಹೃದಯದಲ್ಲಿ ನಿಮ್ಮ ಚರಣ ದುಂಡಿಗೆಯನೊತ್ತಯ್ಯಾ! ಎನ್ನ ವದನದಲ್ಲಿ ಷಡಕ್ಷರಿಯ ಬರೆಯಯ್ಯಾ, ಕೂಡಲಸಂಗಮದೇವಾ.

೧೫. ಎನ್ನ ಕಾಯವ ದಂಡಿಗೆಯ ಮಾಡಯ್ಯಾ! ಎನ್ನ ಶಿರವ ಸೋರೆಯ ಮಾಡಯ್ಯಾ! ಎನ್ನ ನರವ ತಂತಿಯ ಮಾಡಯ್ಯಾ! ಎನ್ನ ಬೆರಳ ಕಡ್ಡಿಯ ಮಾಡಯ್ಯಾ! ಮೂವತ್ತೆರಡು ರಾಗವ ಹಾಡಯ್ಯಾ! ಉರದಲೊತ್ತಿ ಬಾರಿಸು ಕೂಡಲಸಂಗಮದೇವಾ.

೧೬. ಕರುಳು, ಬೆರಳು, ಮಡುಹು, ಮುಂಬಲ್ಲು, ಕೊಳ್ಳು.

ನಿರಿಯುಸಿಕ್ಕಿ, ದಾಂಟಿದರೆ ಅಂತೆನ್ನ ನಂಬ. ಪರ ಪುರುಷರ ಮುಖವ ನೋಡದಂತೆ ಮಾಡಯ್ಯ. ಬಳಿಕ ನೀಹೇಗಿರಿಸಿದಂತೆ ಇರಿಸಾ. ಎನ್ನ ರವಲ್ಲಿ ಕೂಡಲಸಂಗಯ್ಯನೆಂದು ಬರೆಯುಯ್ಯಾ. ಹರಿಬ್ರಹ್ಮರಿಗೆರಗದಂತೆ, ಬಳಿನೀರನೆರೆಯುಯ್ಯಾ.

೧೭. ಕಂಡಕನಸು ನಿಧಾನವ ಕಂಡೆನಯ್ಯಾ! ಬಿಡಲಾರದ, ನಿಧಾನವ ಕಂಡೆನಯ್ಯಾ! ಕೂಡಲಸಂಗಯ್ಯನೆಂಬ ನಿಧಾನವ ಕಂಡು ಬಿಡಲಾರೆನಯ್ಯಾ.

೧೮. ಹೊನ್ನ ಹಾವಿಗೆಯು ಮೆಟ್ಟಿದವನ, ಮಿಡಿಯು ಮುಟ್ಟಿದ ಕೆಂಜೆಡೆಯುವನ, ಮೈಯ್ಯಲ್ಲಿ ವಿಭೂತಿಯು ಧರಿಸಿದವನ, ಕರದಲ್ಲಿ ಕಪಾಲವ ಹಿಡಿದವನ, ಅರ್ಧನಾರೀಶ್ವರನಾದವನ, ಬಾಣನ ಮನೆಯು ಬಾಗಿಲ ಕಾಯ್ದವನ, ನಂಬಿಗೆ ಕುಂಟಣಿಯಾದವನ, ಚೋಳಂಗೆ ಹೊನ್ನ ಮಳೆಯು ಕರೆದವನ, ಎನ್ನ ಮನಕ್ಕೆ ಬಂದವನ, ಸದ್ಭಕ್ತರ ಹೃದಯದಲ್ಲಿಪ್ಪವನ, ಮಾಡುವ ಪೂಜೆಯಲೊಪ್ಪುವನ, ಕೂಡಲಸಂಗಯ್ಯನೆಂಬುವನ.

೧೯. ಮನಕ್ಕೆ ಮನೋಹರವಲ್ಲದ ಗಂಡರು ಮನಕ್ಕೆ ಬಾರರು ಕೇಳವ್ವ, ಕೇಳದಿ. ಪನ್ನಗ ಭೂಷಣನಲ್ಲದ ಗಂಡರು ಇನ್ನೆನಗಾಗದ ಮೊರೆಯು ನೋಡವ್ವ! ಕನ್ನೆಯುಂದಿನ ಕೂಟ ಚಿಕ್ಕಂದಿನ ಬಾಳುವೆ. ನಿಮ್ಮಾಣೆಯುಯ್ಯಾ, ಕೂಡಲಸಂಗಮದೇವಾ.

೨೦. ಜಗವೆಲ್ಲರಿಯುಲು, ಎನಗೊಬ್ಬ ಗಂಡನುಂಟು. ಆನು ಮುತ್ತೈದೆ, ಆನು ನಿಷ್ಠೆ ಕೂಡಲಸಂಗಮದೇವಯ್ಯನಂತಪ್ಪ ಎನಗೊಬ್ಬ ಗಂಡನುಂಟು.

೨೧. ಸಂಸಾರವೆಂಬ ಶ್ವಾನನಟ್ಟಿ ಮೋಸಲಬೀಸರವ ಮಾಡದಿರಯ್ಯಾ! ಎನ್ನ ಚಿತ್ತವು ನಿಮ್ಮ ಧ್ಯಾನವಯ್ಯ! ನೀವಲ್ಲದೆ ಮತ್ತೇನು ನಾನರಿಯೆನು. ಕೆನ್ನೆಯುಲ್ಲಿ ಕೈವಿಡಿದೆನು. ನಿಮ್ಮಲ್ಲಿ ನೆರೆದೆನು. ಮನ್ನಿಸು ಕಂಡ್ಯಾ ಮಹಾಲಿಂಗವೆ. ಸತಿಯಾನು, ಪತಿ ನೀನು. ಮನೆಯೊಡೆಯು ಮನೆಯುನೆ ಕಾಯ್ದಿರ್ಪಂತೆ ನೀನೆನ್ನ ಮನವ ಕಾಯ್ದಿರ್ಪ ಗಂಡನೈ. ನಿಮಗೋತ ಮನವ ಅನ್ಯಕ್ಕೆ ಹರಿಸಿದರೆ, ನಿನ್ನಭಿಮಾನಕ್ಕೆ ಹಾನಿ ಕೂಡಲಸಂಗಮದೇವಾ.

# ಭಕ್ತನೈಕ್ಯ.

೧. ನೀನೊಲಿದುದೇ ಪುಣ್ಯ, ನೀನೊಲಿಯದುದೇ ಪಾಪ, ಕಂಡೆಯ್ಯ. ಸಕಲಜಗದೊಳಗೆ ಅನಶ್ವತವಾಗಿಪ್ಪೆಯಯ್ಯಾ. ನೀನೊಲಿದವನೇ ನಿಮ್ಮನರಿವನು ॥ಶ್ಲೋ॥ ಪ್ರಸಾದಾದ್ದೇವತಾ ಭಕ್ತಿಃ ಪ್ರಸಾದಾತ್ ಭಕ್ತಿಸಂಭವಃ । ಯಥಾಂಕುರಸ್ತಥಾಬೀಜಂ ಬೀಜತೋ ವಾ ಯಥಾಂಕುರಃ|| ಎಂದುದಾಗಿ, ನೀನೊಲಿದವನೇ ಧನ್ಯ ಜಗತ್ಪಾವನನಯ್ಯಾ ಕೂಡಲಸಂಗಮದೇವಯ್ಯಾ.

೨. ಅಷ್ಟವಿಧಾರ್ಚನೆ ಷೋಡಶೋಪಚಾರವನಂದಂದಿನ ಕೃತ್ಯವನಂದಂದಿಂಗೆ ಅನುಮಾಡಿ ಶುದ್ಧನಯ್ಯಾ! ಹಂಗುಹರಿಯಿಲ್ಲದ ಕಾರಣ, ಕೂಡಲಸಂಗಮದೇವಾ, ನೀಫಲದಾಯಕನಾಗಿ, ಅನು ಮಾಡಿ ಶುದ್ಧನಯ್ಯ.

೩. ಮಾಟಕೂಟ ಫಲಪ್ರಾಪ್ತಿ ಎಂಬ ಮಾತ ಕೇಳಲಾಗದು. ಶಿವ ಶಿವ, ನಿಮ್ಮ ಭಕ್ತರಿಗೆ ಮಾಡಿದೆನೆನ್ನದಿರೆಂದು, ಶ್ರೀ ಗುರು ಲಿಂಗವು ಕೃಪೆಮಾಡಿದ ಕಾರಣ, ಅಲ್ಲಿ ಮಾಡುವನು ಮಾಡಿಸಿಕೊಂಬುವನು ನೀನೆಯಯ್ಯಾ ಕೂಡಲಸಂಗಮದೇವಾ

೪. ಅಯ್ಯ, ನಿಮ್ಮ ಅನುಭಾವದಿಂದೆನ್ನ ತನುವು ಹಾಳಾಯಿತ್ತು ಅಯ್ಯ, ನಿಮ್ಮನುಭಾವದಿಂದೆನ್ನ ಮನವು ಹಾಳಾಯಿತ್ತಯ್ಯ! ಅಯ್ಯಾ ನಿಮ್ಮ ಅನುಭಾವದಿಂದ ಎನ್ನ ಧನ ಹಾಳಾಯಿತ್ತು ಅಯ್ಯ ನಿಮ್ಮನುಭಾವದಿಂದೆನ್ನ ಕರ್ಮಭೇದನವಾಯಿತ್ತಯ್ಯಾ! ನಿಮ್ಮವರು ಅಡಿಗಡಿಗೆ ಹೇಳಿ ಭಕ್ತಿ ಎಂಬ ಒಡವೆಯನು ದಿಟಮಾಡಿ ತೋರಿದಕಾರಣ ಕೂಡಲಸಂಗಮದೇವಾ

೫. ಭಕ್ತನೆಂತೆಂಬೆನಯ್ಯ, ಭವಿಸಂಗ ಬಿಡದನ್ನಕ್ಕರ? ಮಹೇಶ್ವನೆಂತೆಂಬೆನಯ್ಯಾ, ಪರಸ್ತ್ರೀ ಪರಾರ್ಥದಾಸೆ ಬಿಡದನ್ನಕ್ಕರ? ಪ್ರಸಾದಿ ಎಂತೆಂಬೆನಯ್ಯ, ಆಧಿ ವ್ಯಾಧಿ ನಷ್ಟವಾಗದನ್ನಕ್ಕರ? ಪ್ರಾಣಲಿಂಗಿ ಎಂತೆಂಬೆನಯ್ಯ, ಪ್ರಾಣ ಸ್ವಸ್ಥಿರವಾಗದನ್ನಕ್ಕರ? ಶರಣನೆಂತೆಂಬೆನಯ್ಯ, ಪಂಚೇಂಯ ವಿಷಯ ನಾಸ್ತಿಯಾಗದನ್ನಕ್ಕರ? ಐಕ್ಯನೆಂತೆಂಬೆನಯ್ಯ, ಜನನ ಮರಣ ವಿರಹಿತನಾಗದನ್ನಕ್ಕರ? ಇಂತಿಪ್ಪ ಭಾಷೆ ವ್ರತವೇಷನೇಮಂಗಳ ನಾನರಿ

# ಶಿವಾನುಭವ

(ತ್ರೈಮಾಸಿಕವು.)

ಸಂಪಾದಕ.

**ರಾ|| ಸಾ|| ಫ. ಗು. ಹಳಕಟ್ಟಿ.**

ಬಿ, ಎ, ಎಲ್, ಎಲ್, ಬಿ.

ವಿಜಾಪುರ.

೨ ನೇ ಸಂಚಿಕೆ,

ಸೋ. ೧೯೨೬.

## ವಿಷಯುಗಳು.



---

## ಶಿವಾನುಭವವು

### (೧೪೪ ಪುಟಗಳುಳ್ಳ ತ್ರೈಮಾಸಿಕವು.)

ಶಿವಾನುಭವದ ೩ ನೇ ಸಂಕೆಚಿಯು ೧೪೪ ಪುಟವುಳ್ಳದ್ದಾಗಿ ಪ್ರಸಿದ್ಧಿಸಲ್ಪಡುವದು. ವರ್ಗಣೀದರಗಳು ಮೊದಲಿನಂತೆಯೇ ಇವೆ. ಈ ಮಹತ್ವದ ಪತ್ರಿಕೆಗೆ ವೀರಶೈವರೆಲ್ಲರೂ ಸಹಾಯ ಮಾಡಬೇಕೆಂದು ಪ್ರಾರ್ಥನೆ. ಈ ಪತ್ರಿಕೆಯು ಫೇಬರವರಿ, ಮೇ, ಅಗಷ್ಟ, ನೊವಂಬರ ತಿಂಗಳುಗಳಲ್ಲಿ ಪ್ರಸಿದ್ಧಿಸಲ್ಪಡುವದು.

### ವಾರ್ಷಿಕ ವರ್ಗಣಿ

**ಪೋಷಕರು.** ೧೦ ರೂ. ೮ ಆಣೆ **ಆಶ್ರಯದಾತರು.** ೫ ರೂ ೮ ಆಣೆ **ವರ್ಗಣೀದಾರರು.** ೩ ರೂ. ೮ ಆಣೆ ಅಂಚೇ ವೆಚ್ಚಸಹವಾಗಿ ಬಿಡಿಸಂಚಿಕೆಗೆ ೧ ರೂ. ೪ ಆಣೆ

**ಮ್ಯಾನೇಜರ ಶಿವಾನುಭವ. ವಿಜಾಪುರ.**

---


ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಹಿತ ಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧೬೨೦ (ಅ) ನೇ ಮನೆಯಲ್ಲಿ ಪ್ರಕಟಿಸಿದರು.

## ದೇವರು ಒಬ್ಬನೇ ಇದ್ದಾನೆ.

ವೀರಶೈವರು ಪ್ರತಿಪಾದಿಸುವ ಅನೇಕ ಮಹತ್ತರ ತತ್ವಗಳಲ್ಲಿ ದೇವರು ಒಬ್ಬನೇ ಇದ್ದಾನೆ ಎಂಬದು ಬಹು ಮುಖ್ಯವಾದದ್ದು. ಒಂದು ಧರ್ಮದ ಶುದ್ಧ ಸ್ವರೂಪವು ಆದರಲ್ಲಿ ದೇವರ ಬಗ್ಗೆ ಯಾವ ತರದ ವಿಚಾರಗಳು ರೂಢವಾಗಿರುತ್ತವೆಯೋ ಅವುಗಳ ಮೇಲೆ ಬಹಳ ಅವಲಂಬಿಸಿರುತ್ತದೆ. ಒಂದು ಧರ್ಮವು ಕ್ರೂರ ದೇವತೆಗಳನ್ನು ಪೂಜಿಸುತ್ತಿದ್ದರೆ, ಅದರಲ್ಲಿಯ ಉಪಾಸನೆ ಮೊದಲಾದ ಧರ್ಮ ಕಾರ್ಯಗಳೂ ಕ್ರೂರರೂಪವಾಗುತ್ತವೆ. ಅದರಲ್ಲಿ ವಿಷಯ ಲೋಲುಪತೆಯುಳ್ಳ ದೇವತೆಗಳಿದ್ದರೆ, ಆ ಧರ್ಮವು ಸಂಸಾರ ಸುಖಕ್ಕೆ ಹೆಚ್ಚಿಗೆ ಮಹತ್ವ ಕೊಡಹತ್ತುತ್ತದೆ. ಈ ಸಂಗತಿಯನ್ನು ನಾವು ಎಲ್ಲ ಧರ್ಮಗಳಲ್ಲಿಯೂ ಕಾಣಬಹುದು. ಆದರೆ ವೀರಶೈವ ಧರ್ಮವು ಶುದ್ಧವೂ ಸಾತ್ವಿಕವೂ ಇರುತ್ತದೆಂಬದು ಯಾರ ಲಕ್ಷದಲ್ಲಿಯಾದರೂ ಬರುವಂತೆ ಇದೆ. ಅದರಲ್ಲಿ ಕ್ರೂರತನವಿಲ್ಲ, ವಿಷಯ ಲೋಲುಪತೆಯೂ ಇಲ್ಲ. ಅದು ತಾತ್ವಿಕವಾಗಿರುತ್ತದೆ. ಇದಕ್ಕೆ ಈ ಸ್ವರೂಪವು ಬರಬೇಕಾದರೆ, ಅವರಲ್ಲಿ ದೇವರ ಬಗ್ಗೆ ಪ್ರಚಲಿತವಾಗಿರುವ ವಿಚಾರಗಳೇ ಕಾರಣವಾಗಿರುತ್ತವೆ.

ಈಗ ಪ್ರಚಲಿತವಾಗಿರುವ ಹಿಂದೂ ಧರ್ಮದಲ್ಲಿ ನಾನಾ ಬಗೆಯ ದೇವತೆಗಳು ಕಲ್ಪಿಸಲ್ಪಟ್ಟಿರುತ್ತವೆ. ಈ ದೇವತೆಗಳ ವರ್ಗದಲ್ಲಿ ಭೂತ ಪಿಶಾಚಗಳೂ ಕಾಳಿಕಾ, ದುರ್ಗಿ ಇಂಥ ಕ್ರೂರ ದೇವತೆಗಳೂ ಬರುವವ

ಲ್ಲದೆ, ಇದರೊಳಗೆ ಕಲ್ಲು, ಮಣ್ಣು ಮತ್ತು ಗಿಡಗಂಟಿಗಳು ಸಹ ಬರುತ್ತವೆ. ಈ ವಿಧದ ದೇವತೆಗಳನ್ನು ಭಜಿಸುವದನ್ನೂ ಅವುಗಳಿಗೆ ಕ್ರೂರ ರೀತಿಯಿಂದ [illegible] ಇವನ್ನು ನೋಡುತ್ತೇವೆ. [illegible] [illegible]ದಾಯದಲ್ಲಷ್ಟೇ [illegible] ವರ್ಗದವರಲ್ಲಿಯೂ [illegible] ಈ ಸ್ಥಿತಿಯು ಈಗಷ್ಟೇ ಅಲ್ಲ, ಮುಂಚಿನಿಂದಲೂ [illegible]ಷ್ಠೆಯನ್ನು ವೀರಶೈವ ಧರ್ಮ ಪ್ರವರ್ತಕರು ಬಹಳ ಕ[illegible] ಯಾವಾಗಲೂ ಖಂಡಿಸಿದ್ದಾರೆ. ಮತ್ತು ಅವರು [illegible] ದೇವರು ಒಬ್ಬನೇ ಇದ್ದಾನೆ, ಮತ್ತು ಆತನನ್ನೊಬ್ಬನನ್ನೇ ಭಜಿಸತಕ್ಕದ್ದು ಎಂಬದಾಗಿ ಸ್ಪಷ್ಟ ರೀತಿಯಿಂದ ಪ್ರತಿಪಾದಿಸಿದ್ದಾರೆ.

ದೇವರು ಒಬ್ಬನೇ ಇದ್ದಾನೆಂಬುದೇ ನಿಜವಾದ ವೇದಾಂತ ಮಾರ್ಗವಾಗಿದೆ. ಯಜುರ್ವೇದದ ೮, ೬, ೧೦ ನೇ ಕಾಂಡಗಳಲ್ಲಿ– "ಏಕ ಮೇವ ರುದ್ರೋನದ್ವಿತೀಯಃ" ಎಂಬದಾಗಿ ಸಾರಿ ಸಾರಿ ಹೇಳಲ್ಪಟ್ಟಿದೆ. ಉಪನಿಷತ್ ಗ್ರಂಥಗಳಲ್ಲಿಯೂ ಕೂಡ ಅನೇಕ ದೇವತೆಗಳಿಗೆ ಇಂಬು ದೊರೆತಿಲ್ಲ. ಅವುಗಳಲ್ಲೆಲ್ಲ ಪರ ಬ್ರಹ್ಮನು ಒಬ್ಬನೇ ಇದ್ದಾನೆಂದು ವಿವರಿಸಲ್ಪಟ್ಟಿದೆ. ತೈತ್ತಿರೀಯ ಮತ್ತು ಛಾಂದೋಗ್ಯ ಉಪನಿಷತ್ತುಗಳಲ್ಲಿ ದೇವರು "ಏಕ ಮೇವಾ ದ್ವಿತಿಯಂ" ಎಂದು ಅವನ ಸ್ವರೂಪವು ವರ್ಣಿಸಲ್ಪಟ್ಟಿದೆ. ಆದರೆ ಹಿಂದುಗಡೆ ದೇವರ ಸಂಬಂಧದ ಈ ತೆರದ ಉಚ್ಚ ವಿಚಾರಗಳು ಹೊರಟು ಹೋದವು. ಆಗ ಅನೇಕ ದೇವತೆಗಳು ಕಲ್ಪಿಸಲ್ಪಡಹತ್ತಿದವು. ಪುರಾತನ ಐತಿಹಾಸಿಕ ಪುರುಷರೂ ಸಹ ದೇವರ ವರ್ಗದಲ್ಲಿ ಸೇರಿಸಲ್ಪಡಹತ್ತಿದರು. ಅನೇಕ ದೇವತೆಗಳಿಗೆ ಮನುಷ್ಯರುಗಳ ಹಾಗೆ ಹೆಂಡಿರೂ ಮಕ್ಕಳೂ ಇವೆ ಎಂದು ತಿಳಿಯುತ್ತಿದರು. ಹೀಗೆ ದೇವತೆಗಳ ಸಂಖ್ಯೆಯು ಬೆಳೆಯುತ್ತ ಹೋಗಿ ಅದು ಅನೇಕ ಕೋಟಿಗಳ ವರೆಗೆ ಏರಿರುತ್ತದೆ. ಇದು ಹಿಂದೂ ಧರ್ಮದ ಅವನತಸ್ಥಿತಿಯನ್ನು ತೋರಿಸುತ್ತದೆ. ಇದರಿಂದ ಹಿಂದೂ ಧರ್ಮದ ಮೊದಲಿನ ತಾತ್ವಿಕ ಮತ್ತು ಉಚ್ಚ ಸ್ವರೂಪವು ಹೊರಟು ಹೋಯಿತು. ಈ ಸ್ಥಿತಿಯು ಅದಕ್ಕೆ ಪೌರಾಣಿಕ ಕಾಲದಲ್ಲಿ ಉತ್ಪನ್ನವಾಯಿತೆಂದು ವಿದ್ವಾಂಸರು ಹೇಳುತ್ತಾರೆ.

ವೀರಶೈವ ಧರ್ಮವು ಹಿಂದೂ ಸಮಾಜವನ್ನು ಸುಧಾರಿಸಲಿಕ್ಕೆ ಪ್ರಯತ್ನಿಸಿದ ಧರ್ಮಗಳಲ್ಲಿ ಒಂದಾಗಿದೆ. ಇದರ ಪ್ರವರ್ತಕರು ಹೀಗೆ ಸುಧಾರಣೆ ಮಾಡಿದ ಅನೇಕ ಸಂಗತಿಗಳಲ್ಲಿ ವೇದೋಪನಿಷತ್ತುಗಳಲ್ಲಿ ದೇವರ ಬಗ್ಗೆ ಯಾ [illegible] ಪ್ರ[illegible]ರುತ್ತವೆಯೋ ಅವುಗಳನ್ನೇ ಬಹುಜನ ಸಮಾಜದಲ್ಲಿ ಪ್ರಸಾರಗೊಳಿಸಲಿಕ್ಕೆ ಪ್ರಯತ್ನಿಸಿದ್ದು ಮುಖ್ಯವಾಗಿದೆ. ಅವ[illegible] ದೇ[illegible] ಇ[illegible], ಆತ್ಮ[illegible] ಅಣು ರೇಣು ತೃಣಕಾಷ್ಠಗಳಲ್ಲಿ ಸರ್ವ ವ್ಯಾಪಿಯಾಗಿರುವನು, ಕರುಣಾಕರನು, ಮತ್ತು ಅವನೊಬ್ಬನನ್ನೇ ಭಜಿಸತಕ್ಕ[illegible] ಮೊದಲಾದ ತತ್ವಗಳನ್ನು ಪ್ರಸಾರಗೊಳಿಸಿದರು. ಈ ಮಾದ[illegible] ವಿಚಾರಗಳನ್ನು ಶ್ರೀ ಶಂಕರಾಚಾರ್ಯ, ಮಧ್ವಾಚಾರ್ಯ ಮೊದಲಾದವರೂ ಪ್ರತಿಪಾದಿಸಿದ್ದಾರೆಂಬುದು ನಿಜವು. ಆದರೆ ಅವರ ವಿಚಾರಗಳು ಬಹುಜನಸಮಾಜದ ತಿಳುವಳಿಕೆಗೆನಿಲುಕುವಂಥವು ಇರಲಿಲ್ಲಾದ್ದರಿಂದ ಅವು ಕೆಲವೊಂದು ವರ್ಗದವರಲ್ಲಿ ಮಾತ್ರ ತಲೆದೋರಿದವು. ಆದರೆ ಬಹುಜನ ಸಮಾಜದಲ್ಲಿ ಅವುಗಳನ್ನು ಹರವಿ ಪೂರ್ವದ ನಿಜವಾದ ವೇದಾಂತ ಮಾರ್ಗಕ್ಕೆ ಅದನ್ನು ಹೊರಳಿಸಿದವರು ವೀರಶೈವರೇ ಇರುತ್ತಾರೆ.

ವೀರಶೈವ ಮತ ತತ್ವಗಳು ಬಹು ಸ್ಫುಟವಾಗಿ ವಚನಗಳಲ್ಲಿ ಹೇಳಲ್ಪಟ್ಟಿವೆ. ಅವುಗಳಿಂದ ತಿಳಿಯುವದೇನಂದರೆ —- ಜಗತ್ತು ತಲೆದೋರುವ ಪೂರ್ವದಲ್ಲಿ ಎಲ್ಲವೂ ಸರ್ವಶೂನ್ಯವಾಗಿತ್ತು, ಅದು ಅಗಮ್ಯವಾಗಿತ್ತು, ಪರಮಾತ್ಮನೊಬ್ಬನೇ ತಾನೇ ತಾನಾಗಿ ಉಳಿದಿದ್ದನು. ಈ ಸಂಬಂಧದ ಸುಂದರವಾದ ಉಕ್ತಿಗಳನ್ನು ವಚನ ಶಾಸ್ತ್ರಸಾರದ ಮೊದಲನೇ ಮೂರು ಪುಟಗಳಲ್ಲಿ ವಾಚಕರು ಕಾಣ ಬಹುದು. ಈ ಪ್ರಕಾರ ಪರಮಾತ್ಮನು ಇರಲು, ಆವನಲ್ಲಿ ಸೃಷ್ಟಿಯನ್ನು ಹುಟ್ಟಿಸಬೇಕೆಂಬ ಇಚ್ಛೆಯು ಏನೋ ಒಂದು ಕಾರಣದಿಂದ ಉತ್ಪನ್ನವಾಗಲಾಗಿ, ಅದರಿಂದ ಹೊರಟ ಶಕ್ತಿಯಿಂದಲೇ ಜಗತ್ತು ಪ್ರಕಟವಾಗಲಿಕ್ಕೆ ಕಾರಣವಾಯಿತು. ಈ ಬಗ್ಗೆ ಒಬ್ಬ ವಚನಕಾರನು ಅನ್ನುವದೇನಂದರೆ :—

" ಮಹಾಕರ್ತನು ತನ್ನ ಶಕ್ತಿಯ ವಿನೋದಕ್ಕೆ ಜಗವ ನಿರ್ಮಿಸಿದ. ಅನಂತ ಲೋಕಂಗಳನ್ನು, ಚಂದ್ರ, ಸೂರ್ಯ, ನಕ್ಷತ್ರ, ಸಿಡಿಲುಮಿಂಚುಗಳನ್ನು ಕಾಲ ಕರ್ಮ ಪ್ರಳಯಂಗಳನ್ನು ಹೆಣ್ಣು ಗಂಡು ಜಾತಿ ವಿಜಾತಿಗಳಾದ ನರ ಸುರ ತಿರ್ಯಗ್ಜಾತಿ ಸ್ಥಲ ಭೋಗ ಆಯುಷ್ಯ ನಿದ್ರೆ

ಮೊದಲಾದ ಸಮಸ್ತ ಪ್ರಪಂಚಗಳನ್ನು, ಎಂಬತ್ತುನಾಲ್ಕು ಲಕ್ಷ ಜೀವ ರಾಶಿಗಳನ್ನು ಹುಟ್ಟಿಸಿದ ತನ್ನ ವಿನೋದಕ್ಕೆ. ಯಂತ್ರವಾಹಕನು ಮಾಡಿದ ಕಟ್ಟಣೆಯನಾರಿಗೂ ತಿಳಿಯಬಾರದು ನೋಡಾ. ಸರ್ವಾತ್ಮರು ಮಲ ಪಾಶದಿಂದ ಬಂಧಿಸಿಕೊಂಬ ಪಶುಗಳಾದರು, ತಾ ಪಶುಪತಿಯಾದ ನಮ್ಮ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನು."

ಈ ಪ್ರಕಾರ ಪರಮಾತ್ಮನು ಜಗತ್ತನ್ನು ತನ್ನ ವಿನೋದಕ್ಕೋಸ್ಕರ ಪ್ರಕಟಪಡಿಸಿದನೆಂದು ವೀರಶೈವ ತತ್ವಜ್ಞಾನಿಗಳು ಪ್ರತಿಪಾದಿಸಿದ್ದಾರೆ. ಅವರ ಈ ವಿಚಾರಗಳಲ್ಲಿ ಅನೇಕ ದೇವತೆಗಳಿಗೆ ಸ್ಥಾನವೇ ಇಲ್ಲ. ಇದೇ ಹಿಂದೂ ಧರ್ಮದ ನಿಜವಾದ ಮಾರ್ಗವಾಗಿರುತ್ತದೆ.

ಪರಮಾತ್ಮನ ಲಕ್ಷಣಗಳು ವೇದೋಪನಿಷತ್ತುಗಳಲ್ಲಿ ನಾನಾ ವಿಧ ವಾಗಿ ವರ್ಣಿಸಲ್ಪಟ್ಟಿವೆ. ಆದರೆ ವೀರಶೈವರು ಆಗಮ ಗ್ರಂಥಗಳೊಳಗಿನ ತತ್ವಗಳನ್ನೇ ಪ್ರತಿಪಾದಿಸುವವರಾಗಿರುವರು. ಆದ್ದರಿಂದ ಈ ಗ್ರಂಥಗ ಳಲ್ಲಿ ಪರಮಾತ್ಮನ ಲಕ್ಷಣಗಳು ಯಾವವು ಹೇಳಲ್ಪಟ್ಟಿವೆಯೋ ಅವುಗ ಳನ್ನೇ ಅವರು ವಿಶೇಷವಾಗಿ ಸಮರ್ಥಿಸಿದ್ದಾರೆ. ವಾತುಲಾಗಮದಲ್ಲಿ ಪರಮಾತ್ಮನ ಸಾಮಾನ್ಯ ಲಕ್ಷಣಗಳನ್ನು ಕೆಳಗೆ ಬರೆದ ಪ್ರಕಾರ ಹೇಳಿ ರುವದು.

**ಪರಂ ಗೂಢಂ ಶರೀರಸ್ಥಂ ಲಿಂಗಕ್ಷೇತ್ರ ಮನಾದಿವತ್।**
**ಯಥಾದಿ ಮೈಶ್ವರಂ ತೇಜಸ್ತಲ್ಲಿಂಗ ಪಂಚ ಸಂಜ್ಞಕಃ।**

ಈ ಉಕ್ತಿಯ ಮೇಲಿಂದ ಪರಮಾತ್ಮನು ಪರ, ಗೂಢ, ಶರೀರಸ್ಥ. ಲಿಂಗಕ್ಷೇತ್ರ, ಮತ್ತು ಅನಾದಿವತ್ ಎಂದು ಐದು ಲಕ್ಷಣವುಳ್ಳವನಾಗಿ ರುವನೆಂದು ತಿಳಿದು ಬರುತ್ತದೆ. ಈ ಲಕ್ಷಣಗಳ ಅರ್ಥವನ್ನು ವಚನ ಕಾರರಲ್ಲಿ ಅತ್ಯಂತ ಶ್ರೇಷ್ಠ ಸ್ಥಾನವನ್ನು ಹೊಂದಿದ ಉರಿಲಿಂಗ ಪೆದ್ದಿಯು ತನ್ನ ವಚನದಲ್ಲಿ ಕೆಳಗೆ ಬರೆದಂತೆ ವಿವರಿಸಿದ್ದಾನೆ.

(೧) **ಪರಃ–** ದೇವರು ಪರನಾಗಿರುವನು. ಎಂದರೆ ಈ ಜಗತ್ತಿಗೆ ಮೇಲಿನವನಾಗಿರುತ್ತಾನೆ. ಜಗತ್ತು ಪರಮಾತ್ಮನಿಂದ ಹುಟ್ಟಿದರೂ ಅದಕ್ಕೆ ಆತನು ಅತೀತನು, ಅಂದರೆ ಮೀರಿದವನು ಇರುತ್ತಾನೆ. ಅವನ ಶಕ್ತಿಯು ಅಪಾರವಾದದ್ದಿರುತ್ತದೆ. ಈ ಶಬ್ದದ ಅರ್ಥವನ್ನು ಉರಿಲಿಂಗ ಪೆದ್ದಿಯು ಕೆಳಗೆ ಬರೆದಂತೆ ಹೇಳಿದ್ದಾನೆ. "ಆವುದಾನೊಂದು ಶಿವ ಸಂಬಂಧ ವಾದ ಪರಮ ತೇಜೋಲಿಂಗವು ತನ್ನ ಭೋಗಾದಿ ಕಾರಣ ಮೂರ್ತಿಗ

ಳಿಂದುದಯುವಾದ ಬ್ರಹ್ಮಾದಿ ತೃಣಾಂತವಾದ ದೇಹಿಗಳಿಂದಲು ವ್ಯೋಮಾದಿ ಭೂತಗಳಿಂದಲು ಇತ್ಯಾದಿ ಸಮಸ್ತ ತತ್ವಂಗಳಿಂದಲು ಮೇಲಣ ತತ್ವವಪ್ಪುದೇ ಕಾರಣವಾಗಿ ಪರವೆಂಬ ಸಂಜ್ಞೆಯದುಳ್ಳದಾಗಿಹುದು."

**(೨) ಗೂಢ**:- ಇದು ಪರಮಾತ್ಮನ ಎರಡನೇ ಗುಣವು. ಆತನು ಮನುಷ್ಯನ ಕಣ್ಣಿಗೆ ಗೋಚರನಲ್ಲ. ಜಗತ್ತೆಲ್ಲ ಆತನಲ್ಲಿಯೇ ಇದ್ದರೂ, ಆತನು ಗೂಢ, ಎಂದರೆ ಕಾಣದಂತೆಯೇ ವ್ಯವಹರಿಸುತ್ತಾನೆ. ಉರಿಲಿಂಗ ಪೆದ್ದಿಯು ಇದರ ಅರ್ಥವನ್ನು ಕೆಳಗೆ ಬರೆದ ಮೇರೆಗೆ ಹೇಳಿದ್ದಾನೆ. "ಅನಂತ ಕೋಟಿ ಬ್ರಹ್ಮಾಂಡಂಗಳಂ ತನ್ನೊಳಗಡಿಗಿಸಿಕೊಂಡು ಸಮಸ್ತ ಜಗ ಜನನಕ್ಕೆ ತಾನೇ ಕಾರಣನಾಗಿ ಅವ್ಯಕ್ತ ಲಕ್ಷಿತವಾದ ನಿಮಿತ್ತಂ ಗೂಢವೆಂಬ ಸಂಜ್ಞೆಯದುಳ್ಳದಾಗಿಹುದು."

**(೩) ಶರೀರಸ್ಥ**:- ಇದು ಪರಮಾತ್ಮನ ಮೂರನೇ ಗುಣವಾಗಿದೆ. ಪರಮಾತ್ಮನು ಮೇಲೆ ಹೇಳಿದಂತೆ ಪರ ಮತ್ತು ಗೂಢನಾಗಿದ್ದರೂ ಅವನ ಶಕ್ತಿಯು ಪ್ರಭಾವವೂ ಜಗತ್ತಿನಲ್ಲೆಲ್ಲ ಪ್ರವಹಿಸುತ್ತದೆ. ಅದರ ವ್ಯವಹಾರಗಳು ಅವನಿಂದಲೇ ನಡೆದಿವೆ. ಹ್ಯಾಗೆ ಲೋಹಚುಂಬಕವು ಕಬ್ಬಿಣದ ಮೇಲೆ ತನ್ನ ಸಾನ್ನಿಧ್ಯದಿಂದ ಪರಿಣಾಮ ಮಾಡಬಲ್ಲುದೋ, ಹಾಗೆಯೇ ದೇವರು ಜಗತ್ತಿನಲ್ಲೆಲ್ಲ ಪರಿಣಾಮಕರನಾಗಿರುತ್ತಾನೆ. ಇದಕ್ಕೆ ಉರಿಲಿಂಗ ಪೆದ್ದಿಯ ಅರ್ಥವೇನಂದರೆ:— "ತಾನು ಶಿವತತ್ವ ಭೇದವಾಗಿ ಅಯಸ್ಕಾಂತ ಸನ್ನಿಧಿಯಿಂದ ಲೋಹವೇ ಹ್ಯಾಗೆ ಭ್ರಮಿಸುವುದೋ ಹಾಗೆ ಬ್ರಹ್ಮಾದಿಗಳ ಹೃತ್ಕಮಲ ಮಧ್ಯದಲ್ಲಿದ್ದು, ತನ್ನ ಚಿತ್ ಶಕ್ತಿಯು ಸನ್ನಿಧಿ ಮಾತ್ರದಿಂದ ಅಹಮಾದಿಗಳಿಂ ವ್ಯೋಮಾದಿ ಭೂತಗಳಿಂದ ಸೃಷ್ಟಿಸುವುದಕ್ಕೆ ತಾನೇ ಕಾರಣವಪ್ಪುದರಿಂ ಶರೀರಸ್ಥವೆಂಬ ಸಂಜ್ಞೆಯುಳ್ಳದಾಗಿಹುದು."

**(೪) ಅನಾದಿವತ್**:- ಇದು ಪರಮಾತ್ಮನ ನಾಲ್ಕನೇ ಲಕ್ಷಣವು. ಪರಮಾತ್ಮನು ಅನಾದಿಯಿಂದಲೂ ಇದ್ದಾನೆ. ಆತನಿಗೆ ಹುಟ್ಟು ಸಾವು ಎಂಬುವು ಇಲ್ಲ. ಇದಕ್ಕೆ ಉರಿಲಿಂಗ ಪೆದ್ದಿಯ ಅರ್ಥವು ಕೆಳಗೆ ಬರೆದಂತೆ:— "ತನ್ನ ಸೃಷ್ಟಿ ಶಕ್ತಿಯಿಂದ ಉದಯುವಾದ ಸಮಸ್ತ ಸಂಸಾರಾದಿ ಪ್ರಪಂಚವು ತನ್ನಿಂದವೇ ಕಾರಣವಪ್ಪುದರಿಂ ಅನಾದಿವತ್ತೆಂಬ ಸಂಜ್ಞೆಯುಳ್ಳದಾಗಿಹುದು.

**(೫) ಲಿಂಗಕ್ಷೇತ್ರ**:- ಇದು ಪರಮಾತ್ಮನ ಐದನೇ ಲಕ್ಷಣವು.

ಇದರ ಅರ್ಥವು ಉರಿಲಿಂಗ ಪೆದ್ದಿಯಿಂದ ಕೆಳಗೆ ಬರೆದ ಮೇರೆಗೆ ಹೇಳ ಲ್ಪಟ್ಟಿದೆ. " ತನ್ನ ಮಾಯಾ ಶಕ್ತಿಯಿಂದುದಯವಾದ ಸ್ತ್ರೀಲಿಂಗ ಪುಲ್ಲಿಂಗ ನಪುಂಸಕಲಿಂಗವೆಂಬ ತ್ರಿಲಕ್ಷಿತವಾದ ಸಮಸ್ತ ಪ್ರಪಂಚವು ವರ್ತಿಸುವು ದಕ್ಕೆ ತಾನೇ ಸ್ಥಾನವಾದ ಕಾರಣ ಲಿಂಗಕ್ಷೇತ್ರವೆಂಬ ಸಂಜ್ಞೆಯುಳ್ಳ ದಾಗಿಹುದು."

ಇದರ ಮೇಲಿಂದ ಜಗತ್ತಿನಲ್ಲಿಯ ಎಲ್ಲ ವಸ್ತುಗಳು ತನ್ನಲ್ಲಿಯೇ ಹುಟ್ಟಿ, ಬೆಳೆದು, ಲಯವಾಗುವ ಕಾರಣ ಪರಮಾತ್ಮನಿಗೆ ಲಿಂಗಕ್ಷೇತ್ರ ವೆಂಬ ಹೆಸರು ಬಂದಿರುತ್ತದೆ.

ಈ ವಿವರಣೆಯಿಂದ ದೇವರ ಸಾಮಾನ್ಯ ಲಕ್ಷಣಗಳೆಂದರೆ, ಆತನು ಜಗತ್ತಿಗೆ ಮಿಗಿಲಾದವನಾಗಿದ್ದಾನೆ, ಆದರಂತೆಯೇ ಮನುಷ್ಯನ ಕಣ್ಣಿಗೆ ಕಾಣದವನು, ಮತ್ತು ಮನುಷ್ಯನಂತೆ ಹುಟ್ಟು ಇಲ್ಲದವನು ಇದ್ದಾನೆ. ಹೀಗಿದ್ದರೂ ಆತನು ಜಗತ್ತನ್ನು ಬಿಟ್ಟಿಲ್ಲ. ಆತನ ಅನಂತ ಶಕ್ತಿಯಿಂದಲೇ ಜಗತ್ತಿನ ಕಾರ್ಯಗಳೆಲ್ಲ ನಡೆದಿವೆ. ಮತ್ತು ಎಲ್ಲ ಪದಾ ರ್ಥಗಳ ಜನ್ಮ ಸ್ಥಿತಿ ಲಯಗಳು ಪರಮಾತ್ಮನ ಮೇಲೆಯೇ ಅವಲಂಬಿ ಸಿವೆ. ಎಂಬಿವೇ ದೇವರ ಮುಖ್ಯ ಗುಣಗಳಾಗಿವೆ ಎಂದು ಆಗಮ ಜ್ಞರು ವಿವರಿಸಿದ್ದಾರೆ.

ಈ ಮೇರೆಗೆ ದೇವರ ಸಂಬಂಧವಾಗಿ ವೀರಶೈವರಲ್ಲಿ ಶ್ರೇಷ್ಠತರದ ಕಲ್ಪ ನೆಗಳು ಇದ್ದು, ಅವುಗಳನ್ನೇ ಅವರ ಧರ್ಮ ಪ್ರವರ್ತಕರು ಬಹುಜನ ಸಮಾಜದಲ್ಲಿ ಪ್ರಸಾರಗೊಳಿಸಿದ್ದಾರೆ. ಆದರೆ ಜಗತ್ತಿನಲ್ಲಿ ಸುತ್ತಲಿನ ಪರಿಸ್ಥಿತಿಯ ಪರಿಣಾಮವು ವಿಲಕ್ಷಣತರದ್ದಿರುತ್ತದೆ. ಅದು ನಿಜಸ್ಥಿತಿಯನ್ನು ಮಸುಳಿಸಿ ಬಿಡುತ್ತದೆ. ವೀರಶೈವ ಧರ್ಮದ ಸ್ಥಿತಿಯಾದರೂ ಹೀಗೆಯೇ ಆಗಿರುತ್ತದೆ. ಈ ಪರಿಸ್ಥಿತಿಯು ವೀರಶೈವರನ್ನು ಅವರ ಧರ್ಮಕ್ಕೆ ಸಲ್ಲ ದಂಥ ಮಾರ್ಗಕ್ಕೆ ಪ್ರವರ್ತಗೊಳಿಸಿರುತ್ತದೆ. ಈಗ ವೀರಶೈವರು ತಮ್ಮ ಮೂಲ ಪ್ರವರ್ತಕರ ಮಾರ್ಗವನ್ನು ಬಿಟ್ಟು ಕೊಟ್ಟು ನಾನಾ ವಿಧ ದೇವ ತೆಗಳನ್ನು ಭಜಿಸುತ್ತಲಿದ್ದಾರೆ. ಕ್ರೂರದೇವತೆಗಳನ್ನೂ, ಗಿಡಮರಗಳನ್ನೂ, ನಾನಾ ವಿಧ ಮೂರ್ತಿಗಳನ್ನೂ ಸಹ ಭಜಿಸುತ್ತಲಿದ್ದಾರೆ. ಇದನ್ನುವಚ ನಕಾರರು ಅತ್ಯಂತ ಕಠೋರ ಶಬ್ದಗಳಿಂದ ನಿಷೇಧಿಸಿದ್ದಾರೆ.

ವಚನಕಾರರು ನಾನಾ ವಿಧ ಮೂರ್ತಿಗಳನ್ನು ಕೆಳಗೆ ಬರೆದ ಪ್ರಕಾರ ಹಳಿದಿದ್ದಾರೆ.

(೧) ಅರಗು ತಿಂದು ಕರಗುವ ದೈವ, ಉರಿಯ ಕಂಡರೆ ಮುರುಟುವ ದೈವ ಎಂತು ಸರಿ ಎಂಬೆನಯ್ಯ? ಅವಸರ ಬಂದರೆ ಮಾರುವ ದೈವವನೆಂತು ಸರಿ ಎಂಬೆನಯ್ಯ? ಅಂಜಿಕೆ ಬಂದರೆ, ಹೂಳುವ ದೈವವನೆಂತು ಸರಿ ಎಂಬೆನಯ್ಯ? ಸಹಜಭಾವ, ನಿಜೈಕ್ಯ, ಸ್ಥಿರರೂಪ, ನಿರ್ವಿಕಾರ, ನಿರಂಜನ ಕೂಡಲ ಸಂಗಮ ದೇವನೊರ್ವನೇ ದೇವ ಕಾಣಿರೋ.

(೨) ಮಡಿಕೆಯೇ ದೈವವು, ಮರದಲ್ಲಿಯ ದೈವವು, ಬೀದಿಯ ಕಲ್ಲೇ ದೈವವು, ಹಣತೆ ದೈವವು, ಬಿಲ್ಲುನಾರಿ ದೈವವು ಕಾಣಿರಯ್ಯ. ಕೊಳಗನೇ ದೈವವು, ಗಿಣಿಲು ದೈವವು ಕಾಣಿರಯ್ಯ. ದೈವ ದೈವವೆಂದು ಕಾಲಿಡಲಿಂಬಿಲ್ಲವು. ದೇವನೊಬ್ಬನೇ ಕೂಡಲ ಸಂಗಮ ದೇವಾ.

ಈ ವಚನಕಾರರು ಹೀಗೆ ಕಿರುಕುಳ ದೈವಗಳನ್ನಷ್ಟೇ ಅಲ್ಲ; ತ್ರಿಮೂರ್ತಿಗಳಲ್ಲಿ ಒಬ್ಬನಾದ ಶಿವನನ್ನೂ ಅಲ್ಲದೆ ಪಾರ್ವತಿಯನ್ನೂ ಗಣಪತಿ ಷಣ್ಮುಖರನ್ನೂ ಸಹ ನಿಷೇಧಿಸಿದ್ದಾರೆ.

"ಬೆನಕನ ಹರನ ಮಗನೆಂಬ ಪಾತಕರು ನೀವು ಕೇಳಿರೋ, ಪಾರ್ವತಿ ಹರನ ಸತಿ ಎಂಬ ಶಿವ ದ್ರೋಹಿಗಳು ನೀವು ಕೇಳಿರೋ, ಸ್ವಾಮಿಕಾರ್ತಿಕ ಹರನ ಮಗನೆಂಬ ಲಿಂಗ ದ್ರೋಹಿಗಳು ನೀವು ಕೇಳಿರೋ, ಅಜಾತ ಪವಿತ್ರ ಪೂರ್ವಾಚಾರಿ ಸಂಗನ ಬಸವಣ್ಣನೊಬ್ಬನೇ."

ಶಿವನೆಂದರೆ ಪರಬ್ರಹ್ಮವಸ್ತು ಎಂತಲೇ ವಚನಕಾರ ವಿಚಾರವಿರುತ್ತದೆ. ಆತನು ಪೌರಾಣಿಕ ದೇವತೆಯಾದ ಪಾರ್ವತೀಪತಿಯಲ್ಲವೆಂಬುದೇ ಅವರ ಅಭಿಪ್ರಾಯವು.

ಇದರಂತೆಯೇ ವೀರಭದ್ರ, ಬಸವಣ್ಣ, ಮಲ್ಲಿಕಾರ್ಜುನ ಇಂಥವರನ್ನು ಸಹ ದೇವತೆಗಳೆಂದು ಭಾವಿಸಿ ಪೂಜಿಸುವವರಿಗೆ ಮೋಕ್ಷವಿಲ್ಲೆಂದು ಇವರು ಹೇಳಿದ್ದಾರೆ.

"ವೀರಭದ್ರ, ಬಸವಣ್ಣ, ಮಲ್ಲಿಕಾರ್ಜುನನೆಂಬ ದೈವಂಗಳಿಗೆ ನಮ್ಮ ಕುಲ ದೈವಂಗಳೆಂದು ಹೇಳುವವರಿಗೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪಾದೋದಕವಿಲ್ಲ, ಪ್ರಸಾದವಿಲ್ಲ, ಕೂಡಲಚನ್ನಸಂಗಮದೇವಾ."

ಮೇಲ್ಕಂಡ ವಿವರಣೆಯು ಮೇಲಿಂದ ಒಬ್ಬನೇ ದೇವರು ಎಂಬ ವಿಚಾರಕ್ಕೆ ವೀರಶೈವರು ಎಷ್ಟು ಮಹತ್ವ ಕೊಟ್ಟಿರುತ್ತಾರೆಂಬದು ತಾನೇ

ವಿದಿತವಾಗುವದು. ಇದರಲ್ಲಿ ಅವರು ಯಾವ ತರದ ದಾಕ್ಷಿಣ್ಯ ಅಥವಾ ಭೀಡೆಯನ್ನು ತೋರಿಸಿಲ್ಲ. ಇದರಿಂದ ನಿಜವಾದ ವೀರಶೈವ ಧರ್ಮಕ್ಕೆ ಶುದ್ಧ ಮತ್ತು ಉಜ್ವಲ ಸ್ವರೂಪು ಬಂದಿರುತ್ತದೆ. ಇದರಿಂದ ಅವರಲ್ಲಿ ಮೂರ್ತಿ ಪೂಜೆಯ ನಾನಾ ವಿಧ ಜಂಬಾಟಗಳು ಹೊರಟು ಹೋಗಿವೆ. ಅವರು ಲಿಂಗ ಪೂಜೆಯನ್ನು ಮಾಡುವದುಂಟು. ಲಿಂಗವು ಒಂದು ತರದ ಮೂರ್ತಿ ಎಂದು ಹೇಳಬಹುದು. ಆದರೆ ಆ ಪೂಜೆಯ ವಿಚಾರ ಗಳು ಬಹು ವಿಶಿಷ್ಟತರದವಿರುತ್ತವೆ. ಈ ಲಿಂಗ ಪೂಜೆಯಲ್ಲಿ ಅನೇಕ ತಾತ್ವಿಕ ವಿಚಾರಗಳು ಅಡಗಿರುತ್ತವೆ. ಇದರಲ್ಲಿ ಮೂರ್ತಿ ಪೂಜೆಯ ಅನ ವಶ್ಯಅತಿರೇಕಗಳು ಹೋಗಿವೆ. ಈ ವಿಚಾರಗಳನ್ನು ಈ ಲೇಖದಲ್ಲಿ ವಿವ ರಿಸುವದು ಅಪ್ರಸ್ತುತವು. ಇದರ ತತ್ವಗಳನ್ನು ಮತ್ತೊಂದು ಲೇಖದಲ್ಲಿ ನಾವು ವಿವರಿಸುವೆವು. ಮತ್ತು ಕಡೆಗೆ ಈ ಬಗ್ಗೆ ಕಾಡಸಿದ್ಧೇಶ್ವರನು ಹೇಳಿದ ಒಂದು ವಚನವನ್ನು ಇಲ್ಲಿ ವಿವರಿಸಿ ಈ ಲೇಖವನ್ನು ಮುಗಿಸುತ್ತೇವೆ.

" ಒಂದು ಜನ್ಮದಲ್ಲಿ ನಿನ್ನ ಕಲ್ಲ ದೇವರ ಮಾಡಿ ಪೂಜಿಸಿ ಜೋಗಿ ಜಂಗಮ ಗೊರವನಾಗಿ ಹುಟ್ಟಿದೆ. ಒಂದು ಜನ್ಮದಲ್ಲಿ ನಿನ್ನ ಕಟ್ಟಿಗೆ ದೇವರ ಮಾಡಿ ಪೂಜಿಸಿ ಬಡಿಗ ಕಂಬರನಾಗಿ ಹುಟ್ಟಿದೆ. ಒಂದು ಜನ್ಮದಲ್ಲಿ ನಿನ್ನ ಮಣ್ಣ ದೇವರ ಮಾಡಿ ಪೂಜಿಸಿ ತಳವಾರನಾಗಿ ಹುಟ್ಟಿದೆ. ಒಂದು ಜನ್ಮದಲ್ಲಿ ನಿನ್ನ ನೀರ ದೇವರ ಮಾಡಿ ಪೂಜೆಯ ಮಾಡಿ ವಿಪ್ರನಾಗಿ ಹುಟ್ಟದೆ. ಒಂದು ಜನ್ಮದಲ್ಲಿ ನಿನ್ನ ಬೆಂಕಿ ದೇವರ ಮಾಡಿ ಪೂಜಿಸಿ ವಿಪ್ರಾಚಾರ್ಯನಾಗಿ ಹುಟ್ಟಿದೆ. ಇಂತಿವೆಲ್ಲವನು ನೀನೆಂದು ಭಾವಿಸಿ ಪೂಜಿಸಿದಲ್ಲಿ ಇಂತೀ ಭವದಲ್ಲಿ ನಾನು ಹುಟ್ಟಿದೆ. ಇಂತೀ ಜಡ ಸ್ವರೂಪ ನೀನಲ್ಲ. ನೀನು ನಿರಾಳ, ನಿಃಶೂನ್ಯ, ನಿರಾ ಕಾರನೆಂದು ಎನ್ನ ಕರಸ್ಥಲದಲ್ಲಿ ಅರಿದು ಪೂಜಿಸಿ, ಸಕಲ ಕುಲದ ವರಿಗೆ ಹೊರಗಾಗಿ, ಕುಲಗೆಟ್ಟು ನಾನಾವ ಜನ್ಮಕ್ಕೆ ಹೋದೆನೆಂದರಿಯೆ ನಯ್ಯ, ಕಾಡಿನೊಳಗಾದ ಶಂಕರ ಪ್ರಿಯ ಚನ್ನ ಕದಂಬಲಿಂಗ ನಿರ್ವಾಯ ಪ್ರಭುವೇ."

# ಬಸವೇಶ್ವರನ ಕಾಲವು.

ಬಸವೇಶ್ವರನ ಜನನ ಮತ್ತು ಐಕ್ಯಕಾಲಗಳು ಇನ್ನೂ ನಿಶ್ಚಿತವಾಗಿ ಗೊತ್ತುಪಡಿಸಲ್ಪಟ್ಟಿರುವದಿಲ್ಲ. ಈ ಸ್ಥಿತಿಯು ಇನ್ನೂ ಇರುವದೆಂದರೆ, ನಮ್ಮ ಸಮಾಜದ ಶೋಧಕವೃತ್ತಿಗೆ ಕುಂದಕವೇ ಸರಿ. ಈ ವಿಷಯವನ್ನು ನಾವು ನಿರ್ಧರಿಸುವದು ಅತ್ಯಂತ ಅವಶ್ಯಕವಾಗಿರುತ್ತದೆ. ಈ ಬಗ್ಗೆ ವೀರಶೈವ ಗ್ರಂಥಗಳಲ್ಲಿ ಅಲ್ಲಲ್ಲಿ ಉಲ್ಲೇಖಗಳು ಬಂದಿರುತ್ತವೆ. ಆದರೆ ಅವುಗಳು ಒಂದಕ್ಕೊಂದು ಮೇಳಗೂಡುವದಿಲ್ಲ. ಆದ್ದರಿಂದ ಈ ಮಿತಿಗಳಲ್ಲಿ ಯಾವದು ಹೆಚ್ಚಿಗೆ ನಂಬಲಿಕ್ಕೆ ಅರ್ಹವಾದುದೆಂಬದನ್ನು ನಾವು ನಿಶ್ಚಯಿಸಬೇಕಾಗಿರುವದು. ಇದಕ್ಕೆ ನಾವು ಅಂತರ್ಯ ಮತ್ತು ಬಹಿರಂಗದ ಎಲ್ಲ ಸಂಗತಿಗಳನ್ನು ಸಂಗ್ರಹಿಸಿ ಅವುಗಳನ್ನು ನಾವು ಶಿಲಾಲೇಖಗಳಲ್ಲಿ ದೊರೆಯುವ ಸಂಗತಿಗಳಿಂದಲೂ ಪರೀಕ್ಷಿಸಿ ಈ ವಿಷಯವನ್ನು ವಿವೇಚಿಸುವದು ಅವಶ್ಯವಾಗಿದೆ.

ವೀರಶೈವ ಗ್ರಂಥಕಾರರಲ್ಲಿ ಕೆಳಗೆ ಕಾಣಿಸಿದ ಮಿತಿಗಳು ಕೊಡಲ್ಪಟ್ಟಿರುತ್ತವೆ.

**ಕಾಲಜ್ಞಾನದ ವಚನಃ**—ಬಸವೇಶ್ವರನ ಜನನ, ವಿಕ್ರಮ ಸಂವತ್ಸರ ಶ್ರಾವಣಶುದ್ಧ ಪಂಚಮಿ ಸೋಮವಾರ ಮುಂಜಾನೆ. ಬಸವೇಶ್ವರನ ಐಕ್ಯ, ರಾಕ್ಷಸ ಸಂವತ್ಸರ ಶ್ರಾವಣಶುದ್ಧ ೧ ಮಂಗಳವಾರ ಉದಯವಾದ ೨೫ ಘಳಿಗೆ.

**ಕಾಲಜ್ಞಾನ, ಕಲ್ಯಾಣಿಃ**—ಬಸವೇಶ್ವರನ ಐಕ್ಯ, ರಾಕ್ಷಸ ಸಂವತ್ಸರ ಆಷಾಢಶುದ್ಧ ೧ ಸೋಮವಾರ ರಾತ್ರಿ

**ಕುರುಹಿನ ರಟ್ಟಿಃ**—ಬಸವೇಶ್ವರನ ಐಕ್ಯ, ರಾಕ್ಷಸ ಸಂವತ್ಸರ ಫಾಲ್ಗುಣಶುದ್ಧ ೧೧ ಸೋಮವಾರ ೧ ತಾಸು ರಾತ್ರಿ

**ಚನ್ನಬಸವ ಪುರಾಣಃ**—ಬಸವೇಶ್ವರನ ಐಕ್ಯ, ಶಕೆ-೭೦೭ ರಕ್ತಾಕ್ಷಿ ಸಂವತ್ಸರ ಫಾಲ್ಗುಣಶುದ್ಧ ೧೧ ಮಂಗಳವಾರ ಉದಯವಾದ ೭೫ ಘಳಿಗೆ.

**ಲಕ್ಕಣ್ಣ ದಂಡೇಶಃ**—ಈತನು ತನ್ನ ಶಿವತತ್ವ ಚಿಂತಾಮಣಿಯಲ್ಲಿ ಬಸವೇಶ್ವರನ ಜನನ ಮಿತಿಯನ್ನು ಕೆಳಗೆ ಬರೆದ ಮೇರೆಗೆ ವಿವರಿಸಿದ್ದಾನೆ.

**ಸದಮಳ ಶಿವಾರ್ಚಕರು ಬೇಡಿದಿಷ್ಟಾರ್ಥಸಂ।**
**ಪದವನೊಲಿದೀವ ಮಳಸಿದ್ಧಾರ್ಥಿ ಸಂವತ್ಸ।**
**ರದ ಕಾರ್ತಿಕ ಶುದ್ಧ ಪೌರ್ಣಮೆಯು ಸೋಮವಾರದ ಮಧ್ಯ ರಾತ್ರಿಯಲ್ಲಿ॥**
**ಒದಗಿರ್ದ ಶುಭಯೋಗ ವೃಷಭ ಮುಹೂರ್ತದ ಲ।**
**ಗ್ನದೊಳು ಮಾದಾಂಬಿಕೆಯ ಗರ್ಭ ರತ್ನಾಕರದೊ।**
**ಳು ದಯವಾದಂ ವೃಷಭನೆಂದರಿದ ಪಶುಪತಿಯ ಚರಣಾಂಬುಜಕ್ಕೆ ಶರಣು**

ಇದರಲ್ಲಿ ಬಸವೇಶ್ವರನು ಸಿದ್ಧಾರ್ಥಿ ಸಂವತ್ಸರದ ಕಾರ್ತಿಕಶುದ್ಧ ೧೫ ಸೋಮವಾರ ಮಧ್ಯ ರಾತ್ರಿಯಲ್ಲಿ ಹುಟ್ಟಿದನೆಂದು ಹೇಳಲ್ಪಟ್ಟಿದೆ.

**ಸಂಸ್ಕೃತ ಬಸವ ಪುರಾಣಃ**---ಅಧ್ಯಾಯ ೪ ಶ್ಲೋಕ ೩೪ ಮತ್ತು ೩೫ ರಲ್ಲಿ ಬಸವೇಶ್ವರನ ಕುಂಡಲಿಯು ಕೊಡಲ್ಪಟ್ಟಿದೆ. ಅದರಲ್ಲಿ ಮಿತಿಯು ಕೊಡಲ್ಪಟ್ಟಿಲ್ಲ. ಈ ಕುಂಡಲಿಯು ಏನಂದರೆ, ಶುಕ್ರನು ಮೀನರಾಶಿಯಲ್ಲಿ, ರವಿಯು ಮೇಷ ರಾಶಿಯಲ್ಲಿ, ಶನಿಯು ತುಲಾರಾಶಿಯಲ್ಲಿ, ಗುರುವುಕರ್ಕರಾಶಿಯಲ್ಲಿ, ಚಂದ್ರನು ರೋಹಿಣೀ ನಕ್ಷತ್ರದಲ್ಲಿ ಮತ್ತು ಮಂಗಳನು ಮಕರರಾಶಿಯಲ್ಲಿ ಕರ್ಕ ಲಗ್ನದಲ್ಲಿ, ಬಸವೇಶ್ವರನ ಜನನವಾಯಿತು.

ಬಸವೇಶ್ವರನ ಚರಿತ್ರೆಯನ್ನು ಕೆಲ ಜೈನ ಗ್ರಂಥಕಾರರೂ ಬರೆದಿದ್ದಾರೆ. "ಬಿಜ್ಜಳ ಚರಿತೆ" ಎಂಬ ಕನ್ನಡ ಗ್ರಂಥವು ಪ್ರಸಿದ್ಧವಾಗಿದ್ದು, ಅದರಲ್ಲಿ ಬಿಜ್ಜಳನ ಮರಣವು ಕಲಿಯುಗ ೪೦೦೦ ವಿಜಯ ಸಂವತ್ಸರ ಕಾರ್ತಿಕಶುದ್ಧ ೧೦ ಆದಿತ್ಯವಾರ ದಿವಸ ವಿಷಪ್ರಯೋಗದಿಂದ ಒದಗಿತೆಂದು ಬರೆಯಲ್ಪಟ್ಟಿದೆ.

"ಬಿಜ್ಜಣರಾಯ ಪುರಾಣ" ಎಂಬ ಇನ್ನೊಂದು ಜೈನ ಕನ್ನಡ ಕಾವ್ಯವು ಇದ್ದು ಇದರಲ್ಲಿ ಯಾವ ಮಿತಿಯೂ ಬರೆಯಲ್ಪಟ್ಟಿಲ್ಲ. ಆದರೆ ಅದರಲ್ಲಿ ಬಿಜ್ಜಳನು ಸನ್ಯಾಸ ದೀಕ್ಷೆಯನ್ನು ತೆಗೆದುಕೊಂಡು, ತನ್ನ ತರುವಾಯ ಶಿವಬಿಜ್ಜಣನೆಂಬ ಹೆಸರಿನ ಮೂರು ವರುಷದ ಮಗನನ್ನು ಪಟ್ಟಕ್ಕೆ ಕೂಡ್ರಿಸಿ, ತಾನು ರಾಜ್ಯಪರಿತ್ಯಾಗ ಮಾಡಿದನೆಂತಲೂ, ಆ ಮೇಲೆ. ಹನ್ನೆರಡು ವರುಷ ಬಸವೇಶ್ವರನು ರಾಜ್ಯಭಾರ ಮಾಡಿ ವೀರಶೈವ ಮತವನ್ನು ಪ್ರಸಾರಗೊಳಿಸಿದನೆಂತಲೂ ಬರೆದಿದೆ. ಆ ಮೇಲೆ ಈ ಶಿವಬಿಜ್ಜಳನಿಂದ ಬಸವೇಶ್ವರನು ಘಾತಿಸಲ್ಪಟ್ಟನೆಂತಲೂ ಬರೆದಿದೆ.

ಈ ಮೇರೆಗೆ ಈ ಗ್ರಂಥಗಳಲ್ಲಿಯ ಮಿತಿಗಳು ಪರಸ್ಪರ ಕೂಡುವದಿಲ್ಲ. ಆದರೂ ಇವುಗಳಲ್ಲಿ ಯಾವವು ಹೆಚ್ಚಿಗೆ ನಿಜವಿರುತ್ತವೆಂಬದನ್ನು ಕಂಡು ಹಿಡಿಯತಕ್ಕದ್ದಾಗಿದೆ.

ಈ ಮಿತಿಗಳ ನಿಜಸ್ಥಿತಿಯನ್ನು ಶಿಲಾಲೇಖಗಳೊಳಗೆ ದೊರೆಯುವ ಮಾಹಿತಿಯಿಂದಲೇ ಪರೀಕ್ಷಿಸುವದು ಅವಶ್ಯವು. ಇವುಗಳಲ್ಲಿ ದೊರೆಯುವ ಸಂಗತಿಗಳು ವಿಶ್ವಾಸಕ್ಕೆ ಪಾತ್ರವಾದವುಗಳೆಂದು ನಾವು ಗ್ರಹಿಸತಕ್ಕದ್ದಾಗಿದೆ. ಬಿಜ್ಜಳನ ಶಿಲಾಲೇಖಗಳು ಕಲಬುರ್ಗಿ, ಧಾರವಾಡ, ವಿಜಾಪುರ, ಶಿವಮೊಗ್ಗೆ ಮೊದಲಾದ ಜಿಲ್ಹೆಗಳಲ್ಲಿ ಅನೇಕ ದೊರಕುತ್ತವೆ. ಅವೆಲ್ಲವು ಒಂದಕ್ಕೊಂದು ಮೇಳ ಗೂಡುವದರಿಂದ ಅವು ಸುಳ್ಳೆಂದು ಹೇಳಲಿಕ್ಕೆ ಬರಲಾರದು. ಅವುಗಳಿಂದ ತಿಳಿದು ಬರುವ ಸಂಗತಿಗಳು ಏನೆಂದರೆ, ಬಿಜ್ಜಳನು ಕಲಚೂರ್ಯ ವಂಶದವನಾಗಿದ್ದನು. ಅವನು ಮೊದಲು ಚಾಲುಕ್ಯ ರಾಜನಾದ ತೈಲಪ ಅಥವಾ ತ್ರೈಲೋಕ್ಯಮಲ್ಲ ಎಂಬವನ ಮಾಂಡಲಿಕನಾಗಿದ್ದನು. ಅವನು ಬರಬರುತ್ತ ಪ್ರಬಲನಾಗಿ ೧೧೫೬ ರ ಸುಮಾರಕ್ಕೆ ಸ್ವತಂತ್ರನಾದನು. ಮುಂದೆ ೧೧೬೦ ರ ಸುಮಾರಕ್ಕೆ ಸಾರ್ವಭೌಮಪದವಿಗಳನ್ನು ಧರಿಸಿ, ತೈಲಪನನ್ನು ಪಟ್ಟದಿಂದ ತಳ್ಳಿ, ಕಲ್ಯಾಣದಲ್ಲಿ ಆಳಹತ್ತಿದನು. ೧೧೬೭ ರ ಒಂದು ಶಿಲಾಲೇಖವು ದೊರೆದಿದ್ದು, ಅದರಿಂದ ತಿಳಿಯುವದೇನಂದರೆ, ಬಿಜ್ಜಳನು ಸನ್ಯಾಸದೀಕ್ಷೆಯನ್ನು ತೆಗೆದುಕೊಂಡು ಸೋವಿದೇವನೆಂಬವನಿಗೆ ಪಟ್ಟಗಟ್ಟಿ ತಾನು ರಾಜ್ಯಪರಿತ್ಯಾಗ ಮಾಡಿದನು. ಶಿಲಾಲೇಖಗಳಲ್ಲಿ ಬಿಜ್ಜಳನು ಘಾತಿಸಲ್ಪಟ್ಟನೆಂದು ಉಲ್ಲೇಖವು ಇಲ್ಲೆಂಬದನ್ನು ವಾಚಕರು ಲಕ್ಷಿಸತಕ್ಕ ಸಂಗತಿಯಾಗಿದೆ.

ಈ ಮೇರೆಗೆ ಶಿಲಾಲೇಖಗಳಿಂದ ಹೊರಡುವ ವೃತ್ತಾಂತಗಳಿದ್ದು, ಇವುಗಳಿಂದ ನಾನು ಮೇಲೆ ವಿವರಿಸಿದ ಮಿತಿಗಳ ಸತ್ಯಾ ಸತ್ಯತೆಯನ್ನು ಕಂಡು ಹಿಡಿಯತಕ್ಕದ್ದಾಗಿದೆ.

ಚನ್ನಬಸವ ಪುರಾಣದಲ್ಲಿ ಬಸವೇಶ್ವರನ ಐಕ್ಯವು ಶಕೆ ೭೦೭ ಎಂತಲೂ ಜೈನರ ಬಿಜ್ಜಳ ಚರಿತೆಯಲ್ಲಿ ಬಿಜ್ಜಳನು ಮರಣ ಹೊಂದಿದ್ದು ಕಲಿಯುಗ ೪೦೦೦ ಎಂತಲೂ ಬರೆದಿದ್ದು ಇವೆರಡನ್ನೂ ನಂಬಲಿಕ್ಕೆ ಶಕ್ಯವಿಲ್ಲ. ಯಾಕಂದರೆ ಆ ಕಾಲಕ್ಕೆ ಬಿಜ್ಜಳನ ಸಂಬಂಧದ ಯಾವ ಶಿಲಾಲೇಖವೂ ಅವನ ಯಾವ ಉಲ್ಲೇಖವೂ ಇತಿಹಾಸದಲ್ಲಿ ದೊರೆಯುವದಿಲ್ಲ. ಬಸವೇಶ್ವರನು ಬಿಜ್ಜಳನ ಕಾಲಕ್ಕಿದ್ದದ್ದು ನಿಶ್ಚಯಾತ್ಮಕ ವಿರುವದರಿಂದ ಆತನು ಹನ್ನೆರಡನೇ ಶತಮಾನದಲ್ಲಿ ಇದ್ದನೆಂಬುದು ನಿರ್ವಿವಾದವಾದದ್ದು

ಆದ್ದರಿಂದ ಬಸವೇಶ್ವರನು ಈ ಶತಮಾನದಲ್ಲಿ ಯಾವವರ್ಷ ಹುಟ್ಟಿದನು ಮತ್ತು ಯಾವವರ್ಷ ಐಕ್ಯಹೊಂದಿದನು ಎಂಬದನ್ನು ನಿಶ್ಚೈಸತಕ್ಕ

ಷ್ಟೇ ಮುಖ್ಯ ವಿಷಯವಾಗಿವೆ. ಇದನ್ನು ನಾವು ಬಿಜ್ಜಳನು ಇದ್ದ ಕಾಲಕ್ಕೆ ಅಂದರೆ ೧೧೫೬ ರಿಂದ ೧೧೬೭ ರ ವರೆಗಿನ ಕಾಲಕ್ಕೆಯಾವ ಮಿತಿಗಳು ಮೇಳ ಬೀಳುತ್ತವೆಯೋ ಅವುಗಳಿನ್ನೇ ನಾವು ಹೆಚ್ಚಿಗೆ ನಂಬಬೇಕಾಗುತ್ತದೆ.

**ಈ ವಿಷಯದಲ್ಲಿ ನಾವು ವಿವೇಚಿಸತಕ್ಕ ಸಂಗತಿ ಏನೆಂದರೆ ಬಸವೇಶ್ವರನು ಐಕ್ಯ ಹೊಂದಿದಾಗ ೩೬ ವರ್ಷದವನಾಗಿದ್ದನು. ಇದನ್ನು ವೀರಶೈವರ ಎಲ್ಲ ಗ್ರಂಥಗಳೂ ಒಪ್ಪಿಕೊಳ್ಳುತ್ತವೆ. ಅದರಂತೆಯೇ ಆತನು ಬಿಜ್ಜಳನ ತರುವಾಯ ಐಕ್ಯವನ್ನು ಹೊಂದಿದನು. ಇದನ್ನು ಜೈನ, ವೀರಶೈವ ಎಲ್ಲ ಗ್ರಂಥಕಾರರೂ ಒಪ್ಪಿಕೊಳ್ಳುತ್ತಾರೆ. ಈ ಎರಡು ಸಂಗತಿಗಳನ್ನು ನಾವು ಗ್ರಹಿತ ಹಿಡಿದು ಬಸವೇಶ್ವರನ ಕಾಲವನ್ನು ಗೊತ್ತುಪಡಿಸಲಿಕ್ಕೆ ಪ್ರಯತ್ನಿಸತಕ್ಕದ್ದಾಗಿದೆ.**

**ರಾಕ್ಷಸ ಸಂವತ್ಸರಃ**—ಕಾಲಜ್ಞಾನದ ಎರಡು ಗ್ರಂಥಗಳು, ಮತ್ತು ಕುರುಹಿನ ರಟ್ಟು ಹೀಗೆ ಮೂರು ಗ್ರಂಥಗಳು ಬಸವೇಶ್ವರನ ಐಕ್ಯವು ರಾಕ್ಷಸ ಸಂವತ್ಸರ ಎಂದು ಬರೆದಿದೆ. ಅಂದಬಳಿಕ ಅವನ ಜನನವು ವಿಕ್ರಮ ಸಂವತ್ಸರವಾಗುತ್ತದೆ.

ಈ ಸಂವತ್ಸರವು ೧೨ ನೇ ಶತಮಾನದಲ್ಲಿ ೧೧೦೦ ಮತ್ತು ೧೧೬೦ ಈ ಇಸ್ವಿಗಳಲ್ಲಿ ಬೀಳುತ್ತದೆ. ಮತ್ತು ಐಕ್ಯವು ೧೧೩೬ ಮತ್ತು ೧೧೯೬ ಆಗುತ್ತದೆ.

೧೧೩೬ ರಲ್ಲಿ ಆತನು ಐಕ್ಯವಾದನೆಂದು ತಿಳಿವರೆ, ಅದು ಶಿಲಾಲೇಖಗಳಿಗೆ ಕೂಡುವದಿಲ್ಲ. ಯಾಕಂದರೆ ಆಗ ಬಿಜ್ಜಳನು ಆದರ ತರುವಾಯು ಜೀವಂತನಿದ್ದನು. ಅವನ ಶಿಲಾಲೇಖಗಳು ೧೧೬೭ ರ ವರೆಗೆ ಶಿಗುವದುಂಟು. ಆದ್ದರಿಂದ ೧೧೩೬ ರ ಕಿಂತಲೂ ಮುಂಚೆ ಬಿಜ್ಜಳನು ಜೀವಂತನಾಗಿದ್ದಬಳಿಕ ಅದಕ್ಕೂ ಪೂರ್ವದಲ್ಲಿ ಬಸವೇಶ್ವರನ ಐಕ್ಯವೆಂದು ನಾವು ನಂಬಲಿಕ್ಕೆ ಬರಲಾರದು. ಅದರಂತೆಯೇ ಬಸವೇಶ್ವರನು ೧೧೬೦ ರಿಂದ ೧೧೯೬ ರ ವರೆಗೆ ಇದ್ದನೆಂತಲೂ ತಿಳಿಯುಲಿಕ್ಕೆ ಬರಲಾರದು. ಯಾಕಂದರೆ ೧೧೬೦ ರಲ್ಲಿ ಬಿಜ್ಜಳನು ಸ್ವತಂತ್ರನಾಗಿ ೧೧೬೭ ರ ವರೆಗೆ ಆಳಿದನು. ಅಂದ ಬಳಿಕ ಬಸವೇಶ್ವರನು ತೀರ ಬಾಲಕನಾಗಿದ್ದಾಗಲೆ ಪ್ರಧಾನಿಯಾಗಿರುವದು ಶಕ್ಯವಲ್ಲ. ಮತ್ತು ಇದರಿಂದ ಬಿಜ್ಜಳನ ತರುವಾಯು ಬಸವೇಶ್ವರನು ೩೦ ವರ್ಷ ಜೀವಂತನಿದ್ದನೆಂತಲೂ ನಾವು ಅನ್ನಬೇಕಾಗುತ್ತದೆ. ಇದೂ ಸಂಭವನೀಯುವಲ್ಲ.

ಆದ್ದರಿಂದ ಬಸವೇಶ್ವರನ ಜನ್ಮಸಂವತ್ಸರವು ವಿಕ್ರಮ ಮತ್ತು ಐಕ್ಯ ಸಂವತ್ಸರವು ರಾಕ್ಷಸ ಎಂದು ತಿಳಿಯಲಿಕ್ಕೆ ಬರಲಾರದು.

**ರಕ್ತಾಕ್ಷಿ ಸಂವತ್ಸರಃ**—ಇದು ಚನ್ನಬಸವ ಪುರಾಣದಲ್ಲಿ ಬಸವೇಶ್ವರನು ಐಕ್ಯ ಸಂವತ್ಸರವೆಂದು ಕಾಣಿಸಿದೆ. ಈ ಸಂವತ್ಸರವು ೧೨ನೇ ಶತಮಾನದಲ್ಲಿ ೧೧೪೪ ಮತ್ತು ೧೨೦೪ ಈ ವರ್ಷಗಳಲ್ಲಿ ಬೀಳುತ್ತದೆ. ಈ ವರ್ಷಗಳನ್ನು ಮೇಲೆ ಕಾಣಿಸಿದ ರೀತಿಯಂತೆ ವಿಚಾರ ಮಾಡಿದರೆ ಇದು ರಾಕ್ಷಸ ಸಂವತ್ಸರಕ್ಕಿಂತಲೂ ಬಹಳ ಅಸಂಭವ ನೀಯವಾಗಿ ತೋರುತ್ತದೆ. ಮೇಲೆ ವಿವರಿಸಿದ ಕಾರಣಗಳಾದರೂ ಇದಕ್ಕೆ ಹತ್ತುತ್ತದೆ. ಆದ್ದರಿಂದ ಈ ಸಂವತ್ಸರವು ತೀರ ತಪ್ಪು ಇರುತ್ತದೆಂದು ತೋರುತ್ತದೆ.

**ಸಿದ್ಧಾರ್ಥಿ ಸಂವತ್ಸರಃ**— ಲಕ್ಕಣ್ಣದಂಡೇಶನು ಇದು ಬಸವನ ಜನ್ಮ ಸಂವತ್ಸರವೆಂದು ಬರೆದಿದ್ದಾನೆ. ಅಂದಬಳಿಕ ಅವನ ಐಕ್ಯ ಸಂವತ್ಸರವು ಮನ್ಮಥವಾಗುವದು. ಜೈನರ ಬಿಜ್ಜಳರಾಯ ಚರಿತೆಯಲ್ಲಿ ಬಿಜ್ಜಳನು ರಾಜ್ಯಪರಿತ್ಯಾಗ ಮಾಡಿದ್ದು ವಿಜಯವೆಂದು ಬರೆಯಲ್ಪಟ್ಟಿರುವದು. ಅಂದರೆ ಇವೆರಡಕ್ಕೂ ಒಂದೇ ವರ್ಷ ಹೆಚ್ಚುಕಡಿಮೆಯಾಗುತ್ತದೆ. ಲಕ್ಕಣ್ಣದಂಡೇಶನು ಕೊಟ್ಟ ಸಂವತ್ಸರಗಳು ಶಿಲಾಲೇಖಗಳಿಗೆ ಹೆಚ್ಚಿಗೆ ಮೇಳ ಬೀಳುತ್ತವೆ.

೧೨ ನೇ ಶತಮಾನದಲ್ಲಿ ಸಿದ್ಧಾರ್ಥಿ ಸಂವತ್ಸರವು ೧೧೩೦ ಮತ್ತು ೧೧೯೯ ರಲ್ಲಿ ಬೀಳುತ್ತದೆ. ಆಕಾರಣ ಅವನ ಐಕ್ಯ ಸಂವತ್ಸರವು ಇವುಗಳಿಗೆ ಸರಿಯಾಗಿ ೧೧೬೫ ಮತ್ತು ೧೨೩೫ ಆಗುತ್ತದೆ. ಇವುಗಳಲ್ಲಿ ೧೨೩೫ ಬಸವೇಶ್ವರನ ಐಕ್ಯವೆಂಬುದು ತೀರ ಅಸಂಭವವು. ಯಾಕಂದರೆ ಆಗ ಬಿಜ್ಜಳನು ರಾಜ್ಯವನ್ನು ಬಿಟ್ಟು ೬೦ ವರ್ಷಗಳಾಗುತ್ತವೆ. ಆದರೆ ೧೧೩೯ ರಿಂದ ೧೧೬೫ ರವರೆಗೆ ಬಸವೇಶ್ವರನಿದ್ದನೆಂದು ತಿಳಿದರೆ ಇದು ಬಿಜ್ಜಳನ ಕಾಲಕ್ಕೆ ಹೆಚ್ಚಿಗೆ ಮೇಳಬೀಳುತ್ತದೆ. ಯಾಕಂದರೆ ಬಿಜ್ಜಳನು ೧೧೩೯ ಮತ್ತು ೧೧೬೫ ಈ ಎರಡು ವರ್ಷಗಳ ಮಧ್ಯದಲ್ಲಿಯೇ ಅವನು ಕಲ್ಯಾಣದಲ್ಲಿ ರಾಜ್ಯವಾಳುತ್ತಿದ್ದನು. ಈ ಅವಧಿಯಲ್ಲಿಯೇ ಅವನ ಅನೇಕ ಶಿಲಾಲೇಖಗಳು ದೊರೆಯುತ್ತವೆ.

ಈ ಕಾಲವನ್ನು ನಾವು ಗ್ರಹಿಸಿದರೆ ಇನ್ನೊಂದು ವಿಶೇಷ ತರದ ಸಂಗತಿಯು ಪ್ರಕಟವಾಗುತ್ತದೆ. ಅದು ಏನಂದರೆ ಬಿಜ್ಜಳನು ೧೧೬೭ ರ ವರೆಗೆ ಮಾತ್ರ ರಾಜ್ಯವಾಳಿರುವದರಿಂದ ಅವನ ತರುವಾಯ ೮-೯

ವರ್ಷ ಬಸವೇಶ್ವರನು ಇದ್ದಹಾಗೆ ಗ್ರಹಿಸಬೇಕಾಗುತ್ತದೆ. ಈ ಸಂಗತಿಗೂ ಜೈನರ ಗ್ರಂಥವಾದ ಬಿಜ್ಜಳರಾಯನ ಪುರಾಣದಲ್ಲಿ ವಿವರಿಸಿದಸಂಗತಿಗೂ ಕೆಲವುಮಟ್ಟಿಗೆ ಮೇಳಬೀಳುತ್ತದೆ. ಈ ಪುರಾಣದಲ್ಲಿ ಬಿಜ್ಜಳನು ರಾಜ್ಯ ಪರಿತ್ಯಾಗಮಾಡಿದನೆಂತಲೂ ಆ ಮೇಲೆ ೧೨ ವರ್ಷ ಬಸವೇಶ್ವರನು ಮಂತ್ರಿಪದಾರೂಢನಾಗಿ ಬಿಜ್ಜಳನ ಮಗನಾದ ಶಿವಬಿಜ್ಜಳನ ಕಾಲದಲ್ಲಿ ಧರ್ಮ ಪ್ರಸಾರಮಾಡಿದನೆಂತಲೂ ಬರೆದಿದೆ. ಈ ಪುರಾಣದಲ್ಲಿ ಬಿಜ್ಜಳನು ರಾಜ್ಯ ಪರಿತ್ಯಾಗಮಾಡಿದನೆಂದು ಬರೆದಿದ್ದು, ಶಿಲಾಲೇಖಗಳಲ್ಲಿ ಅದು ಶಿಗುವ ವೃತ್ತಾಂತಕ್ಕೆ ಕೂಡುತ್ತದೆ. ಈ ಶಿಲಾಲೇಖಗಳಿಂದ ಬಿಜ್ಜಳನು ಘಾತಿ ಸಲ್ಪಡದೆ ರಾಜ್ಯಪರಿತ್ಯಾಗಮಾಡಿದನೆಂದು ಸ್ಪಷ್ಟವಾಗಿ ಬರೆದದೆ. ನಾವು ಲಕ್ಕಣ್ಣದಂಡೇಶನು ವಿವರಿಸಿದ ಸಂವತ್ಸರಗಳನ್ನು ಗ್ರಹಿಸಿದರೆ ಮೇಲ್ಕಂಡ ಸಂಗತಿಗಳು ಕೆಲಮಟ್ಟಿಗೆ ಸಂಭವನೀಯತೋರಹತ್ತುತ್ತವೆ. ಇದರಿಂದ ಬಸವೇಶ್ವರನು ಬಿಜ್ಜಳನ ಕೊಲೆ ಬಡಿಸಿಲ್ಲ, ಅವನ ತರುವಾಯ ೧೦-೧೨ ವರ್ಷ ಇದ್ದು ಧರ್ಮಪ್ರಸಾರದ ಕಾರ್ಯ ಮಾಡಿದನೆಂಬ ಊಹೆಗೆ ಆಸ್ಪದವಾಗಹತ್ತುತ್ತದೆ.

ಲಕ್ಕಣ್ಣದಂಡೇಶನು ೧೪೧೮ರಿಂದ ೧೪೪೪ರ ವರೆಗೆ ವಿಜಯನಗರ ವನ್ನು ಆಳಿದ ದೇವರಾಜನ ಸೇನಾಪತಿಯಾಗಿದ್ದನು. ಇವನ ಕಾಲಕ್ಕೆ ಜಕ್ಕಣಾರ್ಯ, ಚಾಮರಸ, ವೀರಣ್ಣೊಡೆಯರು ವೊದಲಾದ ಮಹಾ ಪಂಡಿತರು ಇದ್ದರು. ಆದ್ದರಿಂದ ಇವರೆಲ್ಲರಿಗೂ ಸಮ್ಮತವಾದ ಮಿತಿಯನ್ನೇ ಲಕ್ಕಣ್ಣದಂಡೇಶನು ತನ್ನ ಗ್ರಂಥದಲ್ಲಿ ಬರೆದಿರುವದು ಹೆಚ್ಚಿಗೆ ಸಂಭವನೀಯವದೆ.

ಶ್ರೀಯುತ ಮಂಜಪ್ಪ ಹರಡೇಕರ ಇವರು ತಮ್ಮ ಬಸವಚರಿತ್ರೆಯಲ್ಲಿ ಸಂಸ್ಕೃತ ಬಸವಪುರಾಣದಲ್ಲಿಯ ಜಾತಕವನ್ನು ಕಾಣಿಸಿ, ಅದು ೧೧೧೫ ನೇ ಇಸ್ವಿಯ ಮನ್ಮಥ ಸಂವತ್ಸರದ ವೈಶಾಖ ಶುದ್ಧ ೪ ಶನಿವಾರ ಸೂರ್ಯೋದಯನಂತರ ಘಟಿಕಾ ೧೪-೨೪ ಕ್ಕೆ ಮೇಳಬೀಳುತ್ತದೆಂದು ಪ್ರಸಿದ್ಧ ಜ್ಯೋತಿಷಜ್ಞರಾದ ಕೈ. ವಾ. ಹರಪನಹಳ್ಳಿ ಆರ್. ಶಾಂತಪ್ಪಾಜಿಯವರು ಅಭಿಪ್ರಾಯಪಟ್ಟಿರುವರೆಂದು ಕಾಣಿಸಿದ್ದಾರೆ. ಆದರೆ ೧೧೧೫ ನೇ ವರ್ಷವು ಬಿಜ್ಜಳನ ಕಾಲಕ್ಕೆ ಏನೂ ಸಂಬಂಧ ಬೀಳುವದಿಲ್ಲ. ಆದ್ದರಿಂದ ಅದು ನಂಬಿಗೆಗೆ ಅರ್ಹವಲ್ಲೆಂದು ಶ್ರೀಯುತ ಹರ್ಡೆಕರರವರು ಅಭಿಪ್ರಾಯಪಟ್ಟಿರುತ್ತಾರೆ. ಇದು ಸರಿಯಾದದ್ದು. ಶ್ರೀಯುತ ಮಂಜ

ಪ್ಪನವರು ಬಿಜ್ಜಳನು ೧೧೬೮ ರಲ್ಲಿ ಘಾತಿಸಲ್ಪಟ್ಟನೆಂದು ಗ್ರಹಿಸಿ ಅಲ್ಲಿಂದ ೩೬ ವರ್ಷ ಹಿಂದೆ ಅಂದರೆ ಕ್ರಿ. ಶ. ೧೧೩೨ರಲ್ಲಿ ಬಸವೇಶ್ವರನು ಜನಿಸಿರಬಹುದೆಂದು ಬರೆದಿದ್ದಾರೆ. ಆದರೆ ಲಕ್ಕಣ್ಣ ದಂಡೇಶನ ಪ್ರಕಾರ ಬಸವೇಶ್ವರನ ಜನನಕಾಲವು ೧೧೩೪ ಆಗುತ್ತದೆ. ಆದ್ದರಿಂದ ಲಕ್ಕಣ್ಣದಂಡೇಶನು ವಿವರಿಸಿದ ಸಂವತ್ಸರಕ್ಕೂ ೧೧೩೨ ಕ್ಕೂ ಬಹಳ ಅಂತರವಿಲ್ಲ. ಸದ್ಯಕ್ಕೆ ನಾವು ಲಕ್ಕಣ್ಣದಂಡೇಶನಮಿತಿಯನ್ನು ನಂಬಿದರೆ ಹೆಚ್ಚಿಗೆ ತಪ್ಪಾಗಲಾರದೆಂದು ನನಗೆ ತೋರುತ್ತದೆ.

ನಾನು ಮೇಲ್ಕಂಡ ವಿವರಣೆಯೆಲ್ಲ ಪೂರ್ಣ ನಿಶ್ಚಯಾತ್ಮಕವೆಂದು ತಿಳಿದು ಬರೆದಿಲ್ಲ. ಜನರಲ್ಲಿ ಈ ಮಹತ್ವದ ವಿಷಯದ ಬಗ್ಗೆ ಚರ್ಚೆಯು ಆಗಬೇಕೆಂಬ ಉದ್ದೇಶದಿಂದ ಮಾತ್ರ ಬರೆದಿದ್ದೇನೆ. ಯಾರಿಗಾದರೂ ಬಸವೇಶ್ವರನ ಕಾಲದ ಸಂಬಂಧವಾಗಿ ಎಲ್ಲಾದರೂ ಉಲ್ಲೇಖಗಳು ಸಿಕ್ಕಿದ್ದರೆ ಅವುಗಳನ್ನು ಅವರು ಬರೆದು ನಮ್ಮ ಕಡೆಗೆ ಕಳಿಸಿಕೊಟ್ಟರೆ, ನಾವು ಅವರಿಗೆ ಅತ್ಯಂತ ಆಭಾರಿಯಾಗುವೆವು. ಮತ್ತು ಅವುಗಳ ವಿವರಣೆಯನ್ನು ನಾವು ಮುಂದಿನ ಸಂಚಿಕೆಯಲ್ಲಿ ಆನಂದದಿಂದ ಕೊಡುವೆವು.

---

## ಶಿವಾನುಭವ ಶಾಸ್ತ್ರದ ಮಹತ್ವ.

ಇತಿಹಾಸಜ್ಞರು ಗಣಿಸಿ ಹೋದ ಕಾಲವನ್ನು ಪ್ರಾಚೀನ ಮಧ್ಯ ಅರ್ವಾಚೀನವೆಂದು ಮೂರು ವಿಭಾಗಗಳನ್ನಾಗಿ ವಿಂಗಡಿಸಿರುವರಷ್ಟೇ? ಇದೇ ಮೇರೆಗೆ ನಮ್ಮ ವೀರಶೈವ ಮತೇತಿಹಾಸದಲ್ಲಿಯೂ ಪ್ರಾಚೀನ ಪುರಾತನರ ಕಾಲವೆಂತಲೂ, ಮಾಧ್ಯಮಿಕ ಅಂದರೆ ಶ್ರೀಬಸವಾದಿ ನೂತನ ಪುರಾತನರ ಕಾಲವೆಂತಲೂ, ಆಧುನಿಕರ ಕಾಲವೆಂತಲೂ ಮೂರುಕಾಲ ವಿಭಾಗಗಳನ್ನು ಈಗಿನ ಸುಧಾರಕರ ದೃಷ್ಟಿಯಂತೆ ಮಾಡಬಹುದು.

ಅತಿ ಪ್ರಾಚೀನಕಾಲದಲ್ಲಿ ೬೩ ಮಂದಿ ಶಿವಶರಣರ ಸದಾಚರಣೆಯೂ ಅದರಿಂದ ೬೩ ಶೀಲಗಳ ದಿಗ್ದರ್ಶನವೂ ಇಡೀ ಹಿಂದುಸ್ಥಾನದಲ್ಲಿ ವೀರಶೈವ ಮತಪ್ರಾಚುರ್ಯವೂ ಅಲ್ಲದೆ ಇತರ ದೇಶ ವಿದೇಶಗಳಲ್ಲಿಯೂ ಕೂಡ, ವೀರಶೈವ ಮತಾಧಿಕ್ಯವೂ ಪ್ರಾಶಸ್ತ್ಯವೂ ಉಂಟಾಗಿದ್ದವೆಂದು

ಶೈವಾಲಯಗಳ ಅವಶೇಷಗಳೂ ಗ್ರಂಥಗಳೂ ಘಂಟಾಘೋಷವಾಗಿ ಕೂಗು ತ್ತಿರುವವು.

ಮಧ್ಯ ಕಾಲವೆಂದರೆ ಸಂಸ್ಕೃತ ವಾಙ್ಮಯರೂಪವಾಗಿದ್ದ ವೇದಾಂತೋಪನಿಷದಾಗಮಗಳಸಾರವನ್ನೇ ತಿಳಿಗನ್ನಡದಲ್ಲಿ ಪಂಡಿತರಿಗೂ ಪಾಮರರಿಗೂ ತಿಳಿಯುವಂತೆ ಸಹಸ್ರಾವಧಿ ವಚನಗ್ರಂಥಗಳನ್ನಾಗಿ ಬರೆದಿಟ್ಟ ಶಿವಶರಣರ ಕಾಲವು. ಈ ಕಾಲದ ಶಿವಶರಣರ ಪ್ರತಿಭೆಯೂ ಅಮಾನುಷ ಸಾಮರ್ಥ್ಯವೂ ಸಾಮಾನ್ಯವಾದವಲ್ಲ; ಅಂತೇ ಅವು ಎಲ್ಲ ಜನರ ಮನೋವೃತ್ತಿಗಳನ್ನು ತಿರುಗಿಸಿಕೊಂಡು ದಕ್ಷಿಣ ಹಿಂದುಸ್ಥಾನದಲ್ಲಿ ನೆಲೆಗೊಂಡ ಜೈನಬ್ರಾಹ್ಮಣಾದಿ ಮತಗಳನ್ನು ಹಿಂದೆಗೆಯಿಸಿ ವೀರಶೈವ ಮತದ ವಿಜಯಧ್ವಜವನ್ನು ಊರಿ ಭಾರತ ವರ್ಷದಲ್ಲೆಲ್ಲ ಮೆರೆಯಿಸಿದವು. ಇದಕ್ಕೆ ನಮ್ಮ ದೇಶದಲ್ಲಿ ಅಲ್ಲಲ್ಲಿ ಕಂಡು ಬರುವ ವಿರಕ್ತಮಠಗಳೂ ಪಂಚಾಚಾರ್ಯ ಮಠಗಳೂ ತಾಮ್ರಪಟ ತಾಡವಾಲೆಯ ಗ್ರಂಥಗಳೂ ಶಿವಾನುಭವ ಮಂಟಪಗಳ ಅವಶೇಷಗಳೂ ಶಿವಾನುಭವಶಾಸ್ತ್ರಗಳೂ ಸಬಲವಾದ ಪ್ರಮಾಣಗಳಾಗಿವೆ. ಮನಃಪರುಷ, ಭಾವಪರುಷ, ವಾಕ್ಪರುಷ, ದೃಷ್ಟಿಪರುಷ, ಹಸ್ತಪರುಷಗಳೆಂಬ ಪಂಚಪರುಷಗಳು ಮಧ್ಯ ಕಾಲದ ಶಿವಶರಣರಿಗೆ ವಶವಾದಂತೆ ಇನ್ನಾವ ಮತದ ಪ್ರಸಾರಕರಿಗೂ ಸಿದ್ಧಿಸಿದ್ದಿಲ್ಲವೆಂಬದು ಆ ಕಾಲದ ಇತಿಹಾಸಗಳಷ್ಟೇ ಬಲವಾದ ಸಾಕ್ಷಿಯಾಗಿರುತ್ತವೆಂತಲ್ಲ. ಈ ವರೆಗೂ ಬಸವಾದಿ ಪ್ರಮಥರ ಸೂತ್ರವಿಡಿದು ಅಂತರಂಗದ ಆಚರಣೆಯನ್ನು ಬಹಿಃ ಕ್ರಿಯೆಯಲ್ಲಿ ಅನ್ವಯಿಸಿ ಬಹಿರಂಗದಾಚರಣೆಯನ್ನು ಅಂತರಂಗದ ಸುಜ್ಞಾನಕ್ಕೆ ತಂದು, ನಿಜನಿರ್ಮಲತ್ವ, ಸದಾಚಾರ, ಸುಜ್ಞಾನ ಸದ್ಭಕ್ತಿಗಳಿಂದ ಮೆರೆಯುವ ನಮ್ಮ ವೀರಶೈವಾಚಾರ ಸಂಪನ್ನರಾದ ಶುದ್ಧಶಿವಾಚಾರಿಗಳಲ್ಲಿಯೂ ಈ ಪಂಚಪರುಷಗಳು ಕಂಡುಬರುವವೆಂಬದು ಷಟ್‌ಸ್ಥಲಸುಜ್ಞಾನಿಗಳಿಗೆ ಹೊಳೆಯದೆ ಇರದು. ಅಂಥ ಷಟ್‌ಸ್ಥಲಸುಜ್ಞಾನಿಗಳಾದ ಶ್ರೀ ಸರ್ಪಭೂಷಣರೂ ಶ್ರೀ ಘನಮಠ ನಿವಾಸಿಗಳೂ ಶ್ರೀ ಮಹಾಂತ ಸ್ವಾಮಿಗಳೂ ಶ್ರೀ ಅಥಣಿ ಮುರುಘೇಂದ್ರ ಸ್ವಾಮಿಗಳೂ ಮೊದಲಾದವರು ಸಾಮಾನ್ಯರೆ?

ಲಿಂಗದೇಹೀ ಸದಾಶುಚಿಃ ಎಂಬ ವಾಕ್ಯದಂತೆ ಶಿವಾನುಭವು ಶಿವಾಂಶಕರಾದ ಶಿವಶರಣರಂತೆ ನಡೆನುಡಿಯೊಂದಾದ ವೀರಶೈವ ಸದ್ಭಕ್ತರಿಗುಂಟಾಗುವದೇ ಹೊರ್ತು ಇತರರಿಗೆ ಅಭಾವವು. ಇರಿವೆಯು ಮರದ

ಬುಡದ ವಾಸನೆಯಿಂದ ಮೇಲಿರುವ ಹಣ್ಣುಗಳ ಸವಿಯನ್ನು ಅರಿತಂತೆ, ಕೋಳಿಯು ಕಾಲವನ್ನರಿತಂತೆ, ತ್ರಿಮಲರಹಿತರಾದ ತ್ರಿವಿಧ ದೀಕ್ಷಾಸಂಪನ್ನರಾದ ಗುರು ಲಿಂಗ ಜಂಗಮದ ಸಕೀಲವನ್ನರಿತ ಸದ್ಭಕ್ತರಿಗೇನೇ ಶಿವಾನುಭವವಲ್ಲದೆ ಉಳಿದ ಭವಿಗಳಿಗೆ ಎಲ್ಲಿಯದು ?

ಅಯ್ಯಾ! ವೀರಶೈವ ಕುಲೋತ್ಪನ್ನರೇ ಗುರುವರ್ಗದವರೇ ಭಕ್ತ ಮಾಹೇಶ್ವರರೇ, ಸದ್ಭಕ್ತರು ವೀರಮಾಹೇಶ್ವರರು ಶಿವಾಚಾರಸ್ಥರು ಎಂಬ ಹೆಸರುಗಳನ್ನು ಹೇಳಿದ ಮಾತ್ರಕ್ಕೆ ಸದ್ಭಕ್ತರೂ ವೀರಮಾಹೇಶ್ವರರೂ ಶಿವಾಚಾರಿಗಳೂ ಆಗಲಿಲ್ಲ. ಕೂಸು ಹೊಟ್ಟೆಯಲ್ಲಿರುವಾಗಲೇ ಲಿಂಗ ಧಾರಣ ಮಾಡಿಸಿದರೂ ಸದ್ಭಕ್ತರಾಗಲಿಲ್ಲ. ವೀರಶೈವನ ಜ್ಞಾನವರ್ಧನ ಕಾಲಕ್ಕೆ ಶರೀರದ ತ್ರಿಮಲಗಳನ್ನು ಕಳೆಯುವಂಥ ತ್ರಿವಿಧ ದೀಕ್ಷೆಯನ್ನು ಶ್ರೀ ಗುರುವಿನಿಂದ ಪಡೆದು ದೀಕ್ಷಾಬದ್ಧರಾದಲ್ಲಿ ಸದ್ಭಕ್ತರೂ ವೀರಮಾಹೇಶ್ವರರೂ ಆಗುವರೆಂಬದು ವೀರಶೈವಾಚಾರಸ್ಥರಿಗೆಲ್ಲ ವಿದಿತವಾದ ಸಂಗತಿಯೇ ಆಗಿದೆ.

ಶಿವಾನುಭವ ಮಂಟಪದಲ್ಲಿ ಷಟ್‌ಸ್ಥಲ ಜ್ಞಾನಿಗಳೂ ಸದ್ಭಕ್ತರೂ ಕೂಡ್ರಲು ಯೋಗ್ಯರಲ್ಲದೆ ಉಳಿದ ಪಾಮರರಿಗೆ ಆ ಅಧಿಕಾರವಿಲ್ಲವು. ಇಂಥ ಮಂಟಪದಲ್ಲಿ ಕೂತು ಶಿವಾನುಭವ ಶಾಸ್ತ್ರವನ್ನು ಸಾಗಿಸುವ ಕಾಲವೇ ಸುಕಾಲವು. ಇಂಥ ಕಾಲವು ಬಂತೆಂದರೆ ಈಗಿನ ಅಕಾಲ ಮರಣವೂ ದುರ್ಭಿಕ್ಷಗಳೂ ಹೇಳಹೆಸರಿಲ್ಲದೆ ಓಡುವವು. ಅಂತೇ ಪ್ರಾಚೀನ ಪುರಾತನರ ಕಾಲದಲ್ಲಿಯೂ ಶ್ರೀಬಸವೇಶ್ವರಾದಿ ಪ್ರಮಥರ ಕಾಲದಲ್ಲಿಯೂ ಶಿವಾನುಭವ ಮಂಟಪಗಳು ಅಲ್ಲಲ್ಲಿ ತಲೆದೋರಿ ದಕ್ಷಿಣ ಹಿಂದುಸ್ಥಾನದಲ್ಲಿ ಪುಣ್ಯಕ್ಷೇತ್ರಗಳನ್ನೂ ಪುಣ್ಯನದಿಗಳನ್ನೂ ಪುಣ್ಯಗಿರಿದುರ್ಗಗಳನ್ನೂ ಪುಣ್ಯ ಪಟ್ಟಣಗಳನ್ನೂ ಪುಣ್ಯ ಗ್ರಾಮಗಳನ್ನೂ ಉಂಟು ಮಾಡಿರುವವು.

ಇದನ್ನರಿತು ವೀರಶೈವರೆಂದು ಹೇಳಿಸಿಕೊಳ್ಳುವ ನಾವೆಲ್ಲರೂ ವೀರಶೈವಾಚಾರಸ್ಥರಾಗಬೇಕಲ್ಲವೇ? ನಮ್ಮ ಅಂಗದಲ್ಲಿ ಲಿಂಗವು ನೆಲೆಗೊಳಬೇಕಲ್ಲವೇ? ಜಗತ್ತು ಲಿಂಗರೂಪವಾಗಿದ್ದ ಬಳಿಕ ನಾವು ಸರ್ವ ಜೀವಿಗಳಲ್ಲಿ ಸಮದೃಷ್ಟಿಯನ್ನಿಡಬೇಕಲ್ಲವೇ? ವೀರಶೈವ ಸದ್ಭಕ್ತರಲ್ಲಿ ಭೇದಭಾವದಗಾಳಿಯು ಸಹ ಇರಬಾರದಲ್ಲವೇ? ಅಷ್ಟಾವರಣವು ನಡೆದಾಗ್ಗೆ ದುರಭಿಮಾನವೆಂಬ ದುಷ್ಟ ಗಾಳಿಯನ್ನು ಬರಗೊಡಬಾರದಲ್ಲವೇ? ಸರಿ. ಅಷ್ಟಾವರಣದ ಮಹಾತ್ಮೆಯೂ ಶಿವಾಚಾರದ ನೆಲೆಕಲೆಯೂ ಗುರುಲಿಂಗ

ಜಂಗಮದ ಸಚ್ಚಿದಾನಂದದ ರೂಪವೂ ಗೋಚರಿಸಲು ಶಿವಾನುಭವವು ಅತ್ಯವಶ್ಯಕವೆಂದು ಹೇಳುವ ಕಾರಣವೇ ಇಲ್ಲ.

ಈಗಿನ ಕಾಲದ ನಮ್ಮಾ ವೀರಶೈವರ ಮಠಗಳಲ್ಲಿ ವೀರಮಾಹೇಶ್ವರಸ್ಥಲದ ನೆಲೆಕಲೆಯು ಗೊತ್ತಾದ ಜಂಗಮ ಮೂರ್ತಿಗಳು ಸಿಗುವದು ಬಹು ದುರ್ಲಭವು. ಅಂಥ ಮೂರ್ತಿಯು ಇದ್ದರೆ ಆ ಗ್ರಾಮದ ಭಾಗ್ಯೋದಯವೇ ಸರಿ. ಇಷ್ಟೇ ಅಲ್ಲ; ಆ ಗ್ರಾಮದ ಸುತ್ತಲು ಪಂಚಕ್ರೋಶಪರ್ಯಂತರವಾದ ಸ್ಥಳವು ತೀರ್ಥಕ್ಷೇತ್ರಗಳಂತೆ ಪಾವನವೇ ಆಗುವದು. ಇಂಥ ಮಾಹೇಶ್ವರರು ತಮ್ಮ ಗ್ರಾಮದ ವೀರಶೈವರಲ್ಲಿ ಶಿವಾನುಭವಾಮೃತ ಸೇವನದ ಬೀಜಾರೋಪಣ ಮಾಡುವರಲ್ಲದೆ ಕ್ರಮದಿಂದ ಅದಕ್ಕೆ ವೃಕ್ಷಸ್ವರೂಪವನ್ನೂ ಕೊಡುವರು. ಕಡೆಗೆ ಅವರು ಅದರ ಪರಿಮುಖದಿಂದ ಸತ್ಫಲವನ್ನು ಪಡೆಯಲು ಯೋಗ್ಯರನ್ನಾಗಿ ಮಾಡುವರು. ಅಂದರೆ ಉದ್ಧಾರ ಮಾಡುವರು. ಇದಕ್ಕೆ ಸಂದೇಹವೇ ಇಲ್ಲ. ಮಠಾಧಿಕಾರಕ್ಕೆ ಅಂಥವರು ಒಂದು ವೇಳೆ ದೊರೆಯದಿದ್ದರೆ ಅಲ್ಲಿಯ ನಮ್ಮ ವೀರಶೈವ ತರುಣರು ಮಠದಲ್ಲಿ ಒಂದು ವಾಚನಾಲಯವನ್ನು ಸ್ಥಾಪಿಸಿ ಅದರಲ್ಲಿ ಪ್ರಕೃತ ಪರಿಸ್ಥಿತಿಗನುಸಾರವಾದ ವೃತ್ತಪತ್ರ ಮಾಸಿಕ ಪುಸ್ತಕಗಳನ್ನೂ ದೇಶೋದ್ಧಾರಕ ಪುಸ್ತಕಗಳನ್ನೂ ಇಡುವದಲ್ಲದೆ, ಮತಗ್ರಂಥಗಳನ್ನೂ **ಶಿವಾನುಭವ** ಮುಂತಾದ ಮಾಸಿಕ ಪುಸ್ತಕಗಳನ್ನೂ ಅವಶ್ಯವಾಗಿ ಇಡಲೇಬೇಕೆಂದು ಕೈಯೆತ್ತಿ ಹೇಳುವೆನು. ಯಾಕೆಂದರೆ ಮತಗ್ರಂಥ ಶಿವಾನುಭವಗಳ ಅವಲೋಕನದಿಂದ ಶಿವದರ್ಶನ ರಹಸ್ಯದ ಅನುಭವವು ಅಂತರಂಗಕ್ಕೆ ಅಪ್ರತ್ಯಕ್ಷವಾಗಿಯಾದರೂ ಆಗಿ, ವೀರಶೈವ ಜನಾಂಗದಲ್ಲಿ ಶಿವಾನುಭವದ ಸುಳಿಗಾಳಿಯಾದರೂ ಸುಳಿದು ಆ ಮಠಗಳು ಷಟ್‌ಸ್ಥಲಜ್ಞಾನಿಗಳಾದ ವೀರಮಾಹೇಶ್ವರರಿಂದ ಅಲಂಕೃತವಾಗುವಸುಯೋಗವು ಬೇಗನೆ ಒದಗುವದೆಂಬದಕ್ಕೆ ಬಾಧಕವಿಲ್ಲ.

ಮಹನೀಯರೇ ಈಗಿನ ಸುಧಾರಣೆಯ ಕಾಲದಲ್ಲಿ ಎಷ್ಟೇ ಓದಿದರೂ ಎಷ್ಟೇ ಗಳಿಸಿದರೂ ಶೀಲವೊಂದಿಲ್ಲದಿದ್ದರೆ ಆತನ ಬಾಳು ಏತರ ಬಾಳು? ಕೇವಲ ಹಾಳು? ಅದು ಹಿರಿಯರಿಲ್ಲದ ಮನೆಯಂತೆ ದೇವರಿಲ್ಲದ ಗುಡಿಯಂತೆ ಗಂಡನಿಲ್ಲದ ಯುವತಿಯಂತೆ ಅರಸಿಲ್ಲದ ರಾಜ್ಯದಂತೆ ಆನಂದವಿಲ್ಲದ ಶರೀರದಂತೆ ಫಲಪುಷ್ಪಗಳಿಲ್ಲದ ತೋಟದಂತೆ ವ್ಯರ್ಥವೇ ಸರಿ. ಆದ್ದರಿಂದ ಮಹನೀಯರೇ ಧರ್ಮದೇವತೆಯ ಕಡೆಗೆ ನೋಡಿರಿ.

ಧರ್ಮ ದೇವತೆಯ ವಾಗ್ ವಿಲಾಸವನ್ನು ಆಲಿಸಿರಿ; ಧರ್ಮದೇವತೆಯ ಆಚರಣೆಯನ್ನು ಆಚರಿಸಿರಿ. ಅರ್ಥಾತ್ ಧರ್ಮದೀಕ್ಷೆಯನ್ನು ಹೊಂದಿ ಶಿವಾನುಭವ ಶಾಸ್ತ್ರದ ಮಂಟಪಕ್ಕೆ ಬನ್ನಿರಿ. ಅಂದರೇನೇ ನಿಮ್ಮ ನಿಮ್ಮ ಜನ್ಮವು ಸಾರ್ಥಕವಾಗುವದು. ಇಲ್ಲದಿದ್ದರೆ ನೀವು ಶ್ವಾನಸೂಕರಗಳಂತೆ ಹುಟ್ಟಿದ್ದು ವ್ಯರ್ಥವೇ ಸರಿ. ಸದ್ಭಕ್ತರಾಗಲು ಧರ್ಮದೇವತಾವಾಗ್ರೂಪವಾಗಿರುವ ವಚನಶಾಸ್ತ್ರಗಳ ಶ್ರವಣ ಬಲವೇ ಮೊದಲನೇ ಮೆಟ್ಟಿಂದು ಸಾರಿ ಹೇಳುವೆ. "**ಕಡೆಗೀಲಿಲ್ಲದ ಬಂಡಿ ನಡೆಗೆಡುವುದುಮಾಬುದೇ? ಕಡೆಗೀಲೇ ಬಂಡಿಗಾಧಾರ. ಕಡುದರ್ಪವೇರಿದ ಒಡಲೆಂಬ ಬಂಡಿಗೆ ನಮ್ಮ ವೃಡಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥಾ**" ಎಂಬ ಆದ್ಯರ ವಚನಾನುಸಾರವಾಗಿ ನಾವೆಲ್ಲರೂ ದಾಸೋಹಂ ಭಾವ ಹಿಡಿದು, ಶಿವಾನುಭವ ಶಾಸ್ತ್ರವನ್ನು ತಿಳಿಸಲು ಪ್ರಯತ್ನ ಪಡುವ ಆಧುನಿಕ ಕಾಲದ ಶಿವಶರಣರಿಗೆ ವಂದಿಸಿ, ವಚನಶಾಸ್ತ್ರಾಮೃತಸಾರವನ್ನು ಮನದಣಿ ಓದಿ ಓದಿ, ಮನೋವದನದಿಂದ ಉಂಡು ಉಂಡು, ಜ್ಞಾನ ದೃಷ್ಟಿಯಿಂದ ನೋಡಿ ನೋಡಿ, ಭಾವದ ಬಲದಿಂದ ಆನಂದವನ್ನು ತಾಳಿ ತಾಳಿ, ಸದಾಶುಚಿಭೂರ್ತರಾಗಿ ಸಕಲ ನಿಃಕಲ ಪಿಂಡವುಳ್ಳವರೆಂದೆನಿಸುವ ಸದ್ಭಕ್ತರಾಗಲು ಪ್ರಯತ್ನಿಸಕ್ಕದ್ದು.

---

## ಸ್ತೋತ್ರ ಪಂಚಕ.

ಶ್ರೀಸ್ಮವಹ ಶಿವಪಥವ ಸೃಷ್ಟಿಯೊಳು ತೋರ್ಪಂಗೆ।
ಅಷ್ಟಾಂಗಯೋಗದೊಳು ನಿಷ್ಠೆಯಿಂದಿದ್ದವಗೆ।
ಅಷ್ಟಾವರಣವನುರೆ ಶಿಷ್ಟ ಸದ್ಭಕ್ತರಿಗೆ ಸಂತಸದಿ ನೊರೆದಾತಗೆ ॥
ಇಷ್ಟಾದಿ ತ್ರಿವಿಧದೊಳು ದೃಷ್ಟಿಯನ್ನಿಟ್ಟವಗೆ।
ತುಷ್ಟಿಯಿಂದಾಚರಿಸಿದಿಷ್ಟ ಜನ ಪಾಲಂಗೆ।
ಸಾಷ್ಟಾಂಗದಿಂ ನಮಿಪೆ ಶ್ರೇಷ್ಠ ಶ್ರೀಯುಥಣೀಶ ಮುರುಘೇಂದ್ರ ಶಿವಯೋಗಿಗೆ ॥೧॥

ಒಂದುಳಿದು ಜಗದೊಳಗೆಮೊಂದರೊಳು ಬೆರೆದಾತ।

ಸಂದೆರಡನಳಿದೆರಡರೊಳು ತಾನು ವುಳಿದಾತ।
ನಿಂದಮೂರನ್ನುಳಿದು ಮೂರನರಿದಾತ ನಾಲ್ಕಳಿದು ನಾಲ್ಕರಿದಾತ॥
ಪೊಂದಿರ್ದ್ದೈದವನು ಪಳಿದೈದು ಪಿಡಿದಾತ।
ಮುಂದುವರಿವಾರನುಳಿದಾರ ತಾನರಿದಾತ।
ತಂದೆ ಶ್ರೀಮುರುಘೇಂದ್ರ ಪಾಲಿಸಲಿ ಯೇಳಳಿದು ಯೇಳರೊಳುನಿಂದಾತನು ॥ ೨ ॥

ಎಂಟಳಿದು ಯೆಂಟರಾಚರಣೆಯನು ತಿಳಿದಾತ।
ಆಂಟಿದೊಂಬತ್ತನುಳಿದೊಂಬತ್ತನರಿದಾತ।
ಉಂಟಾದ ಹತ್ತರಿಂದತ್ತಾದ ಹತ್ತುತರಹಂಗಳನು ಬಲ್ಲಾತನು॥
ಕಂಟಕದವೋಲಿರ್ದ ಹನ್ನೊಂದು ವಿಧಗಳನು।
ದಾಂಟುತ್ತ ನಿಸ್ಸಂಗಿ ತಾನೆತಾನಾಗಿರುತ।
ಬಂಟ ಶ್ರೀಮುರುಘೇಂದ್ರ ಯೋಗೀಂದ್ರ ಪಾಲಿಸಲಿ ಹನ್ನೊಂದನರಿದಾತನು ॥ ೩ ॥

ಲಿಂಗದೊಳು ಪಿಂಗದಿಹ ಮನವಡಗಿ ಮನಶುದ್ಧಿ।
ಲಿಂಗದೊಳು ಬೆರೆತು ಬೆಪ್ಪಾದ ನೋಟದ ಶುದ್ಧಿ।
ಲಿಂಗದೊಳು ಸನ್ನಿಷ್ಠೆಯಂಗದೊಳುವಾಚರಣೆ ಭಾವದೊಳುವಚ್ಚಶುದ್ಧೀ॥
ಲಿಂಗಪೂಜೆಯು ಮಂತ್ರವಂ ಪೇಳ್ವ ನುಡಿಶುದ್ಧಿ।
ಲಿಂಗಾರ್ಪಿತ ಪ್ರಸಾದನಗ್ಯೈವ ಕರಶುದ್ಧಿ।
ಲಿಂಗಾಂಗಿ ಶಿವಯೋಗಿ ಮುರುಘೇಂದ್ರ ಕರುಣಿಸಲಿಯೆನ್ನೊಳೀ ಪಂಚಶುದ್ಧೀ ॥ ೪ ॥

ಕಾಮವನು ತೊರೆದಾತ ಹೇಮವನು ಜರಿದಾತ।
ಸೀಮೆಯಿಂ ಸರಿದಾತ ತಾಮಸವ ಹರಿದಾತ।
ಸಾಮರವ ಪರಿದಾತ ಸೋಮಶೇಖರರೂಪ ಧರೆಯೊಳಗೆ ಧರಿಸಿದಾತ॥
ಸಾಮಾದಿ ವೇದಗಳ ನೇಮಗಳನರಿದಾತ।
ಆ ಮಹಾಯೋಗೀಂದ್ರ ಶ್ರೀ ಮುರುಘರಾಜತಾ।
ಪ್ರೇಮದಿಂ ಪಾಲಿಸಲಿ ರಾಮಲಿಂಗನಸುತನ ಹೃದಯಾಬ್ಜದೊಳುನಿಲ್ಲುತಾ ॥ ೫ ॥

# ವೀರಶೈವ ಧರ್ಮದ ಪ್ರವರ್ತಕರ ಚರಿತ್ರ ಸಂಶೊಧನೆಯು ಅವಶ್ಯಕತೆ.

ಬಹು ಜನರು ವೀರಶೈವ ಸಮಾಜದ ಈಗಿನ ದೌರ್ಬಲ್ಯ, ಅಂತಸ್ಥ ಭೇದ ವಿಭೇದಗಳು ಮತ್ತು ಅಜ್ಞಾನತೆ ಇವುಗಳನ್ನು ನೋಡಿ, ಯಾರಾದರೂ ಇವರಿಗೆ ಈ ಸಮಾಜದಲ್ಲಿ ಒಂದು ಕಾಲಕ್ಕೆ ಈ ಸ್ಥಿತಿಯು ಇದ್ದಿದ್ದಿಲ್ಲ, ಅದರಲ್ಲಿ ಅನೇಕ ತತ್ವಜ್ಞಾನಿಗಳು ಹುಟ್ಟಿದರು, ಅವರು ಇಡೀ ಹಿಂದುಸ್ತಾನ ದೇಶದಲ್ಲಿ ಪ್ರವಾಸ ಮಾಡಿ ತಮ್ಮ ಧರ್ಮ ತತ್ವಗಳನ್ನು ಬೋಧಿಸಿದರು, ಅವರಲ್ಲಿ ಅನೇಕ ವೀರ ಪುರುಷರು ಆಗಿ ಹೋದರು ಮತ್ತು ರಾಜ್ಯಗಳನ್ನು ಆಳಿದರು, ಎಂದು ಹೇಳಿದರೆ ಅವರು ನಿಃಸಂದೇಹವಾಗಿ ನೀವು ಸುಳ್ಳು ಹೇಳುವಿರಿ, ಏನಾದರೊಂದು ಆತ್ಮಪೌರುಷ ನುಡಿಯುವಿರಿ ಎಂದೆನ್ನುವದು. ನಿಶ್ಚಯವು. ಈ ಸ್ಥಿತಿಯು ಕರ್ನಾಟಕಕ್ಕೆ ಅದರಲ್ಲಿ ವಿಶೇಷವಾಗಿ ಲಿಂಗಾಯಿತ ಸಮಾಜಕ್ಕೆ ಉತ್ಪನ್ನವಾಗಿರುತ್ತದೆಂಬದು ಬಹು ಶೋಚನೀಯವಾಗಿದೆ. ಈ ಜನರ ಅಭಿಪ್ರಾಯವೇನೆಂದರೆ ವೀರಶೈವರು ಸಮಾಜದಲ್ಲಿ ಮಹತ್ಪುರುಷ ಎಂದೂ ಹುಟ್ಟಿಲ್ಲ ಮತ್ತು ಮಹತ್ಕಾರ್ಯಗಳು ಏನೂ ಆಗಿಲ್ಲ ಎಂದು ಇದೆ. ಆದರೆ ನಿಜಸ್ಥಿತಿಯು ಹೀಗೆ ಇರುವದಿಲ್ಲ. ವೀರಶೈವ ಸಮಾಜದಲ್ಲಿ ಅನೇಕ ಮಹತ್ಪುರುಷರು ಆಗಿರುತ್ತಾರೆ. ಆದರೆ ಅವರ ಇತಿಹಾಸವು ಗೊತ್ತಾಗದ್ದರಿಂದ ನಮ್ಮ ವೀರಶೈವ ಸಮಾಜದ ಮಹತ್ವಕ್ಕೂ ವರ್ಚಸ್ಸಿಗೂ ನಿಶ್ಚಯವಾಗಿ ಕುಂದಕವು ಉಂಟಾಗಿರುತ್ತದೆ. ಇದನ್ನು ತೆಗೆದು ಹಾಕುವದು ಪ್ರತಿಯೊಬ್ಬ ವೀರಶೈವನ ಆದ್ಯಕರ್ತವ್ಯ ಕರ್ಮವಾಗಿದೆ.

ಇದರ ಮೇಲಿಂದ ವೀರಶೈವ ಸಮಾಜದಲ್ಲಿ ಮೊದಲಿನ ಕಾಲಕ್ಕೆ ಆಗಿಹೋದ ಮಹತ್ಪುರುಷರ ಇತಿಹಾಸವನ್ನು ಶೋಧಿಸುವದೂ ಅದನ್ನು ಪ್ರಸಿದ್ಧಿಸುವದೂ ಎಷ್ಟು ಅವಶ್ಯವೆಂಬುದು ವಾಚಕರಿಗೆ ತಿಳಿಯದೆ ಇರಲಾರದು. ಇವರ ಚರಿತ್ರೆಗಳು ಪುರಾಣಗಳಲ್ಲಿಯೂ ಕಾಲಜ್ಞಾನಗಳಲ್ಲಿಯೂ ಶಿಗುತ್ತವೆ. ಆದರೆ ಇಷ್ಟಕ್ಕೆ ನಾವು ತೃಪ್ತರಾಗದೆ, ಬೇರೆ ಸಮಾಜದವರ ಗ್ರಂಥಗಳಲ್ಲಿ ಅವರ ಬಗ್ಗೆ ಏನಾದರೂ ಉಲ್ಲೇಖಗಳು ಶಿಗುತ್ತವೆಯೋ ಹ್ಯಾಗೆ, ಅದರಂತೆಯೇ ಶಿಲಾಲೇಖಗಳನ್ನು ಶೋಧಿಸಿ ಅವರ ವೃತ್ತಾಂತಗಳು ಅಲ್ಲಿ ಇವೆಯೋ ಹ್ಯಾಗೆ ಎಂಬುದನ್ನು ಕಂಡುಹಿಡಿದು

ಈ ಮಹಾನುಭಾವರು ಮಾಡಿದ ಕಾರ್ಯಗಳನ್ನು ನಾವು ಗೊತ್ತು ಹಚ್ಚ ಲಿಕ್ಕೆಬೇಕು. ಈ ರೀತಿಯಿಂದ ಪ್ರಯತ್ನಿಸಿದರೆ ಮಾತ್ರ ನಮ್ಮ ಸಮಾಜದ ನಿಜವಾದ ಇತಿಹಾಸವು ಹೊರಬೀಳುವದು. ಮತ್ತುಹೀಗೆ ಶೋಧ ಹಚ್ಚಿದ ಇತಿಹಾಸವೇ ಹಿಂದುಸ್ಥಾನದ ಎಲ್ಲ ಜನಾಂಗಗಳಿಗೂ ಮಾನ್ಯವಾಗುವದು.

ವೀರಶೈವ ಧರ್ಮವುಏಕಕಾಲಕ್ಕೆ ಒಬ್ಬರಿಂದಲೇ ಪ್ರಸಾರವಾದಂತೆ ಕಂಡುಬರುವದಿಲ್ಲ. ಅದರ ಪ್ರಸಾರಕ್ಕೋಸ್ಕರ ಅನೇಕ ಪ್ರವರ್ತಕರು ಉದಯವಾಗಿ ಅದನ್ನು ಮುಂದರಿಸಿದ್ದಾರೆ. ಈ ಪ್ರವರ್ತಕರು ಬೇರೆಬೇರೆ ಕಾಲಗಳಲ್ಲಿ ಬೇರೆ ಬೇರೆ ಪ್ರಾಂತಗಳಲ್ಲಿ ಉದಯಿಸಿದ್ದಾರೆ. ಈ ಅವಧಿಯಲ್ಲಿ ಮೂರು ಭಾಗಗಳನ್ನು ಮಾಡಬಹುದು. ಅವು ಯಾವವೆಂದರೆ:— (೧) ಚೋಳರಾಜರ ಕಾಲ (೨) ಚಾಲುಕ್ಯರ ಕಾಲ (೩) ಕಲಚೂರ್ಯರ ಕಾಲ. ಚೋಳರಾಜರ ಕಾಲದಲ್ಲಿ ಶೈವ ಧರ್ಮವು ಮುಂದಕ್ಕೆ ಬಂದಿತು. ಇವರ ಕಾಲಧಲ್ಲಿಯೇ ೬೩ ಪುರಾತನರು ಮುಂದೆ ಬಂದರು. ಮತ್ತು ಸಿಂಹಾಸನಾಧಿಪತಿಗಳಲ್ಲಿ ಕೆಲವರು ಅವರ ಆಸ್ಥಾನದಲ್ಲಿ ತಮ್ಮ ಮಹಿಮೆಯನ್ನು ತೋರಿಸಿದರು. ಆ ಮೇಲೆ ವೀರಶೈವ ಧರ್ಮದ ಪ್ರಸಾರವು ಕರ್ನಾಟಕದೇಶದಲ್ಲಿ ಚಾಲುಕ್ಯರ ಕಾಲಕ್ಕೆ ಆರಂಭವಾಗಿ ಅದು ಹೆಚ್ಚುತ್ತ ಹೆಚ್ಚುತ್ತ ಬಿಜ್ಜಳನ ಕಾಲದಲ್ಲಿ ಅದು ಅತ್ಯಂತ ಉಜ್ವಲ ಸ್ಥಿತಿಯನ್ನು ಹೊಂದಿತು.

## ಚೋಳರಾಜರ ಕಾಲ.

ಈ ಚೋಳರಾಜರ ಕಾಲದಲ್ಲಿ ಉದಯವಾದ ಶೈವ ಧರ್ಮವು ಆಗಮ ಧರ್ಮವಿರುತ್ತದೆ. ವೀರಶೈವ ಮತವಾದರೂ ಈ ಆಗಮ ಧರ್ಮದ ಒಂದು ಶಾಖೆ ಇರುತ್ತದೆ. ವೀರಶೈವರಿಗೆ ಆಗಮಗಳು ಮಾನ್ಯವಾದ ಗ್ರಂಥಗಳಾಗಿವೆ. ಚೋಳರಾಜರಲ್ಲಿ ಪ್ರಸಿದ್ಧಿ ಹೊಂದಿದ ಈ ಶೈವ ಧರ್ಮಾನುಯಾಯಿಗಳಿಗೆ ಈಗ ಶಿವಸಿದ್ಧಾಂತಿಗಳೆಂತಲೂ ಹೆಸರು ಇರುತ್ತದೆ. ಇವರು ಕೇವಲ ಶಿವೋಪಾಸಕರು ಮತ್ತು ಕ್ರಿಸ್ತಶಕದ ಆರಂಭದಿಂದಲೂ ಬೇರೆ ಬೇರೆ ರಾಜರುಗಳ ಕಾಲಕ್ಕೆ ಅನೇಕ ಗ್ರಂಥಕಾರರು ಹುಟ್ಟಿ, ಅವರು ತಮಿಳ ಮತ್ತು ಸಂಸ್ಕೃತ ಅನೇಕ ಗ್ರಂಥಗಳನ್ನು ಬರೆದರು.

ಆದರೆ ಅವರು ಈ ಚೋಳರಾಜರ ಕಾಲದಲ್ಲಿ ಎಲ್ಲಕ್ಕೂ ಹೆಚ್ಚಿಗೆ ಪ್ರಚುರ ಹೊಂದಿದರು. ಇದು ೯ ರಿಂದ ೧೨ ನೇ ಶತಮಾನಗಳ ಮಧ್ಯದಲ್ಲಿ ಇರುತ್ತದೆ. ಇವರಿಗೂ ವೀರಶೈವರಿಗೂ ನಿಕಟ ಸಂಬಂಧವಿದೆ. ಇವರಲ್ಲಿ ಉತ್ಪನ್ನರಾಗಿರುವ ೬೩ ಪುರಾತನರು ವೀರಶೈವರಿಗೂ ಸಹ ಪೂಜ್ಯರಾಗಿರುತ್ತಾರೆ. ಈ ಪುರಾತನರ ಮಂಟಪ ಪೂಜೆಗಳು ಈಗ್ಯೂ ಕರ್ನಾಟಕದಲ್ಲಿ ವೀರಶೈವರಿಂದ ನಡಿಸಲ್ಪಡುತ್ತವೆ. ವೀರಶೈವ ಮತಸ್ಥಾಪನಾಚಾರ್ಯರೆಂದೆನಿಸಿಕೊಂಡ ಪಂಚಾಚಾರ್ಯರಲ್ಲಿ ಪಂಡಿತಾರಾಧ್ಯರೂ ರೇವಣಸಿದ್ಧೇಶ್ವರರೂ ಈ ಚೋಳರಾಜರ ಆಸ್ಥಾನಗಳಿಗೆ ಹೋಗಿ ವೀರಶೈವಧರ್ಮದ ತತ್ವಗಳನ್ನು ಅಲ್ಲಿ ಪ್ರತಿಪಾದಿಸಿದರೆಂದು ತಿಳಿದು ಬರುತ್ತದೆ. ಪಂಡಿತಾರಾಧ್ಯರು ವೇಲಮ ಚೋಳನಲ್ಲಿ ಮತ್ತು ರೇವಣಸಿದ್ಧೇಶ್ವರರು ವಿಷ್ಣು ಚೋಳನಲ್ಲಿ ತಮ್ಮ ಸಿದ್ಧಾಂತವನ್ನು ಪ್ರಸ್ಥಾಪಿಸಿದರು. ಮತ್ತು ಅನೇಕರನ್ನು ವೀರಶೈವರನ್ನಾಗಿ ಮಾಡಿದರು.

ಇವರಲ್ಲಿ ರೇವಣಸಿದ್ಧೇಶ್ವರರು ಅನೇಕ ದೇಶಗಳಲ್ಲಿ ಸಂಚಾರಮಾಡಿ, ವೀರಶೈವ ಧರ್ಮವನ್ನು ಪ್ರಸಾರಗೊಳಿಸಿದರು. ಅವರು ನಿಜಾಮ ಇಲಾಖಾ ಕೊಲ್ಲಿಪಾಕಿಯಲ್ಲಿ ಹುಟ್ಟಿ, ಅಲ್ಲಿಂದ ಕಂಚಿಪುರ, ಸಿಂಹಲದ್ವೀಪ, ಮಾಸನೂರ, ಕೊಲ್ಲಾಪುರ, ಸೊಲ್ಲಾಪುರ, ಕಲ್ಯಾಣ, ಶ್ರೀಶೈಲ, ಬನಾರಸ ಮುಂತಾದ ಸ್ಥಳಗಳಿಗೆ ಹೋಗಿ ವೀರಶೈವ ಮತವನ್ನು ಪ್ರಸ್ಥಾಪಿಸಿದರು. ವೀರಶೈವ ವಾಙ್ಮಯದಲ್ಲಿ ಕರಿಕಾಲಚೋಳ, ರಾಜೇಂದ್ರಚೋಳ, ಸತ್ಯೇಂದ್ರ ಚೋಳ, ರಾಜಶೇಖರ, ಮುಂತಾದ ಹೆಸರುಗಳು ಮೇಲಿಂದ ಮೇಲೆ ಬರುತ್ತವೆ. ಅದರಂತೆಯೇ ಸುಂದರ ಪಾಂಡ್ಯನ ಹೆಸರೂ ಬರುತ್ತದೆ. ಈ ಯಾವತ್ತು ರಾಜರು ೯ ರಿಂದ ೧೨ ನೇ ಶತಮಾನದಲ್ಲಿ ಆಗಿಹೋದರು. ಈ ರಾಜರ ಕಾಲಕ್ಕೆ ಶೈವ ಮತದ ಒಂದು ದೊಡ್ಡ ವಾಙ್ಮಯವು ಉತ್ಪನ್ನವಾಯಿತು. ಇದಕ್ಕೂ ವೀರಶೈವ ವಾಙ್ಮಯಕ್ಕೂ ಅತ್ಯಂತ ಸಂಬಂಧವಿರುವದರಿಂದ, ಅವುಗಳಲ್ಲಿ ವೀರಶೈವ ಸಮಾಜದ ವಿಷಯವಾಗಿ ಉಲ್ಲೇಖಗಳು ಮತ್ತು ವೀರಶೈವ ಮಹಾ ಪುರುಷರ ವಿವರಣೆಗಳು ಯಾವ ಯಾವವು ಇರುತ್ತವೆಂಬವನ್ನು ಶೋಧಿಸುವದು ಅವಶ್ಯವದೆ. ಅಲ್ಲಿ ಸಿಗುವ ವೃತ್ತಾಂತಗಳು ನಮ್ಮ ವೀರಶೈವರ ಧಾರ್ಮಿಕ ಮತ್ತು ಸಾಮಾಜಿಕ ಆದ್ಯ ಇತಿಹಾಸದ ಮೇಲೆ ಮಹತ್ತರವಾದ ಪ್ರಕಾಶವನ್ನು ನಿಶ್ಚಯವಾಗಿ ಬೀಳಿಸದೆ ಇರಲಾರವು.

## ಚಾಲುಕ್ಯರ ಕಾಲ.

ದಕ್ಷಿಣದೇಶದಲ್ಲಿ ೧೧ - ೧೨ ನೇ ಶತಮಾನಗಳವರೆಗೆ ಚೋಳರಾಜರ ಪ್ರಾಬಲ್ಯವು ಹೆಚ್ಚಾಗಿ ಮುಂದೆ ಅದು ಕಡಿಮೆಯಾಗಹತ್ತಿತು. ಆದರೆ ಉತ್ತರ ಕರ್ನಾಟಕವಲ್ಲಿ ಚಾಲುಕ್ಯರ ಪ್ರಾಬಲ್ಯವು ಈ ಕಾಲಕ್ಕೆ ಹೆಚ್ಚಿತು. ಆಗ ಅನೇಕ ವೀರಶೈವ ಧಾರ್ಮಿಕ ಪುರುಷರು ಉದಯವಾಗಿದ್ದಂತೆ ಕಂಡುಬರುತ್ತದೆ. ಇಸ್ವಿಸನ್ ೧೦೦೮ ರಿಂದ ೧೦೪೨ರವರೆಗೆ ಜಯಸಿಂಹನು ಕರ್ನಾಟಕ ರಾಜ್ಯವನ್ನು ಆಳುತ್ತಿದ್ದನು. ಆತನ ಒಂದು ಶಿಲಾಲೇಖವು ಮುಧೋಳದ ಸಮೀಪವಿರುವ ಮಂಟೂರಲ್ಲಿ ದೊರೆಯುತ್ತದೆ. ಅದನ್ನು ಡಾ॥ ಫ್ಲಿಟೀರವರು ಉಲ್ಲೇಖಿಸಿ, ದೇವರ ದಾಸಿಮಯ್ಯನೆಂಬ ಶಿವಶರಣನು ಈ ಜಯಸಿಂಹನ ಕಾಲದಲ್ಲಿ ಇದ್ದನೆಂದು ಊಹಿಸಿದ್ದಾರೆ. ಈ ಶಿಲಾಲೇಖದಲ್ಲಿ ಕಾಣಿಸಿರುವದೇನಂದರೆ:—

"ಸ್ವಸ್ತಿಸಮಸ್ತ ಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಶ್ರೀಮಜ್ಜಗದೇಕಮಲ್ಲ ದೇವರು ಪೊಟ್ಟಳಕೆರೆಯ ನೆಲೆ ವೀಡಿನೋಳ್ ಸುಖಸಂತತವಿನೋದದಿಂ ರಾಜ್ಯಂಗೆಯ್ಯುತ್ತಮಿರೆ, ಶಕವರ್ಷ ೯೬೨ನೆಯ ವಿಕ್ರಮ ಸಂವತ್ಸರದ ಮಾರ್ಗಶೀರ್ಷ ಶು॥೫ ಆದಿತ್ಯವಾರದಂದು ಆತನ ಮಾಂಡಲಿಕನಾದ ರಟ್ಟವಂಶದ ಸಿಂಗಣನು ದಾನ ಕೊಟ್ಟಂತೆ ಇದರಲ್ಲಿ ಉಲ್ಲೇಖವಿವೆ. (ಇ - ಆ್ಯಂಟಿಕ್ವರಿ, ವ್ಹಾ - ೧೯ ಪುಟ ೧೬೧). ದೇವರ ದಾಸಿಮಯ್ಯನ ವೃತ್ತಾಂತದಲ್ಲಿ ಆತನು ಹೊಟ್ಟಲಕೆರೆಯಲ್ಲಿ ಆಳುತ್ತಿದ್ದ ಜಯಸಿಂಹನ ಆಸ್ಥಾನದಲ್ಲಿ ಜೈನರೊಡನೆ ವಾದವಿವಾದ ಮಾಡಿ ವೀರಶೈವ ಧರ್ಮಸ್ಥಾಪನೆ ಮಾಡಿದನೆಂದು ಉಲ್ಲೇಖವಿದೆ. ಆದ್ದರಿಂದ ದೇವರ ದಾಸಿಮಯ್ಯನು ೧೧ನೇ ಶತಮಾನದಲ್ಲಿ ಇದ್ದಹಾಗೆ ಕಂಡುಬರುತ್ತದೆ. ಶಂಕರ ದಾಸಿಮಯ್ಯ ಮತ್ತು ಶಿವದಾಸಿಮಯ್ಯ ಎಂಬ ಶಿವಶರಣರೂ ಇದೇ ಕಾಲಕ್ಕೆ ಇದ್ದರು. ಇದರ ಮೇಲಿಂದ ವೀರಶೈವ ಧರ್ಮದ ಬಗ್ಗೆ ಚಳವಳಿಯು ಬಸವೇಶ್ವರನಕಿಂತಲೂ ಒಂದು ನೂರು ವರುಷ ಮೊದಲು ಕರ್ನಾಟಕದಲ್ಲಿ ಉಂಟಾಗಿತ್ತೆಂದು ತೋರುತ್ತದೆ ಈ ಶಿವಶರಣರಲ್ಲಿ ದೇವರದಾಸಿಮಯ್ಯನ ವಚನವು ಬಹು ಮಹತ್ವದ್ದದೆ. ಇದರ ಮುದ್ರಿಕೆಯು "ರಾಮನಾಥಾ" ಎಂದು ಇದೆ.

## ಕಲಚೂರ್ಯರ ಕಾಲ.

ಬಿಜ್ಜಳನು ೧೨ನೇ ಶತಮಾನದಲ್ಲಿದ್ದು ಇದೇ ಕಾಲಕ್ಕೆ ಕರ್ನಾಟಕ ದಲ್ಲಿ ವೀರಶೈವ ಮತವು ದಟ್ಟವಾಗಿ ಪಸರಿಸಿತು. ಈ ಕಾಲಕ್ಕೆ ಅಲ್ಲಮ ಪ್ರಭು ಬಸವೇಶ್ವರ ಸಿದ್ಧರಾಮ ಮೊದಲಾದ ಅಸಂಖ್ಯ ಶಿವಶರಣರು ದೇಶ ದಲ್ಲಿ ಉದಯವಾಗಿವೀರಶೈವ ಮತವನ್ನು ಸುತ್ತಲು ಹಬ್ಬಿಸಿದರು. ಅಲ್ಲಮ ಪ್ರಭುವು ಬನವಾಸಿ, ಲಕ್ಕುಂಡಿ, ಸೊಲ್ಲಾಪುರ, ಕಂಚಿ, ಕಾಳಹಸ್ತಿ, ಪೊನ್ನಾಂಬಲಅರುಣಾಚಲ, ಕುಂಭಕೋಣ, ರಾಮೇಶ್ವರ, ಗೋಕರ್ಣ, ಸೌರಾಷ್ಟ್ರ, ಕಾಶಿ, ಕೇದಾರ, ಕೊಲ್ಹಾಪುರ, ಕಲ್ಯಾಣ ಮೊದಲಾದ ಸ್ಥಳಗಳಲ್ಲಿಸಂಚರಿಸಿ ಧರ್ಮ ಬೋಧೆಯನ್ನು ಮಾಡಿದನು. ಈ ಕಾಲಕ್ಕೆ ಸಿದ್ಧರಾಮೇಶ್ವರ ಮತ್ತು ಏಕಾಂತದ ರಾಮಯ್ಯ ಉತ್ಪನ್ನರಾಗಿ, ಅವರು ವೀರಶೈವ ಮತವನ್ನು ನೆಲೆಗೊಳಿಸಿದರೆಂದು ವೀರಶೈವ ಪುರಾಣ ಗಳಲ್ಲಿ ಕಂಡುಬರುತ್ತದೆ. ಆ ಶಿವಶರಣರ ಉಲ್ಲೇಖಗಳು ಈಗ ಶಿಲಾ ಲೇಖಗಳಲ್ಲಿ ದೊರಕಿರುವದು ಮಹತ್ವವಾದದ್ದು. ಈ ಉಲ್ಲೇಖಗಳ ಮೇ ಲಿಂದ ಶಿವಶರಣರು ನಿಜವಾದ ಐತಿಹಾಸಿಕ ಪುರುಷರು, ಅವರು ವೀರ ಶೈವ ಧರ್ಮವನ್ನು ವೃದ್ಧಿಪಡಿಸಿದರು ಎಂಬದು ಸಿದ್ಧವಾಗುತ್ತದೆ. ಈ ಶಿಲಾಲೇಖಗಳ ವೃತ್ತಾಂತವನ್ನು ನಮ್ಮ ವಾಚಕರು ಅರಿಯುವದು ಅವಶ್ಯವಾಗಿರುವದರಿಂದ ಅವುಗಳವಿವರಣೆಯನ್ನು ಇಲ್ಲಿ ಸಂಕ್ಷೇಪವಾಗಿ ಕೊಡುತ್ತೇವೆ.

## ಸಿದ್ಧರಾಮೇಶ್ವರ.

ಮೈಸೂರ ಇಲಾಖೆಯಲ್ಲಿ ಶಿವಮೊಗ್ಗೆ ಜಿಲ್ಹೆಯ ಸೊರಬ ತಾಲೂ ಕಿನ ಕೋಳೀಸಾಲೆ ಎಂಬ ಗ್ರಾಮವಿದ್ದು ಅಲ್ಲಿ ಒಂದು ಶಿಲಾಲೇಖವು ಇರುತ್ತದೆ. ಅದರಲ್ಲಿ ಸಿದ್ಧರಾಮೇಶ್ವರನ ಮತ್ತು ಆತನ ಇಷ್ಟದೇವತೆ ಯಾದ ಕಪಿಲಸಿದ್ಧ ಮಲ್ಲಿಕಾರ್ಜುನನ ಉಲ್ಲೇಖಗಳು ಇವೆ. ಈ ಶಿಲಾ ಲ್ಲೇಖದ ಪ್ರಥಮಭಾಗದಲ್ಲಿ ದಾನಗಳನ್ನು ಯಾರೂ ಅಳಿಯಬಾರದು ಎಂಬದರ ಬಗ್ಗೆ ಸಿದ್ಧರಾಮೇಶ್ವರನ ಕೆಲವು ಉಕ್ತಿಗಳನ್ನು (ಇಲ್ಲಿ ಕಲ್ಲು ಒಡೆದದ್ದರಿಂದ ಅಸ್ಪಷ್ಟವಾಗಿವೆ.) ಕೊಟ್ಟು, ಮುಂದೆ ಇದರಲ್ಲಿ ಹೇಳಿ

ರುವದೇನಂದರೆ:— " ಮಹಾಮಂಡಲೇಶ್ವರನಾದ ಬೀರರಸನು "ರಾಜ್ಯ ವಾಳುತ್ತಿರಲಾಗಿ, ದಕ್ಷಿಣವಾರಣಾಸಿ ಅಭಿನವಶ್ರೀಶೈಲವೆನಿಪ್ಪ ಶ್ರೀ ಸೊನ್ನಲಿಗೆಯಪುರದ ಕಪಿಲಸಿದ್ಧಮಲ್ಲಿಕಾರ್ಜುನದೇವರ ಅಂಗಭೋಗರಂಗ ಭೊಖಂಡ ಸ್ಫುಟಿತ ಜೀರ್ಣೋದ್ಧಾರ ನಿತ್ಯಾಹಾರ ಅವಾರಿತ್ಸತ್ರಕ್ಕೆ ತಮ್ಮ ಜಿದುವಳಿಗೆ ನಾಡೊಳಗಣ ಕೋಳಿಗೆಸಾಲೆಯ ಪೂರ್ವಶೀನೆ ಚತುರಾಘಾ ಟದೊಳಗಣ ಜಲಪಾಷಾಣ ನಿಧಿನಿಧಾನ ನಿಕ್ಷೇಪಸಹಿತ ಸರ್ವಬಾಧೆ ಪರಿಹಾರವಾಗಿ ಧಾರಾಪೂರ್ವಕಂ ಮಾಡಿಕೊಟ್ಟ ಧರ್ಮ " ಎಂದು ಇರು ತ್ತದೆ. ಇದರ ವರ್ಷ ೧೨೫೬ ಅಂದರೆ ಬಸವೇಶ್ವರನ ತರುವಾಯ ೧೦೦ ವರ್ಷದ್ದು ಇರುತ್ತದೆ. ಆದ್ದರಿಂದ ಸೊಲ್ಲಾಪುರ ಮತ್ತು ಅಲ್ಲಿಯ ಸಿದ್ಧ ರಾಮೇಶ್ವರನ ಬಗ್ಗೆ ಭಕ್ತಿಯು ಈ ಅವಧಿಯಲ್ಲಿ ಎಷ್ಟು ದೂರದವರೆಗೆ ಪಸರಿಸಿತ್ತೆಂಬುದು ವ್ಯಕ್ತವಾಗುತ್ತದೆ.

## ಏಕಾಂತದ ರಾಮಯ್ಯ.

ಇದೇ ಮೇರೆಗೆ ಏಕಾಂತದ ರಾಮಯ್ಯನ ವಿಷಯವಾಗಿ ಒಂದು ಶಿಲಾಲೇಖವು ಧಾರವಾಡ ಜಿಲ್ಹಾ ಅಬ್ಬಲೂರಲ್ಲಿ ಸಿಕ್ಕಿರುತ್ತದೆ. ಇದರ ವರ್ಷ ೧೧೯೫ ಎಂದರೆ ಬಸವೇಶ್ವರನ ತರುವಾಯ ೩೦ ವರ್ಷದ್ದು ಇರು ತ್ತದೆ. ಇದರಿಂದ ತಿಳಿಯುವದೇನಂದರೆ:—

ಏಕಾಂತದ ರಾಮಯ್ಯನು ಕುಂತಲದೇಶದ ಅಲಂದೆ ಎಂಬ ಗ್ರಾಮ ದಲ್ಲಿ ಶ್ರೀವತ್ಸಗೋತ್ರೋದ್ಭವನಾದ ಪುರುಷೋತ್ತಮನೆಂಬ ಬ್ರಾಹ್ಮಣನಿ ಗೂ ತತ್‌ಪತ್ನಿ ಪದ್ಮಾಂಬಿಕೆಗೂ ಮಗನಾಗಿ ಜನಿಸಿದನು. ಇವನು ಏಕಾ ಗ್ರ ಭಕ್ತಿಯಿಂದ ಶಿವನನ್ನು ಆರಾಧಿಸುತ್ತಿದ್ದದರಿಂದ ಏಕಾಂತದ ರಾಮ ಯ್ಯನೆಂಬ ಹೆಸರನ್ನು ಪಡೆದನು. ಇವನು ಪುಲಿಗೆರೆಗೆ ಬಂದು ಸೋಮ ನಾಥನನ್ನು ಪೂಜಿಸಿ ತದಾಜ್ಞಾನುಸಾರವಾಗಿ ಅಬ್ಬಲೂರಿಗೆ ಹೋಗಿ ಬ್ರಹ್ಮೇಶ್ವರ ದೇವಸ್ಥಾನದಲ್ಲಿ ಇರುತ್ತಿದ್ದನು. ಅಲ್ಲಿ ಆತನಿಗೂ ಜೈನರಿಗೂ ಕಲಹವು ಒದಗಲಾಗಿ, ಅದರಲ್ಲಿ ಆವನು ತನ್ನ ತಲೆಯನ್ನು ಕೊಯ್ದು ಪುನಃ ಪಡೆಯುವೆನೆಂತಲೂ, ಹಾಗೆ ಮಾಡಿದ ಪಕ್ಷದಲ್ಲಿ ಜಿನಾಲಯ ವನ್ನು ಶಿವಾಲಯವನ್ನು ಮಾಡುವೆನೆಂತಲೂ ಪಣ ಹಾಕಿ ಅದರಂತೆ ಅವ ನು ಆಚರಿಸಲಾಗಿ, ತನ್ನ ಮೈಮೇಲೆ ಬಂದ ಜೈನರ ಸೇನೆಯನ್ನು ಬಡಿ ದಟ್ಟಿ ವೀರ ಸೋಮನಾಥನನ್ನು ಆ ದೇವಾಲಯದಲ್ಲಿ ನಿಲಿಸಿದನು. ಅವ

ನು ಮಾಡಿದ ಈ ಮಹತ್ವಕ್ಕೆ ಮೆಚ್ಚಿ ಬಿಜ್ಜಳನು ವೀರ ಸೋಮ ನಾಥನ ಅಂಗಭೋಗಾದಿಗಳಿಗೆ ಗೋಗಾವೆ ಎಂಬ ಗ್ರಾಮವನ್ನು ಹಾಕಿ ಕೊಟ್ಟನು. ಬಳಿಕ ತ್ರಿಭುವನೈಕ ಮಲ್ಲ ಸೋಮೇಶ್ವರದೇವನು (೧೧೬೩ ರಿಂದ ೧೧೬೮)ಇವನನ್ನು ಬರಮಾಡಿಕೊಂಡು ಸತ್ಕರಿಸಿ, ವೀರ ಸೋಮ ನಾಥ ದೇವರಿಗೆ ಅಬ್ಬಲೂರ ಗ್ರಾಮವನ್ನು ಬಿಟ್ಟುಕೊಟ್ಟನು. ಆ ಮೇಲೆ ಕದಂಬ ರಾಜನಾದ ಕಾಮರಸನು (೧೧೬೩ರಿಂದ ೧೨೦೩) ಹಾನುಂಗ ಲ್ಲಿಗೆ ಅವನನ್ನು ಕರೆದುಕೊಂಡು ಹೋಗಿ, ಸತ್ಕರಿಸಿ, ವೀರ ಸೋಮ ನಾಥ ದೇವರಿಗೆ ಮಲ್ಲವಳ್ಳಿ ಎಂಬ ಗ್ರಾಮವನ್ನು ಹಾಕಿ ಕೊಟ್ಟನು. ಮತ್ತು ಏಕಾಂತದ ರಾಮಯ್ಯನು ಯಾರಲ್ಲಿಯೂ ಯಾಚಿಸದೆ, ಈಶ್ವರ ಪ್ರಸಾದದಿಂದ ತವನಿಧಿಯನ್ನು ಪಡೆದು ದೇವಾಲಯವನ್ನು ಕಟ್ಟಿಸಿದನು. ಈ ಯಾವತ್ತು ಸಂಗತಿಗಳು ಈ ಶಿಲಾಲೇಖದಲ್ಲಿ ವಿವರಿಸಲ್ಪಟ್ಟಿವೆ. ಇವ ನಬಗ್ಗೆ ಪುರಾಣಗಳಲ್ಲಿ ಶಿಗುವ ಮಾಹಿತಿಗಿಂತಲೂ ಹೆಚ್ಚಿನ ಮಾಹಿತಿ ಗಳು ಈ ಶಿಲಾಲೇಖದಲ್ಲಿ ಉಪಲಬ್ಧವಿದೆ.

## ಬಸವೇಶ್ವರ.

ಬಸವೇಶ್ವರನು ಉಲ್ಲೇಖಿಸಲ್ಪಟ್ಟ ಶಿಲಾಲೇಖಗಳು ಮಾತ್ರ ಈವರೆಗೂ ಎಲ್ಲಿಯೂ ಶಿಕ್ಕಿಲ್ಲ. ಬಿಜ್ಜಳನ ೨೦-೩೦ ಶಿಲಾಲೇಖಗಳು ಬೇರೆ ಬೇರೆ ಜಿಲ್ಹೆ ಗಳಲ್ಲಿ ದೊರೆದಿದ್ದರೂ ಅವುಗಳಲ್ಲಿ ಬಸವೇಶ್ವರನ ಉಲ್ಲೇಖವಿಲ್ಲ.ಕೇವ ಲ ಬಸವೇಶ್ವರನ ಸಂಬಂಧದ ಶಿಲಾಲೇಖಗಳನ್ನು ಹುಡುಕುವ ಉದ್ದಿಶ್ಯ ವಾಗಿ ವಿ॥ ಚನ್ನಮಲ್ಲಪ್ಪ ಗಲಗಲಿ ಸಾ॥ ಹಲಸಂಗಿ ಇವರು ಹೋದ ತಿಂಗಳು ಬಾಗೇವಾಡಿ ತಾಲೂಕಿನ ಮುತ್ತಿಗಿ, ಬಾಗೇವಾಡಿ, ಮನಗೋಳಿ ಅಲ್ಲದೆ ಕಪ್ಪಡಿ ಸಂಗಮ, ಶಿರೂರ, ತಂಗಡಿಗಿ, ಹಳ್ಳೂರ, ಐಹೊಳೆ, ಪಟ್ಟದಕಲ್ಲು ಭೈರಮಟ್ಟಿ, ಇಂಗುಳೇಶ್ವರ ಅಂದರೆ ಯಾವ ಯಾವ ಸ್ಥಳಗ ಳಲ್ಲಿ ಬಸವೇಶ್ವರನ ಕುರುಹುಗಳು ಸಿಗುವ ಸಂಭವವದೆಯೋ ಆ ಸ್ಥಳಗ ಳಿಗೆ ಹೋಗಿ ಅಲ್ಲಿಯ ಶಿಲಾಲೇಖಗಳನ್ನು ನೋಡಿ,ಅವುಗಳ ಲೇಖಗಳನ್ನು ಬಹು ಪರಿಶ್ರಮಬಟ್ಟು ಗುರ್ತಿಸಿ, ಅವುಗಳ ನಕಲುಗಳನ್ನು ನನ್ನ ಕಡೆ ಗೆ ತಂದು ಕೊಟ್ಟಿದ್ದಾರೆ. ಅವುಗಳಲ್ಲಿ ಕಾಳಾಮುಖರ ಉಲ್ಲೇಖಗ ಳು ಅಲ್ಲಲ್ಲಿ ಸಿಗುತ್ತಿದ್ದರೂ ಬಸವೇಶ್ವರನ ಉಲ್ಲೇಖವು ಅವಾವುಗಳಲ್ಲಿ ಯೂ ಇಲ್ಲ. ಬಸವೇಶ್ವರನ ಕಾಲದ ಒಂದು ಶಿಲಾಲೇಖವು ಮನಗೋ

ಳಿಯಲ್ಲಿ ಇದೆ, ಇದರಲ್ಲಿ ಬಸವರಸನ ಉಲ್ಲೇಖವು ಇದ್ದು, ಈತನೇ ಬಸವೇಶ್ವರನೆಂಬ ತಿಳುವಳಿಕೆಯಿಂದ ಒಂದು ಲೇಖವು ಇಂಡಿಯನ್ ಆ್ಯಂಟಿ ಕ್ವರಿಯಲ್ಲಿ ಪ್ರಸಿದ್ಧವಾಗಿದೆ. ಆದರೆ ಇದರಲ್ಲಿ ಉಲ್ಲೇಖಿಸಲ್ಪಟ್ಟ ಬಸವರಸನು ಈ ಭಾಗದಲ್ಲಿ ಆಗ ಆಳುತ್ತಿದ್ದ ಒಬ್ಬ ಮಾಂಡಲಿಕನಾಗಿದ್ದನು. ಈತನಿಗೂ ಬಸವೇಶ್ವರನಿಗೂ ಏನೂ ಸಂಬಂಧವಿಲ್ಲ. ಆದರೆ ಇಷ್ಟರಮೇಲಿಂದ ಬಸವೇಶ್ವರನು. ಉಲ್ಲೇಖಿಸಲ್ಪಟ್ಟ ಶಿಲಾಲೇಖಗಳು ಎಲ್ಲಿಯೂ ಸಿಗುವದಿಲ್ಲೆಂದು ಹೇಳಲಿಕ್ಕೆ ಬರಲಾರದು. ಯಾಕಂದರೆ ಉತ್ತರ ಕರ್ನಾಟಕ ಮತ್ತು ನಿಜಾಮು ರಾಜ್ಯದಲ್ಲಿಯ ಶಿಲಾಲೇಖಗಳು ಇನ್ನೂ ಶೋಧಿಸಲ್ಪಟ್ಟಿರುವದಿಲ್ಲ. ಇವುಗಳನ್ನೆಲ್ಲ ಶೋಧಿಸಿದ್ದಾದರೆ, ಬಸವೇಶ್ವರನ ಕಾಲದ ಅನೇಕ ಸಂಗತಿಗಳು ಹೊರಬೀಳುವ ಸಂಭವವದೆ.

ಮೇಲ್ಕಂಡ ಸಂಗತಿಗಳ ಮೇಲಿಂದ ವೀರಶೈವರಲ್ಲಿ ಆಗಿಹೋದ ಮಹಾಪುರುಷರ ಐತಿಹಾಸಿಕ ಉಲ್ಲೇಖಗಳನ್ನು ಹುಡಿಕಿ ತೆಗೆಯುವದು ಎಷ್ಟು ಮಹತ್ವದ್ದಿರುತ್ತದೆಂಬದು ವಾಚಕರಿಗೆ ಗೊತ್ತಾಗದೆ ಇರಲಾರದು. ಇದರಿಂದ ಈ ಶಿವಶರಣರು ಕೇವಲ ದಂತಕಥೆಗಳಲ್ಲಿಯ ಕಾಲ್ಪನಿಕ ಪುರುಷರಲ್ಲ, ನಿಜವಾದ ಐತಿಹಾಸಿಕ ಪುರುಷರು ಮತ್ತು ಧರ್ಮಪ್ರಸಾರದ ಬಗ್ಗೆ ಅತ್ಯಂತವಾಗಿ ಪ್ರಯತ್ನಿಸಿದರು ಎಂಬುದು ಗೊತ್ತಾಗುತ್ತದೆ. ಈ ತರದ ಶೋಧದಿಂದ ವೀರಶೈವ ಸಮಾಜದ ಇತಿಹಾಸದ ಮೇಲೆ ಮಹತ್ವದ ಪ್ರಕಾಶವು ಬೀಳುವದು. ಆದರೆ ಶಿಲಾಲೇಖಗಳ ಮತ್ತು ಗ್ರಂಥಗಳ ಶೋಧವು ನಮ್ಮ ದುರ್ದೈವದಿಂದ ಇನ್ನೂ ನಮ್ಮ ಪ್ರಾಂತದಲ್ಲಿ ನಡೆದಿರುವದಿಲ್ಲ. ಇದನ್ನು ಲಕ್ಷದಲ್ಲಿ ತೆಗೆದುಕೊಂಡು ನಮ್ಮ ಸಮಾಜ ಬಾಂಧವರು ಇವುಗಳ ಅಭ್ಯಾಸಕ್ಕೆ ತಮ್ಮ ಲಕ್ಷವನ್ನು ಹೆಚ್ಚಿಗೆ ಪೂರೈಸುವರೆಂದು ಹಾರೈಸುತ್ತೇನೆ.

# ಲಿಂಗ ಹೋದರೆ, ಆತ್ಮಘಾತ ಮಾಡಬಹುದೋ?

(ಮೇಲ್ಕಂಡ ವಿಷಯದ ಬಗ್ಗೆ ವಚನಗಳಲ್ಲಿಯೂ ಆಗಮಗಳಲ್ಲಿಯೂ ಭಿನ್ನಾಭಿಪ್ರಾಯಗಳು ಕಂಡುಬರುತ್ತವೆ. ವಚನಶಾಸ್ತ್ರಸಾರಗ್ರಂಥದ ೨೯೬ ರಿಂದ ೩೦೨ ವರೆಗಿನ ಪುಟಗಳಲ್ಲಿಯ ವಚನಗಳ ಮೇಲಿಂದ ಹೀಗೆ ಆತ್ಮಘಾತ ಮಾಡಿಕೊಳ್ಳಬಾರದೆಂದು ವಚನಕಾರರ ಅಭಿಪ್ರಾಯವಿದ್ದ ಹಾಗೆ ತೋರಿಬರುತ್ತದೆ. ಆದ್ದರಿಂದ ಈ ವಿಷಯದ ಬಗ್ಗೆ ತಮ್ಮ ಅಭಿಪ್ರಾಯವನ್ನು ಬರೆದು ಕಳಿಸಲು ನಾವು ರಾ॥ ರಾ॥ ಹಾವಟಿಯವರಿಗೆ ಸೂಚಿಸಲು ಅವರು ಕೆಳಗಿನ ಲೇಖವನ್ನು ಬರೆದು ಕಳಿಸಿದ್ದಾರೆ. ಇದರಲ್ಲಿ ಲಿಂಗವೆಂದರೇನು ಎಂಬದನ್ನು ನಿಶ್ಚಯಿಸಬೇಕಾದ್ದರಿಂದ ಈ ವಿಷಯದ ಮಹತ್ವವದೆ.—ಸಂಪಾದಕ)

ಮೇಲ್ಕಂಡ ವಿಷಯವು ಲಿಂಗಧಾರಣೆ ಎಂದರೇನು ಎಂಬದನ್ನು ನಿಶ್ಚಯಿಸುವದರ ಮೇಲೆ ವಿಶೇಷವಾಗಿ ಅವಲಂಬಿಸಿದೆ. ಆದ್ದರಿಂದ ಈ ವಿಷಯವನ್ನು ಕುರಿತು ಚೆನ್ನಾಗಿ ವಿಮರ್ಶೆ ಮಾಡುವದು ಅವಶ್ಯವಿರುತ್ತದೆ.

## ಲಿಂಗವಿಮರ್ಶೆ.

ನೆನಹಿ ನಿಂದೀ ವಿಶ್ವ ಕಾರಣ ।
ಮೆನಿಸಿ ವಿಶ್ವಾತೀತ ಮಾಗಿಹ ।
ಮನು ಮುನೀಶ್ವರರಿಂಗೆ ನಿಲುಕವೆ ಗುರುವು ತೋರಿದೊಡೆ ||
ತನುಮನೋ ಭಾವದಲಿ ತುಂಬಿಹ ।
ಘನಮಹಾಚಿಜ್ಜ್ಯೋತಿಯದುತಾ ।
ನನಘ ಭಕ್ತನ ಹಸ್ತನಳಿನದೊಳೆಸೆವ ಸೈಪೆನಿತೋ ||೧॥

ಅಹ! ಲಿಂಗ ಶಬ್ದವು ಕಿವಿಗೆಷ್ಟು ಇಂಪು! ಕೇಳಿದೊಡನೆಯೆ ಎಷ್ಟು ವಿಚಾರತರಂಗಗಳಿಗಾಸ್ಪದವು! ಹಿಂದೂ ದೇಶದ ಅತಿ ಪವಿತ್ರ ಕ್ಷೇತ್ರವಾದ ಕಾಶಿಯಲ್ಲಿ ವಿಶ್ವೇಶ್ವರ ಲಿಂಗವು. ಉತ್ತರದಲ್ಲಿ ಭೂಮಂಡಲದ ಅಳಿಗೋಲಿನಂದದ ಹಿಮಪರ್ವತವು ಕೇದಾರೇಶ್ವರನಿಗಿಂಬಾಗಿಹುದು. ದಕ್ಷಿಣದಲ್ಲಿ ಮಹಾ ಸಾಗರದ ತೆರೆಗಳಿಂದ ತೊಯ್ವ ರಾಮೇಶ್ವರವು, ರಾಮಲಿಂಗದ ನೆಲೆಯು. ಪೂರ್ವದಲ್ಲಿ ಶ್ರೀ ಪರ್ವತವು ಮಲ್ಲಿಕಾರ್ಜುನನಿವಾಸವು. ಪಶ್ಚಿಮದಲ್ಲಿ ಗೋಕರ್ಣವು ಮಹಾಬಲ ಲಿಂಗದ

ಮನೆಯು. ಧರ್ಮಭೂಮಿಯೆಂದು ಹೆಸರುಪಡೆದ ಭರತವರ್ಷವು ಲಿಂಗಾಂಕಿತ ಸರ್ವಾಂಗವಾಗಿರಲು ಲಿಂಗಪೂಜೆಯು ಪರಮಧರ್ಮವೆನಿಸಿದರೆ ಅಚ್ಚರಿಯಲ್ಲ.

ಲಿಂಗವೆಂದರೇನು? ಲಿಂಗವನೇಕೆ ಪೂಜಿಸಬೇಕು? ಲಿಂಗಪೂಜೆಯ ಪರಿಯಲ್ಲಿ ಹೆಚ್ಚಿನದಾವುದು? ಎಂಬಿವೆ ಮೊದಲಾದ ಬಗೆಬಗೆಯ ವಿಚಾರಗಳು ಮನಸ್ಸಿನಲ್ಲಿ ಮೂಡುವವು. ಸಂಸ್ಕೃತ ವ್ಯಾಕರಣಬಲದಿಂದಲೂ ನಿರುಕ್ತಿಯ ಸಹಾಯದಿಂದಲೂ ಲಿಂಗ ಶಬ್ದಾರ್ಥವನ್ನು ಬಿಡಿಸುವ ಹಂಬಲವು ಬೇಡ. ಶ್ರೀಮನ್ನಿಜಗುಣನು ಸುಲಿದ ಬಾಳೆಯ ಹಣ್ಣಿನಂದದ ಕನ್ನಡದಲ್ಲಿ ಬರೆದ ಗ್ರಂಥಗಳಿಂದ ಇದರರ್ಥವನ್ನು ತಿಳಿಯಬಲ್ಲೆವು. "ತರುವಿಸ್ತಾರವನೊಳಗೋಡ ಬೀಜದ । ಪರಿಯಂತಿರಾಧ್ವಗಳಿಗಿಂಬುವಡೆದ । ಪರಬೊಂಮಕಾಶ್ರಯವಾದ ನಿಜಶಕ್ತಿ । ವೆನಿಸಿತನಗೆ ತಾನಾ ಧಾರವಾದ ॥ ಪರತರ ಶಿವಲಿಂಗ" ಎಂಬೀ ಪದ್ಯದಿಂದ ಈ ಜಗತ್ತಿಗೆಲ್ಲ ಕಾರಣವಾದ ಶಕ್ತಿ ವಿಶಿಷ್ಟವಾದ ತತ್ವವು ಲಿಂಗವೆಂದು ತಿಳಿಯಬಲ್ಲೆವು.

ಜೀವನು ಈ ಸಂಸಾರದಲ್ಲಿ ಅನೇಕ ದುಃಗಳಿಗೀಡಾಗಿರುವನು. ಎಂತಹ ಭಾಗ್ಯವಂತನಿರಲಿ ಒಂದಿಲ್ಲೊಂದು ದುಃಖವು ಬಿಟ್ಟಿಲ್ಲ. ಒದಗಿದ ಸುಖವು ಶಾಶ್ವತವಲ್ಲ. ಶಾಶ್ವತ ಸುಖಕ್ಕೆ ಜೀವನು ಹಂಬಲಿಸುವನು. ಅಂತಪ್ಪ ಸುಖವು ಸರ್ವಶಕ್ತವಾದ ತತ್ವವನ್ನು ಸೇವಿಸುವುದರಿಂದ ದೊರಕುವದು. ಆ ತತ್ವವೇ ಲಿಂಗವೆಂದು ಕಂಡೆವು. ಶಾಶ್ವತ ಸುಖದದೆಸೆಯಿಂದ ಲಿಂಗವನ್ನು ಸೇವಿಸಬೇಕು.

ಲಿಂಗವನ್ನು ಆಶ್ರಯಿಸುವದರಿಂದ ಸುಖವಾಗುತ್ತದೆ. **ಅದರಿಂದ ಆ ಲಿಂಗವನ್ನು ನಾವೆಂದೂ ಅಗಲಬಾರದು**. ಲಿಂಗವನ್ನು ಮರೆತುದರಿಂದಲೆ ಸಂಸಾರವು. ಅಥವಾ ಸಂಸಾರದ ದುಃಖವು. ಇದನ್ನು ಒಂದು ಶಿವಾಗಮ ವಾಕ್ಯವು ಸಾರುವುದು. "ಧಾರಯೇದ್ಯಸ್ತು ಹಸ್ತೇನ ಲಿಂಗಾಕಾರಂ ಸದಾಶಿವಂ । ತಸ್ಯ ಹಸ್ತಸ್ಥಿತಂ ವಿದ್ಧಿ ಮತ್ಪದಂ ಸಂಪದಾಂಪದಂ"

## ಲಿಂಗಸಾಧನೆ.

ಲಿಂಗವನ್ನು ಕೈಗೆ ತರುವ, ಮನಸ್ಸಿನ ಬಗೆಯಲ್ಲಿ ಹಿಡಿಸುವ, ಭಾವದ ಒಳಿಕೆಯಲ್ಲಿ ಒರಿಸುವ, ಹಂಚಿಕೆಯುಂಟೊ? ಉಂಟು. ಅದು ಭಕ್ತಿ

ಯು. ಭಕ್ತಿಯ ಸ್ವರೂಪವನ್ನು ಬಸವನಿಂತು ಹೇಳಿದ್ದಾನೆ." ನೆಚ್ಚಿದೆನೆಂದರೆ ಮೆಚ್ಚಿದೆನೆಂದರೆ ಸಲೆ ಮಾರುವೋದೆನೆಂದರೆ ತನುವನಲ್ಲಾಡಿಸಿ ನೋಡುವೆ ನೀನು. ಮನವನಲ್ಲಾಡಿಸಿ ನೋಡುವೆ ನೀನು.ಧನವನಲ್ಲಾಡಿಸಿ ನೋಡುವೆ ನೀನು. ಇವೆಲ್ಲಕ್ಕಂಜದಿದ್ದರೆ ಭಕ್ತಿ ಕಂಪಿತ ನಮ್ಮ ಕೂಡಲಸಂಗಮದೇವ"

ಈ ಗಟ್ಟಿಯಾದ ನಂಬುಗೆಯುಳ್ಳ ಒಬ್ಬನೊಬ್ಬ ಭಾಗ್ಯ ಶಾಲಿಗೆ ಲಿಂಗ ತತ್ವವು ಶರೀರದ ಕರಕ್ಕೂ ಮನಸಿನ ಮನನಕ್ಕೂ ಭಾವದ ಬಳಿಕೆಗೂ ಸಿಗುವುದು. ಲಿಂಗಧಾರಣ ಧರ್ಮವು ಉಳಿದ ಧರ್ಮಗಳಂತಲ್ಲ. ಇದರಿಂದ ಸತ್ತು ಪಡೆವ ಸ್ವರ್ಗವಿಲ್ಲ. ಇಲ್ಲಿಯೆ ಶಿವನನ್ನು ಸಾಕ್ಷಾತ್ಕರಿಸಿ ಅವನೊಡನೆ ಸಮರಸವಾಗುವ ಮಾರ್ಗವಿದು. ಜಗತ್ತಿನ ವ್ಯವಹಾರಗಳು ಸಟೆಯೆಂದು ಬಗೆವುತ್ತ ಪರಬ್ರಹ್ಮವನ್ನು ಕೂಡಿದೆನೆಂದು ವಿನೋದಿಸುವ ಮುಕ್ತಿಯನ್ನು ಇದು ಬಗೆಯದು. ಆದರೆ. " ಇಹಲೋಕವೆಂಬುದು ಕರ್ತನ ಕಮ್ಮಟವಯ್ಯ. ಇಲ್ಲಿ ಸಲ್ಲುವರು ಅಲ್ಲಿ ಸಲ್ಲುವರಯ್ಯ. ಅಲ್ಲಿ ಸಲ್ಲುವರು ಇಲ್ಲಿ ಸಲ್ಲುವರಯ್ಯ." ಎಂಬ ಬಸವನ ನುಡಿಯಂತೆ ಲೋಕದ ವ್ಯವಹಾರಗಳಿಂದ ನುಸುಳದೆ ಈ ಬಾಳುವೆಯಲ್ಲಿಯೇ ಶಿವನನ್ನು ಕಂಡು ಬೆರೆಯುವ ಹಾದಿಯಿದು.

ಇಂದ್ರಿಯಗಳಿಗೆ ಗೋಚರಿಸದ ಶಿವನನ್ನು ಕಂಡು ಬೆರೆಯುವ ಬಗೆಯೆಂತು? ಭಕ್ತಿಯೆಂದು ಹೇಳಿದೆಯಲ್ಲ! ಭಕ್ತಿಯಿಂದಾದರು ಅನಂಭವವಾದ ಶಿವನೊಡನೆ ಬೆರೆಯುವಣವು ಸಂಭವಿಸದು. ಭಕ್ತಿಯಿಂದ ಮನಸ್ಸಿನ ಶಾಂತಿಯಾಗಲಿ. ಶಿವನೊಡಗೂಟವೆಂತಾಗುವದು.

ಬರಿಯ ಕಣ್ಣಿಗೆ ಕಾಣದ ನಿಧಿಯು ಅಂಜನದ ದೃಷ್ಟಿಗೆ ತೋರುವಂತೆ, ಭಕ್ತನೇತ್ರಕ್ಕೆ ಶಿವನು ತೋರುವನು. ಹಾಗು ನಿರಾಕಾರನಾದ ಶಿವನು ಸಾಕಾರವಾದ ಜಗತ್ತನ್ನು ನಿರ್ಮಿಸುವಂತೆ ಭಕ್ತರಿಗಾಗಿ ಸಾಕಾರನಾಗಬಲ್ಲನು. " ನಂಬರು ನೆಚ್ಚರು. ಬರಿದೆ ಕರೆವರು. ನಂಬಿ ಕರೆದರೆ ಓ ಎನ್ನನೇ ಶಿವನು? ಎಂದು ಬಸವನು ಹೇಳಿರುವನು.

ನಿರಾಕಾರವಾದ ಬಾಷ್ಪವು ಮೋಡವಾಗುತ್ತದೆ. ಅದರಂತೆಯೇ ನಿರಾಕಾರನಾದ ಪರಶಿವನು ತನ್ನ ಶಕ್ತಿಯಿಂದ ಸಾಕಾರವಾಗಬಲ್ಲನು. ಬಾಷ್ಪವು ವಿಕಾರಿಯು. ಶಿವನು ವಿಕಾರಿಯಲ್ಲ. ವಿಕಾರಿಯಾದರೆ ಶಾಶ್ವತನಾಗನು. ಅಂದರೆ ಸ್ವರೂಪ ವಿಕಾರವಾಗದೆ ಕಡಗವು ಮೊದಲಾದ ರೂಪಗಳನು

ತಾಳುವ ಬಂಗಾರದಂತೆ, ಶಿವನಿಹನು. ಜಡವಾದೀ ದೃಷ್ಟಾಂತಗಳಿಂದ ಶಿವನು ನಿರಾಕಾರನಾಗಿ ಸಾಕಾರನಾಗುವ, ಮತ್ತು ತನ್ನ ಸ್ವರೂಪದಲ್ಲಿ ವಿಕಾರ ಹೊಂದದ, ರೀತಿಯನ್ನು ತಿಳಿದುಕೊಳ್ಳಲು ನಮಗೆ ಸಹಾಯಕವಾಗುತ್ತದೆ.

ಭಕ್ತರ ಅನುಗ್ರಹಕ್ಕಾಗಿ ಪರಮಾತ್ಮನು ಗ್ರಹಿಸುವ ಸಾಕಾರವು ಎರಡು ವಿಧವಾಗಿದೆ. ತ್ರಿಲೋಚನತ್ವ ಪಂಚಮುಖತ್ವ ಮುಂತಾದ" ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಂ" ಇತ್ಯಾದಿಯಾಗಿ ಹೇಳಿದ ದಿವ್ಯ ಮೂರ್ತಿಯೊಂದು. ಪೃಥ್ವಿಯೇ ಪೀಠ ಆಕಾಶವೇ ಪಿಂಡ ದಶದಿಕ್ಕುಗಳೇಗೋಮುಖವೆಂಬೀ ಬಗೆಯಿಂದ ತೋರುವ ವಿಶ್ವವ್ಯಾಪಕ ರೂಪು ಒಂದು.

## ಲಿಂಗದ ನಿಜಸ್ವರೂಪು.

ಪರಮಾತ್ಮನು ಒಂದೊಂದು ಪದಾರ್ಥದಲ್ಲಿಯೂ ಈ ವ್ಯಾಪಕತ್ವದಿಂದಿರುವನು. ನಮ್ಮ ಸಾಕಾರವಾದ ಶರೀರದಲ್ಲಿಯೂ ಲಿಂಗರೂಪದಿಂದಿಹನು. ಆ ರೂಪವನ್ನು ಲೋಹ ಚುಂಬಕವು ಲೋಹವನ್ನೆಳೆವಂತೆ ಎಳೆದು ಹಸ್ತಗತವನ್ನಾಗಿ ಮಾಡಲಿಕ್ಕೆ ವಿಶ್ವಗತರೂಪವಾದಿಷ್ಟ ಲಿಂಗವು ಅವಶ್ಯವು.

ಜೀವಾತ್ಮನು ದೇಹದಿಂದ ಸಾಕಾರನಾಗಿಯೂ, ಅಂತಃಕರಣದಿಂದ ಸಾಕಾರನಿರಾಕಾರನಾಗಿಯೂ, ದೇಹಾಂತಃಕರಣಗಳಾಚೆಯಿಂದ ನಿರಾಕಾರನಾಗಿಯೂ ಇರುವನು.

ಶಿವನು ಜಗದ್ವ್ಯಾಪಕನಾಗಿ ಸಾಕಾರನಾಗಿಯೂ, ಜಗತ್ಕರ್ತೃತ್ವಾದಿ ಕಲ್ಯಾಣ ಗುಣಗಳಿಂದಲೂ ಉಮಾ ಸಹಾಯತ್ವಾದಿ ರೂಪದಿಂದಲೂ ಸಾಕಾರ ನಿರಾಕಾರನಾಗಿಯೂ, ಈ ಸಾಕಾರ ನಿರಾಕಾರಗಳನ್ನು ತುಂಬಿ ಬರಿಯ ಜ್ಞಾನವಾಗಿ ನಿರಾಕಾರನಾಗಿಯೂ ಇರುವನು.

ಸಾಕಾರ ನಿರಾಕಾರಸಾಕಾರಗಳಲ್ಲಿಯೂ ನಿರಾಕಾರಕ್ಕೆ ಬಾಧೆ ಇಲ್ಲ. ಸಾಕಾರವಾಗಿ ಶರೀರ ಸಂಗತವಾಗಿ ಇಷ್ಟ ಲಿಂಗವಾಗಿಯೂ ಸಾಕಾರ ನಿರಾಕಾರದಿಂದ ಚಿಂತನದಲ್ಲಿ ಪ್ರಾಣಲಿಂಗವಾಗಿಯೂ ಧಾರಣಚಿಂತನಗಳಿಗೆ ಮೀರಿಭಾವ ಲಿಂಗವಾಗಿಯೂ ಇರುತ್ತದೆ.

ಹೀಗೆ ಜೀವನ ಮತ್ತು ಶಿವನ ಮೂರು ರೂಪಗಳನ್ನು ಕಂಡೆವು. ಸಾಕಾರದಲ್ಲಿ ಸಾಕಾರವನ್ನು ಸಾಕಾರ ನಿರಾಕಾರದಲ್ಲಿ ಸಾಕಾರನಿರಾಕಾರವನ್ನೂ

ನಿರಾಕಾರದಲ್ಲಿ ನಿರಾಕಾರವನ್ನೂ ಅದೇ ಲಿಂಗಾಂಗಗಳ ಒಂದು ಗೂಡುವಿಕೆಯು ಸಾಮರಸ್ಯವು. ಆಕಾರವಿಲ್ಲದೆ ನಿರಾಕಾರದಲ್ಲಿ ಕೂಡಲಾಗದು.

"ಆಕಾರವಿಡಿದು ಅರ್ಚನೆ ಪೂಜೆಯ ಮಾಡುವದಲ್ಲದೆ ನಿರಾಕಾರವ ನಂಬಲಾಗದು. ಶ್ರೀ ಗುರು ಪ್ರಾಣಲಿಂಗವನು ಕರಸ್ಥಲಕ್ಕೆ ಬಿಜಯಂಗೈಸಿ ಕೊಟ್ಟಬಳಿಕ ಬಯಲನರಸಲುಂಟೆ? ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ"

ಸಾಕಾರವಾದ ಶರೀರದಲ್ಲಿ ನಿಚ್ಚ ನಿಚ್ಚ ಮಾಡುವ ಕ್ರಿಯೆಗಳು ಅಹಂಕಾರ ಅಂತಃಕರಣಗಳಲ್ಲಿ ಸೂಕ್ಷ್ಮರೂಪದಿಂದ ಭೇದಿಸುತ್ತವೆ. ಗಿಡಕ್ಕೆ ನೀರು ಹಾಕಿದರೆ ಆ ಗಿಡದ ತೊಗಟೆಗೆ ಹತ್ತಿದ ಆ ನೀರು ಒಳಮೈಯ್ಯಲ್ಲ ರಸವಾಗಿ ಸೇರುತ್ತದೆ. ಅದರಂತೆಯೇ, ನಮ್ಮ ಈ ಒಡಲಿನಿಂದ ಮಾಡುವ ಕೆಲಸಗಳೆಲ್ಲ ಒಳಗಿನ ಅಂತಃಕರಣದಲ್ಲಿ ಸೂಕ್ಷ್ಮರೂಪದಿಂದ ತುಂಬುತ್ತವೆ. ಹೀಗೆ ಒಡಲೂ ಒಡಲೊಳಗಿನ ಚಿತ್ತವೂ ಒಂದಕ್ಕೊಂದು ಸಂಬಂಧ ಪಟ್ಟಿರುವವು. ದೇಹದಲ್ಲಿ ಧರಿಸಿದ ಇಷ್ಟ ಲಿಂಗದ ಅರ್ಚನಾದಿ ಕ್ರಿಯೆಗಳೇ ಚಿತ್ತದಲ್ಲಿ ಇಳಿದು, ಆ ಚಿತ್ತಕ್ಕೆ ಶಿವಧ್ಯಾನವೆಂಬ ಪ್ರಾಣಲಿಂಗ ಸಂಬಂಧವನ್ನುಂಟು ಮಾಡುತ್ತವೆ.

"ಎಳ್ಳಿಂಗೆ ಪರಿಮಳ ಕಟ್ಟದಲ್ಲದೆ, ಎಣ್ಣೆಗೆ ಪರಿಮಳ ವೇಧಿಸದು! ದೇಹದಲ್ಲಿ ಇಷ್ಟಲಿಂಗಸ್ಥಾಪಿಸಿದಲ್ಲದೆ, ಪ್ರಾಣಲಿಂಗ ಸಂಬಂಧವಾಗದು. ಇದು ಕಾರಣ ಗುಹೇಶ್ವರ ಲಿಂಗದಲ್ಲಿ ಇಷ್ಟ ಲಿಂಗ ಸಂಬಂಧಿಯಲ್ಲದೆ, ಪ್ರಾಣಲಿಂಗ ಸಂಬಂಧಿಯಾಗಬಾರದು ಕಾಣಾ ಸಿದ್ಧರಾಮಯ್ಯಾ!

ಹೊರಗಿನ ಸಾಕಾರವಾದ ಶರೀರಕ್ಕೂ ಅದರ ಒಳಮೈಯ್ಯಲ್ಲಿರುವ ಅಹಂಕಾರಕ್ಕೂ ಅವೆರಡಕ್ಕೂ ಅಂತರಂಗದಲ್ಲಿರುವ ನಿರಾಕಾರಾತ್ಮ ಸ್ವರೂಪವೇ ಮೂಲವಾಗಿದೆ. ಅದನ್ನು ಹೊರಗಣ ಶರೀರದಿಂದಲೂ ಅಹಂಕಾರದಿಂದಲೂ ಗುರುತಿಸಿ ನಾವು ಲೋಕದ ಬಳಿಕೆಗಳನ್ನೆಲ್ಲ ಮಾಡುತ್ತೇವೆ. ಶಿಶುವು ತಾಯಿಯನ್ನೂ ತಾಯಿಯು ಶಿಶುವನ್ನೂ ಪ್ರೀತಿಸುವವು. ಮೇಲೆ ಮೇಲೆ ನೋಡುವಲ್ಲಿ, ಈ ಪ್ರೀತಿಯು ಅವರೀರ್ವರ ಹೊರಗಣ ಶರೀರವನ್ನು ಕುರಿತು ಇರುವಂತೆ ತೋರುತ್ತದೆ. ಆದರೆ ನಾವು ಪರಕ್ಷಿಸಿ ನೋಡಿದರೆ, ಹೊರಗೆ ಸಾಕಾರವಾದ ಶರೀರದಲ್ಲಿ ತುಂಬಿದ ನಿರಾಕಾರಾತ್ಮನನ್ನು ಕುರಿತೇ ಅವರೀರ್ವರ ಪ್ರೇಮವು ಇರುತ್ತದೆಂದು ತಿಳಿಯುತ್ತಿದೆ. ಶಿಶುವಾಗಲಿ ತಾಯಿಯಾಗಲಿ ಸತ್ತರೆ ಶವದಮೇಲೆ ತಾಯಿಯಾ

ಗಲಿ ಶಿಶುವಾಗಲಿ ಪ್ರೀತಿಯನ್ನು ಮಾಡುವದಿಲ್ಲ. ನಾವು ಮೇಲೆ ತೆಗೆದು ಕೊಂಡ ಗಿಡದಲ್ಲಾದರೂ ಹೊರಗಿನ ತೋಟೆಗೂ ಒಳಗಿನ ರಸಕ್ಕೂ ಅಂತ ರಂಗವಾದ ಆ ವೃಕ್ಷ ಜೀವವು ಉಂಟು. ಆ ಜೀವವಿಲ್ಲದಿದ್ದರೆ, ತೋಟೆಯೂ ರಸವೂ ಇಲ್ಲವೇ ಇಲ್ಲ. ತೋಟೆಯನ್ನೂ ರಸವನ್ನೂ ಕಾಣುವೆವು. ಆದರೆ ವೃಕ್ಷ ಜೀವವನ್ನು ಕಾಣಲಾರೆವು. ಅದರಂತೆ ಶರೀರವನ್ನೂ ಅಂತಃಕರಣ ವನ್ನೂ ತಿಳಿಯುವೆವು. ಆದರೆ ಇವೆರಡಕ್ಕೂ ನೆಲೆಯಾದ ಆತ್ಮರೂಪವನ್ನು ಕಾಣೆವು.

ಆದರೆ ಈ ಎರಡೂ ಶರೀರಾಂತಃಕರಣಗಳು ಚೇಷ್ಟಿಸುವ ಪರಿ ಯನ್ನು ಎಚ್ಚರವಿಟ್ಟು ನೋಡಿದರೆ ಒಳಗಿನ ಆತ್ಮವು ಪ್ರಕಟವಾಗುತ್ತದೆ.

ಈ ಆತ್ಮನ ರೂಪವು ಶರೀರದಲ್ಲಿಯೂ ಅಂತಃಕರಣದಲ್ಲಿಯೂ ತೋರುವ ಕ್ರಿಯೆಗಳಿಗೆ ಅನುರೂಪವಾದ ಸ್ವಭಾವವನ್ನುಳ್ಳದು. ಹೇಗಂ ದರೆ ಒಂದು ಬಾವಿಯಲ್ಲಿ ಸವುಳು ಇಲ್ಲವೆ ಸೀಯಾದ ನೀರನ್ನು ಕಂಡೆವಾ ದರೆ, ಆ ನೀರನ್ನು ಹೊರಕ್ಕೆ ಸೂಸುವ ಒಳಮುಗ್ಗಲಿನ ಭೂಮಿಯು ಸವುಳು ಇಲ್ಲವೆ ಸೀ ಇದೆ ಎಂದು ತಿಳಿಯುತ್ತೇವೆ. ಅದರಂತೆಯೇ ಶರೀ ರದ ಮತ್ತು ಅಹಂಕಾರದ ಚೇಷ್ಟೆಗಳು ದುಷ್ಟವಿದ್ದರೆ, ಒಳಗಿನ ಆತ್ಮವು ದುಷ್ಟವೆಂತಲೂ, ಶಿಷ್ಟವಿದ್ದರೆ ಶಿಷ್ಟವೆಂತಲೂ ಗುರುತಿಸ ಬಲ್ಲೆವು.

ಈ ದುಷ್ಟ ಶಿಷ್ಟ ಕ್ರಿಯೆಗಳು ಶರೀರದಿಂದ ಹೊರಬಿದ್ದು ಸೂಕ್ಷ್ಮ ವಾದ ರೂಪದಿಂದ ಪುನಃ ಆತ್ಮನನ್ನೇ ಹೊಂದುತ್ತವೆ. ಇದು ಸೃಷ್ಟಿಯ ನಿಯಮವು. ಸಮುದ್ರದಿಂದ ಮೋಡವಾಗಿ ಹೊರಬಿದ್ದ ನೀರು ಸಮು ದ್ರವನ್ನೇ ಸೇರುವದು.

ದುಷ್ಟ ಶಿಷ್ಟ ಕ್ರಿಯೆಗಳನ್ನು ಆತ್ಮನು ಸ್ಥೂಲ ಸೂಕ್ಷ್ಮ ಶರೀರಗಳಲ್ಲಿ ತಾನು ವ್ಯಾಪಿಸಿಯೇ ತೋರುವನು. ಆದ್ದರಿಂದ ಈ ಎರಡರಲ್ಲಿಯೂ ನಾನು ನಾನು ಎಂಬ ಮತಿಯು ಉಂಟಾಗುತ್ತದೆ. ಈ ಎರಡು ಶರೀರಗಳನ್ನು ಆತ್ಮನು ಸ್ಥೂಲರೂಪದ ತೋರಿಕೆಗಳೆಂದೆನ್ನಬಹುದು. ಆತ್ಮನು ಆಯಾ ಕಾಲಕ್ಕೆ ತನ್ನ ಕ್ರಿಯೆಗಳನ್ನು ಹೊರಪಡಿಸಲಿಕ್ಕೆ ತಕ್ಕವಾದ ಶರೀರಗಳನ್ನು ತಾಳಿ ಆಯಾ ಕ್ರಿಯೆಗಳ ಸಂದರ್ಭವು ತೀರಿದ ಬಳಿಕ ಬಿಟ್ಟುಬಿಡುವನು. ಅದುಕಾರಣ ಈ ಶರೀರಗಳಲ್ಲಿ ನನ್ನದು ಎಂಬ ಭೇದ ಬುದ್ಧಿಯಾದರೂ ತೋರುವದು. ನಾವು ನಮ್ಮ ಶರೀರಕ್ಕೆ ಒಮ್ಮೆ ನಾನು ಎಂತಲೂ ಒಮ್ಮೆ ನನ್ನದೆಂತಲೂ ಅನ್ನುತ್ತೇವೆ.

ದುಷ್ಟ ಶಿಷ್ಟ ಕಾರ್ಯಗಳಿಂದ ಸುಖ ದುಃಖಗಳೂ ಸ್ವರ್ಗ ನರಕಗಳೂ ಉಂಟಾಗುತ್ತವೆ. ಇದನ್ನು ತಪ್ಪಿಸುವದೇ ಲಿಂಗ ಧಾರಣದ ಮುಖ್ಯ ಉದ್ದೇಶವು.

## ತ್ರಿಲಿಂಗಗಳು.

ಆತ್ಮನಲ್ಲಿ ಭಕ್ತಿಯಂಕುರಿಸಲು ಅದು ಸ್ಥೂಲ ಸೂಕ್ಷ್ಮ ತನುಗಳಲ್ಲಿ ಹೊರಸೂಸುವದು. ಆ ಭಕ್ತಿಯಿಂದ ಇಷ್ಟಲಿಂಗ ಧಾರಣವೂ ಪ್ರಾಣ ಲಿಂಗ ಧ್ಯಾನವೂ ಉಂಟಾಗಿ, ಇವು ಮರಳಿ ಭಾವ ರೂಪದಿಂದ ಆತ್ಮನತ್ತ ಸಾಗುವವು.

ಸಾಕಾರವಾಗಿ ಪೂಜೆಯನ್ನೂ ಸಾಕಾರ ನಿರಾಕಾರವಾಗಿ ಧ್ಯಾನವನ್ನೂ ಜೀವಾತ್ಮನಿಂದ ಹೊಂದಿದ ಪರಮಾತ್ಮನು ನಿರಾಕಾರದಲ್ಲಿ ಆತ್ಮನ ಅಂತ ರಂಗದಲ್ಲಿ ಭಾವದಿಂದ ಸಾಮರಸ್ಯವನ್ನೂ ಹೊಂದುವನು. ಅಂದರೆ ಈ ಶಿವ ಜೀವಾತ್ಮರ ಲಿಂಗಾಂಗಗಳ ಸಾಮರಸ್ಯವು ಮೂರೂ ಶರೀರಗಳಲ್ಲಿಯೂ ಮೂರು ರೂಪದಿಂದ ಉಂಟಾಗುತ್ತದೆ.

" ಏತದ ತುದಿಯಲ್ಲಿ ಕಟ್ಟಿದ ಮಡಿಕೆಯಂತೆ, ಅದ ನೀತಿವಂತರು ಮೆಟ್ಟಿದರೆ ಪಾತಾಳದ ಉದಕವ ತಂದು ಪಾತೆಗೆ ಹರಹಿದ ತೆರದಂತೆ, ಸರ್ವ ಮಯದಲ್ಲಿ ಒಪ್ಪಿಪ್ಪ ವಸ್ತುವನರಿದು ನಿರ್ಜಾತನಾಗ ಬಲ್ಲರೆ, ಆತನೇ ಜೀವನ್ಮುಕ್ತ ನಿಷ್ಕಲಂಕ ಮಲ್ಲಿಕಾರ್ಜುನಾ "

ಏತದ ಗಣಿಗೆ ಒಂದು ಮಡಿಕೆಯನ್ನು ಕಟ್ಟಿ ಆ ಯಂತ್ರದ ಗುಟ್ಟು ತಿಳಿದ ತೋಟಿಗನು ಅದನ್ನು ಬಳಿಸಲು ಬಾವಿಯೊಳಗಿನ ನೀರನ್ನು ತಂದು ತೋಟದಲ್ಲಿರುವ ಮಡಿಗಳಿಗೆಲ್ಲಿ ಉಣಿಸುವನು. ಆತ್ಮನ ಮರೆಯಲ್ಲಿ ಪರಮಾತ್ಮನೆಂಬ ಜೀವನರಸವು ಅಡಗಿರುವದು. ಆತ್ಮನ ಮೂರು ಶರೀ ರಗಳು ಬಾವಿಯಂತಿವೆ. ಆಳವಾದ ಬಾವಿಯ ತಳದಲ್ಲಿ ನೀರಿರುವಂತೆ ಪರಮಾತ್ಮನು ಇರುವನು. ಈ ಮೂರು ಶರೀರವೆಂಬ ಬಾವಿಗೆ ನಿಷ್ಠೆ ಯೆಂಬ ಏತವನ್ನು ಕಟ್ಟಿ ಅದಕ್ಕೆ ಇಷ್ಟಲಿಂಗವೆಂಬ ಮಡಿಕೆಯನ್ನು ಸದಾ ಚಾರವೆಂಬ ಹಗ್ಗದಿಂದ ಬಿಗಿದು ಅರ್ಚನ ಮನನಗಳಿಂದ ಆ ಇಷ್ಟ ಲಿಂಗವನ್ನು ಒಳಗಿನ ಪರಮಾತ್ಮನೆಂದು ಗುರುತಿಸಿದರೆ, ಅದೇ ಮುಕ್ತಿಯು. ಇದೇ ಭಾವಲಿಂಗ ಸಂಬಂಧವು. ಇದನ್ನೇ ಶ್ರೀ ಸರ್ಪಭೂಷಣನು:

" ಬೆರೆಯ ಬಾರದೇ, ತಿಳಿದು ಬೆರೆಯಬಾರದೆ। ಮರೆದು ಬಾಹ್ಯವನ್ನು ತನ್ನ

ಕರದ ಖಂಡತೇಜದೊಡನೆ। " ಎಂದು ಯೋಗ ಮಾರ್ಗದಿಂದ ಹೇಳಿದನು.

ಇದನ್ನೇ ವಚನಕಾರರು ವಿಭೂತಿರುದ್ರಾಕ್ಷ ಧಾರಣವೇ ಇಷ್ಟಲಿಂಗ ಪೂಜೆ, ಪೂಜಾ ವಿಧಾನವೇ ಇಷ್ಟಲಿಂಗದಲ್ಲಿ ನ್ಯಸ್ತವಾದ ಪ್ರಾಣಲಿಂಗದ ಪೂಜೆ, ಶ್ರದ್ಧಾಭಕ್ತಿಯೇ ಇಷ್ಟಲಿಂಗದಲ್ಲಿ ನ್ಯಸ್ತವಾದ ಭಾವಲಿಂಗದ ಪೂಜೆ ಎಂದು ಭಕ್ತಿ ಮಾರ್ಗದಿಂದುಸುರಿದ್ದಾರೆ.

ಇದಕ್ಕೆಲ್ಲ " ಇಷ್ಟಲಿಂಗಂ ಪ್ರಾಣಲಿಂಗಂ ಭಾವಲಿಂಗಂ ಚ ಪಾರ್ವತೀ ಏಕೀಕೃತ್ಯಾರ್ಚನಂ ಕುರ್ಯಾದ್ವೀರಶೈವೋ ನ ಭೇದತಃ " ಎಂಬಿವೇ ಮೊದಲಾದ ಶಿವಾಗಮ ವಾಕ್ಯಗಳೂ " ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ" ಎಂಬಿವು ಮುಂತಾದ ನಿಗಮಾಂತ ವಿಧಿಗಳೂ ಮೂಲವಾಗಿವೆ.

" ಸರ್ವಲಿಂಗಂ " ಸರ್ವ ದೇಹದಲ್ಲೆಲ್ಲ ವ್ಯಾಪಿಸಿದ. " ಪಾಣಿಮಂತ್ರಂ " ಹಸ್ತದಲ್ಲಿ ಮನನ ಮಾಡುವುದರಿಂದ ರಕ್ಷಿಸುವ " ಪವಿತ್ರಂ " ಪಾಪ ಪುಣ್ಯಕ್ಕೆ ಕಾರಣವಾದ ಅಂತಃಕರಣಾದಿಗಳನ್ನು ಕಳೆವುದರಿಂದ ಜೀವನನ್ನು ಶಿವನನ್ನೇ ಮಾಡಿ ಪಾವನಗೊಳಿಸುವ ಲಿಂಗವನ್ನು ಹೊಂದ ತಕ್ಕದ್ದು ಎಂದು ಈ ವಿಧಿಯು ಇರುವುದರಿಂದ ಇಷ್ಟ ಪ್ರಾಣ ಭಾವ ಲಿಂಗಗಳು ಒಂದೇ ಎಂದು ತಿಳಿಯಲ್ಪಡುತ್ತದೆ.

ಲಿಂಗಂ ಸ್ಥಾಪಯತಿ ಅನ್ನುವುದರಿಂದ ಇಷ್ಟಲಿಂಗವೂ, " ಪಾಣಿ ಮಂತ್ರಂ " ಅನ್ನುವುದರಿಂದ ಇಷ್ಟಲಿಂಗದಲ್ಲಿ ಧ್ಯಾನವಾದ ಪ್ರಾಣಲಿಂಗವೂ "ಪವಿತ್ರಂ" ಎಂಬುದರಿಂದ ಪೂಜಾ ಧ್ಯಾನಜ್ಞಾನಗಳಿಂದ ಶರೀರಾಂತಃಕರಣ ಪ್ರಾಣಗಳು ಶುದ್ಧವಾದುದರಿಂದ ಆತ್ಮರೂಪದಿಂದ ತೋರುವ ಭಾವಲಿಂಗವೂ ಒಂದೇಯಾದುವೆಂದು ತಿಳಿಯಾಗಿ ಅರಿಯ ಬರುತ್ತದೆ.

ಇಂತಿದೆಲ್ಲದರ ತಾತ್ಪರ್ಯವು " ಭಾವದ ಹಸ್ತದಿಂ ಮನದ ಹಸ್ತತಲಕ್ಕೆ ಮನಃಕರಾಬ್ಜದಿಂ। ಪಾವನವಪ್ಪ ನೇತ್ರದ ಕರಕ್ಕೆ ತದೀಯ ಕರಾಂಬುಜಾತದಿಂ॥ ಕೋವಿದ ಚಕ್ರವರ್ತಿ ಗುರು ಕಾಯದ ಹಸ್ತಸರೋರುಹಕ್ಕೆ ಪೂ॥ ಜಾವಿಧಿ ಯೋಗ್ಯ ಲಿಂಗಮುಮನಿತ್ತ ಬಳಿಕ್ಕರಿದೇಂ ಶಿವಾಧವಾ॥ " ಎಂಬ ಮಾಯಿ ದೇವವಿಭುವಿನ ಪದ್ಯದಲ್ಲಿ ಅಡಗಿದೆ.

ಈ ಪರಿಯ ಸರಣಿಯಿಂದ ಮೂರು ಲಿಂಗಗಳ ಬಗೆಯನ್ನೂ ಅವು ಒಂದೇಒಂದು ಪದಾರ್ಥವಾದ ರೀತಿಯನ್ನೂ ತಿಳಿದೆವು.

**ಲಿಂಗನಷ್ಟವಾದರೆ ಪ್ರಾಣವನ್ನು ಅವಶ್ಯವಾಗಿ ಬಿಡಬೇಕು.**

ಪ್ರಾಣ ಭಾವಲಿಂಗಗಳಿಗೆ ಒಡಲಾದ ಇಷ್ಟಲಿಂಗವು ದೇಹದಿಂದ

ಎಂದಿಗೂ ಅಗಲಬಾರದು ಎಂದು ದೀಕ್ಷಾ ಕಾಲದಲ್ಲಿ ಗುರುವು ನಿರೂಪಿಸು ವನು. ಆ ನಿರೂಪದ ತತ್ವವು ಇದು ವರೆಗೆ ಮಾಡಿದ ವಿಚಾರದಿಂದ ಬುದ್ಧಿಗೆ ಹೊಳೆಯದೆ ಇರದು.

ಆದರೆ "ಪ್ರಮಾದಾತ್ಪತಿತೇ ಲಿಂಗೇ ಭಿನ್ನೇ ಚೋರಾದಿಭಿರ್ಹೃತೇ। ಪೀಠಾದುತ್ಕ್ರಮಿತೇವಾಪಿ ಸಹ ಪ್ರಾಣಾನ್ಪರಿತ್ಯಜೇತ್॥" ಎಂಬ ನುಡಿ ಯಿಂದ, ಲಿಂಗವು ಎಚ್ಚರಗೇಡಿತನದಿಂದ ಬಿದ್ದರೆ ಕಳ್ಳರು ಕದಿದರೆ, ಪೀಠದಿಂದ ಜಾರಿದರೆ, ಅದರೊಡನೆಯೇ ಪ್ರಾಣವನ್ನು ಬಿಡಬೇಕು ಎಂದು ಹೇಳುವದು ಸರಿಯಲ್ಲೆಂದು ಹಲವರ ಒಲವು.

ಈ ವಿಷಯವನ್ನು ಸೋಸಿ ನೋಡುವದು ಚನ್ನಾಗಿದೆ. ವಚನಶಾಸ್ತ್ರ ದಲ್ಲಿ ಇದಕ್ಕೆ ಬಲಗೊಡುವ ವಚನಗಳೂ ಹಲವಿವೆ.

**ಪ್ರತಿಯಿಲ್ಲದ ಲಿಂಗವು ಭಿನ್ನವಾಯಿತ್ತೆಂದು ತನುವಿನ ಮೇಲೆ ಶಸ್ತ್ರವ ನಿಕ್ಕಿಕೊಂಡು ಆತ್ಮ ಘಾತವ ಮಾಡಿಕೊಂಬ ದ್ರೋಹಿಯ ಮುಖವ ನೋಡಲಾಗದು. ಅದೆಂತೆಂದೊಡೆ ಮಂತ್ರಭಿನ್ನವಿಲ್ಲವಾಗಿ ಪೂಜೆ ಭಿನ್ನವಿಲ್ಲ. ಮಹಾ ಬಯಲೊಳಗಣ ಪ್ರಸಾದದ ಸಂಚವನ ರಿಯದೆ ಆತ್ಮ ಘಾತವ ಮಾಡುವ ನರಕಿಗಳನೇನೆಂಬೆನಯ್ಯ ಕೂಡಲ ಚನ್ನ ಸಂಗಮದೇವ?"**

ಇದು ಶ್ರೀ ಚನ್ನಬಸವನ ನುಡಿಯು. ಈ ತಿಳಿಗನ್ನಡ ವಚನವು ಬಾಲ ಕನಿಗೆ ಬೋಧವಾಗುವಂತೆ, ಲಿಂಗವು ಭಿನ್ನವಾದರೆ ಹರಣವನ್ನು ನೀಗು ವದು ಹೆಡ್ಡತನವೆಂದು ಹೇಳುತ್ತಿದೆ. ವೇದಾಗಮಂಗಳು ಧರ್ಮ ಬೋಧಕ್ಕೆ (ವೇದೋಽಖಿಲೋ ಧರ್ಮಮೂಲಂ) ಮುಖ್ಯ ಪ್ರಮಾಣವೆಂಬುದೊಂದು. "ಧರ್ಮಸ್ಯ ತತ್ವಂ ನಿಹಿತಂ ಗುಹಾಯಾಂ ಮಹಾಜನೋ ಯೇನ ಗತಃ ಸ ಪಂಥಾಃ" ಧರ್ಮ ತತ್ವಗಳು ಅತಿಗೂಢವು, ದೊಡ್ಡವರು ನಡೆ ದುದೇ ದಾರಿಯು ಎಂಬುದೊಂದು. ಇಂತಿವೆರಡರಲ್ಲಿ ಅವುದನ್ನು ಹಿಡಿ ಯಬೇಕು? ಯಾವದನ್ನು ತೊರೆಯಬೇಕು? ನಿಜವಾಗಿಯೂ ಇರುಕಿನಲ್ಲಿ ಸಿಕ್ಕು ಮನಸು ಮಿಸುಕದಾಗಿದೆ.

ವಚನಗಳ ತಾತ್ಪರ್ಯವು ಬಲುಗಡುಸು. ಹಿಂದಿನ ವಚನದ ಅರ್ಥವು ಮುಂದಿನ ವಚನಗಳಿಗೆ ವಿರೋಧವಾಗದಂತೆಯೂ ಮುಂದಿನ ವಚನ ದಿಂದ ಹಿಂದಿನ ವಚನವೂ ಹಿಂದಿನ ವಚನದಿಂದ ಮುಂದಿನ ವಚನವೂ ನಿರರ್ಥಕವಾಗದಂತೆಯೂ ಒಂದಕ್ಕೊಂದು ಹೊಂದುವಂತೆ ಅರ್ಥವನ್ನು

ತಿಳಿದುಕೊಳ್ಳುವದು ಶಾಸ್ತ್ರವಿಚಾರದ ಹಾದಿಯು.

ಮೇಲ್ಕಂಡ ವಚನದ ಅರ್ಥವು ಕೆಳಗೆ ಬರೆದ ಪ್ರಕಾರ ಇದೆ. ಈ ವಚನವು ಪ್ರಸಾದಿ ಸ್ಥಳದಲ್ಲಿಯದು. ಪ್ರಸಾದವು ಪ್ರಪಂಚವನ್ನೆಲ್ಲ ತುಂಬಿರುವ ಅನುಭವವನ್ನು ಹೇಳುವದರಲ್ಲಿ ಅದರ ಓಟವಿದೆ.

ಲಿಂಗವು ಭಿನ್ನವಾಯಿತ್ತು, ನಾನು ಲಿಂಗ ಬಾಹ್ಯನಾದೆನು, ಎಂಬ ಬುದ್ಧಿಯಿಂದ ಶಸ್ತ್ರವನಿಕ್ಕಿಕೊಂಬವನು ಪ್ರಸಾದವೆಂಬ ಶಿವನ ಆನಂದ ಸ್ವರೂಪವು ಮಹಾ ಬಯಲೆಂಬ ಆತ್ಮ ಸ್ವರೂಪದಲ್ಲಿ ಸಂಚವಾದ ರೀತಿಯನ್ನು ತಿಳಿದವನಾಗಲಿಲ್ಲ. ಆದುದರಿಂದ ಆತನು ಭವಿಯು. ಶಿವಾತ್ಮರುಗಳ ನಿತ್ಯ ಸಂಬಂಧವನ್ನು ತಿಳಿಯಲಿಕ್ಕಾಗಿ ಲಿಂಗಾಂಗಿ ಧರ್ಮವು. ಅದನ್ನು ತಿಳಿಯದೆ ಲಿಂಗವು ಭಿನ್ನವಾಯಿತ್ತೆಂದು ಪ್ರಾಣವನ್ನು ನೀಗುವವನು ಆತ್ಮದ್ರೋಹಿಯು. ಲಿಂಗವು (ಬಾಹ್ಯ ದೃಷ್ಟಿಯಿಂದ) ಭಿನ್ನವಾದರೂ ತನಗೆ ಗುರುವು ಲಿಂಗವನನುಗ್ರಹಿಸುವಲ್ಲಿ ದಯೆಗೆಯ್ದ ಮಂತ್ರವು (ಶಿವಾತ್ಮರುಗಳ ಸಾಮರಸ್ಯ ಬೋಧಕ ವಾಕ್ಯವು) ಭಿನ್ನವಾಗಿಲ್ಲ. ಅದ್ದರಿಂದ ಆ ಸಾಮರಸ್ಯದ ಚಿಂತನವೆಂಬ ಪೂಜೆಯು ಭಿನ್ನವಾಗಿಲ್ಲ.

ಆದುದರಿಂದ ಲಿಂಗವು ಭಿನ್ನವಾಯಿತ್ತೆಂದು ಖಂಡಿತ ಬುದ್ಧಿಯಿಂದ ಶಸ್ತ್ರ ಪ್ರಯೋಗವನ್ನು ಮಾಡಬೇಡ. ಈ ಮೇರೆಗೆ ಈ ವಚನವ ತಾತ್ಪರ್ಯವಿದೆ. ಆದರೆ ಇದರ ಮೇಲಿಂದ ಪುನಃ ಲಿಂಗಧಾರಣೆಯನ್ನು ಮಾಡಿಕೊಳ್ಳೆಂದಾಯ್ತೆ? ಇಲ್ಲ. ಇದು ಆಗದು. ಈ ವಚನದಲ್ಲಿ ಮತ್ತೊಂದು ಲಿಂಗ ಧಾರಣವನ್ನು ಮಾಡಲಿಕ್ಕೆ ಹೇಳಿದ ನುಡಿಗಳಿಲ್ಲ.

ಲಿಂಗ ಧಾರಣವನ್ನು ಮಾಡಿಕೊಳ್ಳದೆ ಪೂರ್ಣತ್ವದ ಚಿಂತನದಿಂದ ಲಿಂಗಾನುಸಂಧಾನಿಯಾಗಿ ಜೀವಿಸಬೇಕೆಂದಾದರು ಇದರ ಅರ್ಥವೇ? ಇದೂ ಆಗದು.

"ಅಂಗದ ಮೇಲೆ ಲಿಂಗವಿಲ್ಲದನ್ನಕ್ಕರ ಪ್ರಾಣದಲ್ಲಿ ಲಿಂಗಪರಿಣಾಮವನ್ನೈದುವ ಪರಿಯೆಂತಯ್ಯ. ಅಂಗತ್ರಯವುಳ್ಳವರು ಲಿಂಗತ್ರಯಸಂಪನ್ನರಾಗಬೇಕು. ಒಂದಂಗ ವಿರಹಿತರಾಗಿಪ್ಪವರುಂಟೆ? ಒಂದಂಗವ ಬಿಟ್ಟು ಒಂದಂಗ ತೋರದಾಗಿ ಸಂದು ಭೇದವಿಲ್ಲದಿಪ್ಪ ಮಡಿವಳನ ನಿಲವು ಕೂಡಲ ಚನ್ನಸಂಗನಲ್ಲಿ ನಿನಗೆಂತು ಸಾಧ್ಯವಾಯಿತ್ತು ಹೇಳಾ"

ಅಂಗತ್ರಯವುಳ್ಳವರು ಲಿಂಗತ್ರಯ ಸಂಪನ್ನರಾಗಬೇಕು. ಎಂಬ ವಚನಕ್ಕೆ ವಿರೋಧವಾಗುವದು. ಇದು ಲಿಂಗಧಾರಣವ ಅವಶ್ಯಕತೆಗಾಗಿ

ಹೇಳಿದ ವಚನವು. ಲಿಂಗಧಾರಣಾನಂತರದಲ್ಲಿ ಲಿಂಗವು ಭಿನ್ನವಾದ ಸಂದರ್ಭಕ್ಕೆ ಈ ವಚನವು ಹತ್ತಲಾರದು ಎಂದರೆ ಸರಿಯಾಗದು. ಭಿನ್ನವಾದ ಬಳಿಕ ಮಂತ್ರಾನುಸಂಧಾನದಿಂದಲೆ ಕಾರ್ಯವಾಗುತ್ತಿದ್ದರೆ ಮೊದಲಿಗೆ ಏಕಾಗಬಾರದೆಂದು ಹೇಳಲಿಕ್ಕೆ ಬರಲಾರದು.

ಆದುದರಿಂದ ಲಿಂಗ ಧಾರಣವಿಲ್ಲದೆ ಉಳಿಯಬಹುದೆಂಬ ಪಕ್ಷವು ಸರಿದೋರುವದಿಲ್ಲ.

ಮೇಲ್ಕಂಡ ವಚನದಲ್ಲಿ ಪುನಃ ಲಿಂಗಧಾರಣೆ ಮಾಡಿಕೊಳ್ಳಬೇಕೆಂಬ ಮಾತುಗಳಿಲ್ಲವೆಂದು ನೀವು ಮೇಲೆ ಹೇಳಿದಿರಲ್ಲ! ಹೀಗೆ ಮಾತುಗಳಿಲ್ಲ ದಿದ್ದರೂ, ವಸ್ತು ಸ್ವಭಾವದಿಂದ ಲಿಂಗ ಧಾರಣವಾಗಬೇಕೆಂದು ಅನ್ನಬ ಹುದು. ಲಿಂಗವು ಭಿನ್ನವಾಯಿತ್ತು, ಹೀಗೆ ಒಂದು ಒಡಲು ಲಿಂಗರಹಿ ತವಾಗಿರುವ ಸ್ಥಿತಿಯು ಅನುಚಿತವು. ಆದ್ದರಿಂದ ಪುನರ್ಲಿಂಗಧಾ ರಣೆಯೇ ಅವಶ್ಯವು ಎಂದು ಅನ್ನಬಹುದು.

ಆವರೆ ಇದು ಆಗದು. ಯಾಕಂದರೆ ಸಂಸಾರಹ್ಯೇಯವು ಉಂಟಾಗಿ ದೀಕ್ಷಾ ಗುರುವಿನಲ್ಲಿ ಲಿಂಗ ಧಾರಣವಾಗಿರುತ್ತದೆ. ಹೀಗೆ ಲಿಂಗ ಧಾರ ಣದನಂತರ ಲಿಂಗ ಭಿನ್ನವಾಗಲು ಪುನರ್ದೀಕ್ಷೆ ಕೊಡುವ ಗುರುವಿರಲಾ ರನು. ಯಾಕಂದರೆ ಅತನು ಮೊದಲಿನ ಗುರುವ ಬಳಿಯಲ್ಲಿಯೇ ಸಾರ ಬೇಕು. ಆವರೆ ಈ ದೀಕ್ಷಾ ಗುರುವು ಲಿಂಗ ಧಾರಣ ಕಾಲದಲ್ಲಿ ಲಿಂಗ ಭಿನ್ನವಾಗಲು ಪ್ರಾಣವನ್ನು ನೀಗೆಂದು ಹೇಳಿರಲು ಮತ್ತೊಮ್ಮೆ ಲಿಂಗ ಧಾರಣವನ್ನು ಹ್ಯಾಗೆ ಮಾಡುವನು?

ಇದಕ್ಕೆ ನೀವು ಮಂತ್ರವು ಭಿನ್ನವಾಗಿಲ್ಲ ಅಂದ ಬಳಿಕ ತನುವಿಗೆ ಆದ ಲಿಂಗ ಸಂಸ್ಕಾರವು ಲಿಂಗ ಭಿನ್ನವಾದರೂ ಅಳಿಯದು. ಅದರಿಂದ ಒಂದು ಅಂಗಕ್ಕೆ ಭವಿತ್ವವೂ ಎರಡಂಗಗಳಿಗೆ ಭಕ್ತಿಯೂ ಎಂಬ ದೂಷ ಣವು ಉಂಟಾಗಲಾರದು. ತನುವೇ ಇಷ್ಟ ಲಿಂಗರೂಪವೆಂದು ತಿಳಿಯ ಬಹುದು.

ಆದರೆ ಇದಾಗದು. "ದೇವಂಗಾಗಲಿ ಭಕ್ತಂಗಾಗಲಿಜಂಗಮಕ್ಕಾಗ ಲಿ ಸದಾಚಾರ ಬೇಕಲ್ಲವೆ, ಅ ಸದಾಚಾರವುಳ್ಳವರಿಗೆ ಅನಾಚಾರ ಹೊದ್ದ ಲಾಗದು. ಅನಾಚಾರವೆಂದರೆ ಅನಾಯುತ. ಅನಾಯುತವೆಂದೊಡೆ ಅನು ಸರಣೆ. ಅನುಸರಣೆ ಎಂಬುದೆ ಅಂಗದಿಚ್ಛೆ. ಅಂಗದಿಚ್ಛೆ ಎಂಬುದೇ ಅನಾ ಚಾರ. ಅನಾಚಾರವೆಂಬುದೇ ಪಂಚಮಹಾಪಾತಕ. ಇದು ಕಾರಣವಾ

ಗಿ ಕೂಡಲ ಚೆನ್ನ ಸಂಗಯ್ಯನಲ್ಲಿ ಆಚಾರವಂತನೆನಿಸಿಕೊಂಡ ಬಳಿಕ ಅನಾಚಾರಕ್ಕೆ ಅನುಸರಣೆಯ ಮಾಡಿದರೆ ಆಚಾರ ಭ್ರಷ್ಟರಿಗೆ ಅನುಸರಿಸಿ ನಡೆದರೆ ಅಘೋರ ನರಕ ತಪ್ಪದು ನೋಡಿರೆ" ಎಂದು ಮಾಹೇಶ್ವರ ಸ್ಥಲಕ್ಕೆ ಇದು ವಿರುದ್ಧ ವರ್ತನೆಯಾಗುವುದು. ಲಿಂಗಧಾರಣವು ಆಚಾರವು. ಅದಕ್ಕೆ ವಿರೋಧವಾದ ಕಾರ್ಯವನ್ನು ಸಮಯಬಂದಂತೆ, ಮಾಡುವುದು ಅನಾಯತವು. ಅಂದರೆ ಅನಾಚಾರವು. ಹೀಗೆ ಅನಾಚಾರದಿಂದ ನಡೆವುದೂ ಅನಾಚಾರಿಗಳ ಅನುಸರಣೆಯನ್ನು ಮಾಡುವುದೂ ನರಕಕ್ಕೆ ಕಾರಣವು, ಎಂದು ಈ ವಚನವು ಸಾರುತ್ತಿದೆ. ಆದ್ದರಿಂದ ಲಿಂಗವು ಭಿನ್ನವಾಯ್ತೆಂದು ದೇಹದಾಸೆಯಿಂದ ಲಿಂಗರಹಿತನಾಗಿರುವುದು. ಆಚಾರವೆನಿಸದು.

ಇದಲ್ಲದೆ ಪ್ರಸಾದಿ ಸ್ಥಳದ ಮುಂದೆ ಪ್ರಾಣಲಿಂಗ ಸ್ಥಳದಲ್ಲಿ ಕೆಳಗೆ ಕಾಣಿಸಿದ ವಚನಗಳು ಇವೆ.

"ತನುಗುಣಗ್ರಹನಾಗದಿರಬೇಕು. ಮನಗುಣಗ್ರಹನಾಗದಿರಬೇಕು. ಧನ ಗುಣಗ್ರಹನಾಗದಿರಬೇಕು. ಆಗದಿರ್ದೊಡೆ ಲಿಂಗಗ್ರಹನಾಗಿರಬೇಕು. ನಮ್ಮ ಕೂಡಲಚೆನ್ನ ಸಂಗಯ್ಯನಲ್ಲಿ"

'ಅಂಗಸಂಗಿಯಾದವಂಗೆ ಲಿಂಗಸಂಗವಿಲ್ಲ. ಲಿಂಗಸಂಗಿಯಾದವಂಗೆ ಅಂಗಸಂಗವಿಲ್ಲ. ಲಿಂಗಸಂಗವೆಂಬುದೇ ಸದಾಚಾರ. ಅಂಗಸಂಗವೆಂಬುವದೆ ಅನಾಚಾರ. ಇದು ಕಾರಣವಾಗಿ ಅಂಗಸಂಗವುಂಬಿಟ್ಟು ಲಿಂಗಸಂಗವಾಗಿರಬೇಕು ನಮ್ಮ ಕೂಡಲಚೆನ್ನಸಂಗಯ್ಯನಲ್ಲಿ"

ಎಂಬಿವೆ ಮೊದಲಾದ ವಚನಗಳಲ್ಲಿ ತ್ರಿವಿಧಕಾಯಕ್ಕೆ ತ್ರಿಲಿಂಗ ಸಂಬಂಧವನ್ನು ತಪ್ಪಬಾರದಂತೆ ಹೇಳಿರುವನು.

ಈ ವಿಚಾರಕ್ಕೆ ವಿಷಯವಾದ ಆರಂಭದಲ್ಲಿ ವಿವರಿಸಿದ ಶ್ರೀಚೆನ್ನಬಸವನ ವಚನವು ಪ್ರಸಾದದ ಪರಿಪೂರ್ಣತೆಯನ್ನು ಹೇಳುವದೇ ಹೊರ್ತು, ಲಿಂಗವು ಭಿನ್ನವಾದರೆ ಮಂತ್ರ ಸಂಬಂಧದಿಂದ ಹಾಗೆ ಉಳಿಎಂಬುದನ್ನು ತೋರಿಸಲಿಕ್ಕೆ ಶಕ್ತವಲ್ಲ; ಇದು ಲಿಂಗವು ಭಿನ್ನವಾದರೆ ಪ್ರಾಣವನ್ನು ನೀಗಬೇಕೆಂಬ ಗುರ್ವಾಜ್ಞೆಗೆ ವಿರೋಧಿಯಾಗಿದೆ. ಆದರಿಂದ ಈ ಅರ್ಥವು ನಿರರ್ಥವು.

ಲಿಂಗವು ಭಿನ್ನವಾದೊಡನೆಯೆ ತಾನು ಭವಿಯಾದೆನೆಂದು ಭಾವಿಸಲು ಭವಿತ್ವವು ಬಂದಿತು. ತದನಂತರದಲ್ಲಿ ಶಸ್ತ್ರವನಿಕ್ಕಿಕೊಂಡರೆ ಭವಿತ್ವವು

ದೂರಾಗಲಿಲ್ಲ. ನರಕವೇ ಗತಿಯು. ಆದರೆ ಮಂತ್ರಾನುಸಂಧಾನದಿಂದ ಯೋಗಮಾರ್ಗದಿಂದ ಶಿವೈಕ್ಯನಾಗಬೇಕು ಎಂಬುದೇ ವಚನದ ತಾತ್ಪರ್ಯವು.

---

# ಶಿವಯೋಗಿಯ ಲಕ್ಷಣಗಳು.

ಈ ನಶ್ವರ ಜಗತ್ತಿನಲ್ಲಿ ಸಾಂಪ್ರತ ಕಾಲಕ್ಕೆ ಬಹಿರಂಗ ಆಡಂಬರವು ನಿಜವಾದ ಪವಿತ್ರತೆಯನ್ನು ದಬ್ಬಿಡಲು ಯತ್ನ ಮಾಡಿ, ಕೆಲ ಹೊತ್ತು ವಿಜಯ ದುಂದುಭಿಯನ್ನು ಹೊಡೆಯುತ್ತದೆ. ಆದರೆ ಈ ದುಂದುಭಿಯ ನಿನಾದವು ಕೇವಲ ನಿಸ್ತೇಜವು. ಇದು ಬರೇ ನಾಮಧಾರೀ ಧರ್ಮ ಪ್ರವರ್ತಕರನ್ನು ಮಾತ್ರ ಕುಣಿಸುತ್ತಿದೇ ಹೊರ್ತು ನಿಜವಾದ ಶಿವಯೋಗಿಗಳ ಅಥವಾ ಶಿವಶರಣರ ಮೇಲೆ ಯಾವರೀತಿಯಿಂದಲೂ ಪರಿಣಾಮ ಮಾಡಲಾರದು. ಈ ಸಂಗತಿಯು ಶಿವಯೋಗಿಗಳ ಲಕ್ಷಣವನ್ನು ಸೂಕ್ಷ್ಮರೀತಿಯಿಂದ ಅವಲೋಕನ ಮಾಡಿದರೆ ಚನ್ನಾಗಿ ತಿಳಿದು ಬರುತ್ತದೆ.

ಕೆಳಗೆ ಬರೆದ ಮಹಾಜ್ಞಾನಿ ಶಿವಯೋಗಿಗಳ ಲಕ್ಷಣಗಳನ್ನು ವಾಚಕರು ವಿಚಾರಮಾಡಿ ಸಮಾಜದಲ್ಲಿಯ ನಾಟಕೀ ಶರಣರೊಡನೆ ಜಾಗರೂಕರಾಗಿ ವರ್ತಿಸಬೇಕೆಂದು ನನ್ನ ಸೂಚನೆ ಇದೆ.

ಶಿವಯೋಗವೆಂದರೆ ಸ್ಥಾವರ ಗುಡಿಯಲ್ಲಿಯ ಶಿವಲಿಂಗಕ್ಕೆ ತೀರ ನಿಕಟವಾಗಿ ಕೂತುಕೊಂಡು ಅಥವಾ ಇಷ್ಟ ಲಿಂಗವನ್ನು ಗಂಧಾಕ್ಷತಾದಿ ದ್ರವ್ಯಗಳನ್ನು ತೆಗೆದುಕೊಂಡು ಬಾಯಿಂದ ಮಂತ್ರಗಳನ್ನು ಅನ್ನುತ್ತ ಪೂಜಿಸುವದು ಅಲ್ಲ. ಇದೇ ನಿಜವಿದ್ದರೆ, ಪ್ರತಿಯೊಬ್ಬನು, ಆತನು ಯಾವನೇ ಇರಲೊಲ್ಲನೇಕೆ, ಈ ಪ್ರಕಾರ ಲಿಂಗಪೂಜೆ ಮಾಡುತ್ತಿದ್ದರೆ, ಆತನೇ ಶಿವಯೋಗಿಯು ಅಥವಾ ಶರಣನು ಅನ್ನಬೇಕಾಗುತ್ತದೆ. "ಆಪೂಲಿಯಾ ಜೀವೆ ಶಿವಾಸಿ ಪಾಹಾವೆ ಆತ್ಮಸುಖ ಘ್ಯಾವೇ ವೇಳುವೇಳಾ" ತನ್ನ ಜೀವದಿಂದ ಶಿವನನ್ನು ನೋಡಿ ಅಖಂಡ ಆತ್ಮಸುಖ ಅನುಭವಿಸುವ ಸಂಗನ ಶರಣನಿಗೆ ಶಿವಯೋಗಿ ಅನ್ನಬೇಕು. ಅಘಟಿತ ಸತ್ತಾಶಾಲಿಯಾದ ಸತ್ಯ ಸುಂದರನಾದ ಶ್ರೀಗುರುವಿನ ಕಡೆಯಿಂದ ಪ್ರಬೋ

ಥ ಚಂದ್ರನನ್ನು ಧರಿಸಿದನಂತರ ಶಿಷ್ಯನ ಅಂತರಂಗದಲ್ಲಿಯ ಆತನ ಅ
ಖಂಡ ನಾಮಸುಧಾಪಾನದಿಂದ ಆತನ ಶರೀರವಾದರೂ ದೈವೀತೇಜಸ್ಸಿ
ನಿಂದ ಚಕಚಕಿತವಾಗಿ ಹೊಳೆಯ ಹತ್ತುತ್ತದೆ. ಶಿವಯೋಗವೆಂದರೆ ಪರ
ಶಿವಯೋಗ. ಅಂದರೆ ಸ್ವರೂಪಾನು ಸಂಧಾನವು. ಅಲಕ್ಷ್ಯ ನಿಜರೂಪ
ದಲ್ಲಿ ಲಕ್ಷ ಹತ್ತಿದ್ದರಿಂದ ಶಿವಾನು ಸಂಧಾನ ನಡೆದ "ಶಿವಯೋಗಿಗೆ ತೋರಿ
ಕೆಯಲ್ಲಿ ಭಿನ್ನತೆ ಇದ್ದರೂ, ಅದರ ಅರಿವು ಇರುವದಿಲ್ಲ. ಈ ಪ್ರಕಾರ
ಅಸ್ಖಲಿತ ಆತ್ಮ ವಿವರಣೆಯಿಂದಲೇ ಶಿವಯೋಗಿತ್ವವು ಬರುತ್ತದೆ. ಈ ತ
ಲ್ಲೀನತೆಯಲ್ಲಿಯೇ ಸಿದ್ಧತೆಯು ಪ್ರಕಾಶವಾಗುತ್ತದೆ. ಪರಶಿವನು ಯಾ
ರಿಗೆ ಪ್ರಾಣಾಧಾರ ನಾಗಿರುವನೋ, ಅವರಿಗೆ ಮಾತ್ರ ಶಿವಶರಣರೆನ್ನು
ತ್ತಾರೆ. "ಅಷ್ಟದಳ ಕಮಲದಲ್ಲಿ ನಿಶ್ಚಿಸಿ ಇದ್ದ ಪ್ರಣವದ ನೆಲೆಯ ಅರಿ
ವರಿಗೆ ಶಿವಶರಣರೆನಿಸಬಹುದು." ಒಂದು ನಿಮಿಷಾರ್ಧವಾದರೂ ಖಂಡ
ಬೀಳಗೊಡದೆ, ಜಾಗ್ರತ್ ಸ್ವಪ್ನ ಸುಷುಪ್ತಿ ಮೊದಲಾದ ಅವಸ್ಥೆಗಳಲ್ಲಿ
ನಿಜರೂಪಾನು ಸಂಧಾನದಲ್ಲಿ ಇರುವದು ಶಿವಶರಣರ ಅಂದರೆ ಶಿವಯೋ
ಗಿಗಳ ಮುಖ್ಯ ಲಕ್ಷಣವಾಗಿರುವದರಿಂದ ಅವರು ಲೋಕದಲ್ಲಿ ಇದ್ದರೂ,
ಲೋಕವ್ಯತಿರಿಕ್ತರಾಗಿದ್ದಾರೆ. ಈ ತೆರದ ಸಾಮರಸ್ಯದಲ್ಲಿ ವಿಲೀನನಾದ
ವೀರಶೈವನಿಗೆ ಸಂಸಾರ ಚಿಂತೆಯು ಕಡೆದು ಹೋಗಿ ಲಿಂಗದ ನಿರೂಪ
ಣೆಯ ಮಮತೆಯೇ ಆತನಿಗೆ ಹತ್ತಿರುತ್ತದೆ. "ಲಿಂಗಮುಟ್ಟಿ ಲಿಂಗವಾದ
ಬಳಿಕ ಭವಿ ಇಲ್ಲ ಕಾಣಾ ಕೂಡಲಸಂಗಮದೇವಾ." ಈ ಉಕ್ತಿಯಂತೆ
ಆತನು ಸ್ವಸ್ವರೂಪ ಸ್ವತಃ ಸಿದ್ಧನಾಗುತ್ತಾನೆ. ಕೇವಲ ದೃಶ್ಯಮತ್ತು ನ
ಶ್ಯ ಭಗವೀವಸ್ತ್ರ ರುದ್ರಾಕ್ಷಿ ಮೊದಲಾದವುಗಳನ್ನು ಧರಿಸುವ ಮಾತ್ರದಿಂ
ದ, ಅಂದರೆ ಯಾರಾದರೂ ಕೂಡ ಸಾಧ್ಯಮಾಡಿಕೊಳ್ಳಲಿಕ್ಕೆ ಬರುವಂ
ಥ ವಸ್ತುಗಳ ಧಾರಣೆಯಿಂದ ಶಿವಯೋಗಿತ್ವವು ಎಂದಿಗೂ ಬರಲಾರದು.
ಮೇಲೆ ನಿವೇದಿಸಿದ ಶಿವಯೋಗಿಯ ಲಕ್ಷಣಗಳು ಲೌಕಿಕ ರೀತಿಯಿಂದ
ಒಂದು ಕುಲದಲ್ಲಿ ಜನಿಸಿದ ಮನುಷ್ಯನಲ್ಲಿಯೇ ಇರುತ್ತವೆ. ಅಥವಾ ಸ್ಥೂ
ಲ ಮಾನದಿಂದ ಒಳ್ಳೇ ಮಡಿಯಿಂದ ತ್ರಿಕಾಲ ಸ್ನಾನ ತ್ರಿಕಾಲ ಇಷ್ಟ
ಲಿಂಗ ಪೂಜೆ ಮಾಡುವವನಲ್ಲಿಯೇ ಇರುತ್ತವೆ ಹೀಗೇನೂ ಇಲ್ಲ. ಮ
ತ್ತು ಹೊನ್ನು ಮಣ್ಣು ಹೆಣ್ಣು, ಛತ್ರ ಚಾಮರಾದಿ ವೈಭವದಲ್ಲಿ ಸಿಕ್ಕ
ಮಾನವನಿಗಂತೂ ಶಿವಯೋಗಿಯ ಪದವು ಎಂದಿಗೂ ಸಿಗಲಾರದು.
ನಿಜವಾದ ಶಿವಯೋಗಿಗೆ ಸತಿ, ಸುತ, ದ್ರವ್ಯ ಮುಂತಾದವುಗಳು ಇರಬ
ಹುದು. ಅಥವಾ ಇಲ್ಲದೆ ಇರಬಹುದು. "ಪರಧನ ಒಲ್ಲದಿರ್ಪುದೇ ಆತ

ನ ವ್ರತ ಪರಸ್ತ್ರೀ ಮುಟ್ಟದಿರ್ಪುದೇ ಆತನ ಶೀಲ. ಹಿಂಸೆಯ ಮಾಡ ದಿರ್ಪುದೇ ಆತನ ನೇಮ. ತಥ್ಯ ಮಿಥ್ಯ ಇಲ್ಲದಿಪ್ಪುದೇ " ಮಂತಾದ ಸೂ ಕ್ಷ್ಮ ನಿಯಮಾದಿಗಳಿಂದ ಆಶಾಪಾಶವನ್ನು ಕೆಡಿಸಿ ಶ್ರೀಗುರುಧ್ಯಾನದಲ್ಲಿಯೇ ಈ ಶಿವಯೋಗಿಯು ರತನಾಗಿರುತ್ತಾನೆ. ಈ ಪ್ರಕಾರದ ಶಿವಯೋಗಿಯು ಲಕ್ಷಣಗಳು ಸಾಧನವಿಲ್ಲದೆ ಅಂತರಂಗದಲ್ಲಿ ಪ್ರತಿ ಬಿಂಬಿಸಲಾರವು. ಇಂಥ ಸಂದೇಹ ರಹಿತ ಶಿವಯೋಗಿಯು ಅಂತರ್ಬಾಹ್ಯದಲ್ಲಿ ಸಮಾಧಾನ ಹೊಂ ದಿ ಷಡ್ವರ್ಗ ಅಥವಾ ತ್ರಿಪುಟಿಯಿಂದ ಅಪರಾಜಿತನಾಗಿ ಸ್ಥಿರಪ್ರಜ್ಞೆಯು ಳ್ಳವನಾಗಿರುತ್ತಾನೆ. ಮತ್ತು ಆತನು ಸ್ಥೂಲ ದೇಹದಿಂದ ಚಂಚಲನಂತೆ ಕಂಡ್ಡಾಗ್ಯೂ ನಿಶ್ಚಲನು ಮತ್ತು ಆತನ ನಿಶ್ಚಲದ ತೋರಿಕೆಯಲ್ಲಿಯೂ ಚಂಚಲತೆಯು ಇರಬಹುದು. ನಿಜ ಸುಖ ಗುಣ ವಿಶ್ರಾಮದಲ್ಲಿ ಈ ನ ಮ್ಮ ಯೋಗಿಯು ದೇಹಭಾವವನ್ನು ಕಡಿದುಕೊಂಡು ಶ್ರಾಂತನಾದಬಳಿ ಕ, ಆತನು ಬಿದ್ದು ಇರಲಿ ಅಥವಾ ಎದ್ದು ಓಡಲಿ ಚಲನೆಯನ್ನು ಹೊಂ ದಲಾರನು. ಯಾಕಂದರೆ ಆತನ ಅಂತರಂಗವು ಭಗವಂತನ ಪಾದಾರ ವಿಂದದಲ್ಲಿ ಮಗ್ನವಾಗಿರುವದರಿಂದ ಬಾಹ್ಯದಲ್ಲಿ ಯಾವದೇ ಸ್ವರೂಪ ಇದ್ದ ರೂ, ಆತನು ಅಂತರಂಗದಲ್ಲಿ ನಿವೃತ್ತಿಯುಳ್ಳವನು ಆಗಿರುತ್ತಾನೆ.

"ಅದ್ವೈತವನು ಬಾಹ್ಯದೊಳು ಬಳಸದಿರು. ಮನಸಿಗೆ ಬಂದಂತೆ ಆರಿಗೂ ನುಡಿಯದಿರು " ಎಂಬ ಶ್ರೀ ನಿಜಗುಣ ಶಿವಯೋಗಿಗಳ ಮತಾ ನು ಸಾರವಾಗಿ ಜಾತಿರೀತಿಗಳ ಪ್ರಕಾರ ಅಷ್ಟಾವರಣಗಳನ್ನು ನಿತ್ಯ ಆಚರಿಸಿ ಅಹೋರಾತ್ರೆ ನಿರ್ವಾಣ ಲಿಂಗಪೂಜೆಯಿಂದ ಐಕ್ಯಸ್ಥಲವನ್ನು ಹೊಂದಿ ಝೇಂಕಾರ ನಿಜಲಿಂಗ ಪ್ರಭು ದೇವರು ವರ್ಣಿಸಿದ ನಿಷ್ಕಲ ಸ್ಥ ಲದಲ್ಲಿ " ಅಘಟಿತ ಅಪರಂಪಾರ ನಿರಾಳ ಸ್ವಯಂ ಸ್ವರೂಪವಾದ ಅತ್ತ ತ್ತಲೇ ತನ್ನ ತಾನೇ ನೋಡಾ " ಎಂಬ ಪದವಿಯನ್ನು ಹೊಂದಿ ಲೀನನಾ ಗುತ್ತಾನೆ. ಆದ್ದರಿಂದ ಪ್ರತಿಯೊಬ್ಬ ಶಿವಯೋಗಿ ಶಿವಶರಣನು ತನ್ನ ಧ ರ್ಮ ಕರ್ಮಗಳನ್ನು ತ್ಯಜಿಸದೆ ಸ್ವರೂಪಾಕಾರವನ್ನು ಅಭ್ಯಾಸಿಸಬೇಕು. ಜನರು ನಿಜಸ್ವರೂಪ ಬಿಟ್ಟಿದ್ದರಿಂದ ನಾನು ಶರಣ, ನಾನು ಜಂಗಮ ನಾನು ಭಕ್ತ ಎಂಬ ಸೋಗುಗಳನ್ನು ಹಾಕಿಕೊಂಡು ಹೊನ್ನು ಹೆ ಣ್ಣು ಮಣ್ಣು ಈ ಮೂರರ ಅಭಿಮಾನದ ಬೊಗರೆಯಲ್ಲಿ ಸಿಕ್ಕು ಅನುಪ ಮವಾದ ಈ ನರದೇಹವನ್ನು ಮಣ್ಣುಗೂಡಿಸಿ ಹುಚ್ಚರಾಗಿ ತಿರುಗುತ್ತಾರೆ. ಅಖಿಲ ಮಾನವ ಜಾತಿಯೊಳಗಿನ ಇಂಥ ಜೊಳ್ಳು ಶಿವಯೋಗಿಗಳ ಮ

ತ್ತ ಶರಣರ ವಿಧ್ವಂಸವು ಎಷ್ಟು ತೀವ್ರವಾಗಿ ಆದೀತು ಅಷ್ಟು ಭೂದೇವತೆಗೆ ವಿಶ್ರಾಂತಿಯು ಆಗುವದು. ಸ್ವರೂಪದಿಂದ ಕಲ್ಪನೆಯು ತುಂಬಿದ ಬಳಿಕ ಕಾಮನೆಯು ಎಲ್ಲಿ ಉಳಿಯುವದು ?

ಆದ್ದರಿಂದ ಶಿವಶರಣನಿಗೆ ಅಂತರಂಗದಲ್ಲಿ ಕಾಮನೇ ಇರುವದಿಲ್ಲ. ಎಲ್ಲವೂ ಮಂಗಲ ಸ್ವರೂಪವೇ ಹೊರ್ತು ಮತ್ತೊಂದು ಏನೂ ಆತನಿಗೆ ಇರುವದಿಲ್ಲ. ಅಂದಬಳಿಕ ಆತನು ಕ್ರೋಧವನ್ನು ಯಾರಮೇಲೆ ಮಾಡಬೇಕು? ಆದ್ದರಿಂದ ಸಂಗನ ಶರಣರು ಚರಾಚರ ವಸ್ತುಗಳ ಬಗ್ಗೆ ಕ್ರೋಧ ರಹಿತರಾಗಿ ವರ್ತಿಸುತ್ತಾರೆ. ಅವರು ತಮ್ಮ ತಾವೇ ಸ್ವಾನಂದರಾಗಿರುವದರಿಂದ ಮದವು ಅವರಿಗೆ ಎಲ್ಲಿಂದ ಬರಬೇಕು? ಈ ಕಾರಣದಿಂದ ಶಿವಯೋಗಿಗೆ ವಾಚಿಕ ಅಭಿಮಾನವು ಕಡಿದುಹೋಗುತ್ತದೆ. ಶಿವಪಥದಲ್ಲಿ ಇದ್ದ ಜನರ ಸ್ವರೂಪವು ನಿರ್ವಿಕಾರವಿದ್ದದರಿಂದ ಅಲ್ಲಿ ತಿರಸ್ಕಾರವಾದರೂ ಎಲ್ಲಿಯದು? ಆತನು ತನ್ನ ಮೇಲೆ ತಾನೇ ಮತ್ಸರವನ್ನು ಹ್ಯಾಗೆ ಮಾಡಬೇಕು? ಶಿವಯೋಗಿಯ ಸ್ವರೂಪು ಸ್ವಯಂಭು ವಿದ್ದದರಿಂದ ಅಲ್ಲಿ ಡಂಭ ಬಂದೀತೇನು? ಅಲ್ಲಿ ದ್ವೈತದ ಆರಂಭವೇ ಇರುವದಿಲ್ಲ. ಶಿವಶರಣನಿಗೆ ತ್ರಿವಿಧದಲ್ಲಿ ಅಂತರಂಗದಲ್ಲಿ ವೈರಾಗ್ಯ ವಿದ್ದದರಿಂದ ಅವನು ಪ್ರಪಂಚ ಮಾಡಿದರೂ ನಿಷ್ಪ್ರಪಂಚಿಯಾಗಿರುತ್ತಾನೆ. ಪಂಚ ಮಹಾಭೂತಗಳು ತಮ್ಮ ಶುದ್ಧ ಸ್ವರೂಪದ ಸತ್ತಾಬಲದಿಂದ ಅನುರಗಾನದಿಂದ ಆಡುತ್ತಾ ಇದ್ದದರಿಂದಲೂ ಶರಣನ ವಾಸನೆಯು ಸಂಗನಲ್ಲಿ ಸಮಗಸವಾಗಿದ್ದರಿಂದಲೂ ಆತನು ಸದಾ ನಿರ್ಲೋಭಿಯಾಗಿರುತ್ತಾನೆ. ಸುವರ್ಣ ಅಥವಾ ಸ್ಥೂಲ ಐಶ್ವರ್ಯದಿಂದ ಆತನು ಮೋಹಿತನಾಗುತ್ತಾನೆಂದರೆ ಆತನ ಮನವು ಚಿಲ್ಲಿಂಗದಲ್ಲಿ ಕೂಡಿ ಉನ್ಮನವಾದ್ದರಿಂದ, ಆತನು ಮನಾತೀತನಾಗಿರುತ್ತಾನೆ. ಸ್ವಲ್ಪದರಲ್ಲಿ ಹೇಳುವದೆಂದರೆ "ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರ್ಭಯ, ಜ್ಞಾನದಲ್ಲಿ ಪರಮಾನಂದ, ಭಾವದಲ್ಲಿ ದಿಗಂಬರ" ಹೀಗೆ ಈ ಶಿವಯೋಗಿಯ ಸ್ಥಿತಿಯು ಇದ್ದು, ಆತನಿಂದ ಸೌರಾಷ್ಟ್ರ ಸೋಮೇಶ್ವರ ಲಿಂಗವು ಬೇರೆ ಇಲ್ಲ.

# ವೀರಶೈವರು ಮಾಡತಕ್ಕ ಶೋಧಗಳು.

ವೀರಶೈವ ಸಮಾಜದ ಸಂಸ್ಕೃತಿಯ ಬಗ್ಗೆ ಶೋಧ ಮಾಡತಕ್ಕ ವಿಷಯಗಳು ಅಸಂಖ್ಯವಾಗಿರುತ್ತವೆ. ಈ ದಿಶೆಯಿಂದ ಇನ್ನೂ ವರೆಗೂ ಯಾವ ಪ್ರಯತ್ನಗಳೂ ನಮ್ಮ ಸಮಾಜದಲ್ಲಿ ವ್ಯವಸ್ಥಿತವಾಗಿ ನಡೆದಿರುವದಿಲ್ಲ. ಇದರಿಂದ ವೀರಶೈವ ಧರ್ಮದ ನಿಜವಾದ ಯೋಗ್ಯತೆಯು ಯಾರಿಗೂಗೊತ್ತಾಗದೆ ಹಾಗೆಯೇ ಉಳಿದಿರುತ್ತದೆ. ಈ ಸ್ಥಿತಿಯು ಇನ್ನೂ ಹೀಗೆಯೇಉಳಿಯುವವೆಂದರೆ, ಇದು ವೀರಶೈವ ಸಮಾಜದ ಅಕ್ಷಮ್ಯ ಕರ್ತವ್ಯ ಪರಾಙ್ಮುಖತೆಯನ್ನು ತೋರಿಸುತ್ತದೆ. ಆದ್ದರಿಂದ. ಈ ಶೋಚನೀಯ ಸ್ಥಿತಿಯನ್ನು ವೀರಶೈವ ಸಮಾಜದವರು ಅವರಲ್ಲಿ ವಿಶೇಷವಾಗಿ ಇಂಗ್ಲಿಷ ಮತ್ತು ಸಂಸ್ಕೃತ ವಿದ್ಯಾವಂತರೂ ಧನಿಕರೂ ತಮ್ಮ ಶಕ್ತ್ಯಾನುಸಾರ ದೂರ ಮಾಡಲಿಕ್ಕೆ ಯತ್ನಿಸುವದು ಅಗತ್ಯವಿದೆ.

ವೀರಶೈವ ಧರ್ಮದ ಬಗ್ಗೆ ಶೋಧ ಮಾಡತಕ್ಕ ವಿಷಯಗಳು ಕೆಳಗೆ ಬರೆದ ಪ್ರಕಾರ ಇರುತ್ತವೆ.

**(೧) ಮತತತ್ವಗಳ ಶೋಧನೆ:—** ಶಕ್ತಿ ವಿಶಿಷ್ಟಾದ್ವೈತ ಅಥವಾ ಶಿವಾದ್ವೈತ ಸಿದ್ಧಾಂತವನ್ನು ಶಾಸ್ತ್ರರೀತ್ಯಾ ಕಂಡು ಹಿಡಿದು ಅದರ ಮರ್ಮಗಳನ್ನು ಸ್ಪಷ್ಟವಾಗಿ ನಿರೂಪಿಸುವದು. ಈ ಬಗ್ಗೆ ಅನೇಕ ಸಿದ್ಧಾಂತ ಗ್ರಂಥಗಳು ವೀರಶೈವ ಸಂಸ್ಕೃತ ವಾಙ್ಮಯದಲ್ಲಿ ಇರುತ್ತವೆ. ಇವುಗಳನ್ನು ಅಭ್ಯಾಸ ಮಾಡುವದು.

**(೨) ಷಟ್ಸ್ಥಲಗಳ ವಿಚಾರ:—** ಇದರಲ್ಲಿ ಅನೇಕ ಸೂಕ್ಷ್ಮಭೇದವಿಭೇದಗಳು ಅಡಕವಾಗಿವೆ. ಇವುಗಳ ಪರಸ್ಪರ ಸಂಬಂಧಗಳು ಬಹಳ ತೊಡಕುಳ್ಳವು ಇರುತ್ತವೆ. ಇವುಗಳ ಮರ್ಮಗಳನ್ನು ಕಂಡು ಹಿಡಿದು ನಿರೂಪಿಸುವದು. ಈ ವಿಷಯಗಳ ಸಂಬಂಧವಾಗಿ ಶಿವಶರಣರು ತಮ್ಮ ವಚನಗ್ರಂಥಗಳಲ್ಲಿ ಬಹಳ ವಿವೇಚಿಸಿರುವರು. ಅವುಗಳನ್ನು ನಮ್ಮ ವಿದ್ವಾಂಸರು ಓದಿ ನೋಡಿ, ಎಲ್ಲರಿಗೂ ತಿಳಿಯುವಂತೆ ಅವುಗಳ ತತ್ವಗಳನ್ನು ವಿವರಿಸುವದು.

**(೩)ವೀರಶೈವಧರ್ಮದ ಧಾರ್ಮಿಕ ಇತಿಹಾಸ:—** ವೀರಶೈವ ಧರ್ಮಕ್ಕೆ ಒಂದು ಪರಂಪರೆ ಇರುತ್ತದೆ. ಈ ಪರಂಪರೆಯನ್ನು ಶೋಧಿಸಿ ತೆಗೆಯುವದು ಅಗತ್ಯವಿರುತ್ತದೆ. ಇದಕ್ಕೆ ಆಗಮಗ್ರಂಥಗಳ ಅಭ್ಯಾಸವು

ಅವಶ್ಯವಾಗಿರಬೇಕು. ಅದರಂತೆಯೇ ವೀರಶೈವ ಧರ್ಮಕ್ಕೆ ಸಂಬಂಧಪಟ್ಟಂಥ ಧರ್ಮಗಳು ಅಂದರೆ ಶಿವಸಿದ್ಧಾಂತಿಗಳು, ಆರಾಧ್ಯರು, ಕಾಶ್ಮೀರೀಶೈವರು ಇವರ ಧರ್ಮಗ್ರಂಥಗಳನ್ನೂ ಸಹ ಅಭ್ಯಾಸ ಮಾಡಬೇಕಾಗುವದು. ಈ ಪರಂಪರೆಯ ಶೋಧದ ಕಡೆಗೆ ಇನ್ನೂ ವರೆಗೂ ಯಾವ ಯುರೋಪಿಯನ್ ಪಂಡಿತರು ಮನಸ್ಸು ಹಾಕಿರುವದಿಲ್ಲ. ಆದ್ದರಿಂದ ಈ ವಿಷಯವು ಇನ್ನೂ ಅಜ್ಞಾತಾವಸ್ಥೆಯಲ್ಲಿಯೇ ಇದೆ. ಶಿವಸಿದ್ಧಾಂತಿಗಳಲ್ಲಿ ಕೈ. ವಾ. ನಲ್ಲಾಸ್ವಾಮಿ ಪಿಲ್ಲೆ ಮೊದಲಾದ ಪಂಡಿತರು ತಮ್ಮ ಮತಗ್ರಂಥಗಳನ್ನು ಶೋಧಿಸಿ ಅವುಗಳನ್ನು ಇಂಗ್ಲಿಷದಲ್ಲಿ ಭಾಷಾಂತರಿಸಿದ್ದಾರೆ. ಅಲ್ಲದೆ ಒಂದು ಮಾಸಪತ್ರಿಕೆಯನ್ನೂ ಇಂಗ್ಲಿಷ ಭಾಷೆಯಲ್ಲಿ ತಗೆಯುತ್ತಿದ್ದರು. ಈ ತರದ ಪ್ರಯತ್ನಗಳು ವೀರಶೈವ ಸಮಾಜದಲ್ಲಿಯೂ ಆಗಬೇಕಾಗಿರುತ್ತವೆ.

**(೪) ಪುರಾತನ ಗ್ರಂಥಗಳ ಸಂಶೋಧನೆ:**— ಕರ್ನಾಟಕದ ಎಲ್ಲ ಭಾಗಗಳಲ್ಲಿ ಹಸ್ತಲಿಖಿತ ಗ್ರಂಥಗಳು ಇನ್ನೂ ಹೇರಳವಾಗಿ ಶಿಗುತ್ತವೆ. ಅವುಗಳನ್ನು ಬೇರೆಬೇರೆ ಜಿಲ್ಹೆಗಳಲ್ಲಿ ಅನುಕೂಲ ಸ್ಥಳಗಳಲ್ಲಿ ಲಾಯಬ್ರರಿಗಳನ್ನು ಮಾಡಿ ಅಲ್ಲಿ ಅವುಗಳನ್ನು ಕೂಡಿಸತಕ್ಕದ್ದು. ಇದು ಈಗಲೇ ಶಕ್ಯವಿರದಿದ್ದರೆ, ಯಾವ ಯಾವ ಸ್ಥಲಗಳಲ್ಲಿ ಗ್ರಂಥಗಳು ಸಿಗುತ್ತವೆ. ಆ ಸ್ಥಳಗಳಿಗೆ ಹೋಗಿ ಆ ಗ್ರಂಥಗಳ ಟಿಪ್ಪಣೆಯನ್ನಾದರೂ ಮಾಡತಕ್ಕದ್ದು.

**(೫) ವೀರಶೈವ ಸಮಾಜದ ಬೆಳವಣಿಗೆಯ ಇತಿಹಾಸ:**— ವೀರಶೈವ ಸಮಾಜವು ಹಿಂದುಸ್ಥಾನದ ಸಮಾಜಗಳಲ್ಲಿ ಸಂಖ್ಯೆಯ ಮಾನದಿಂದ ಬಹಳ ದೊಡ್ಡದು ಇರುತ್ತದೆ. ಇದಕ್ಕೂ ದೊಡ್ಡ ಸಮಾಜಗಳೆಂದರೆ ಮುಸಲ್ಮಾನ, ಬ್ರಾಹ್ಮಣ, ಅಹಿರ್, ರಜಪೂತ ಮತ್ತು ಮರಾಠ ಇವುಗಳು ಮಾತ್ರ ಇರುತ್ತವೆ. ಇಂಥ ಸಮಾಜವನ್ನು ಉಂಟು ಮಾಡಲಿಕ್ಕೆ ಯಾವ ಯಾವ ಕಾಲಗಳಲ್ಲಿ ಯಾರಿಂದ ಯಾವ ಪ್ರಯತ್ನಗಳು ಮಾಡಲ್ಪಟ್ಟವೋ ಅವುಗಳನ್ನು ಕಂಡು ಹಿಡಿಯುವದು ಅವಶ್ಯವಿರುತ್ತವೆ. ಈ ಪ್ರಯತ್ನಗಳಲ್ಲಿ ಅವರಿಗೆ ಅನೇಕ ರಾಜಕೀಯ ಮತ್ತು ಸಾಮಾಜಿಕ ತೊಂದರೆಗಳು ಬಂದವು. ಆದರೆ ಅವುಗಳನ್ನು ಅವರು ಎದುರಿಸಿದ್ದಾರೆ. ಈ ದೃಷ್ಟಿಯಿಂದ ವೀರಶೈವ ಗ್ರಂಥಗಳ ಪರಿಶೀಲನೆ ಮಾಡತಕ್ಕದ್ದು. ಅದರಂತೆಯೇ ಇತರ ಸಮಾಜದವರ ಗ್ರಂಥಗಳನ್ನೂ ನೋಡತಕ್ಕದ್ದು. ಶಿಲಾಲೇಖಗಳನ್ನೂ ಶೋಧಿಸತಕ್ಕದ್ದು.

**(೬) ಮಠಾಧಿಕಾರಿಗಳ ಇತಿಹಾಸ:—** ಪಂಚಸಿಂಹಾಸನಾಧಿಪತಿಗಳನ್ನು ಹಿಡಿದುಕೊಂಡು ಎಲ್ಲ ಮಠಸ್ಥರೂ ಅದರಂತೆಯೇ ಶೂನ್ಯಸಿಂಹಾಸನಾಧಿ ಪತಿಗಳನ್ನು ಹಿಡಿದುಕೊಂಡು ಎಲ್ಲ ವಿರಕ್ತಮಠಾಧ್ಯಕ್ಷರೂ ಬೇರೆ ಬೇರೆ ಕಾಲಗಳಲ್ಲಿ ಧರ್ಮಜಾಗ್ರತೆಗೋಸ್ಕರ ಮಹತ್ಪ್ರಯತ್ನಗಳನ್ನು ಮಾಡಿರುತ್ತಾರೆ. ಇವುಗಳ ವಿವರಣೆಗಳನ್ನು ಶೋಧಿಸುವದು. ಈ ಸಂಬಂಧದ ವೃತ್ತಾಂತಗಳು ಹೆಚ್ಚುಕಡಿಮೆ ಪ್ರಮಾಣದಿಂದ ಆಯಾ ಮಠಾಧೀಶರಲ್ಲಿಯೇ ಇನ್ನೂ ಸಿಕ್ಕುತ್ತವೆ.

**(೭) ಶಿವಶರಣರ ಚರಿತ್ರೆಗಳು:—** ಇವರ ಚರಿತ್ರೆಗಳು ಹರಿಹರಾಚಾರ್ಯರಿಂದ ಹಿಡಿದು ಅನೇಕ ಗ್ರಂಥಕಾರರು ವಿವರಿಸುತ್ತ ಬಂದಿದ್ದಾರೆ. ಇವರ ಸಂಖ್ಯೆಯು ಸಾವಿರಾರು ಇರುತ್ತದೆ. ಇವರ ಚರಿತ್ರೆಗಳು ಮನೋವೇಧಕವಾಗಿರುತ್ತವೆ. ಇಂಥ ಗ್ರಂಥಗಳನ್ನು ಓದಿ ಅವರ ಚರಿತ್ರೆಗಳನ್ನು ಪ್ರಸಿದ್ಧಿಸುವದು. ಈ ಶಿವಶರಣರ ಸ್ಥಳಗಳಿಗೆ ಹೋಗಿ ಅವರ ವೃತ್ತಾಂತಗಳನ್ನೂ ಉಪಲಬ್ಧವಿದ್ದಮಟ್ಟಿಗೆ ಸಂಗ್ರಹಿಸುವದು.

**(೮) ವೀರಶೈವ ಗ್ರಂಥಕಾರರ ಚರಿತ್ರೆಗಳು:—** ಇನ್ನೂ ಅಜ್ಞಾತಾವಸ್ಥೆಯಲ್ಲಿದ್ದ ವೀರಶೈವ ಗ್ರಂಥಕಾರರು ಅನೇಕರಿದ್ದಾರೆ. ಅವರನ್ನು ಶೋಧಿಸಿ ಅವರ ಚರಿತ್ರೆಗಳನ್ನು ಬರಿಸುವದು.

**(೯) ವೀರಶೈವ ರಾಜಕೀಯ ಇತಿಹಾಸ:—** ವಿಜಯನಗರದ ರಾಜ್ಯವು ವೀರಶೈವರು ಯಾವ ಪ್ರದೇಶಗಳಲ್ಲಿ ದಟ್ಟವಾಗಿ ವಾಸಿಸುತ್ತಾರೋ ಅಲ್ಲಿಯೇ ಮೊದಲಿಗೆ ಉಗಮುಹೊಂದಿತು. ಆದ್ದರಿಂದ ವಿಜಯನಗರದದಂಡಾಳುಗಳಲ್ಲಿಯೂ ಸೇನಾನಾಯಕರಲ್ಲಿಯೂ ಸುಬೇದಾರರಲ್ಲಿಯೂ ವೀರಶೈವರು ಅನೇಕರಿದ್ದರು. ಇವರು ದಕ್ಷಿಣಹಿಂದುಸ್ಥಾನವನ್ನೆಲ್ಲ ಪಾದಾಕ್ರಾಂತಮಾಡಿ ಮುಸಲ್ಮಾನರೊಡನೆ ಅನೇಕ ಶತಮಾನಗಳ ವರೆಗೆ ಯುದ್ಧ ಮಾಡಿದರು. ಈ ಮಹಾನುಭಾವರ ಚರಿತೆಗಳನ್ನು ಹುಡುಕುವದು. ಅದರಂತೆಯೇ ವೀರಶೈವರು ಕೊಡಗು, ಇಕ್ಕೇರಿ, ಮೈಸೂರು ಮೊದಲಾದ ಸ್ಥಳಗಳಲ್ಲಿಯೂ ರಾಜ್ಯವಾಳಿದ್ದಾರೆ. ಈ ರಾಜವಂಶಗಳ ಇತಿಹಾಸವನ್ನೂ ಹುಡುಕಿ ತೆಗೆಯುವದು. ನಮ್ಮಲ್ಲಿ ಇನ್ನೂ ಅಸಂಖ್ಯ ಇನಾಮುದಾರರೂ ಗೌಡರೂ ಇದ್ದು ಅವರಲ್ಲಿ ಹಿಂದಿನ ಕಾಗದಪತ್ರಗಳು ಸಿಗುತ್ತಿದ್ದು ಅವುಗಳನ್ನು ಶೋಧಿಸಿದ್ದಾದರೆ ಈ ಕಾರ್ಯವು ಆಗುವ ಸಂಭವವದೆ.

**(೧೦) ಬ್ರಿಟಿಷ್ ರಾಜರು ಇನ್ನೂ ವರೆಗೂ ಸಂಗ್ರಹಿಸಿರುವ**

**ಹಿಂದಿನ ಕಾಗದಪತ್ರಗಳ ಶೋಧನೆ:**— ಇವು ನಮ್ಮ ಸರಕಾರದವರ ವಶಕ್ಕೆ ಇದ್ದು, ಅವುಗಳಲ್ಲಿ ಹೋದ ಶತಮಾನದಲ್ಲಿ ನಮ್ಮಲ್ಲಿ ಆಗಿ ಹೋದ ಪ್ರಮುಖ ಜನರ ವೃತ್ತಾಂತಗಳು ವಿಶೇಷವಾಗಿ ಸಿಗುತ್ತವೆ. ಇವುಗಳನ್ನು ನಮ್ಮ ವೀರಶೈವ ಸಮಾಜದವರು ಶೋಧಿಸತಕ್ಕದ್ದು.

**(೧೧) ಶುಭಾ ಶುಭ ವಿಧಿಗಳ ಸಂಶೋಧನೆ:**—ಇವುಗಳಲ್ಲಿ ವೀರ ಶೈವ ಧರ್ಮಕ್ಕೆ ಸಲ್ಲದ ಅನೇಕ ಆಚರಣೆಗಳು ರೂಢಿಯ ಬಲದಿಂದ ಸೇರಿರುತ್ತವೆ. ಇವುಗಳನ್ನು ದೂರ ಮಾಡಿ ಈ ವಿಧಿಗಳಿಗೆ ಶುದ್ಧ ಮತ್ತು ಸಾತ್ವಿಕ ಸ್ವರೂಪನ್ನು ಕೊಡುವದು. ಈ ದೃಷ್ಟಿಯಿಂದ ಇವುಗಳನ್ನು ವಿವೇಚಿಸುವದು.

ಈ ತರದ ಶೋಧನೆಯಿಂದಲೇ ನಮ್ಮ ಸಮಾಜದ ನಿಜವಾದಇತಿಹಾಸವು ಪ್ರಕಾಶವಾಗಿ, ಅದರ ಯೋಗ್ಯತೆಯು ಎಲ್ಲ ಸಮಾಜದವರ ತಿಳುವಳಿಕೆಗೆ ಬರುವದು. ಇದರಿಂದ ವೀರಶೈವ ಸಂಸ್ಕೃತಿಯನ್ನೂ ಉದ್ಧಾರಗೊಳಿಸುವ ಮಹತ್ಕಾರ್ಯವೂ ಅದರೊಡನೆ ಆಗುವದು ಈ ಕಾರ್ಯವನ್ನು ಕರ್ನಾಟಕದ ಬೇರೆಬೇರೆ ಭಾಗಗಳಲ್ಲಿ ವಾಸಮಾಡುತ್ತಲಿರುವ ಸುಶಿಕ್ಷಿತರು ತಮ್ಮ ತಮ್ಮ ಇಚ್ಛಾನುಸಾರವಾಗಿ ಮತ್ತು ಅನುಕೂಲತೆಯ ಮೇರೆಗೆ ಕೈಕೊಂಡದ್ದಾದರೆ, ಇದು ಸಿದ್ಧಿಗೆ ಹೋಗಲಿಕ್ಕೆ ಸುಲಭವಾಗುವದು. ಈ ತರದ ಪ್ರಯತ್ನಕ್ಕೆ ಇಂಬುಗೊಡುವದೇ ಶಿವಾನುಭವಪತ್ರಿಕೆಯ ಮುಖ್ಯ ಉದ್ದೇಶವಾಗಿರುವದು. ಆದ್ದರಿಂದ ಯಾವತ್ತೂ ಜನರು ಈ ತರದ ಶೋಧದ ವಿಷಯಗಳಿಗೆ ತಮ್ಮ ಲಕ್ಷವನ್ನು ಹೆಚ್ಚಿಗೆ ಪೂರೈಸುವರೆಂದು ನಾವು ಹಾರೈಸುತ್ತೇವೆ.

ಶಿವಾನುಭವ ಗ್ರಂಥಮಾಲಾ ನೆ. ೧

ಶ್ರೀ

# ಬಸವೇಶ್ವರನ
## ವಚನಗಳು.

ಸಂಪಾದಕರು

ರಾ॥ ಸಾ॥ ಫ. ಗು. ಹಳಕಟ್ಟಿ

ಬಿ. ಎ. ಎಲ್. ಎಲ್ ಬಿ. ವಕೀಲ

ವಿಜಾಪುರ.

೧೯೨೬

ಬೆಲೆ ೧ ರೂಪಾಯಿ.

ಯೆನಯ್ಯ. ಅಘಟಿತಘಟಿತ ವರ್ತಮಾನವ ನಾನರಿಯೆನಯ್ಯ! ನಿಮ್ಮ ಶರಣರ ತೊತ್ತು ಭೃತ್ಯಾಚಾರವ ಮಾಡುವೆ ಕೂಡಲಸಂಗಮದೇವಾ.

೬. ಅಭ್ಯಾಸವೆನ್ನ ವರ್ತಿಸಿತ್ತಯ್ಯಾ! ಭಕ್ತಿಸಾಧ್ಯವಾಗದು. ನಾನೇ ವೆನಯ್ಯಾ! ಆನು ನಿಮ್ಮ ಮನಭೋಗವನ್ನಕ್ಕರ, ನೀವೆನ್ನ ಮನಭೋ ಗವನ್ನಕ್ಕರ, ಕಾಮುಗುಣಂಗಳ ಕಳಿದುಳಿವವರಿಗೆ ಶರಣೆಂಬೆ, ಕೂಡ ಲಸಂಗಮದೇವಾ.

೭. ತನುಸಾರಾಯರ, ಮನಸಾರಾಯರ, ಜ್ಞಾನಸಾರಾಯರ ತೋರಯ್ಯ! ನಿಮ್ಮ ಧರ್ಮ ಭಾವ ಸಾರಾಯರ, ಭಕ್ತಿ ಸಾರಾಯರ, ತೋರಯ್ಯ! ನಿಮ್ಮ ಧರ್ಮ ಕೂಡಲಸಂಗಮದೇವಯ್ಯ, ನಿಮ್ಮನರಿ ಯದ ಅವಗುಣಿಗಳ ತೋರದಿರಯ್ಯ, ನಿಮ್ಮ ಧರ್ಮ

೮. ಚಂಚಲವಿಲ್ಲದ ಭಕ್ತಿ, ವಂಚನೆ ಇಲ್ಲದ ಮಹಂತರ ತೋರಾ! ತನುಶುಚಿ, ಮನಶುಚಿಗಳ ತೋರಾ! ಇಂತಪ್ಪ ಲಿಂಗೈಕ್ಯರ ತೋರಿ ಬದುಕಿಸು, ಕೂಡಲಸಂಗಮದೇವಾ.

೯. ಕಾಮಸಂಗವಳಿದು, ಅನುಭಾವ ಸಂಗವಲ್ಲುಳಿದವರನಗಲ ಲಾರೆನು. ಶಿವಂಗೆ ಮಿಗೆ ಒಲಿದವರನು ನಾನಗಲಲಾರೆನು, ಕಾಣಾ ಕೂಡಲಸಂಗಮದೇವಾ.

೧೦. ಭಕ್ತಿರತಿಯು ವಿಕಲತೆಯು ಯುಕ್ತಿಯನೇನ ಬೆಸಗೊಂಬಿ ರಯ್ಯ! ಕಾಮಿಗೆ ಉಂಟೆ ಲಜ್ಜೆನಾಚಿಕೆ? ಕಾಮಿಗೆ ಉಂಟೇ ಮಾನಾಪ ಮಾನವು? ಕೂಡಲಸಂಗನ ಶರಣರಿಗೊಲಿದ ಮರುಳನನೇನ ಬೆಸಗೊಂ ಬಿರಯ್ಯಾ?

೧೧. ಇಂದು ಹುಟ್ಟಿದ ಕೂಸಿಂಗೆ ಇಂದೇ ಜವ್ವನವಾಯಿತ್ತಯ್ಯಾ! ಆ ಕೂಸು ಬೀದಿಯಲ್ಲಿ ಒತ್ತೆಯಕೊಳಲು ನಿಂದಿತ್ತಯ್ಯಾ! ಇದರ ಸಂಗ ಸುಖದನುಭಾವವನು ಕೂಡಲಸಂಗಮದೇವ ತಾನೇಬಲ್ಲ.

೧೨. ಸಕ್ಕರೆಯ ಕೊಡನ ತುಂಬಿ ಹೊರಗೆ ಸವಿದರೆ, ರುಚಿಯುಂಟೆ? ತರ್ಕೈಸಿ ಭುಜತುಂಬಿ ಲಿಂಗಸ್ಪರ್ಶನವ ಮಾಡದೆ, ಅಕಟಕಟಾ, ಸಂಸಾರ ವೃಥಾ ಹೋಯಿತ್ತಲ್ಲಾ! ಅದೇತರ ಭಕ್ತಿ, ಅದೇತರ ಯುಕ್ತಿ? ಕೂಡಿಕೋ ಕೂಡಲಸಂಗಮದೇವಾ.

೧೩. ಕಾಳಿದಾಸಂಗೆ ಕಣ್ಣನಿತ್ತೆ, ವಹಿಲಯ್ಯನ ನಿಜಪುರ ಕೊಯ್ದೆ.

ನಂಬಿ ಕರೆದೊಡೆ, ಓ ಎಂದೆ. ತೆಲುಗು ಜೊಮ್ಮಯ್ಯಂಗೆ ಒಲಿದೆ ದೇವಾ! ಕೂಡಲಸಂಗಮದೇವಾ ಎನ್ನನೇತಕ್ಕೊಲ್ಲಿರಯ್ಯಾ! ಪರರ ಚಿಂತೆ ಎನಗೇಕಯ್ಯ? ನಮ್ಮ ಚಿಂತೆ ನಮಗೆ ಸಾಲದೆ? ಕೂಡಲಸಂಗಯ್ಯ ಒಲಿವಾನೊ ಒಲಿಯನೋ ಎಂಬ ಚಿಂತೆ ಹಾಸಲುಂಟು ಹೊದೆಯಲುಂಟು.

೧೪. ಕಣ್ಣಕೋಸಕ್ಕೆ ಮುಂದರಿಯದೆ ನುಡಿದು, ಮನನೊಚ್ಚಿ ಮರುಳಾದೆ ನೋಡವ್ವಾ! ಕೇಳು, ಕೇಳವ್ವಾ, ಕೆಳದಿ. ಸಖಿಯರಿಲ್ಲದೆ ಸುಖವ ಬಯಸಿದರೆ ದೊರೆಕೊಂಬುವದೆ ಹೇಳಾ! ಎನ್ನ ಮುನಿಸು ಎನ್ನಲ್ಲಿಯೇ ಅಡಗಿತ್ತು. ಇನ್ನು ಬಾರಯ್ಯ, ಕೂಡಲಸಂಗಮದೇವಾ.

೧೫. ಲಜ್ಜೆಗೆಟ್ಟೆನು, ನಾಣುಗೆಟ್ಟೆನು, ಕುಲಗೆಟ್ಟೆನು, ಛಲಗೆಟ್ಟೆನು, ಸಂಗ ನಿಮ್ಮ ಪೂಜಿಸಿ ಭವಗೆಟ್ಟೆನು. ಕೂಡಲಸಂಗಮದೇವಯ್ಯಾ ನಿಮ್ಮ ಮುಟ್ಟಿ, ಹುಟ್ಟುಗೆಟ್ಟೆನು.

೧೬. ಮಾಡುವ ಭಕ್ತನ ಕಾಯ ಬಾಳೆಯ ಕಂಭದಂತಿರಬೇಕು. ಮೆಲ್ಲಮೆಲ್ಲನೆ ಹೊರೆ ಎತ್ತಿ ನೋಡಿದರೆ, ಒಳಗೆ ಕೆಚ್ಚಿಲ್ಲದಿರಬೇಕು. ಮೇಲಾದ ಫಲವ ನಮ್ಮವರು ಬೀಜಸಹಿತ ನುಂಗಿದರು. ಎನಗಿನ್ನಾವ ಭವವಿಲ್ಲ ಕೂಡಲಸಂಗಮದೇವಾ.

೧೭. ಜಂಗಮವ ಕೂಡಿಕೊಂಡು, ಲಿಂಗಾರ್ಚನೆಯ ಮಾಡುವುದು ಲೇಸು ಕಂಡಯ್ಯ ಭಕ್ತಂಗೆ. ಆ ಭಕ್ತನ ಕೂಡಿಕೊಂಡು ಲಿಂಗಾರ್ಚನೆಯ ಮಾಡುವುದು ಲೇಸಯ್ಯ ಜಂಗಮಕ್ಕೆ. ಆ ಜಂಗಮದ ಕರ್ತವ್ಯವೇ ಭಕ್ತಂಗೆ ದಾಸೋಹ. ಆ ಭಕ್ತನ ಕಿಂಕರತ್ವವೇ ಜಂಗಮಕ್ಕೆ ದಾಸೋಹ. ಆ ಭಕ್ತನೊಳಗೆ ಜಂಗಮವಡಗಿ, ಆ ಜಂಗಮದೊಳಗೆ ಭಕ್ತನಡಗಿದ್ದುದನೇನೆಂದು ಹವಣಿಸುವೆನಯ್ಯಾ? ಎರಡೊಂದಾದ ಘನವ ಇದನೆಂತುಪಮಿಸುವೆನಯ್ಯಾ? ತೆರಹಿಲ್ಲದ ಘನವ, ಈ ಎರಡಕ್ಕೆಯೂ ಭವವಿಲ್ಲೆಂದು, ಕೂಡಲಸಂಗಯ್ಯ, ನಿಮ್ಮ ಶೃತಿಗಳು ಹೇಳಿದವಾಗಿ ನಿಮ್ಮ ಕಾರುಣ್ಯವೆನಗಾಯಿತ್ತು.

೧೮. ಹರಿವ ನದಿಯ ತೆರನ ಹೋಲಬಲ್ಲರೆ ಭಕ್ತ ಕೂಡೆಸುಯಿಧಾನವ ನೀಡಬಲ್ಲಡೆ ಭಕ್ತ ನೀಡಿ ಮಿಕ್ಕುದ ಕಾಯಿದುಕೊಂಡಿರಬಲ್ಲರೆ, ಕೂಡಿಕೊಂಡಿಪ್ಪನು ನಮ್ಮ ಕೂಡಲಸಂಗಮದೇವಾ.

೧೯ ಏನು ಮಾಡಲಿ ಎನ್ನ ಪುಣ್ಯದ ಫಲವ? ಶಾಂತಿಯ ಮಾಡ

ಹೋದರೆ ಬೇತಾಳನಾಯಿತ್ತು. ಕೂಡಲಸಂಗಮದೇವನ ಪೂಜಿಸಿಹೆನೆಂದರೆ, ಭಕ್ತಿ ಎಂಬ ಮೃಗವೆನ್ನ ಬೆನ್ನಟ್ಟಿ ಬಂದು ನುಂಗಿತ್ತಯ್ಯಾ.

೨೦. ಭಕ್ತಿ ಎಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ, ಲಿಂಗವೆಂಬ ಎಲೆಯಾಯಿತ್ತು. ಮೇಲೆ ವಿಚಾರವೆಂಬ ಹುವ್ವಾಯಿತ್ತು. ಆಚಾರವೆಂಬ ಕಾಯಾಯಿತ್ತು. ನಿಷ್ಪತ್ತಿ ಎಂಬ ಹಣ್ಣಾಯಿತ್ತು. ಆದು ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ, ಕೂಡಲಸಂಗಮದೇವ ತನಗೆ ಬೇಕೆಂದೆತ್ತಿಕೊಂಡಾ.

# ಮಹೇಶ್ವರಸ್ಥಲ.

೧. ಜ್ಞಾನಿ ನೀನು, ಸ್ವಾಮಿ ನೀನು, ಶಾಶ್ವತನು ನೀನು. ಎತ್ತಿದೆ ಬಿರಿದು ಜಗವೆಲ್ಲರಿಯಲು. ಮಹಾದೇವ ಮಹಾದೇವ ಇಲ್ಲಿಂದ ಮೇಲೆ ಶಬ್ದವಿಲ್ಲ. ಪಶುಪತಿ ಜಗಕ್ಕೆ ಏಕೋದೇವ. ಸ್ವರ್ಗ ಮರ್ತ್ಯ ಪಾತಾಳದೊಳಗೆ ಒಬ್ಬನೇದೇವ ಕೂಡಲಸಂಗಮದೇವಾ.

೨. ಶೃತಿಗಗಮ್ಯ ದ್ವಾದಶಾದಿತ್ಯನಪ್ರತಿಮ ಮಹಿಮಂಗೆ ಪ್ರತಿಯುಂಟೇ? " ಸೋಮಃಪವತೆ ಎಂಬ ಶೃತಿಯನರಿದು, ಶಿವ ಏಕೋದೇವ ರುದ್ರನ ದ್ವಿತಿಯನೆಂದು ನಂಬುವುದು, ಕಾಣಿರಣ್ಣಾ. ಕೂಡಲಸಂಗಮದೇವನಲ್ಲದೆ ಇಲ್ಲವೆಂದೆತ್ತಿದೆ ಬಿರಿದ ಜಗವೆಲ್ಲರಿಯಲು.

೩. ಉಪ್ಪರ ಗುಡಿ, ನಂದಿವಾಹನ, ಸದ್ಯೋಜಾತನ ಬಾಗಿಲಮುಂದೆ ಸಾರುತ್ತಿದ್ದಾವೆ ನೋಡಾ ಶೃತಿಗಳು ನಾಲ್ಕುವೇದಗಳು ಹುಸಿಯದೆ ' ಭರ್ಗೋದೇವಸ್ಯಧೀಮಹಿ ಎಂಬುದಾಗಿ ಕೂಡಲಸಂಗನಲ್ಲದಿಲ್ಲೆಂಬುದು ವೇದ .

೪. ವೇದ ಸ್ವಯಂಭುವೆಂಬ ವಾದಿ ನೀ ಕೇಳಿಲವ್ರೋ. ಏಕೋ ದೇವ ರುದ್ರ ನದ್ವಿತೀಯನೆಂದು ನಂಬುವುದು ಕಾಣಿರಣ್ಣಾ ಓಂ ದೇವಾ ಭೂಮಿಜನಯಂದೇವಾ, ಏಕೋದೇವರುದ್ರನದ್ವಿತೀಯನೆಂದು ನಂಬುವುದು ಕಾಣಿರಣ್ಣಾ ಚಕಿತಮಭಿಧತ್ತೇ ಎಂದು ಶೃತಿ ಸಾರುತ್ತಿದ್ದಾವೆ ಜಗದ ಕರ್ತ ಕೂಡಲಸಂಗಮದೇವನೊಬ್ಬನೇ ಕಾಣಿರಣ್ಣಾ .

೫. ಶೃತಿ ತತಿ ಶಿರದ ಮೇಲೆ ಅತ್ಯತಿಷ್ಠದ್ದಶಾಂಗುಲನ ನಾನೇನೆಂಬೆನಯ್ಯ. ಘನಕ್ಕೆ ಘನಮಹಿಮನ ಮನಕ್ಕಗೋಚರನ ಅಣೋರಣೀಯಾನ್ ಮಹತೋಮಹಿಯಾನ್ ಮಹಾದಾನಿ ಕೂಡಲಸಂಗಮದೇವ.

೬. ಸಕಲ ನಿಃಕಲ ಕೂಡಿಕೊಂಡಿಪ್ಪೆಯಾಗಿ, ಸಕಲ ನೀನೇ ನಿಃಕಳ ನೀನೇ ಕಂಡಯ್ಯ. ವಿಶ್ವತೋ ಚಕ್ಷು ನೀನೇ ದೇವಾ, ವಿಶ್ವತೋ ಮುಖ ನೀನೇ ದೇವಾ, ವಿಶ್ವತೋ ಬಾಹು ನೀನೇ ದೇವಾ, ಕೂಡಲಸಂಗಮದೇವಾ.

೭. ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ. ಸಕಲ ವಿಸ್ತಾರದ ರೂಹು ನೀನೇ ದೇವಾ. ವಿಶ್ವತೋ ಚಕ್ಷು ನೀನೇ ದೇವಾ. ವಿಶ್ವತೋ ಬಾಹು ನೀನೇ ದೇವಾ. ವಿಶ್ವತೋಮುಖ ನೀನೇ ದೇವಾ. ವಿಶ್ವತೋ ಪಾದ ನೀನೇ ದೇವಾ, ಕೂಡಲಸಂಗಮದೇವಾ.

೮. ಜಲಕೂರ್ಮ ನಾಗಮೇದಿನಿ ಸಪ್ತಸಾಗರ ಅಜಾಂಡಭಾಂಡ ಹರಿವಿರಿಂಚಿಗಳೆಲ್ಲ ನಿಮ್ಮ ಉದರದ ಕೊನೆಯ ಪ್ರಾಣಿಗಳಯ್ಯ. ಕೂಡಲಸಂಗನ ಮಹಾಮನೆಯಲ್ಲಿ ಅಸ್ತಿಗ್ರಾಹಕನೆಂಬ ಗಣೇಶ್ವರನ ಇಚ್ಛಾಮಾತ್ರದಿಂದ ಯುಗಜುಗವಯ್ಯ.

೯. ರುದ್ರ ಮುಖದಲ್ಲಿ ವಿಷ್ಣು ಭುಜದಲ್ಲಿ ಜಂಘೆಯಲ್ಲಿ ಅಜನ ಜನನವು. ಇಂದ್ರ ಪಾದದಲ್ಲಿ ಚಂದ್ರ ಮನದಲ್ಲಿ ಚಕ್ಷುವಿನಲ್ಲಿ ಸೂರ್ಯ ಜನನವು. ನೊಸಲಲ್ಲಿ ಅಗ್ನಿಯು, ಪ್ರಾಣದಲ್ಲಿ ವಾಯು, ನಾಭಿಯಲ್ಲಿ ಅಂತರಿಕ್ಷ ಜನನವು. ಶಿರದಲುದಯ ಮೂವತ್ತುಮೂರುಕೋಟಿ ದೇವತೆಗಳು, ಪಾದತಳದಲ್ಲಿ ಭೂಮಿಜನನವು. ಶ್ರೋತ್ರದಲ್ಲಿ ದಶದಿಕ್ಕು. ಜಗವ ನಿಕ್ಷೇಪಿಸಿದ ಕುಕ್ಷಿಯಲ್ಲಿ. ಅಕ್ಷಯುನಗಣಿತನು. ಸಾಸಿರತಲೆ, ಸಾಸಿರಕಣ್ಣು, ಸಾಸಿರಕೈ, ಸಾಸಿರಪಾದ, ಸಾಸಿರ ಸನ್ನಿಹಿತ ನಮ್ಮ ಕೂಡಲಸಂಗಮದೇವಾ.

೧೦. ವಿಶ್ವಾಧಿಕೋ ರುದ್ರನ ಹೊಗಳುವ ಶೃತಿಗಳು ವಿಶ್ವರೂಯ ವೈನಮಃ ಪರಮರೂಪಿನೇನಮಃ ಪರತತ್ವನೇನಮಃ ಅದಿಯಾರೂಢ ಭಯಂಕರಾಯನಮೋ. ಹರಿಯ ಹರಿಸಿದನೆಂದು ಶೃತಿಯು ಸಾರುತಿರಲು ಸಂಹಾರ ಕಾರಣಾಯ ನಮೋ. ನಮ್ಮ ಕೂಡಲಸಂಗಮದೇವರ ಮಹನ್ಮಹದ್ಭ್ಯೋ ನಮಃ

೧೧. ಐದುವುದೆ ಬ್ರಹ್ಮನ ಕಪಾಲ ಕರದಲ್ಲಿ? ಐದುವುದೆ ವಿಷ್ಣುವಿನ ನಯನ ಶಿವನ ಚರಣದಲ್ಲಿ? ಐದುವುದೆ ಕಾಮನ ಸುಟ್ಟ ಭಸ್ಮ ಮೆಯ್ಯಲ್ಲಿ? ಇದಕ್ಕೆ ಮುಖದ ಮೂದಲೇಏಕಯ್ಯ ಕೂಡಲಸಂಗಮದೇವಾ?

೧೨ ಹರನ ಕೊರಳಲ್ಲಿಪ್ಪ ಕರೋಟಿ ಮಾಲೆಯ ಶಿರದ ಲಿಖಿತವ ಕಂಡು ಮರುಳ ತಾಂಡವಗಳು ಓದಿನೊಡಲು ಇವನಜ ಇವ ಹರಿ ಇವ ಸುರಪತಿ ಇವ ಧರಣೇಂದ್ರ ಇವನಂತಕನೆಂದು ಹರುಷದಿಂದ ಸರಸವಾಡುತ ಕಂಡು, ಹರ ಮುಕುಳಿತನಾಗಿ ನಕ್ಕ ನಮ್ಮ ಕೂಡಲಸಂಗಮದೇವಾ.

೧೩ ಅದರಿತು ಪಾದಘಾತದಿಂದ ಧರೆ . ಬಿದಿರಿದವು ಮಣಿ ಮುಕುಟ ತಾಗಿ ತಾರೆಗಳು . ಉದರಿದವು ಕೈತಾಗಿ ಲೊಕಂಗಳೆಲ್ಲ . || ಶ್ಲೋ|| ಮಹೀಪಾದಾಘಾತಾದ್ವ್ರಜತಿ ಸಹಸಾ ಸಂಶಯಪದಂ। ಪದಂವಿಷ್ಣೋರ್ಭ್ರಾಮ್ಯದ್ಭುಜಪರಿಘರುಗ್ಣಗ್ರಹಗಣಂ। ಮುಹುರ್ದ್ಯೌರ್ದೌಸ್ಥ್ಯಯಾತ್ಯ ನಿಭೃತ ಜಟಾತಟಿತ ತಟಾ ಜಗದ್ರಕ್ಷಾಯೈತ್ವಂ ನಟಸಿ ನನು ವಾಮ್ಯೈವವಿಭುತಾಂ॥ ನಮ್ಮ ಕೂಡಲಸಂಗಮದೇವ ನಿಂದು ನಾಟ್ಯವನಾಡೆ

೧೪ ಆರುಕೋಟಿ ಬ್ರಹ್ಮರು ಮಡಿವಲ್ಲಿ ನಾರಾಯಣಗೊಂದು ದಿನವಾಯಿತ್ತು ಅಂಥ ನಾರಾಯಣರು ಒಂದುಕೋಟಿ ಮಡಿವಲ್ಲಿ ರುದ್ರನ ಕಣ್ಣೆವೆ ಹಳಚಿತ್ತು ಅಂಥ ರುದ್ರಾವತಾರ ಹಲವಳಿವಲ್ಲಿ ನಮ್ಮ ಕೂಡಲಸಂಗಮದೇವನೇನೆಂದು ಅರಿಯನು

೧೫ ಯುಗಜುಗ ಪ್ರಳಯವಾಹಂದು ಕಾಣೆನೆಂದುಕಾಣೆ. ಧಿಗಿಲುಭುಗಿಲೆಂಮರಿವಂದು ಕಾಣೆನೆಂದುಕಾಣೆ. ನಮ್ಮ ಕೂಡಲಸಂಗಮದೇವನಲ್ಲದೆ ತಲೆದೋರುವ ದೈವಂಗಳನಂದುಕಾಣೆನೆಂದುಗಾಣೆನಯ್ಯ .

೧೬. ಒಬ್ಬ ಕೆಂಚ, ಒಬ್ಬ ಕರಿಕ, ಒಬ್ಬ ರುಪ್ಪ ಧವಳಿತನೆಂತಯ್ಯ ಲಿಂಗವೇ? ಒಬ್ಬರಿಗೊಬ್ಬರು ಘನವೆಂಬರೆಂತಯ್ಯ? ಒಬ್ಬರಿಗೊಬ್ಬರು ಕಿರಿಯರೆಂದೆಂಬರು ಅದೆಂತೊ? ಬ್ರಹ್ಮಂಗೆ . ಪ್ರಳಯ, ವಿಷ್ಣುವಿಂಗೆ ಮರಣ ಉಂಟು . ನಮ್ಮ ಕೂಲಡಸಂಗಮದೇವಂಗಿಲ್ಲ .

೧೭. ಹರಿಹರರೊಂದೇ ಎಂದರೆ ಸುರಿಯವೆ ಬಾಯಲ್ಲಿ ಬಾಲಹುಳುಗಳು? ಹರಿಗೆ ಹತ್ತು ಪ್ರಳಯ, ಬ್ರಹ್ಮಂಗನಂತ ಪ್ರಳಯ. ನಮ್ಮ ಸದಾಶಿವಂಗೆ ಪ್ರಳಯ ಉಂಟೆಂಬುದು ಬಲ್ಲರೆ, ನೀವು ಹೇಳಿಭೋ. ಪ್ರಳಯ ಮಹಾ ಪ್ರಳಯವಾದಂದಂದಿಗೆ ಹಳೆಯ ನಮ್ಮ ಕೂಡಲಸಂಗಮದೇವಾ .

೧೮. ವಿಷ್ಣು ಕರ್ಮಿ, ರುದ್ರ ನಿಷ್ಕರ್ಮಿ ಕ್ರಮವ ನರಿಯದೆ ನುಡಿವಿರಿ. ವೇದ ಶ್ರುತಿಗಳ ತಿಳಿಯಲರಿಯದೆ, ವಾದವ ಮಾಡುವರೆಲ್ಲಾ ಕೇಳಿ. ವಿಷ್ಣು ನಾನಾಯೋನಿಯಲ್ಲಿ, ಬಾರದ ಭವಂಗಳಲ್ಲಿ, ಬರುತಿಪ್ಪ. ರುದ್ರನಾವಯೋನಿಯಲ್ಲಿ ಬಂದನೆಂದು, ನೀವು ಬಲ್ಲರೆ ಹೇಳರೋ ಓಂ ವಿಷ್ಣು ಕರ್ಮಾಣಿ ಪಶ್ಯತಿಯತೋ ವೃಥಾ ನಿಷ್ಪಾತೇ ಇಂದ್ರಸ್ಯಯುಜಃ। ಸಂಭಾಸ್ತ್ರೀಣಿ ಪದಾವಿಚಕ್ರಮೆ। ವಿಷ್ಣೋರ್ಗೋಪಾಲದಾಭ್ಯಃ। ಅತೋಕರ್ಮಾಣಿ ಧಾರಣಯಾ ತದ್ವಿಪ್ರಾಪ್ರಾಸೋವಿಪನ್ಯಾವೊ ಜಾಗ್ರ

ವಾಸಸ್ಸಮಿಂಧತೆ ಅಷ್ಟೋರ್ಧ್ವತ್ವರಮಂ ಪದಂ" ಎಂಬ ಶೃತಿಯ ವಚನವ ಕೇಳಿ, ತಿಳಿಯಿ,ಭೋ. ಧರ್ಮವನೆತ್ತಿ ನುಡಿವಲ್ಲದೆ, ನಿಲ್ಲಿರಿ. ನಿಮ್ಮ ಕರ್ಮವು ಅತ್ಯತಿಷ್ಠದ್ದಶಾಂಗುಲದಿಂ ವತ್ತತ್ತಲೆ ಕೂಡಲಸಂಗಮದೇವಾ.

೧೯ ಅನ್ಮೃತಮತಿ ಸೋಮಶಂಭುವಿಂಗೆ ಹುಟ್ಟಿದಾತ ಇಂದ್ರ ಸತ್ಯಋಷಿ ಜ್ಯೇಷ್ಠಾದೇವಿಗೆ ಹುಟ್ಟಿದಾತ ಬ್ರಹ್ಮ. ವಸುದೇವ ದೇವಕಿಗೆ ಹುಟ್ಟಿದಾತ ವಿಷ್ಣು ನಾಭಿರಾಜ ಮರುತಾದೇವಿಗೆ ಹುಟ್ಟಿದಾತನರುಹ. ಇವರೆಲ್ಲರು ಯೋನಿಜರೆಂಬುದು ತ್ರೈಜಗ ಬಲ್ಲುದು. ಉತ್ಪತ್ತಿ ಸ್ಥಿತಿ ಪ್ರಳ ಯಕ್ಕೆ ಹೊರಗಾದ ಕೂಡಲಸಂಗಮದೇವಂಗೆ ಮಾತಾಪಿತೃಗಳುಂಟೆ ಹೇಳಿರೋ?

೨೦ ಇಬ್ಬರು ಮೂವ್ವರು ದೇವರೆಂದು ಉಬ್ಬುಬ್ಬಿ ಮಾತಾಡಬೇಡ. ದೇವನೊಬ್ಬನೇ ಕಾಣಿರೋ. ಇಬ್ಬರೆಂಬುದು ಹುಸಿನೋಡಾ. ಕೂಡಲ ಸಂಗಮದೇವನೊಬ್ಬನಲ್ಲದೆ, ಇಬ್ಬರಿಲ್ಲವೆಂದಿತ್ತು ದಾವೇದವು.

೨೧ ಹುಟ್ಟಿಸುವಾತ ಬ್ರಹ್ಮನೆಂಬರು ರಕ್ಷಿಸುವಾತ ವಿಷ್ಣುವೆಂ ಬರು ಬ್ರಹ್ಮ ತನ್ನಶಿರವನೇಕೆ ಹುಟ್ಟಿಸಿಕೊಳ್ಳಲಾರದೆ ಹೋದ?ವಿಷ್ಣು ವೇಕೆ ತನ್ನ ಮಗನನ್ನು ರಕ್ಷಿಸಿಕೊಳ್ಳಲಾರದೆ ಹೋದ? ದುಷ್ಟನಿಗ್ರಹ ಶಿಷ್ಟಪರಿಪಾಲಕ ನಮ್ಮ ಕೂಡಲಸಂಗಮದೇವಯ್ಯ.

೨೨ ನಾರಾಯಣನೆಂಬುವನ ಕಾಣೆ ಗಿರಾಯಣನೆಂಬುವನ ಕಾಣೆ ಬೊಮ್ಮನೆಂಬುವನ ಕಾಣೆ. ಗಿಮ್ಮನೆಂಬುವನ ಕಾಣೆ. ವಿಷ ಹುಟ್ಟಿ ಸುಡುವಲ್ಲಿ. ವೀರಭದ್ರ ಬಡಿವಲ್ಲಿ, ಕೂಡಲಸಂಗಮದೇವಯ್ಯಂಗೆ ಶರ ಣೆಂದು ಮೊರೆ ಇಟ್ಟರೆಲ್ಲರು

೨೩. ಅಮೃತ ಕಡೆವಲ್ಲಿ, ವಿಷ ಹುಟ್ಟಿ ಸುಡುವಲ್ಲಿ, ದೇವರೆಂಬು ವರೆತ್ತ ಹೋದರೇನೆಂಬೋ. ಅಂದೊಮ್ಮೆ ಓಡಿಹೋಗಿ, ಆ ಶಿವನ ಮೊರೆಹೊಗುವಂದು, ದೇವರೆಂಬುವರೆತ್ತ ಹೋದರೇನೆಂಬೋ. ಕೂಡ ಲಸಂಗಯ್ಯ ದೇವರಿಗೆ ದೇವನು, ನೀವೆಲ್ಲ ಆಳೆಂಬುವನರಿಯಿರಿಭೋ.

೨೪. ವಿಷ್ಣು ಬಲ್ಲಿದನೆಂಬೆನೆ? ದಶಾವತಾರದಲ್ಲಿ ಭಂಗಬಟ್ಟು ದಕ್ಕೆ ಕಡೆ ಇಲ್ಲ. ಬ್ರಹ್ಮ ಬಲ್ಲಿದನೆಂಬೆನೆ? ಶಿರಹೋಗಿ ನಾನಾವಿಧಿಗೊ ಳಗಾದ. ವೇದ ಬಲ್ಲಿತ್ತೆಂಬನೆ? ನಾನಾಮುಖಗಳಲ್ಲಿ ಸ್ತುತಿಸಿತಲ್ಲದೆ, ಲಿಂಗದ ನಿಲುಕಡೆಯ ಕಾಣದು. ಶಾಸ್ತ್ರಬಲ್ಲಿತ್ತೆಂಬೆನೆ? ಶಬ್ದಕ್ರಿ. ಪುರಾ ಣ ಬಲ್ಲಿತ್ತೆಂಬೆನೆ? ಪೂರ್ವಕ್ರಿ. ಆಗಮ ಬಲ್ಲಿತ್ತೆಂಬೆನೆ? ವಾಯುವ

ಹೊಂದಿತ್ತು. ಇದು ಕಾರಣ ನಮ್ಮ ಕೂಡಲಸಂಗಯ್ಯನೇ ನಿತ್ಯ, ಉಳಿದ ದೈವಂಗಳೆಲ್ಲ ಅನಿತ್ಯ ಕಾಣಿರೋ.

೨೫. ಮರೆಯಲಾಗದೆ ಹರಿಯ? ಮರೆಯಲಾಗದೆ ಬ್ರಹ್ಮನ? ಮರೆಯಲಾಗದೆ ಮೂವತ್ತಮೂರು ಕೋಟಿ ದೇವತೆಗಳ? ನಮ್ಮ ಕೂಡಲಸಂಗಮದೇವನ ಮರೆಯಲಹುದೆ?

೨೬. ಬಿದಿರೆಲೆಯ ಮೆಲ್ಲಿದರೆ, ಮೆಲ್ಲಿದಂತಲ್ಲದೆ, ರಸವ ಹಡೆಯಲು ಬಾರದು. ನೀರ ಕಡೆದರೆ, ಕಡೆದಂತಲ್ಲದೆ, ಬೆಣ್ಣೆಯ ಹಡೆಯಲುಬಾರದು. ಮಳಲ ಹೊಸೆದರೆ ಹೊಸವಂತಲ್ಲದೆ, ಸರವೆಯ ಹಡೆಯಲುಬಾರದು. ನಮ್ಮ ಕೂಡಲಸಂಗಮನಲ್ಲದೆ, ಅನ್ಯದೈವಕ್ಕೆರಗಿದರೆ, ಹೊಟ್ಟು ಕುಟ್ಟಿ ಕೈಹೊಟ್ಟಾದಂತೆ ಆಯಿತ್ತಯ್ಯ.

೨೭. ಆವಾಗಲೂ ಲೋಗರ ಮನೆಯ ಬಾಗಿಲು ಕಾಯ್ದುಕೊಂಡಿಪ್ಪವು ಕೆಲವು ದೈವಂಗಳು ಹೋಗೆಂದರೆ ಹೋಗವು. ನಾಯಿಗಿಂದ ಕರಕಷ್ಟ. ಕೆಲವು ದೈವಂಗಳು ಲೋಗರ ಬೇಡಿಕೊಂಡುಂಬ ದೈವಂಗಳು ತಾವೇನ ಕೊಡುವವೋ? ಏನು ಬೇಡಿದ್ದನೀವ ನಮ್ಮ ಕೂಡಲಸಂಗಮದೇವಾ.

೨೮. ಗಾಡಿಗಾಡಿಂಬ ಗಂಗೆ, ಚಿಕ್ಕು ಮುಟ್ಟಿಗೆ, ಹಸುರಂಬಲಿ ಮುಟ್ಟಿಗೆ ಹುರಿಬುತ್ತಿಯ ಬೇಡಿ ಮನುಷ್ಯರ ಪಿಡಿದು ಪೀಡಿಸಿ, ತಮ್ಮ ಬಸುರ್ಗೆ ಕೂಳಕಾಣದೆ ಈಡಾಡಿದ ಕೂಳಂಬಲಿಯನಾಯಿದು, ಕುರುಕುವ ಹೇಸಿದೈವಂಗಳ ಬೇಡಿ ಬೇಡಿ, ನಿರರ್ಥ ಕೆಡಬೇಡವೋ ಎಲವೋ ಕೂಡಲಸಂಗಮದೇವರ ನೆರೆನಂಬೋ, ಎಲವೋ.

೨೯. ಹಾಳು ಮೊರಡಿಗಳಲ್ಲಿ, ಊರದಾರಿಗಳಲ್ಲಿ, ಕೆರೆಬಾವಿ ಹೂಗಿಡುಮರಂಗಳಲ್ಲಿ, ಗ್ರಾಮದ ಮಧ್ಯದಲ್ಲಿ, ಚೌಪಥ ಪಟ್ಟಣ ಪ್ರವೇಶದಲ್ಲಿ, ಹಿರಿಯಾಲದ ಮರದಲ್ಲಿ, ಮನೆ ಮಾಡಿ ಕರವೆಮ್ಮೆಯ ಹಸಗೂಸು, ಬಸಿರೆ, ಬಾಣಿತಿ, ಕುಮಾರಿತಿ, ಕೊಡಗೂಸೆಂಬವರ ಹಿಡಿದುಂಬ ತಿರಿದುಂಬ ಮಾರಯ್ಯ, ಬೀರಯ್ಯ, ಖೇಚರಗಾವಿಲ, ಅಂತರಬೆಂತರ, ಕಾಳಯ್ಯ, ಮಾಳಯ್ಯ, ಕೇತಯ್ಯಗಳೆಂಬ ನೂರು ಮಡಿಕೆಗೆ ನಮ್ಮ ಕೂಡಲಸಂಗಮದೇವರಿಗೆ ಶರಣೆಂಬುದೊಂದು ದೊಣ್ಣೆ ಸಾಲದೇ.

೩೦. ಅರಗು ತಿಂದು ಕರಗುವ ದೈವ, ಉರಿಯ ಕಂಡರೆ ಮುರುಟುವ ದೈವ ಎಂತು ಸರಿ ಎಂಬೆನಯ್ಯ? ಅವಸರ ಬಂದರೆ ಮಾರುವ ದೈವವ

ನೆಂತು ಸರಿ ಎಂಬೆನಯ್ಯ. ಅಂಜಿಕೆ ಬಂದರೆ ಹೊಳುವ ದೈವವನೆಂತು ಸರಿಎಂಬೆನಯ್ಯ? ಸಹಜ ಭಾವ ನಿಜೈಕ್ಯ ಸ್ಥಿರರೂಪ ನಿರ್ವಿಕಾರ ನಿರಂಜನ ಕೂಡಲಸಂಗಮದೇವನೊರ್ವನೇ ದೇವ ಕಾಣಿರೋ.

೩೧. ಮಾರಿಕವ್ವೆಯನೆಂತು ಕೊರಳಲ್ಲಿ ಕಟ್ಟಿಕೊಂಬರು? ಸಾಲ ಬಂದರೆ ಮಾರಿಕೊಂಡು ತಿಂಬರು. ಸಾಲಬಟ್ಟರೆ ಒತ್ತೆಯನಿಟ್ಟುಕೊಂಬರಯ್ಯ. ಮಾರುಹೋಗನೊತ್ತೆಹೋಗ ನಮ್ಮ ಕೂಡಲಸಂಗಮದೇವ.

೩೨. ಉಣಲುಡಲು ಮಾರಿಯಲ್ಲದೆ ಕೊಲಲು ಕಾಯಲು ಮಾರಿಯೆ? ತನ್ನ ಮಗನ ಜವನೊಯ್ಯುವಲ್ಲಿ, ಅಂದೆತ್ತ ಹೋದಳೊ ಮಾರಿಕವ್ವೆ? ಇವರು ಕಾವರೆ, ಕೊಲುವರೆ? ನಮ್ಮ ಕೂಡಲಸಂಗಯ್ಯನಲ್ಲದೆ, ಮತ್ತೊಂದು ದೈವವಿಲ್ಲ, ದೈವವಿಲ್ಲ.

೩೩ ಮರಗೊಟ್ಟಿನಲ್ಲಿ ಬಪ್ಪ ಕಿರುಕುಳ ದೈವಕ್ಕೆ ಕುರಿಯನಿಕ್ಕಿ ಹೆನೆಂದು ನಲಿನಲಿದಾಡುವರು. ಕುರಿ ಸತ್ತು ಕಾವುದೆ, ಹರ ಮುಳಿದವರ? ಕುರಿಬೇಡ ಮರಿಬೇಡ.ಬರಿಯ ಪತ್ರೆಯ ತಂದು, ವರದ ಜಲವನೆ ನೀಡಿ, ಹರುಷದಿಂದಲೆ ಬಂದು, ಶರಣ ಭಾವದಿನಿಂದು, ಮರೆಯದೆ ಮನಮುಟ್ಟಿ ಪೂಜಿಸೈ, ನಮ್ಮ ಕೂಡಲಸಂಗಮದೇವನ.

೩೪ ಬನ್ನಿರೆ ಅಕ್ಕಗಳು, ಹೋಗಿರೆ ಆಲದಮರಕ್ಕೆ. ಕಚ್ಚುವವೇ ನಿಮ್ಮ ಚಿಪ್ಪಿನಹಲ್ಲುಗಳು? ಬೆಚ್ಚಿಸುವವೆ ನಿಮ್ಮ ಬಚ್ಚಣಿಯ ರೂಪಗಳು? ನಮ್ಮ ಕೂಡಲಸಂಗಮದೇವರಲ್ಲದೆ, ಪರದೈವಂಗಳು ಮನಕ್ಕೆ ಬಂದವೆ, ಬಿಕ್ಕನೆ ಬಿರಿವ ದೈವಂಗಳು.

೩೫. ಮಡಿಕೆಯೇ ದೈವವು, ಮರದಲ್ಲಿನ ದೈವವು, ಬೀದಿಯ ಕಲ್ಲೇ ದೈವವು, ಹಣತೇ ದೈವ, ಬಿಲ್ಲುನಾರೀ ದೇವವು, ಕಾಣಿರಯ್ಯಾ. ಕೊಳಗನೇ ದೈವವು, ಗಿಣಿಲು ದೈವವು, ಕಾಣಿರಯ್ಯ. ದೈವ ದೈವನೆಂದು ಕಾಲಿಡಲಿಂಬಿಲ್ಲವು. ದೇವನೊಬ್ಬನೇ ನಮ್ಮ ಕೂಡಲಸಂಗಮದೇವಾ.

೩೬. ಭಕುತಿ ತಪ್ಪಿದ ಹೆಂಡತಿಯಲ್ಲಿ, ಗುಣವತಪ್ಪಿದ ಗಂಡನಲ್ಲಿ, ಜೀವವಿಲ್ಲದ ದೇಹದಲ್ಲಿ ಫಲವೇನು? ಆಳ್ದನೊಲ್ಲದಾಳಿನಲ್ಲಿ, ಸಿರಿತೊಲಗಿದರಸಿನಲ್ಲಿ, ವರವಿಲ್ಲದ ದೇವರಲ್ಲಿ, ಫಲವೇನೋ? ಕಳಿತ ಹೂವಿನಲ್ಲಿ ಕಂಪವಳಿದ ಸೂಳೆಯಲ್ಲಿ ಪೆಂಪು, ಕೊಳಚಿ ನೀರಿನಲ್ಲಿ ಗುಂಪ ನರಸುವಿರಿ ಮರುಳೆ? ವರಗುರು ವಿಶ್ವಕ್ಕೆಲ್ಲಾ ಪರಮ ಕಾರಣಿಕ ನಮ್ಮ ಕೂಡಲಸಂಗಮದೇವಯ್ಯ.

೩೭. ಗುಡಿಯೊಳಗಿದ್ದು, ಗುಡಿಯನೇಣ ಕೊಯ್ದರೆ, ಗುಡಿಯು ದಂಡಿಗೆ ಬಿದ್ದು ಹಲ್ಲು ಹೋದುದು ನೋಡಯ್ಯಾ. ಪೊಡವಿಗೀಶ್ವರನ ಗರ್ಭವಾಸದೊಳಗಿರ್ದು ನಡಿವರು ಮತ್ತೊಂದು ದೈವ ಮುಂಟೆಂದು. ತುಡುಗುಣಿ ನಾಯ ಹಿಡಿತಂದು ಸಾಕಿದರೆ, ತನ್ನೊಡೆಯಂಗೆ ಬೊಗಳುವಂತೆ ಕಾಣಾ ಕೂಡಲಸಂಗಮದೇವ.

೩೮. ಅಸಮಾಕ್ಷ ಲಿಂಗಕ್ಕೆ ಅನ್ಯ ದೈವವು ಸರಿ ಎಂಬವನ ಬಾಯಲ್ಲಿ ಮಸೆದ ಕೂರಲಗನಿಕ್ಕದೆ ಮಾಣ್ಬನೇ? ಹುಸಿಯ ನುಡಿವವನ ನಾಯಾಗಿ ಬೊಗಳಿಸನೆ? ಹಿರಿಯರುತ್ತಮರೆನ್ನದವರ ಕುದುರೆಯಾಗಿ ಕಟ್ಟಿಸನೆ? ಗುರು ಲಘುವೆಂದವರ ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಣ್ಬನೆ? ಪರಸ್ತ್ರೀಗಳುಪಿದವರ ಗಾಣದಲ್ಲಿಕ್ಕಿ ಸೀಳನೆ? ಪರಧನ ಕಳುಪಿದವರ ಹಿಡಿ ಕಂಡವಗೊಯ್ಯನೆ? ಎಲೆ ಕೂಡಲಸಂಗಮದೇವ ನೀವು. ಹೇಳಿದ ಹೇಳಿಕೆಯಿಂದ ವೆಂಬೇರ ವೈಲಾರಗೆ ತ್ರಿಜಗದೊಳಗೆ ಮೇಳವಾಡತಿರ್ದ ಕಾಣಾ ಕೂಡಲಸಂಗಮದೇವಾ.

೩೯. ವಿಷ್ಣುವಿನ ಪೂಜಿಸಿ ಮುಡುಹ ಸುಡಿಸಿಕೊಂಬುವರ ಕಂಡೆ. ಜಿನ್ನನ ಪೂಜಿಸಿ ಬತ್ತಲೆ ಇರ್ಪುದು ಕಂಡೆ. ವೈಲಾರನ ಪೂಜಿಸಿ ನಾಯಾಗಿ ಬೊಗಳುವದ ಕಂಡೆ. ನಮ್ಮ ಕೂಡಲಸಂಗನ ಶರಣರ ಪೂಜಿಸಿ ದೇವಭಕ್ತ ನೆನಿಸಿಕೊಂಬುವದ ಕಂಡೆ.

೪೦. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ಗೌತುಮ ಮುನಿಗೆ ಗೋವಧೆಯಾಯಿತ್ತು. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ಬಲಿಗೆ ಬಂಧನವಾಯಿತ್ತು. ಬ್ರಾಹ್ಮಣನೇ ದೈವವೆಂದು ದಕ್ಷಂಗೆ ಕುರಿದಲೆಯಾಯಿತ್ತು. ಬ್ರಾಹ್ಮಣನೇ ದೈವವೆಂದು ನಂಬಿದಕಾರಣ ಪರುಶರಾಮ ಸಮುದ್ರಕ್ಕೆ ಗುರಿಯಾದ. ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ ನಾಗಾರ್ಜುನನ ತಲೆ ಹೋಯಿತ್ತು. ದೇವಭಕ್ತರೆಂದು ನಂಬಿದಕಾರಣ ನಮ್ಮ ಕೂಡಲಸಂಗನ ಶರಣರು ಕೈಲಾಸವಾಸಿಗಳಾದರು.

೪೧. ಆದಿಪುರಾಣ ಅಸುರರಿಗೆ ಮಾರಿ. ವೇದಪುರಾಣ ಹೋತಿಂಗೆ ಮಾರಿ. ರಾಮಪುರಾಣರಕ್ಕಸರಿಗೆ ಮಾರಿ. ಭಾರತ ಪುರಾಣ ಗೋತ್ರಕ್ಕೆ ಮಾರಿ. ಇವೆಲ್ಲ ಪುರಾಣವು ಕರ್ಮಕ್ಕೆ ಮೊದಲು ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲ ಕೂಡಲಸಂಗಮದೇವಾ.

೪೨. ನಿಮ್ಮ ವಚನವೆನ್ನ ಪುಣ್ಯವೆಂಬುದು ಹುಸಿಯಾಯಿತು ನೋಡಾ. ಶಾಸ್ತ್ರದ ವಚನ ಹೋತಿಂಗೆ ಮಾರಿ. ಎಂತು ನಂಬುವೆನಯ್ಯ? ನಾನು ಕೊಲ್ಲೆ, ನೇಣು ಕೊಲ್ಲಿತ್ತೆಂಬ ಸುವೆಕಾರರ ಮೆಚ್ಚ ನಮ್ಮ ಕೂಡಲಸಂಗಮದೇವಾ.

೪೩. ಮಾತಿನ ಮಾತಿಂಗೆ ನಿನ್ನ ಕೊಂದಿಹೆರೆಂದು, ಎಲೆ ಹೋತೇ ಅಳು ಕಂಡೆಯಾ. ವೇದವನೋದಿದವರ ಮುಂದೆ, ಅಳು ಕಂಡೆಯಾ, ಹೋತೆ ಶಾಸ್ತ್ರವ ಕೇಳಿದವರ ಮುಂದೆ, ಅಳುಕಂಡೆಯಾ, ಹೋತೇ. ನೀನತ್ತುದಕ್ಕೆ ತಕ್ಕದ್ದು ಮಾಡುವ ಕೂಡಲಸಂಗಮದೇವರನವರ.

೪೪. ದಕ್ಷಯಾಗವ ನಡಿಸಲೆಂದು ಅಜಮುಖ್ಯರಾದ ಸುರರೆಲ್ಲ ನೆರೆದುಬಂದು ಉಂಬುವ ಬಾದು ನೋಡಾ. ಬಾಯಿತಪ್ಪಿಸಿ ಉಣಬಂದ ದೈವದ ಜೆಂದ ಬಾಯ ನೋಡಾ. ಉಣ್ಣದೆ, ಉಡದೆಹೊಗೆಯ ಕೈಯಲ್ಲಿ ಸತ್ತ ಅಣ್ಣಗಳ ಕೇಡ ನೋಡಾ ಕೂಡಲಸಂಗಮದೇವಾ.

೪೫. ಹೊಲೆಯೊಳಗೆ ಹುಟ್ಟಿ, ಕುಲವನರಸುವೆ. ಎಲವೊಮಾತಂಗಿಯ ಮಗನೀನು. ಸತ್ತುದನೆಳೆವನೆತ್ತಣಹೊಲೆಯ? ಹೋತ ತಂದು ನೀವು ಕೊಲ್ಲುವಿರಿ, ಶಾಸ್ತ್ರವೆಂಬುದು ಹೋತಿಂಗೆ ಮಾರಿ, ವೇದವೆಂಬುದು ನಿಮಗೆ ತಿಳಿಯದು. ನಮ್ಮ ಕೂಡಲಸಂಗನ ಶರಣರು ಕರ್ಮರಹಿತರು, ಶರಣ ಸನ್ನಿಹಿತರು, ಅನುಪಮ ಚರಿತ್ರರು, ಅವರಿಗೆ ತೋರಲು ಪ್ರತಿಇಲ್ಲವೋ.

೪೬. ಇಟ್ಟಿಯ ಹಣ್ಣ ನರಿತಿಂದು ಸೃಷ್ಟಿ ತಿರುಗಿತೆಂಬಂತೆ, ಮಟ್ಟಿಯ ನಿಟ್ಟದ್ವಿಜರ ಮಾತೇಕೊ? ಹಗಲು ಕಾಣದ ಗೂಗೆ ಇರುಳಾಯಿತ್ತೆಂದರೆ, ಜಗಕ್ಕೆ ಇರುಳಪ್ಪುದೆ ಮರುಳೆ? ಹೊಮದ ನೆವದಿಂದ ಹೋತನೇ ಕೊಂದು ತಿಂಬ ಅನಾಮಿಕ ರೊಡನಾಡಿ ಗೆಲುವುದೇನು ಕೂಡಲಸಂಗಮದೇವ?

೪೭. ಮೀಂಬುಲಿಗನ ಹಕ್ಕಿಯಂತೆ ನೀರತಡೆಯಲಿರ್ದು, ಮೂಗ ಹಿಡಿದು, ಧ್ಯಾನವ ಮಾಡುವರಯ್ಯ. ಬಿಟ್ಟಮುಡಿವೆರಿಸಿ, ಬಾಯಮಿಡುಕಿಸುತ್ತ ಕಣ್ಣ ಮುಚ್ಚಿ ಬೆರಳನೆಣಿಸುವರಯ್ಯ. ನಿಮ್ಮ ಕೈಯಲ್ಲಿ ಕಟ್ಟಿರ್ದ ದರ್ಭೆಯ ಹುಲ್ಲು, ಕೂಡಲಸಂಗಯ್ಯನರಿಯದೆ, ಮೊರೆ ಇಡುವಂತೆ.

೪೮ ಮಾಣವೆ ಅರಳಿಯ ಮರನ ತಿಟ್ಟನೆ ತಿರುಗುವ ಗಾಣದ ಎತ್ತಿನಂತೆ, ಪೂರ್ವ ಲಿಖಿತ ಮುಂದಗಾಣಲೀಯ್ಯದು. ನೀವೆಲ್ಲ ವಾಯ

ಕ್ಕೆ ಕೆಡಬೇಡ ಮನುಜಾ. ಮಾಣದೆ ಪೂಜಿಸು ಲಿಂಗವ. ಹೆರರಗೋಃ ಣು ಕೊಯ್ದೆನೆಂದು ಮಂತ್ರವನೋದುವ ನೇಣುಗಾರರ ಮೆಚ್ಚನಮ್ಮ ಕೂ ಡಲಸಂಗಮದೇವ.

೪೯. ನೀರಕಂಡಲ್ಲಿ ಮುಳುಗುವರಯ್ಯ. ಮರನ ಕಂಡಲ್ಲಿ ಸುತ್ತು ವರಯ್ಯ. ಬತ್ತುವ ಜಲವ ಒಣಗುವ ಮರನ ನೆಚ್ಚಿದವರು ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವ?

೫೦. ಕಣ್ಣ ಮುಚ್ಚಿ ಕನ್ನಡಿಯ ತೋರುವಂತೆ, ಇರುಳು ಹಗ ಲಿನ ನಿದ್ರೆ ಸಾಲದೇ? ಬೆರಳನೆಣಿಸಿ, ಪರಮಾರ್ಥವ ಹಡೆವುದು ಚೋ ದ್ಯವಲ್ಲವೆ ಹೇಳಾ? ಮೂಗ ಮುಚ್ಚಿ ಮುಕ್ತಿಯನರಸುವರ ನಾಚಿಗೆ ಇಲ್ಲ ದವರನೇನೆಂಬೆ ಕೂಡಲಸಂಗಮದೇವಾ.

೫೧. ಕುಲದಲ್ಲಿ ಹಾರುವನು ಬ್ರಹ್ಮೇತಿಗೆ ಸಾರುವನು. ಆರೋಃ ಮಾಡುವ ಪಾಪಕ್ಕೆ ತಾನೇ ಕೈಯ್ಯಾನುವನು ಸರಿಯೇ ದೇವ ಭಕ್ತಂ ಗಿವನು? ಬಡಿಗಿಗಿ ಮಾಚಲದೇವಿಯ ಕುಲಜೆಯ ಮಾಡಿಹೆನೆಂದು ಹೊನ್ನಕಪಿಲೆಯ ಕೊಂದು, ರಾವಣ ಶಾಖದ ಉಚ್ಛಿಷ್ಟದ ಹಾಲಿನಿಂದ ಕೂಳನಟ್ಟುಂಬವರನೇನೆಂಬೆನಯ್ಯ ಕೂಡಲಸಂಗಮದೇವ?

೫೨. ನರಜನ್ಮದಲ್ಲಿ ಹುಟ್ಟಿ, ಲಿಂಗಮುಖವನರಿಯದೆ, ಉದನ್ಮದ ಸೊಕ್ಕು ತಲೆಗೇರಿತ್ತಯ್ಯ. "ಜೀವಂ ಜೀವೇನ್ ಭಕ್ಷಯೆತ್,, ಕರ್ಮ ಕರ್ಮದಲಿಪ್ಪೆ. ಅಂದೊಮ್ಮೆ ದಕ್ಷನು ಹೋತನ ಕೊಂದಲ್ಲಿ ಗೋಳಿಡಲಿ ಗೋಳಿಡಲು, ತಂದಿಕ್ಕ ಹೇಳಿತ್ತೆ ನಿಮ್ಮ ವೇದಶಾಸ್ತ್ರ? ಮುಹೂರ್ತ ಗೊಂಡಲ್ಲಿ ಚತುರ್ವೇದಿಗಳಿಗೊಮ್ಮೆ ಅಕ್ಕಿತ್ತೆ ಅಯ್ಯ. ನಮ್ಮ ಕೂಡಲ ಸಂಗಮದೇವನನರಿಯದ ಕಾರಣ ನಾಯಕನರಕದಲ್ಲಿಕ್ಕಿತ್ತಯ್ಯ.

೫೩. ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವರ ಮನೆಯ ಲ್ಲಿ ಕಿಚ್ಚೆದ್ದು ಸುಡುವಾಗ, ಬಚ್ಚಲನೀರು ಬೀದಿಯ ಧೂಳವಹೊಯ್ದು ಬೊಬ್ಬಿಟ್ಟೆಲ್ಲರ ಕರೆವರಯ್ಯ. ಕೂಡಲಸಂಗಮದೇವ ವಂದನೆಯ ಮರೆದು ನಿಂದಿಸುತಲಿರ್ದರಲ್ಲಾ.

೫೪. ವೇದವನೋದಿದ ವಿಪ್ರರರು ಹೊನಲಲ್ಲಿ ಹೋದ ಕೇಡ ನೋಡಿರೇ "ಭರ್ಗೋದೇವಸ್ಯಧೀಮಹಿ,, ಎಂಬರು. ಒಬ್ಬರಿಗಾದರೂ ವಿಚಾರವಿಲ್ಲ ನೋಡಿರೇ, ಕೂಡಲಸಂಗಮದೇವಾ.

೫೫. ಎನಿಸನೋದಿದಡೇನು, ಎನಿಸಕೇಳಿದೊಡೇನು, ಚತುರ್ವೇಧ ಪಾಠ ತೀವ್ರವಾದಡೇನು, ಲಿಂಗಾರ್ಚನೆ ಹೀನವಾದಡೆ ಶಿವ, ಶಿವಾ ಬ್ರಾಹ್ಮಣನೆಂದೆಂಬೆನೆ! ಎನ್ನಲಾಗದು. "ಜನ್ಮನಾಂ ಜಾಯತೇ ಶೂದ್ರಃ। ಕ್ರಿಯಾಣಾಂ ಜಾಯತೇ ದ್ವಿಜಃ॥ ಶ್ರುತ್ಯಂಚ ಶ್ರೋತ್ರಿಯಂ। ಬ್ರಹ್ಮಚರ್ಯಂತಿ ಬ್ರಾಹ್ಮಣಃ,, "ಬ್ರಹ್ಮನಾಸ್ತಿಶ್ವಪಚರಮನೆ,, ಎಂದುದಾಗಿ, ಕೂಡಲಸಂಗಮದೇವ ವೇದಭಾರಭರಾಕ್ರಾಂತಿಕೋ ಬ್ರಾಹ್ಮಣೊ ಗಾರ್ದಭನೆಂಬೆನು.

೫೬. ನಿಮ್ಮ ಸರಿಯದ ಕಾರಣ ಕೈಯ್ಯಲ್ಲಿ ಹುಲ್ಲು, ನಿಮಗೆರಗದ ಕಾರಣ ಕೊರಳಲ್ಲಿ ನೇಣು, ಹಿಂಡಲೇಕೋ, ತೊಳೆಯಲೇಕೋ? ಮುಳಿಗಿ ಮುಳಿಗಿ ಮೂಗ ಹಿಡಿಯಲೇಕೋ? ಕೂಡಲಸಂಗನ ಶರಣರಲ್ಲಿ ಡೋಹರಕಕ್ಕಯ್ಯನಾವತೊರೆಯಲ್ಲಿ ಮಿಂದ?

೫೭. ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ, ಮಂಡೋದರಿ ಕಪ್ಪೆಯ ಮಗಳು. ಕುಲವನರಸದಿರಿ, ಭೋ. ಕುಲದಿಂದ ಮುನ್ನೇನಾದಿರಿಭೋ. ಸಾಕ್ಷಾತ್ ಅಗಸ್ತ್ಯಕಬ್ಬಿಲಿಗ, ದೂರ್ವಾಸ ಮಚ್ಚಿಗ, ಕಶ್ಯಪಕಮ್ಮಾರ, ಕೌಂಡಿಲ್ಯನೆಂಬ ಋಷಿ ಮೂರು ಲೋಕವರಿಯಲು ನಾಯಿದ ಕಾಣಿರೋ. ಕೂಡಲ ಸಂಗನ ವಚನವಿಂತೆಂದುದು, ಶ್ವಪಚೋಽಪಿ ಮುನಿಶ್ರೇಷ್ಠೊಯಸ್ತು ಲಿಂಗಾರ್ಚನಾರತ। ಲಿಂಗಾರ್ಚನವಿಹೀನಸ್ಯ ದ್ವಿಜಾನಾಂಶ್ವಪಚಾಧಮಃ॥ ಅದುಕಾರಣ ಶ್ವಪಚನಾದರೇನು ಶಿವಭಕ್ತನೇ ಕುಲಜ ಭೋ.

೫೮. ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ. ಜಲಬಿಂದುವಿನ ವ್ಯವಹಾರ ಒಂದೇ. ಆಶೆಯಾಮಿಷ ಹರುಷ ವಿಷಯಾದಿಗಳೆಲ್ಲ ಒಂದೇ. ಏನನೋದಿ ಏನಕೇಳಿ ಏನುಫಲ? ಕುಲಜನೆಂಬುದಕ್ಕೆ ಆವುದು ದೃಷ್ಟಾಂತ? "ಸಪ್ತಧಾತು ಸಮಂ ಪಿಂಡಂ। ಸಮಯೋನಿಸಮುದ್ಭವಂ॥ ಆತ್ಮ ಜೀವ ಸಮಾ ಯುಕ್ತಂ ವರ್ಣಾನಾಂ ಕಿಂ ಪ್ರಯೋಜನಂ॥" ಎಂದುದಾಗಿ, ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ, ಕರ್ಣದೊಳಗೆ ಜನಿಸಿದವರುಂಟೇ ಜಗದೊಳಗೆ? ಇದುಕಾರಣ ಕೂಡಲಸಂಗಮದೇವ ಲಿಂಗನರಿತವನೇ ಕುಲಜನು.

೫೯. ಕೊಲ್ಲುವನೇ ಮಾದಿಗನು, ಹೊಲಸು ತಿಂಬುವನೇ

ಹೊಲೆಯ. ಕುಲವೇನೋ, ಅವಂದಿರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೆಲ್ಲ ಕುಲಜರು.

೬೦. ಜಾತಿವಿಡಿದು ಸೂತಕವ ನರಸುವೆ. ಜ್ಯೋತಿವಿಡಿದು ಕತ್ತಲೆಯ ನರಸುವೆ. ಇದೇತಕೋ ಮರುಳು ಮಾನವಾ? ಜಾತಿಯಲ್ಲಿ ಅಧಿಕನೆಂಬೆ. ವಿಪ್ರಶತ ಕೋಟಿಗಳಿರ್ದು ಫಲವೇನು? ಭಕ್ತಶಿಖಾಮಣಿ. ಎಂದುದು ವಚನ. ನಮ್ಮ ಕೂಡಲಸಂಗನ ಶರಣರ ಪಾದವ ನಂಬು ಕೆಡಬೇಡ ಮನುಜಾ.

೬೧. ಹೊಲೆಯ ಮಾದಿಗ ಭಕ್ತನಾದೊಡೆ, ಆತನ ಮನೆಯಲ್ಲಿ ಸೊಣಗಂಗೆ ಪಂಚಮಹಾ ಪಾದ್ಯದಲ್ಲಿ ಸನ್ಮಾನ ಮಾಡನೇ, ನೆಲವನುಗ್ಗಡಿಸಿ, ಉಘೇ ಚಾಂಗು ಭಲಾ ಎಂದು? ಕುಲದಲಧಿಕ ಹಾರುವಂಗೆ ಸಿದ್ಧಿಗೆಯ್ಯ. ಸಲೆ ನಿಮ್ಮ ಶರಣರ ಮಹಿಮೆಯು ಘನಕ್ಕೆ ಘನ. ಎಲೇ ಕೂಡಲಸಂಗಮ ದೇವಾ, ನಿಮ್ಮ ನಂಬದವನೇ ಹೊಲೆಯ.

೬೨. ಕುರಿವಿಂಡು ಕಬ್ಬಿನ ತೋಟವ ಹೊಕ್ಕು ತೆರನನರಿಯದೆ, ತನಿರಸದ ಹೊರಗಣೆಲೆಯ ಮೆಲೆದವು. ನಿಮ್ಮನರಿವ ಮದಕರಿಯಲ್ಲದೆ, ಕುರಿ ಎತ್ತ ಬಲ್ಲುದು, ಕೂಡಲಸಂಗಮದೇವ?

೬೩. ಪ್ರಣಮವನುಚ್ಚರಿಸುವ ಅಪ್ರಮಾಣಿಗಳೆಲ್ಲರು ಪ್ರಣಮ ಮಂತ್ರಾರ್ಥವನೋದಿ, ಮಂತ್ರಾರ್ಥವ ನರಿಯರು. ಪ್ರಣಮ ಓಂ ನಮಃ ಶಿವಾಯ ಎಂದುವು ಶೃತಿಗಳೆಲ್ಲ. ಕೂಡಲಸಂಗಮದೇವಯ್ಯನ ನರಿಯದ ದ್ವಿಜರೆಲ್ಲಾ ಭ್ರಮಿತರು.

೬೪. ವೇದವನೋದಿದರೇನು, ಶಾಸ್ತ್ರವ ಕೇಳಿದರೇನು, ಜಪವ ಮಾಡಿದರೇನಯ್ಯ? ತಪವ ಮಾಡಿದರೇನು? ಏನು ಮಾಡಿದರೇನು, ನಮ್ಮ ಕೂಡಲಸಂಗಮ ದೇವನ ಮನಮುಟ್ಟನೆನೆಯದನ್ನಕ್ಕರ?

೬೫. ನೀವು ಹಿರಿಯರೆಂಬಿರಿ, ನೀವು ಕರ್ಮಿಗಳು ಕೇಳಿರಿ. ನಿಮ್ಮ ವೇದ ಶಾಸ್ತ್ರಂಗಳು ಆರ ಹೊಗಳುತ್ತಿರುವವು? "ದಿವಾ ಭೂಮಿಜನಯಂ ದೇವಾ ಏಕೋ ದೇವ" ಎಂದು ಶೃತಿ ಸ್ಮೃತಿಗಳು ಸಾರುತ್ತಿರುವವು. "ವರ್ಣಾನಾಂ ಬ್ರಾಹ್ಮಣೋ ಗುರುಃ" ಎಂಬುದು ಹುಸಿ. ವರ್ಣಾನಾಂ ಗುರು ನಮ್ಮ ಕೂಡಲಸಂಗನ ಶರಣರು.

೬೬. ನಿಜಭಾವ ಲಕ್ಷ್ಮಿ ಸರಸ್ವತಿ ಒಲಿದರೆ ಕುಲವ ನರಸಲೇಕೆ?

ಆ ದೇವನೊಲಿದ ಭಕ್ತಂಗೆ ಇನ್ನಾವ ಮಂತ್ರವೇತಕಯ್ಯ? ಕಾಮಧೇನು ಮನೆಯಲ್ಲಿರಲು, ಬೇರೆ ಹಯನವನರಸಲೇಕೆ? ಮೋಹವುಳ್ಳ ಠಾವಿನಲ್ಲಿ ಲಜ್ಜೆಯನು ಅರಸಲೇಕೆ? ಮಹಾದಾನಿ ಕೂಡಲ ಸಂಗಯ್ಯ ನೊಲಿದು ಮಾದಾರ ಚನ್ನಯ್ಯನ ಮನೆಯಲ್ಲುಂಡ. ವೇದವನೋದಿದವರು ಲಿಂಗ ವನೊಲಿಸಿದುದ ತೋರಿರೋ.

೬೭. ಆದ್ಯರಿಗಲ್ಲದೆ ವೇದ್ಯವಾಗದು ಮಾಣಿಭೋ ಮಾಣಿಭೋ. ಶಿವಭಕ್ತನೇ ಕುಲಜ. ಕೈವರ್ತತೀ ಗರ್ಭ ಸಂಭವೇ ಮಾರ್ಕಂಡೇಯು ಮಹಾಮುನಿ ತಪಸ್ಸು ಜಾಯತೇ ವಿಪ್ರ ಕುಲೆ, ತಸ್ಮಾತ್ ಜಾತಿಬೇಧಂ ನಕುರ್ಯಾತ್ ಜಾತನಲ್ಲ, ಅಜಾತನಲ್ಲ· ಕೂಡಲಸಂಗನ ಶರಣರು ನಿಸ್ಸೀಮರಯ್ಯ

೬೮. ಎಮ್ಮವರಧಿಕರು, ಎಲ್ಲರಿಂದಧಿಕರು. ಪಾಕವ ಮಾಡುವ ಭಾಂಡ ಸೊಣಗನಡೋವಿಗೆಯಯ್ಯ. ಕೆರಹಿನಲ್ಲಿ ಮುಚ್ಚುವದು ಆವ ಆಚಾರವಯ್ಯ. ಕೂಡಲಸಂಗಮದೇವ, ನಿಮ್ಮ ವಚನವಿಂತೆಂದುದು, ಭವಿ ನೋಡಿದ ಓಗರ ಲಿಂಗಾರ್ಪಿತ ಲಿಂಗಾರ್ಪಿತವಾಗದೆಂದು.

೬೯. ಅಯ್ಯಾ, ನಿಮ್ಮ ಭಕ್ತರ ಚಮ್ಮಾವುಗೆಗೆ ಪೃಥ್ವಿಸಮಬಾರ ದು. ಸರಿಯಲ್ಲೋ ನೋಡಾ, ಕೂಡಲಸಂಗಮದೇವ, ನಿಮ್ಮ ಶರಣರ ಚಮ್ಮಾವುಗೆಗೆ.

೭೦. ದೇವ ನಿಮ್ಮ ಪೂಜಿಸಿ, ಚನ್ನನ ಕುಲ ಚನ್ನಾಯಿತ್ತು. ದೇವ ನಿಮ್ಮ ಪೂಜಿಸಿ ದಾಸನ ಕುಲ ದೇಸೆವಡೆಯಿತ್ತು. ನಿಮ್ಮಡಿಯ ಕ್ಕೆರಗಿ ಮಡಿವಾಳ ಮಾಚಯ್ಯ ನಿಮ್ಮಡಿಯಾದ ನೀನೊಲಿವ ಕುಲಕ್ಕೆ ನೀನೊಲಿದ ಹೊಲೆಗೆ ಮೇರೆಯುಂಟೇ ದೇವಾ? "ಶ್ವಪಚೋಪಿ ಮುನಿ ಶ್ರೇಷ್ಠಃ। ಯಸ್ತು ಲಿಂಗಾರ್ಚನೈಸ್ತಥಾ॥ ಲಿಂಗಾರ್ಚನ ವೀಹಿನೋಪಿ। ಬ್ರಾಹ್ಮಣಃ ಶ್ವಪಚಾಧಮಃ" ಎಂದುದಾಗಿ ಜಾತಿ ವಿಜಾತಿಯಾದರೇನು, ಅಜಾತಂಗೆ ಶರಣೆನ್ನದಾತನೇ ಹೊಲೆಯ, ಕಾಣಾ ಕೂಡಲಸಂಗಮ ದೇವಾ.

೭೧. ಚತುರ್ವೇದಿಯಾದರೇನು, ಲಿಂಗವಿಲ್ಲದವನೇ ಹೊಲೆಯ. ಶ್ವಪಚನಾದರೇನು, ಲಿಂಗವಿದ್ದವನೇ ವಾರಣಾಸಿ. ಆತನ ನುಡಿಗಡಣ ವೇ ಲೇಸು. ಆತ ಜಗಕ್ಕೆ ಪಾವನ. ಆತನ ಪ್ರಸಾದವೆನಗಮೃತ

ಸೇವನೆ. "ಮಮುಸ್ತ್ರಿಯು ಚತುರ್ವೇದಿ। ಮದ್ಭಕ್ತಶ್ವಪಚೋಪಿವಾ ತ। ಸ್ಮಾದೇವಂ ತಥೋ ಗ್ರಾಹ್ಯಂ। ಸಚ ಪೂಜ್ಯೋಯಥಾ ಸ್ವಯಂ" ಎಂದುದಾಗಿ ಇದುಕಾರಣ ಕೂಡಲಸಂಗಮ ದೇವರ ನರಿತು ಪೂಜಿಸಿದಾತ ಷಡ್ದರ್ಶನಕ್ಕಧಿಕ, ಜಗಕ್ಕೆ ಪಾವನ ನೋಡಾ.

೭೨. ಭಕ್ತಿಹೀನನ ದಾಸೋಹವ ಸದ್ಭಕ್ತರು ಸವಿಯರು. ಬೇವಿನಹಣ್ಣು ಕಾಗೆಗೆ ಇನಿವಲ್ಲದೆ, ಕೋಗಿಲೆ ಮೆಲ್ಲಲು ಬಾರದು. ಲಿಂಗ ಸಂಬಂಧವಿಲ್ಲದವರ ನುಡಿ, ಕೂಡಲಸಂಗನ ಶರಣರಿಗೆ ಸಮನಿಸದು.

೭೩. ಬಲ್ಲಹ ಬಿಡಲು ಹೊಲೆಗೇರಿ ಎಂಬ ಹೆಸರೊಳವೇ ಅಯ್ಯ? ಲಿಂಗವಿದ್ದವರ ಮನೆ ಕೈಲಾಸವೆಂದು ನಂಬಬೇಕು. ಇದಕ್ಕೆ ಪ್ರಮಾಣ "ಚಾಂಡಾಲ ವಾಟಿಕಾಯಾಂ ವಾ। ಶಿವಭಕ್ತಸ್ಥಿತೋಯದಿ। ತತಸ್ತಚ್ಛಿವಲೋಕಸ್ಯ। ತದ್ಗೃಹಂ ಶಿವಮಂದಿರಂ" ಎಂದುದಾಗಿ ಲೋಕದ ಡಂಭಕರ ಮಾತಬೇಡ ಕೂಡಲಸಂಗಮ ದೇವಯ್ಯನಿದ್ದುದೇ ಕೈಲಾಸ.

೭೪. ಲಿಂಗವಿಲ್ಲದೆ ನಡೆವರ, ಲಿಂಗವಿಲ್ಲದೆ ನುಡಿವರ, ಲಿಂಗವಿಲ್ಲದೆ ಉಗುಳ ನುಂಗಿದರೆ ಅಂದಂದಿಂಗೆ ಕಿಲ್ಬಿಷವಯ್ಯ. ಏನೆಂಬೆನೇನೆಂಬೆನಯ್ಯ. ಲಿಂಗವಿಲ್ಲದೆ ನಡೆವರ ಅಂತವರ ಮುಟ್ಟಲಾಗದು. ಲಿಂಗವಿಲ್ಲದೆ ನುಡಿವರ ಶಬ್ದಸೂತಕ ಕೇಳಲಾಗದು. ಲಿಂಗವಿಲ್ಲದೆ ಗಮಿಸಿದರೆ, ಆ ನಡೆನುಡಿಗೊಮ್ಮೆ ವ್ರತಗೇಡಿಯಯ್ಯ ಕೂಡಲಸಂಗಮದೇವ.

೭೫. ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ ಗ್ರಹಣ. ಗ್ರಹಣದಿಂದ ಸಂಕ್ರಾಂತಿ ವೆಗ್ಗಳ. ಸಂಕ್ರಾಂತಿಯಿಂದ ವೆಗ್ಗಳ ಏಕಾದಶಿ. ವ್ಯತೀಪಾತದಿಂದ ವೆಗ್ಗಳ ಸೂಕ್ಷ್ಮ. ಶಿವಪಥವನರಿಯದವಗೆ ಹೋಮ ನೇಮ ಜಪ ತಪದಿಂದೆ ವೆಗ್ಗಳ ಕೂಡಲಸಂಗಮ ದೇವರ ಮಾಣದೆ ಮಾಣದೆ ನೆನೆವಂಗೆ.

೭೬. ಅಶ್ವಮೇಧಯಾಗವಂತಿರಲಿ, ಆ ಜಪೆಯುಪದೇಶ ಸಮಾಧಿಯಂತಿರಲಿ. ಹೋಮ ಗಾಯಿತ್ರಿಯ ಜಪವಂತಿರಲಿ, ಜನಮೋಹನ ಯಂತ್ರ ಮಂತ್ರವಂತಿರಲಿ. ಕೂಡಲಸಂಗಮ ದೇವರ ಶರಣರ ನುಡಿಗಡಣ ಇವೆಲ್ಲಕ್ಕೆ ಅಧಿಕ ನೋಡಯ್ಯ.

೭೭. ವೇದಶಾಸ್ತ್ರವ ಬಲ್ಲವರ ಹಿರಿಯರೆಂಬೆನೆ? ಮಾಯಾಭ್ರಾಂತಿ. ಕವಿತಜ್ಞರ ಹಿರಿಯರೆನ್ನೆ. ಇವರು ಹಿರಿಯರುಗಳೆ, ಯಾಗನಟ್ಟುವಿಗೆ ಪ್ರಾಣರು? ಇವರಿಂದಧಿಕ ಸಾಧಿಸುವರೇನು ಕಿರಿಯರೇನು? ಇಂತು

ವಿದ್ಯಾ ಗುಣ ಜ್ಞಾನ ಧರ್ಮ ವಿಚಾರ ಶೀಲಂಗಳ ನಮ್ಮ ಕೂಡಲಸಂಗ ನ ಶರಣರು ಸಾಧಿಸಿದ ಸಾಧನೆಯು ಸಾಧಿಸುವುದು.

೭೮. ಹಾರುವರೆಲ್ಲರು ನೆರೆದು ಶೂದ್ರನ ಹಾರುವನ ಮಾಡುವ ಲ್ಲಿ, ನಂದಿಮುಖವಲ್ಲದೆ ಮಾಡಲಾಗದು. ವಿಭೂತಿಯಿಂದಲ್ಲದೆ ಮತ್ತೇ ನೂ ಮಾಡಲಾಗದು. ' ಭರ್ಗೋ ದೇವ, ಮಂತ್ರವಲ್ಲದೆ, ಮತ್ತೇನನು ಓದಲಾಗದು. ನಿಮ್ಮಿಂದ ಕುಲಜರಾಗಿ ಮತ್ತನ್ಯ ದೈವಕ್ಕೆರಗುವ ಜಗದ ನ್ಯಾಯಿಗಳನೇನೆಂಬೆ ಕೂಡಲಸಂಗಮ ದೇವಾ?

೭೯ ದೇವನೊಬ್ಬ, ನಾಮ ಹಲವು, ಪರಮ ಪತಿವ್ರತೆಗೆ ಗಂಡ ನೊಬ್ಬ. ಮತ್ತೊಂದಕ್ಕೆರಗಿದರೆ ಕಿವಿ ಮೂಗ ಕೊಯ್ಯುವನು. ಹಲವು ದೈವದ ಎಂಜಲ ತಿಂಬುವರನೇನೆಂಬೆನಯ್ಯ ಕೂಡಲಸಂಗಮದೇವಾ?

೮೦ ಕರ್ತನ ಪೂಜಿಸಿ, ಕುತ್ಸಿತ ದೈವಕ್ಕೆರಗುವರು, ಕತ್ತೆಗೆ ಕುದುರೆಗೆ ಹುಟ್ಟಿದ ಹೇಸರನಂತೆ. ಅವರ ಭಕ್ತರೆಂತೆಂಬೆ? ಭೃತ್ಯರೆಂತೆಂ ಬೆ? ಶರಣರೆಂತೆಂಬೆನವರ? ಎರಡುಳ್ಳ ಪ್ರಪಂಚಿಗಳ ಮೆಚ್ಚ ಕೂಡಲ ಸಂಗಮ ದೇವ.

೮೧. ಕಂಡಕಂಡವರೆಲ್ಲರ ಗಂಡರೆಂತೆಂಬ ದಿಂಡೆಯನವಳ ಸಜ್ಜನೆ ಎಂದೆನ್ನಬಹುದೆ? ಲಿಂಗಪ್ರಸಾದವನುಂಡು ಅನ್ಯ ದೈವಂಗಳ ಕೊಂಡಾ ಡುವರ ನಮ್ಮ ಕೂಡಲಸಂಗಮ ದೇವರು ಆ ಭಂಡರಿಗೆ ಮಾಡಿದ ಹುಳುಗೊಂಡವನು.

೮೨. ನಂಬಿದ ಹೆಂಡಿತಿಗೆ ಗಂಡನೊಬ್ಬನೇ ಕಾಣಿರೋ. ನಂಬ ಬಲ್ಲ ಭಕ್ತಂಗೆ ದೇವನೊಬ್ಬನೇ ಕಾಣಿರೋ. ಬೇಡ, ಬೇಡ, ಅನ್ಯದೈ ವದ ಸಂಗಹೊಲ್ಲ. ಅನ್ಯದೈವವೆಂಬುದು ಹಾದರ ಕಾಣಿರೋ. ಕೂಡಲ ಸಂಗಮದೇವ ಕಂಡರೆ, ಮೂಗ ಕೊಯ್ವ ಕಾಣಿರೋ.

೮೩. ಉಡಿಸುವ ತೊಡಿಸುವ ಗಂಡನಿರ್ದಂತೆ ಜೋಡಮಿಂಡರಿಗೆ ಕಣ್ಣಚಲ್ಲುವಳ ಕೇಡಿಂಗೆ ಬೆರಗಾದೆ ನಾನು. ಕೂಡಲಸಂಗಮದೇವನು ಕಂಡರೆ, ಸಿಂಗರದ ಮೂಗ ಬಣ್ಣಿಸಿ ಹಲ್ಲುದೋರಿಕೊಯ್ವನು.

೮೪. ಅಷ್ಟಮಿ ನವಮೀ ಎಂಬ ಕಲ್ಪಿತವೇಕೋ ಶರಣಂಗೆ? ತಪ್ಪಿ ತ್ತು ಗಣಪದವಿ. ಲಿಂಗಕ್ಕೆದೂರ. ಜಂಗಮಕ್ಕೆದೂರ. ಒಬ್ಬರಿಗಾಳಾಗಿ ಒಬ್ಬರನೋಲೈಸುವ ಸಿರ್ಬುದ್ಧಿ ಮನುಜರನೇನೆಂಬೆ ಕೂಡಲಸಂಗ ಮದೇವ?

೮೫. ಎಲವೋ, ಎಲವೋ, ಪಾಪಕರ್ಮವ ಮಾಡಿದವನೇ, ಎಲವೋ, ಎಲವೋ, ಬ್ರಹ್ಮಹತ್ಯವ ಮಾಡಿದವನೇ, ಒಮ್ಮೆ ಶರಣೆನ್ನೆಲವೋ. ಒಮ್ಮೆ ಶರಣೆಂದರೆ, ಪಾಪಕರ್ಮ ಕೆಟ್ಟೋಡುವವು ಸರ್ವಪ್ರಾಯಶ್ಚಿತ್ತಕ್ಕೆ ಹೊನ್ನ ಪರ್ವತಂಗಳೇ ಇದ್ದವು. ಓರ್ವಂಗೆ ಶರಣೆನಿ ನಮ್ಮ ಕೂಡಲಸಂಗಮ ದೇವಂಗೆ.

೮೬. ಹಲವು ಕೊಂಬೆಗೆ ಹಾಯಲುಬೇಡ. ಬರುಕಾಯಕೆ ಸೀಡ್ಸಬೇಡ. ಲೋಗರಿಗೆ ಕೊಟ್ಟು, ಭ್ರಮಿತನಾಗಬೇಡ, ಆಚಾರವೆಂಬುದೊಂದು ಹಾವಸೆಗಲ್ಲು. ಭಾವತಪ್ಪಿದ ಬಳಿಕ ಏಗೈದಡಾಗದು. ಅಂಜದಿರು, ಅಳುಕದಿರು. ಪರದೈವಕ್ಕೆರಗದಿರು. ಕೂಡಲಸಂಗಮದೇವರ ಕೈಯ್ಯಲ್ಲಿರಿಸುವುದು ನಿನ್ನ ಭಾರ.

೮೭. ದ್ವಿಜರಿಗೆ ಕೊಟ್ಟು, ಹಲಬರು ಕೆಟ್ಟರು. ಉದ್ಧರಿಸುವನೊಬ್ಬ ಶಿವಶರಣ ಸಾಲದೇ? ನಾರಾಯಣ ವೃದ್ಧ ಬ್ರಾಹ್ಮಣನಾಗಿ ಬಂದು ಬಲಿಯ ಭೂಮಿಯ ದಾನವ ಬೇಡಿದ. ಕೊಟ್ಟಬಲಿ. ಬಂಧನಕ್ಕೊಳಗಾದ ಈಶ ಜಂಗಮವಾಗಿ ಬಂದು, ದಾಸನ ವಸ್ತ್ರವ ಬೇಡಿದ. ಕೊಟ್ಟದಾಸ. ತವನಿಧಿಯ ಪಡೆದ. ನಾರಾಯಣ ಹಾರುವನಾಗಿ ಬಂದು, ಕರ್ಣನ ಕವಚವ ಬೇಡಿದ. ಕೊಟ್ಟ ಕರ್ಣ ಕಾಳಗದಲ್ಲಿ ಮಡಿದ ಕಾಮಾರಿಜಂಗಮನಾಗಿ ಬಂದು, ಸಿರಿಯಾಳನ ಮಗನ ಬೇಡಿದ. ಕೊಟ್ಟ ಸಿರಿಯಾಳ. ಕಂಚಿಯ ಪುರವ ಕೈಲಾಸಕ್ಕೊಯ್ದ. ಇದುಕಾರಣ ಇಲ್ಲಿಯೂ ಲೇಸು, ಅಲ್ಲಿಯೂ ಲೇಸು. ಕೊಡಿರೇ ನಮ್ಮ ಕೂಡಲಸಂಗನ ಶರಣರಿಗೆ.

೮೮. ಎಚ್ಚು ವಾಲಿಯ ಕೊಂದ. ಕಟ್ಟಿದನು ಶರಧಿಯ. ಹತ್ತುತಲೆಯ ರಾವಣನನೊಂದೇ ಯಂಬಿನಲ್ಲಿ ಮಡುಹಿದ. ಛಲದಿಂದ ಲಂಕಾದ್ವೀಪವನೆ ಲವಣವ ಮಾಡಿದ. ಕಲಿ ವಿಭೀಷಣಂಗೆ ಪಟ್ಟವ ಕಟ್ಟಿದ. ರಾಮನ ತೋರಾ. ಮಾಯದ ಸಂಸಾರವ ನೆಚ್ಚಿ ವಾಯಕ್ಕೆ ಕೆಟ್ಟು, ಬರುದೊರೆಯಾಗಬೇಡ. ಕರ್ತು ಕೂಡಲಸಂಗನ ಶರಣರಿಗೆ ಶರಣೆನ್ನಿರಯ್ಯಾ.

೮೯. ವಿಪ್ರರ ಕರೆದು ನೃಪರುಗಳು ಇಪ್ಪರೇ ತಮ್ಮ ಶಿಶುವಿನೊಡನೆ, ಎಂದು ಬೆಸಗೊಂಡರೆ, ಇಪ್ಪರು. ಇಪ್ಪರು. ತಾವು ಬಿತ್ತಿದ ಫಲಂಗಳ ತಾವು ಉಣ್ಣದವರುಂಟೆ, ಎಂದು ಕಣ್ಣ ಕಾಣದೆ ಹೇಳಿದರು ಅಣ್ಣಗಳು ಕರ್ಮದ ಬಟ್ಟೆಯನು ಇಂತೆಂಬ ಮಾತ ಶಿಶು ಕೇಳಿ, ಶಿಶು ಕೆಟ್ಟೋ

ಡಿ ಬಂದು, ಲಿಂಗದ ಹೊಟ್ಟೆಯ ಹೊಗಲು, ಅಟ್ಟೆಬೀದು, ಖಂಡೆಯವ ಕಳೆದುಕೊಂಡು ಮಂಡೆಯನೊಡೆಯ ಹೊಯ್ಯಲು, ಮಂಡೆಯೊಡೆದು, ಭೂಮಂಡಲವರಿಯೆ ನಾಲ್ಕು ಪುರವಾಗಲು, ಘಟಸರ್ಪನ ತುಡಿಕಿ, ನಾಗನಾಥನಾಗಿ, ಇಪ್ಪತ್ತೇಳು ಬಸದಿಯ ನೊಡೆಯನೆ? ಆಗಳಂತೆ ಎನ್ನ ಮಾಡಿದ ಕರ್ಮವ ನಿಮ್ಮ ಕೈಯ್ಯಲು ಕೆಡಿಸುವರ ಮುನ್ನೊಬ್ಬ ಕೆಡಿಸಿ ಹೆನೆಂದುಬ್ಬಿ ಬಂದು ಒಂದು ತುತ್ತಸಿಟ್ಟು, ಮರಳಿ ಕೈ ಇಡಹೋದರೆ ತುತ್ತು ಹುಳುಗುಪ್ಪೆಯಾಗದೇ? ಶಿವಧರ್ಮವ ಕೆಡಿಸಿದವನು ಅಧರ್ಮಕ್ಕೆಳಿವನು. ಕೂಡಲಸಂಗಮದೇವರು ಸಾಕ್ಷಿಯಾಗಿ ಮಕರ ಭೋಜನವಾಗನೇ ವಿನ ಶಕ್ತಿರಾಯನು?

೯೦. ಅರಸು ವಿಚಾರ ಸಿರಿಯು ಶೃಂಗಾರ ಸ್ಥಿರವಲ್ಲ ಮಾನವ. ಕೆಟ್ಟಿತ್ತು, ಕಲ್ಯಾಣ ಹಾಳಾಯಿತ್ತು, ನೋಡಯ್ಯ! ಒಬ್ಬ ಜಂಗಮದ ಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು, ಸಂದಿತ್ತು, ಕೂಡಲಸಂಗಮದೇವ, ನಿಮ್ಮ ಕವಳಿಕೆಗೆ.

೯೧. ಬೇವಿನ ಬೀಜವ ಬಿತ್ತಿ, ಬೆಲ್ಲದ ಕಟ್ಟೆಯ ಕಟ್ಟಿ, ಆಕಳ ಹಾಲನೆರದು ಜೇನತುಪ್ಪವ ಹೊಯ್ದು, ಸುರ್ರಂತ ಮಾಡಿದರೆ, ಕಹಿಯಲ್ಲದೆ, ಸಿಹಿಯಾಗಬಲ್ಲುದೇ? ಶಿವಭಕ್ತರಲ್ಲದವರ ಕೂಡ ನುಡಿಯಲಾಗದು ಕೂಡಲಸಂಗಮದೇವ.

೯೨. ಕರ್ತನನರಿಯದವನು ವಿಪ್ರನಾದರೇನು, ಚತುರ್ವೇದಿಯಾದರೇನು? ಭುಕ್ತಿ ಕಾರಣ ಲೋಕವಿಚ್ಛೆಗೆ ನುಡಿದು, ನಡೆವರಯ್ಯ. ಭವಿ ಮಾಡಿದ ಪಾಕವ ತಂದು ಲಿಂಗಕ್ಕರ್ಪಿಸುವ ಕಷ್ಟರ ಕಂಡು, ನಾಚಿತ್ತೆನ್ನ ಮನವು. ಕೂಡಲಸಂಗನ ಶರಣರ ಒಕ್ಕುದನುಂಡು ಅನ್ಯವನಾಚರಿಸಿದರೆ ತಪ್ಪದು ಸೂಕರ ಶುಚಿಭೂತ ಪ್ರಾಣಿಯಂತೆ.

೯೩. ಉಂಬಲ್ಲಿ ಉಡುವಲ್ಲಿ ಕುಲವಳಿಯಿತೆಂಬರು.. ಕೊಂಬಲ್ಲಿ ಕೊಡುವಲ್ಲಿ ಕುಲವನರಸುವ ಮಾದಿಗರನೇನೆಂಬೆನಯ್ಯ? ಇವರೆಂತು ಭಕ್ತರೆಂಬೆನಯ್ಯ? ಇವರೆಂತು ಯುಕ್ತರೆಂಬೆನಯ್ಯ? ಇವರು ವಚ್ಯೋಚ್ಚಿ ಭಕ್ತರು. ಇವರು ವಚ್ಯೋಚ್ಚಿ ಭವಿಗಳು. ಅದೆಂತೆಂದೊಡೆ ಲೈಂಗ್ಯೇ:— "ಸ್ತ್ರೀವಾ ಪುರುಷ ಷ್ಷಂಡಶ್ಚಾಂಡಾಲದ್ವಿಜ ವಂಶಜಃನ ಜಾತಿ ಭೇದೊ ಲಿಂಗಾರ್ಚನೆ ಸರ್ವೇ ರುದ್ರಗಣಾಃ ಸ್ಮೃತಾಃ" ಎಂದುದಾಗಿ, ಇಂತೆಂಬ ಪುರಾಣವಾಕ್ಯವ ತಿಳಿದು ನೋಡಿರೇ. ಸರ್ವರೂ ರುದ್ರಗಣಂ

ಗಳೆಂಬೆ. ಸರ್ವರೂ ಸದ್ಭಕ್ತರೆಂಬೆ. ಅವರಲ್ಲಿ ಕುಲವ ನೋಡದೆ, ಆಚಾರವ ನೋಡಿ, ಅವರಿಗೆ ಬೇಕಾದ ಹೆಣ್ಣು ಕೊಟ್ಟು, ತನಗೆ ಬೇಕಾದುದ ತೆಗೆದುಕೊಂಬುವದು. ಈ ಕ್ರಮವನರಿಯದವನ ಭಕ್ತಿ ಹೊಲತಿ ಶುದ್ಧ ನೀರ ಮಿಂದಂತಾಯಿತ್ತು ಕೂಡಲಸಂಗಮದೇವ.

೯೪. ಮಾರಿ ಮಸಣಿ ಎಂಬಿವು ಬೇರಿಲ್ಲ ಕಾಣಿರೋ. ಮಾರಿ ಎಂಬುದೇನೋ? ಕಂಗಳು ತಪ್ಪಿ ನೋಡಿದರೆ, ಮಾರಿ. ನಾಲಿಗೆ ತಪ್ಪಿ ನುಡಿದರೆ ಮಾರಿ. ನಮ್ಮ ಕೂಡಲಸಂಗಮದೇವರ ನೆನಹ ಮರೆದರೆ ಮಾರಿ.

೯೫. ಆಯುಧ ವಿಕ್ಕಿದವಂಗೆ ವೀರದ ಮಾತೇಕೆ? ಲಿಂಗವು ಅಂತರಿಸಿದವಂಗೆ ಒಳ್ಳೇ ನುಡಿ ಏಕೆ? ಅಯ್ಯದಾಳಿ ಅಣತಿ ಇಲ್ಲದವಳಿಗೆ ಸೌಭಾಗ್ಯದ ಹೂವಿನ ಬೊಟ್ಟೇಕೆ? ಸತ್ಯನಲ್ಲದವಂಗೆ ನಿತ್ಯ ನೇಮವೇಕೆ? ಕರ್ತಾರ ನಿರ್ಮೂಲವಿಲ್ಲದವಂಗೆ ಶಂಭುವಿನ ಬಂಧುಗಳೇಕೆ? ಕೂಡಲಸಂಗಮದೇವಯ್ಯ, ನೀವಿಲ್ಲದವಂಗೆ ಶಿವಾಚಾರದ ಮಾತೇಕೆ?

೯೬. ಇರುಳೆಂದೇನೋ ಕುರುಡಂಗೆ? ತಾಳಬಾರಿಸಿವರೇನೋ, ಪಂಚಮಹಾವಾದ್ಯವ ನುಡಿಸಿದರೇನೋ ಕಿವುಡಂಗೆ, ಕೂಡಲಸಂಗಮದೇವರ ಪಥವು ಇನ್ನಾವುದೆಂದರಿಯದವಂಗೆ?

೯೭. ಸಿಂಗದ ನಡುಮುರಿಯಲಾ ಸಿಂಗವೇನು ಬಾತೆ? ಸೊಂಡಿಲು ಮುರಿದರೆ ಜಗವೇನು ಬಾತೆ? ಸಂಗ್ರಾಮದಲ್ಲಿ ವೀರನುಳಿಯೆ, ಕಲಿತನವೇನು ಬಾತೆ? ಶೃಂಗಾರದ ಮೂಗು ಹೋದರೆ ಶೃಂಗಾರವೇನು ಬಾತೆ? ನಿಜ ತುಂಬಿದ ಭಕ್ತಿ ತುಳುಕಾಡದವರ ಸಂಗವೇನು ಬಾತೆ ಕೂಡಲಸಂಗಮದೇವ?

೯೮. ಮುನ್ನಿನ ಆದ್ಯರ ಪಥಗಳು ಇನ್ನಾರಿಗೆಯೂ ಅಳವಡದು ನೋಡಾ. ಬಲ್ಲನಾಗಿ ಒಲ್ಲನವರ. ಸಲ್ಲರು ಶಿವಪಥಕ್ಕೆ. ಒಳ್ಳಿಹ ವೈಲಾರನ ಸಿಂಗಾರದಂತೆ, ವೇಶಿಯ ಬಾಯ ಎಂಜಲವನುಂಬ ದಾಸಿಯ ಸಂಸಾರದಂತೆ, ಕೂಡಲಸಂಗನ ಶರಣರ ನರಿಯದೆ ಉಳಿದ ಭಂಗಿತರ.

೯೯. ಗೀಜಗನ ಗೂಡು, ಕೋಡಗದಣಲ ಸಂಚ, ಬಾದುಮನ ಮದುವೆ, ಬಾವಲ ಬಿದ್ದಿನಂತೆ, ಜೂಜುಗಾರನ ಮಾತು, ಬೀದಿಗುಂಡನ ಸೊಬಗು, ಓಡಿನೊಳಗೆ ಅಗಿಯ ಹೊಯಿದಂತೆ ಕಾಣಿರೋ. ಶಿವನಾದಿಯ ನಂತುವನರಿಯದವನ ಭಕ್ತಿ ಸುಖ ಶೋಧನೆಗೆ ಮುದ್ದು ಕೊಂ

ಡಂತೆ ಕೂಡಲಸಂಗಮದೇವಾ.

೧೦೦. ತೊತ್ತಿನ ಕೊರಳಲ್ಲಿ ಹಿತ್ತಾಳಿಯ ಸಿಂಗಾರವ ಮಾಡಿದಂತೆ. ಕುಚಿತ್ತರ ಸಂಗ ಸುಸಂಗಿಗೆ ಸಂಗವಲ್ಲ. ಗುರುಗುಂಜಿ ಮಾಣಿಕಗೆ ಸರಿಯಪ್ಪುದೆ ಕೂಡಲಸಂಗಮದೇವ?

೧೦೧. ಕೆಂಚ ಕರಿಕನ ನೆನೆದರೆ, ಕರಿಕನಾಗಬಲ್ಲನೆ? ಕರಿಕ ಕೆಂಚನ ನೆನೆದರೆ, ಕೆಂಚನಾಗಬಲ್ಲನೆ? ದರಿದ್ರನು ಸಿರಿವಂತನ ನೆನೆದರೆ, ಸಿರಿವಂತನಾಗಬಲ್ಲನೆ? ಸಿರಿವಂತ ದರಿದ್ರನ ನೆನೆದರೆ, ದರಿದ್ರನಾಗಬಲ್ಲನೆ? ಮುನ್ನಿನ ಪುರಾತನರ ನೆನೆದು ಧನ್ಯನಾದೆನೆಂಬ ಮಾತಿನ ರಂಜಕರನೇನೆಂಬೆ ಕೂಡಲಸಂಗಮದೇವ?

೧೦೨. ಆನೆಯನೇರಿಕೊಂಡು ಹೋದಿರಿ ನೀವು. ಕುಂಕುಮ ಕಸ್ತುರಿಯ ಪೂಸಿಕೊಂಡು ಹೋದಿರಿ ನೀವು. ಕುದುರೆಯನೇರಿಕೊಂಡು ಹೋದಿರಿ ನೀವು. ಸತ್ಯದ ನಿಲವನರಿಯದೆ ಹೋದಿರಲ್ಲ ನೀವು! ಸದ್ಗುಣವೆಂಬ ಫಲವ ಬಿತ್ತದೆ ಹೋದಿರಲ್ಲಾ! ಅಹಂಕಾರವೆಂಬ ಮದಗಜವನೇರಿ, ಮೂವೀದಿಗೆ ಗುರಿಯಾಗಿ ಕೆಟ್ಟು ಹೋದಿರಲ್ಲಾ! ನಮ್ಮ ಕೂಡಲ ಸಂಗಮದೇವರನರಿಯದೆ ನರಕಕ್ಕೆ ಭಾಜನರಾದಿರಲ್ಲಾ!

೧೦೩. ಇಂದ್ರಿಯ ನಿಗ್ರಹ ಮಾಡಿದರೆ, ಹೊಂದುವವು ದೋಷಂಗಳು. ಮುಂದೆ ಕಾಡುವವು ಪಂಚೇಂದ್ರಿಯಂಗಳು. ಸತಿಪತಿ ರತಿ ಸುಖವ ಬಿಟ್ಟರೆ, ಸಿರಿಯಾಳಚಂಗಳೆಯವರು? ಸತಿಪತಿ ರತಿಸುಖ ಭೋಗೋಪ ಭೋಗ ಬಿಟ್ಟರೆ, ಸಿಂಧು ಬಲ್ಲಾಳನವರು? ನಿಮ್ಮ ಮುಟ್ಟಿ, ಪರಧನ ಪರಸ್ತ್ರೀಯರಿಗೆ ಎಳಸಿದರೆ, ನಿಮ್ಮ ಚರಣಕ್ಕೆ ದೂರ ಕೂಡಲ ಸಂಗಮದೇವಯ್ಯ.

೧೦೪. ಲಿಂಗ ಜಂಗಮವು ಒಂದೇ ಎಂದು ನಂಬಿದಬಳಿಕ, ಅವರಂಗನೆಯರು ಲಿಂಗದ ರಾಣಿವಾಸ. ಅಲ್ಲಿಯೂ ಮೇಳ, ಇಲ್ಲಿಯೂ ಮೇಳ, ಚೌಡೇಶ್ವರಿಯಲ್ಲಿಯೂ ಮೇಳ. ಮಾತೆ ಎಂಬ ಭಾವ ತಪ್ಪಿ ಅಪ್ಪಿದವರ ತಲೆಯ ಕೊಂಬ ಕೂಡಲಸಂಗಮದೇವ.

೧೦೫. ಒಡೆಯರು ತಮ್ಮ ಮನೆಗೆ ಒಡಗೊಂಡ ಹೋದರೆ, ತುಡುಗುಣಿತನದಲ್ಲಿ ಪರವಧುವ ನೋಡುವ ಸರಸ ಬೇಡವೋ, ಕಾಣಿರಣ್ಣಾ. ಒಡೆಯ ನರಸಿಯ ಸರಸ ಬೇಡವೋ. ಕೂಳಸೊಕ್ಕು ತಲೆಗೇರಿ, ರಾಣಿವಾಸದೊಡನೆ ಸರಸಬೇಡವೊ. ಕೂಡಲಸಂಗಮದೇವನು ಕರೆಯಿಸಿ

ತಗನಯ್ಯಾ.

೧೦೬. ನೋಡಲಾಗದು, ನುಡಿಯಲಾಗದು ಪರಸ್ತ್ರೀಯರ. ಬೇಡ, ಕಾಣಿರೋ. ತಗರ ಬೆನ್ನಿನಲ್ಲಿ ಹರಿವ ಸೊಣಗನಂತೆ ಬೇಡ ಕಾಣಿರೋ ಒಂದಾಸೆಗೆ ಸಾಸಿರ ವರುಷ ನರಕದಲ್ಲಿಕ್ಕುವ, ಕೂಡಲಸಂಗಮದೇವಯ್ಯ.

೧೦೭. ತೊರೆಯಮೀವ ಅಣ್ಣಗಳಿರಾ, ತೊರೆಯ ಮೀವಸ್ವಾಮಿಗಳಿರಾ, ತೊರೆಯಿಂಭೋ, ತೊರೆಯಿಂಭೋ, ಪರನಾರಿಯರ ಸಂಗ ತೊರೆಯಿಂಭೋ. ಪರಧನದಾಸೆಯಾಮಿಷವ ತೊರೆ ಯಿಂಭೋ. ಇವ ತೊರೆಯದೆ ಹೋಗಿ, ತೊರೆಯ ಮಿಂದರೆ, ಬರುವೊರೆ ಹೋಹುದು ಕೂಡಲಸಂಗಮದೇವ.

೧೦೮. ಸತ್ಯ ಶೌಚ ನಿತ್ಯ ನೇಮವ ತಪ್ಪದೇ ಮಾಡಬಲ್ಲರೆ, ಅದು ಲೇಸು. ಮತ್ಸ್ಯ ಕೂರ್ಮ ಮಂಡುಕ ಜಲದೊಳಗಿದ್ದಲ್ಲಿ ಫಲವೇನು? "ಚಿತ್ತಮಂ ತರ್ಗತಂ ದೃಷ್ಟಿಃ ತೀರ್ಥ ಸ್ನಾನೇನ ಶುದ್ಧತಿ। ಶತ ಕುಂಭ ಜಲೇ ಶೌಚಂ ಸುರಾಭಾಂಡಮಿವ ಶ್ಯುಚಿಃ" ಎಂದುದಾಗಿ ಅಗಡವ ಮಾಡಿ ಮಡುವ ಮಿಂದಡೆ, ತಾ ಕೊಡಬಲ್ಲನೇ ಕೂಡಲಸಂಗಮದೇವಾ?

೧೦೯. ಕುಳ್ಳಿರ್ದಲ್ಲಿ ಲಿಂಗವ ಪೂಜಿಸಿ, ಅಲ್ಲದಾಟವನಾಡುವರಯ್ಯ. ಬೆಳ್ಳಿತ್ತಿನ ಮರೆಯಲ್ಲಿರ್ದು, ಹುಲ್ಲೆಗಂಬ ತೊಡುವಂತೆ, ಕಳ್ಳ ಹಾದರಿಗರ ಕೈಯ್ಯಲು ಪೂಜೆಯ ಕೊಳ್ಳ ನಮ್ಮ ಕೂಡಲಸಂಗಮದೇವಾ.

೧೧೦. ನುಡಿಯಲ್ಲಿ ಎಚ್ಚತ್ತು, ನಡೆಯಲ್ಲಿ ತಪ್ಪಿದರೆ, ಹಿಡಿದಿರ್ದ ಲಿಂಗವು ಘಟಸರ್ಪನೋಡಯ್ಯ. ನುಡಿಯಲು ಬಾರದು, ನಡೆಯಲು ಬಾರದು, ಲಿಂಗದೇವನೇ ದಿವ್ಯವೋ, ಅಯ್ಯ. ಬಡವನ ಕೋಪ ದವಡೆಗೆ ಮೃತ್ಯುವಾದಂತೆ, ಕಡೆಗೆ ದಾಂಟದು ಕಾಣಾ ಕೂಡಲಸಂಗಮದೇವಾ.

೧೧೧. ತನು ಶುಚಿ ಇಲ್ಲದವನ ದೇಹವದೇತಕೆ? ದೇವರು ಕೊಡನೆಂಬ ಭ್ರಾಂತಿಯದೇತಕೆ? ಮನಕ್ಕೆ ಮನಸಾಕ್ಷಿ ಸಾಲದೆ, ಲಿಂಗ ತಂದೆ? ಹ್ಯಾಗೆ ಮನ, ಹಾಗೆ ಘನ ತಪ್ಪದು ಕೂಡಲಸಂಗಮದೇವಾ.

೧೧೨. ಪಾಪಿಗೆ ಕೋಪಿಗೆ ಭಕ್ತಿಯಾಗೆಂದಡೆ ಅಪ್ಪುದೆ? ನಾಯಿಗೆ ನಾರಿವಾಣ ವಕ್ಕುದೆ, ಕೂಡಲಸಂಗಮದೇವಾ, ನಿಮ್ಮ ನಂಬಿಯೂ ನಂಬದ ಡಂಭಕಂಗೆ?

೧೧೩. ಕೋಪಿ ಮಜ್ಜನಕ್ಕೆರೆದರೆ ರಕ್ತದ ಧಾರೆ. ಪಾಪಿ ಹೂವ

ನೇರಿಸಿದರೆ, ಮಸೆದಾಯುಧದ ಗಾಯ. ಕೂಪರನಾರನೂ ಕಾಣೆ, ಮಾದರ ಚನ್ನಯ್ಯನಲ್ಲದೆ. ಕೂಪರನಾರನೂ ಕಾಣೆ ಡೋಹರ ಕಕ್ಕಯ್ಯನ ಲ್ಲದೆ. ವ್ಯಾಪ್ತಿಯುಳ್ಳವ ನಮ್ಮ ಮಡಿವಾಳ ಮಾಚಯ್ಯ. ನಿಮ್ಮ ಪತ್ತಿ ಗರಿವರಯ್ಯ ಕೂಡಲಸಂಗಮದೇವಾ.

೧೧೪. ಸದಾಚಾರ ಸದ್ಭಕ್ತಿ ಇಲ್ಲದವರ ನಾನೊಲ್ಲೆನಯ್ಯ. ಅವ ರಾರಾಧನೆ ದಂಡ. ನಿಚ್ಚ ನಿಚ್ಚ ಪಾಯಶ್ಚಿತ್ತರ ನೊಲ್ಲನಯ್ಯ, ಕೂಡಲ ಸಂಗಮದೇವ, ಭೂಮಿ ಭಾರಕರಾ.

೧೧೫. ನೂರನೋದಿ, ನೂರ ಕೇಳಿದರೇನು. ಆಶೆ ಹರಿಯದು, ರೋಷ ಬಿಡದು. ಮಜ್ಜನಕ್ಕೆರೆದು ಫಲವೇನು? ಮಾತಿನಂತೆ ಮನವಿ ಲ್ಲದ ಜಾತಿ ಡೊಂಬರ ನೋಡಿ ನಗುವ ನಮ್ಮ ಕೂಡಲಸಂಗಮದೇವಾ.

೧೧೬. ತಂದೆ ಮಕ್ಕಳಿಗೆ ಬುದ್ಧಿಯ ಹೇಳುವಲ್ಲಿ ತಪ್ಪಿಂಗೆ ಮುನಿ ವರಲ್ಲದೆ ಪ್ರಾಣಕ್ಕೆ ಮುನಿಯ. ಲಿಂಗವಂತರು ಲಿಂಗವಂತರಿಗೆ ಬುದ್ಧಿಯ ಹೇಳುವಲ್ಲಿ, ಅವಗುಣಕ್ಕೆ ಮುನಿವರಲ್ಲದೆ ಲಾಂಛನಕ್ಕೆ ಮುನಿಯ. ಲಿಂಗಭಕ್ತನು ಲಿಂಗವಂತರಿಗೆ ಬುದ್ಧಿಯ ಹೇಳಿದರೆ, ಮಚ್ಚರಿಸುವರ ಮೆಚ್ಚ ಕೂಡಲಸಂಗಮದೇವಾ.

೧೧೭. ಗುರೂಪದೇಶ ಮಂತ್ರ ವೈದ್ಯ. ಜಂಗಮೋಪದೇಶ ಶಸ್ತ್ರ ವೈದ್ಯ ನೋಡಯ್ಯ. ಭವರೋಗವ ಕಳೆವ ಪರಿಯ ನೋಡಯ್ಯ. ಕೂಡ ಲಸಂಗನಶರಣರ ಅನುಭಾವ ಮಡಿವಾಳನ ಕಾಯಕದಂತೆ.

೧೦೮. ಶಿವಚಿತ್ತ ಶಿವಜ್ಞಾನ ಭ್ರಮೆ ತೀದ ವಂಗಲ್ಲದೆ, ಆಚಾರ ಶಿವಾಚಾರ ತಮತಮಗೆ ಸೂರಿಯೇ, ಕೂಡಲಸಂಗಮದೇವರ ನೆರೆಪೂ ಜಿಸಿದ ವಂಗಲ್ಲದೇ?

೧೧೯. ಶ್ವಪಚನಾದರೇನು, ಲಿಂಗ ಭಕ್ತನೇ ಕುಲಜ. ನಂಬಿಯೂ ನಂಬದಿದ್ದರೆ, ಸಂದೇಹಿನೋಡಯ್ಯ. ಕಟ್ಟಿದರೇನು, ಮುಟ್ಟಿದರೇನು, ಪೂಜಿಸಿದರೇನು, ಮನಮುಟ್ಟದನ್ನಕ್ಕ? ಭಾವ ಶುದ್ಧವಿಲ್ಲದವಂಗೆ, ಭಕ್ತಿ ನೆಲೆಗೊಳ್ಳದು, ಕೂಡಲಸಂಗಮದೇವ ನೀನೊಲಿದವಂಗಲ್ಲದೆ.

೧೨೦. ಅವರ ನಡೆ ಒಂದು ನುಡಿಯೊಂದಾದರೆ, ಶಿವಾಚಾರಕ್ಕ ವರು ಸಲ್ಲರಯ್ಯ. ಬಲ್ಲನು. ಸಾತ್ವಿಕರಲ್ಲದವರ ನೊಲ್ಲನು. ಶಿವಾಚಾರವ ಬಲ್ಲನು. ಅಲ್ಲಿ ನಿಲ್ಲನು. ಪ್ರಪಂಚಿಯ ನೊಲ್ಲನು ಕೂಡಲಸಂಗಮದೇವಾ.

೧೨೧. ನಿಧಾನವನು ಅರಸಿಹೆನೆಂದು ಹೋದರೆ, ವಿಘ್ನ ಬಪ್ಪದು

ಮಾಬುವೇ? ಸದಾಶಿವನೆಂದರೆ, ಬೆನ್ನಟ್ಟಿ ಸುಡುವುದು ಮಾಬುದೆ? ಹದುಳಿಗನಾಗಿ ಉಳಿದರೆ, ಪವನ ನೀವ ಕಾಣೋ, ಕೂಡಲಸಂಗಮ ದೇವಾ.

೧೨೨. ಅಡಿಗಡಿಗೆ ದೇವರಾಣೆ, ಅಡಿಗಡಿಗೆ ಭಕ್ತರಾಣೆ, ಅಡಿಗಡಿಗೆ ಗುರುವಿನಾಣೆ ಎಂಬ ವಚನ ಹೊಲ್ಲ. ಅವರು ಮುಂದೆ ಪದಕ್ಕೆ ಸಲ್ಲರು. ಆದಿಯಿಂದ ಬಂದ ವಚನವೆಂದು, ಮುಂದೆ ಶರಣರ ಕೂಡೆ ಸರಸವನಾಡಿದರೆ, ದ್ರೋಹ ತಪ್ಪದು. ನಗುತಲಿರಿದುಕ್ಕೊಂಡರೆ, ಅಲಗು ನಡದಿಹುದೇ ಕೂಡಲಸಂಗಮದೇವ?

೧೨೩. ಅರಗಿನ ಪುತ್ತಳಿಯ ಉರಿಯ ನಾಲಿಗೆಯು ಹೊಯಿದು, ಮಾತಾಡಿಸುವ ಸರಸಬೇಡವೋ. ಬೆಣ್ಣೆಯ ಬೆನಕಂಗೆ ಕೆಂಡದುಂಡಲಿಗೆಯನೆ ಮಾಡಿ, ಚಲ್ಲವಾಡಿದರೆ ಹಲ್ಲು ಹೋಹುದು ಮಾಣ್ಬುದೆ? ಕೂಡಲಸಂಗನ ಶರಣರೊಡನೆ ಸರಸವಾಡಿದರೆ, ಅದು ವಿರಸ ಕಾಣಿರಣ್ಣಾ.

೧೨೪. ಹಾವಿನ ಹೆಡೆಯು ಕೊಂಡು ಕೆನ್ನೆಯ ತುರಿಸಿಕೊಂಬಂತೆ, ಉರಿವ ಕೊಳ್ಳಿಯು ಕೊಂಡು ಮಂಡೆಯ ಸಿಕ್ಕು ಬಿಡಿಸುವಂತೆ, ಹುಲಿಯ ಮೀಸೆಯ ಹಿಡಿದುಕ್ಕೊಂಡು ಉಯ್ಯಾಲೆಯನಾಡುವಂತೆ, ಕೂಡಲಸಂಗನ ಶರಣರೊಡನೆ ಮರೆದು ಸರಸವಾಡಿದರೆ, ಸುಣ್ಣದ ಕಲ್ಲು ಮಡಲಲ್ಲಿ ಕಟ್ಟಿಕೊಂಡು ಮಡುವಿನಲ್ಲಿ ಬಿದ್ದಂತೆ.

೧೨೫. ಉರಿವ ಕೊಳ್ಳಿಯ ಮಂಡೆಯುಲಿಕ್ಕಿದರೆ, ಉರಿವುದು ಮಾಬುದೆ? ಕಲ್ಲು ಗುಗ್ಗರಿಯ ಮೆಲ್ಲಿದರೆ, ಹಲ್ಲು ಹೋಹುದು ಮಾಬುದೆ? ಶರಣರೊಡನೆ ಸರಸವಾಡಿವರೆ, ನರಕ ತಪ್ಪದು ಕಾಣಾ, ಕೂಡಲಸಂಗಮದೇವ.

೧೨೬. ಕೋಣನ ಹೇರಿಂಗೆ ಕುನ್ನಿ ಬುಸುಕುತ್ತ ಬರುವಂತೆ, ತಾವು ನಂಬರು. ನಂಬುವರ ನಂಬಲೀಯರು. ತಾವು ಮಾಡರು. ಮಾಡುವರನು ಮಾಡಲೀಯರು. ಮಾಡುವ ಭಕ್ತರ ಕಂಡು ಸೈರಿಸಲಾರದವರ ಕೂಗೇಡಿ ಕೂಗೇಡಿ ನರಕವಲ್ಲಿಕ್ಕುವ ಕೂಡಲಸಂಗಮದೇವ.

೧೨೭. ಹುಲಿಯ ಹಾಲು ಹುಲಿಯಮರಿಗಲ್ಲದೆ, ಹೊಲದ ಹುಲ್ಲೆಗೆ ಉಣಬಾರದು. ಕಲಿಯ ಕಾಲ ತೊಡರು ಚಲದಾಳಿಗಲ್ಲದೆ, ಇಕ್ಕಬಾರದು. ಅಳಿಮನದಾಸೆಯವರ ಹಲ್ಲುದೋರಿ ಮೂಗ ಕೊಯ್ವ ಕೂಡಲಸಂಗಮದೇವ.

೧೨೮. ಅರ್ಥಪ್ರಾಣಾಭಿಮಾನವ ನಿಮ್ಮದೆಂಬಿರಿ. ಒತ್ತಿ ನೋಡಿದರೆ, ಮುಟ್ಟಲೀಯ್ಯರಿ. ಮುಟ್ಟಿ ಬಂದಲ್ಲಿ, ಕಟ್ಟಾರಿಯು ಕಾಳಗವ ನೀವಾಡಿಸುವಿರಲ್ಲದೆ, ಲಿಂಗಜಂಗಮವಂತನಾಗಬಾರದು. ಕೂಡಲಸಂಗಮದೇವ ವೇಷ ಡಂಭಕರಿಗೆ ಭಕ್ತಿ ಎಂತಪ್ಪುದಯ್ಯಾ.

೧೨೯. ಚೀಳಿಂಗೆ ಬಸುರಾಯಿತ್ತೇಕಡೆ. ಬಾಳೆಗೆ ಫಲಸಿತ್ತೇಕಡೆ. ರಣರಂಗದಲ್ಲಿ ಕಾದುವ ಓಲೆಕಾರಂಗೆ ಓಸರಿಸಿತ್ತೇಕಡೆ. ಮಾಡುವ ಭಕ್ತಂಗೆ ಮನಹೀನವಾದಡೆ, ಅವೇಕಡೆ ಕೂಡಲಸಂಗಮದೇವ.

೧೩೦. ಅಲಗಲಗು ಮೋಹಿಸಿದಲ್ಲದೆ, ಕಲಿತನವ ಕಾಣಬಾರದು. ನುಡಿದ ನುಡಿ ಜಾರಿದರೆ ಮನಕ್ಕೆ ಮನ ನಾಚಬೇಕು. ಶಬ್ದ ಗಟ್ಟಿತನದಲ್ಲಿ ಎಂತಪ್ಪುದಯ್ಯ ಭಕ್ತಿ? ಪಾಪಿಯ ಕೂಸನೆತ್ತಿದಂತೆ. ಕೂಡಲಸಂಗಮದೇವರ ಭಕ್ತಿ ಅಳಿಮನದವರಿಗೆ ಅಳವಡದಯ್ಯಾ.

೧೩೧. ಹರಬೀಜವಾದರೆ ಹಂದಿ ತಾನಪ್ಪನೇ? ಒರೆಗಟ್ಟಿ, ಇರಿಯದವರ ಲೋಕ ಮೆಚ್ಚುವದೇ? ಉಟ್ಟ ಚಲ್ಲಣ ಕೈಪಟ್ಟಿಯ ಹಿಡಿದು, ಗರುಡಿಯ ಕಟ್ಟಿ, ಶ್ರಮವ ಮಾಡುವಂತೆತನ್ನ ತಪ್ಪಿಸಿಕೊಂಡರೆ, ಶಿವ ಮೆಚ್ಚುವನೆ? ಅರಿಯದವರಿಗೆ ಒಳ್ಳೆ ಹೆಡೆ ಎತ್ತಿ, ಆಡುವಂತೆ ಬೊಳ್ಳೆಗನ ಭಕ್ತಿ, ಕೂಡಲಸಂಗಮದೇವ.

೧೩೨. ಮೊನೆ ತಪ್ಪಿದಬಳಿಕ, ಅಲಗೇನು ಮಾಡುವದಯ್ಯಾ? ವಿಷ ತಪ್ಪಿದ ಬಳಿಕ ಹಾವೇನ ಮಾಡುವನಯ್ಯಾ? ಭಾಷೆ ತಪ್ಪಿದ ಬಳಿಕ, ಬಲ್ಲಿದ ಭಕ್ತನೇನು ಮಾಡುವನಯ್ಯಾ? ಭಾಷೆತಪ್ಪಿದಬಳಿಕ, ಪ್ರಾಣದಾಸೆಯನು ಹಾರಿದರೆ, ಮೂಸಲನು ಸೊಣಗ ಮುಟ್ಟಿದಂತೆ ಕಾಣಾ ಕೂಡಲಸಂಗಮದೇವಾ.

೧೩೩. ಶರಣ ಸಂಬಂಧವನರಿತಬಳಿಕ, ಮರಳಿ ಭವಿಯ ಬೆರಿಸಲಾಗದು. ಬ್ರಹ್ಮಹತ್ಯ ಭ್ರೂಣಹತ್ಯ, ವೈತರಣಿ, ದುರ್ಗತಿ ಪಂಚ ಮಹಾಪಾತಕದಿಂದಧಿಕ ನೋಡಾ. ಅಳುಪಿ ಭವಿ ಯೊಡನುಂಡರೆ, ಭಕ್ತನಲ್ಲ ಕೂಡಲಸಂಗಮದೇವಾ.

೧೩೪. ವೀರವ್ರತಿ ಭಕ್ತರೆಂದು ಹೊಗಳಿಸಿಕೊಂಬಿರಿ ಹೇಳಿರಯ್ಯಾ. ವೀರನಾದರೆ, ವೈರಿಗಳು ಮೆಚ್ಚಬೇಕು. ವ್ರತಿಯಾದರೆ, ಅಂಗನೆಯರು ಮೆಚ್ಚಬೇಕು. ಭಕ್ತನಾದರೆ, ಜಂಗಮ ಮೆಚ್ಚಬೇಕು. ಈ ನುಡಿಯೊಳಗೆ ತನ್ನ ಬಗೆ ಇರೆ ಬೇಡಿದ ಪದವಿಯ ನೀವ ಕೂಡಲಸಂಗಮದೇವ.

೧೩೫. ಕಲಿತನ ತನಗುಳ್ಳರೆ, ಸೂಜಿಬಾಳು ಮೊದಲಾಗಿ ಕಾದಲೇ ಬೇಕು. ಶರಣ ಪಥ ತನಗುಳ್ಳರೆ, ಶಿವಭಕ್ತರ ಮನೆಯ ಶಿವರಸವ ಪಂಚಾಮೃತವ ಮಾಡಿಕೊಳಬೇಕು. ಭ್ರಾಂತಿವಿಡಿದು ಲಿಂಗಕ್ಕೋಗರ ವನರಸುವ ಪಾತಕರ ಮೆಚ್ಚ ನಮ್ಮ ಕೂಡಲಸಂಗಮದೇವ.

೧೩೬. ಕಟ್ಟಿಬಿಡುವನೇ ಶರಣನು? ಬಿಟ್ಟು ಹಿಡಿವನೇ ಶರಣನು? ನಡೆದು ತಪ್ಪುವನೇ ಶರಣನು? ನುಡಿದು ಹುಸಿವನೆ ಶರಣನು? ಸಹಜ ಸಜ್ಜನಿಕೆ ತಪ್ಪಿದರೆ ಕೂಡಲಸಂಗಯ್ಯ ಹಲ್ಲುದೋರಿ ಮೂಗ ಕೊಯ್ವ.

೧೩೭ ಹುಟ್ಟುವಲ್ಲಿ ಭವಿ, ಮರಳಿ ಭಕ್ತನ ಮಾಡಿ, ಪೂರ್ವಾಶ್ರಯವ ಕಳೆದು, ಹೊಂದುವಲ್ಲಿ ಭವಿಯಾಗಿ ಹೋದವರ ಅವನ ಮುಟ್ಟಿದವ ಮುನ್ನವೇ ವ್ರತಗೇಡಿ. ಅವನ ಶ್ರಾದ್ಧಕಾಲವೇಶ್ವಾನಮಾಂಸ ಕ್ರಿಯಾ ಕಾಲವೇ ಕ್ರಿಮಿಗಳು. ತದ್ದಿನವೇ ಮದ್ಯ ಮಾಂಸ. ಇದು ಕಾರಣ ಕೂಡಲಸಂಗಮದೇವ ಅವನ ಮನೆಯಲ್ಲಿ ವಿಚಾರಿಸದೆ ಹೊಕ್ಕವಂಗೆ ನಾಯಕ ನರಕ.

೧೩೮. ಒಡನೆ ಹುಟ್ಟಿದುದಲ್ಲ, ಒಡನೆ ಬೆಳೆದುದಲ್ಲ. ಎದೆಯಲೊಂದು ಉಡಿಗೆಯ ನುಟ್ಟು ಸಡಲಿದರೆ, ಲಜ್ಜೆ ನಾಚಿಕೆಯಾಯಿತ್ತು, ಎಂಬ ನುಡಿದಿಟವಾಯಿತ್ತು. ಲೌಕಿಕದಲ್ಲಿ ಹಡೆದ ಗುರುಕರುಣದ ಒಡನೆ ಹುಟ್ಟಿದ ನೇಮವನೆ ಬಿಡದಿರೆಲವೋ. ಬಿಟ್ಟರೆ ಕಷ್ಟ. ಕೂಡಲಸಂಗಮದೇವನ ಡಸಿ ಕೆಡಹುವ ನಾಯಕ ನರಕದಲ್ಲಿ.

೧೩೯. ಛಲಬೇಕು ಶರಣಂಗೆ ಪರಧನವ ನೊಲ್ಲೆನೆಂಬ. ಛಲಬೇಕು ಶರಣಂಗೆ ಪರಸತಿಯರ ನೊಲ್ಲೆನೆಂಬ. ಛಲಬೇಕು ಶರಣಂಗೆ ಪರದೈವವ ನೊಲ್ಲೆನೆಂಬ. ಛಲಬೇಕು ಶರಣಂಗೆ ಲಿಂಗಜಂಗಮವು ಒಂದೇ ಎಂಬ. ಛಲಬೇಕು ಶರಣಂಗೆ ಪರವಾದಿನಿಗ್ರಹದಲ್ಲಿ. ಛಲಬೇಕು ಶರಣಂಗೆ ಪ್ರಸಾದದಿಟವೆಂಬ. ಛಲವಿಲ್ಲದವರ ಮೆಚ್ಚ ನಮ್ಮ ಕೂಡಲಸಂಗಮದೇವ.

೧೪೦. ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ ಕೇಳಿರಣ್ಣಾ ಎರಡಾಳಿನ ಭಾಷೆಯ. ಕೊಲುವೆನೆಂಬ ಭಾಷ ದೇವನದು. ಗೆಲುವೆನೆಂಬ ಭಾಷೆ ಭಕ್ತನದು. ಸತ್ಯವೆಂಬ ಕೂರಲಗನೆ ಕಳೆದುಕೊಂಡು ಸದ್ಭಕ್ತರು ಗೆದ್ದರು ಕಾಣಾ ಕೂಡಲಸಂಗಮದೇವ.

೧೪೧. ಮುನ್ನಿನ ಕಲಿವೀರರು ಕಾದಿದ ರಣಗಳನು ಪರಿಪರಿಯಲಿ

ಬಣ್ಣಿಸಿ ಹೇಳಬಹುದಲ್ಲದೆ, ದಳವಿದಿರಾದಲ್ಲಿ, ಬಿರಿದುಪಚಾರಿಸಿ, ಕಾದಿ ತೋರಲು ಬಾರದು. ಮುನ್ನಿನ ಪುರುಷ ವ್ರತಿಗಳು ಒಲಿಸಿದ ಆಯ ತವನು ಪರಿಪರಿಯಲಿ ಬಣ್ಣಿಸಿ ಹೇಳಬಹುದಲ್ಲದೆ, ಪುರುಷ ನಿರ್ವಾಣ ಕ್ಕುರಿವಗ್ನಿಯ ಹೊಕ್ಕು ತೋರಲು ಬಾರದು. ಮುನ್ನಿನ ಪುರಾತನರೆಲ್ಲರು ತನುಮನಧನವನಿತ್ತು ಮಾಡಿ ನೀಡಿ ಲಿಂಗವ ಕೂಡಿದ ಪರಿಗಳನು ಅನು ಭಾವವ ಲಕ್ಷೈಸಿ ಹೇಳಬಹುದಲ್ಲದೆ, ಮಾಡಿನೀಡಿ ತೋರಲುಬಾರದು. ಇಂತೀ ಅರೆಬಿರಿದಿನ ಬಂಟರು ಪುರುಷವ್ರತಿಗಳು ಪುರಾತನರಬರಿಯ ಮಾತ ನಾಡಿ ಹೊರಗೆ ಮೆರೆವರಲ್ಲ. ಪರೀಕ್ಷೆಯುಂಟಾಗಿದ್ದರೆ, ಒಳಗಣಾಸರ ಹೆಸರುವಿ ಡಿದು ಪರಿಪರಿಯಲ್ಲಿಹೊಗಳುವರು. ಶರೀರಾರ್ಥ ಪ್ರಾಣವ ಗುರುಲಿಂಗ ಜಂಗ ಮಕ್ಕೆ ಪರೀಕ್ಷೆಯುಂಟಾಗಿಯೇ ಆತ ಮಹೇಶ್ವರ, ಪುರಾತರ ವಳಿ ಎಂಬೆ. ಪರಮಬಂಧುಗಳಾತರ ನೆನೆವು ಬರುಕುವರು. ಇಂತೀ ಅನುಭಾವವ ಓದಿ ನ ಅಕ್ಷರಾಭ್ಯಾಸವ ಸಾಧಿಸಿ ತರ್ಕಿಸಿ ನಿಂದಿಸಲಾಗದು. ಕೂಡಲಸಂಗನ ಶರಣರಿಗಲ್ಲದನುಭಾವವಿಲ್ಲ.

೧೪೨. ಅರ್ಥಪ್ರಾಣಾಭಿಮಾನವ ಕೊಟ್ಟೆನೆಂಬವರಲ್ಲದೆ, ಕೊಟ್ಟ ಭಕ್ತರನಾರನೂ ಕಂಡುದಿಲ್ಲ. ದಾಸ ತನ್ನ ವಸ್ತ್ರವಕೊಟ್ಟನಲ್ಲದೆ ತನ್ನ ಕೊ ಟ್ಟುದಿಲ್ಲ. ಸಿರಿಯಾಳ ತನ್ನ ಮಗನ ಕೊಟ್ಟನಲ್ಲದೆ, ತನ್ನ ಕೊಟ್ಟು ದಿಲ್ಲ. ಇಂತಹನೆಲ್ಲ ಹೊರಗಣ ಮಾತು. ಕೂಡಲಸಂಗಮದೇವನಲ್ಲಿ ತನ್ನನು ಕೊಟ್ಟ ಸಿಂಧುಮರಾಳ.

೧೪೩. ಒಂದು ಮಾತೆನ್ನಬಹುದೇ ಶಬ್ದಸಾರಾಯವನು? ಒಂದು ಮಾತೆನ್ನಬಹುದೆ ಶರಣಸಂಬಂಧವನು? ಕೂಡಲಸಂಗಮದೇವರು ನಂ ಬಿಗೆ ‘ಓ, ಎಂದುದನೊಂದೇ ಮಾತೆನ್ನಬಹುದೆ ಅಯ್ಯ?

೧೪೪. ಭಕ್ತರೇಸಮರ್ಥರು, ಅಸಮರ್ಥರೆನಬಂಟೇ? ಚನ್ನನೆತ್ತ? ಚೋಳನೆತ್ತ? ಚನ್ನನೊಡನುಂಡಶಿವನು. ಅಹಯ್ಯಯ್ಯ! ಚನ್ನಚೋಳನ ಮನೆಯ ಕಂಪಣಿಗನಯ್ಯ. ಕೂಡಲಸಂಗಮದೇವ ಭಕ್ತಿಲಂಪಟ ನಯ್ಯ.

೧೪೫. ನಿಸ್ಸೀಮ ಗುಗ್ಗಳವನಿಕ್ಕಿದನೊಬ್ಬಶರಣ. ಉಘೇ, ಚಾಂಗು ಭಲಾ, ಎಂಬ ಹೊಗೆ ತೀವಿ ಗಗನನ ಮುಸುಕಲು ವಹಿಲಯ್ಯ ಮೆರೆವ ಸೌರಾಷ್ಟ್ರಮಂಡಲದಲ್ಲಿ ಕೂಡಲಸಂಗಮದೇವ ಭಕ್ತವತ್ಸಲನಾಗಿ.

೧೪೬. ಲಿಂಗವಶದಿಂದ ಬಂದ ನಡೆಗಳು ಲಿಂಗವಶದಿಂದ ಬಂದ

ನುಡಿಗಳು ಲಿಂಗವಂತರು ತಾವು ಅಂಜಲೇಬೇಕು. ಲಿಂಗವಿರಿಸಿದಂತಿಪ್ಪದಲ್ಲದೆ ಮತ್ತೊಂದನ್ನವನರಿಯದಿರಬೇಕು, ಕೂಡಲಸಂಗಮದೇವ ಭಕ್ತರಭಿಮಾನ ತನ್ನದೆಂಬನಾಗಿ.

೧೪೭. ಶಿವಭಕ್ತನಾಗಿ ತನ್ನ ಹಿಡಿದಿಹೆನೆಂದರೆ, ನುಗ್ಗುಮಾಡುವ, ನುಸಿಯ ಮಾಡುವ, ಮಣ್ಣುಮಾಡುವ, ಮಸಿಯ ಮಾಡುವ. ಕೂಡಲಸಂಗಮದೇವರ ನೆರೆನಂಬಿದನಾದರೆ, ಕಡೆಗೆ ತನ್ನಂತೆ ಮಾಡುವ.

೧೪೮. ಅರೆವನಯ್ಯ, ಸಣ್ಣನಾಹನ್ನಕ್ಕ. ಒರೆವನಯ್ಯ ಬಣ್ಣಗಾಂಬನ್ನಕ್ಕ. ಅರೆದರೆ ಸಣ್ಣಗಾಗಿ, ಒರೆದರೆ ಬಣ್ಣಬಂದರೆ, ಕೂಡಲಸಂಗಮದೇವನೊಲಿದು ಸಲಹುವ.

೧೪೯. ಅಂಜಿದರೆ ಮಾಣದು, ಅಳುಕಿದರೆ ಮಾಣದು, ವಜ್ರಪಂಜರದೊಳಗಿದ್ದರೂ ಮಾಣದು. ತಪ್ಪದಯ್ಯ ಲಲಾಟ ಲಿಖಿತ. ಕಕ್ಕುಲತೆಬಟ್ಟರೆ, ಆಗದು ನೋಡಯ್ಯ. ಧೃತಿಗೆಟ್ಟು ಮನಧಾತುಗೆಟ್ಟರೆ, ಬಪ್ಪುದು ತಪ್ಪದು ಕೂಡಲಸಂಗಮದೇವಾ.

೧೫೦. ಹುಟ್ಟಿದ ಬಳಿಕ ಕೊಟ್ಟ ಭೋಗಂಗಳ ತಪ್ಪಿಸಿಹೆನೆಂದರೆ, ತಪ್ಪದು, ನೋಡಯ್ಯ. ಎನಗಿನ್ನೆಂತೋ, ಎನಗಿನ್ನೆಂತೋ ಎಂದು ಚಿಂತಿಸಬೇಡ. “ನಾಭುಕ್ತಂ ಕ್ಷೀಯತೆ ಕರ್ಮ ಕಲ್ಪಕೋಟಿ ಶತ್ರೈರಪಿ ”ಎಂಬ ಶೃತಿವಚನ ತಪ್ಪದು. ಶ್ಲೋಕ·‘ ಅನುಭವಾನ್ಯಾನಿ ಕರ್ಮಾಣಿ ಕಲ್ಪಯುತಶತ್ರೈರಪಿ ಅವಶ್ಯ ಮನುಭೋಕ್ತವ್ಯಂ ಕೃತಂಕರ್ಮ ಶುಭಾಶುಭಂ„ ಎಂಬುದಾಗಿ ಕರ್ಮವಶವಾಗಿ ನಡೆವುದು. ನಡೆದರೆಯೂ ಕೂಡಲಸಂಗಮದೇವರಲ್ಲಿ ಭಕ್ತಿಯ ಬಿಡಬಾರದು.

೧೫೧. ಆಯುಷ್ಯ ತೀರದಲ್ಲದೆ, ಮರಣವಿಲ್ಲ. ಭಾಗ್ಯ ತೀರದಲ್ಲದೆ, ದಾರಿದ್ರ್ಯವಿಲ್ಲ. ಅಂಜಲೇತಕೋ ಲೋಕ ವಿಗರ್ಭಣೆಗೆ? ಅಳುಕಲೇತಕೋ, ಕೂಡಲಸಂಗಮದೇವ, ನಿಮಗಾಳಾಗಿ?

೧೫೨. ಮನಕ್ಕೆ ಮನ ಒಂದಾಗಿ ಧನಕ್ಕೆ ಧನ ಒಂದಾಗಿ ನಚ್ಚಿದ ಮಚ್ಚು ಅಚ್ಚೊತ್ತಿದಂತಿರಬೇಕು. ಪ್ರಾಣಕ್ಕೆ ಪ್ರಾಣ ಒಂದಾಗಿ ಶುಭಸೂಚನೆ ಒಂದಾಗಿರದ ನಚ್ಚು ಮಚ್ಚು ಪಾರೈದು ವುದೇ? ಶಿರವರಿದರೇನು? ಕರುಳು ಕುಪ್ಪಳಿತದರೇನು? ಇಂತಪ್ಪ ಸಮಸ್ತವಸ್ತುವೆಲ್ಲವೂ ಹೋದರೇನು? ಚಿತ್ತಮನ ಬುದ್ಧಿ ಒಂದಾದ ಮಚ್ಚು ಬಿಚ್ಚಿ ಬೇರಾಗದಿದ್ದರೆ ಮೆಚ್ಚುವ ನಮ್ಮ ಕೂಡಲಸಂಗಮದೇವ.

# ಮಹೇಶ್ವರನ ಮಹೇಶ.

೧. ಎನಿಸೆನಿಸೆಂದಡೆಯೂ ನಾ ಧೃತಿಗೆಡೆನಯ್ಯ. ಎಲುದೋರಿದೊಡೆಯೂ, ನರಹರಿದೊಡೆಯೂ, ಕರುಳು ಕುಪ್ಪಳಿಸಿದಡೆಯೂ, ನಾಧೃತಿಗೆಡೆನಯ್ಯ. ಸಿರಹರಿದು ಅಟ್ಟೆ ನೆಲಕ್ಕೆ ಬಿದ್ದಡೆಯೂ, ನಾಲಿಗೆ "ಸಂಗಶರಣು" ಎನುತಿಪ್ಪದಯ್ಯ.

೨. ಒಣಗಿಸಿ ಎನ್ನ ಘಣಘಣಲನೆಯ ಮಾಡಿದಡೆಯೂ, ಹರಣವುಳ್ಳನ್ನಕ್ಕ ನಿಮ್ಮ ಚರಣವ ನೆನೆವುದು ಮಾಣೆ, ಶರಣೆಂಬುದ ಮಾಣೆ, ಕೂಡಲಸಂಗಮದೇವಯ್ಯ ಎನ್ನ ಹೆಣನಮೇಲೆ ಕಂಚಿಟ್ಟುಂಡೊಡೆಯೂ.

೩. ಜಾಗ್ರತ್‌ಸ್ವಪ್ನ ಸುಷುಪ್ತಿಯಲ್ಲಿ ಮತ್ತೊಂದನೆನೆದೊಡೆ ತಲೆದಂಡ, ತಲೆದಂಡ. ಹುಸಿಯಾಡೊಡೆ ತಲೆದಂಡ ತಲೆದಂಡ. ಕೂಡಲಸಂಗಮದೇವ, ನೀವಲ್ಲದೆ ಅನ್ಯವ ನೆನೆದೊಡೆ ತಲೆದಂಡ ತಲೆದಂಡ

೪. ಸುಖ ಬಂದರೆ ಪುಣ್ಯದ ಫಲವೆನ್ನೆನು. ದುಃಖಬಂದರೆ ಪಾಪದ ಫಲವೆನ್ನೆನು. ನೀ ಮಾಡಿದೊಡಾಯಿತ್ತೆಂದೆನ್ನೆನು. ಕರ್ಮಕ್ಕೆ ಕರ್ತೃವೇ ಕಡೆಎಂದೆನ್ನೆನು· ಉದಾಸೀನ ಕೂಡಲಸಂಗಮದೇವ ನೀಮಾಡಿದುಪದೇಶವು ಎನಗೀಪರಿಯಲ್ಲಿ ಸಂಸಾರದ ಸವಿಯ ಬಳಸುವೆನು.

೫. ಕಾಯದ ಕಳವಳಕಂಜಿ ಕಾಯಯ್ಯ ಎನ್ನೆನು. ಜೀವನೋಪಾಯಕ್ಕಂಜಿ ಈಯಯ್ಯ ಎನ್ನೆನು. "ಯದ್ಭಾವಂ ತದ್ಭವತಿ" ಉರಿಬರಲಿ, ಸಿರಿಬರಲಿ, ಬೇಕುಬೇಡೆನ್ನನಯ್ಯ. ಆನಿಮ್ಮ ಹಾರೆನು. ಮಾನವರ ಬೇಡೆನು. ಆಣೆ ನಿಮ್ಮಾಣೆಯಯ್ಯ ಕೂಡಲಸಂಗಮದೇವ.

೬. ನಾಳೆಬಪ್ಪುದು ನಮಗಿಂದೇ ಬರಲಿ. ಇಂದು ಬಪ್ಪುದು ನಮಗೀಗಲೇ ಬರಲಿ. ಇದಕಾರಂಜುವರು? ಇದಕಾರಳುಕುವರು? "ಜಾತಸ್ಯ ಮರಣಂ" ಧ್ರುವಂ" ಎಂದುದಾಗಿ ನಮ್ಮ ಕೂಡಲಸಂಗಮದೇವ ಬರೆದ ಬರಹವ ತಪ್ಪಿಸುವಡೆ, ಹರಿಬ್ರಹ್ಮಾದಿಗಳವಲ್ಲ.

೭. ಕಳಹೋದೊಡೆ, ಕಣ್ಣುಮಳಿಯ ಹಿಡಿವೆ. ಬಂದಿವಿಡಿದರೆ, ನಿಮ್ಮಿಂದ ಮುಂದೆ ನಡೆವೆ. ಮನಭೀತಿ ಮನಶಂಕೆಗೊಂಡೆನಾದೊಡೆ, ನಿಮ್ಮಾಣೆ, ನಿಮ್ಮ ಪುರಾತನರಾಣೆ. ಆಕ್ಷರನಡೆಸದಾಚಾರವೆನ್ನದಿರ್ದೊಡೆ

ಕಟ್ಟಾಳು ಶಿಷ್ಟತನಕ್ಕೆ ಹೋಹ ಕಷ್ಟವನೋಡಾ, ಕೂಡಲಸಂಗಮ ದೇವ.

೮. ಜೊಳ್ಳುವಾಳಿಯವನಾನಲ್ಲ. ನಿಮ್ಮ ವೇಳೆಯಾಳಯ್ಯ. ಹಾಳು ಗೆಟ್ಟೋಡುವ ಆಳುನಾನಲ್ಲಯ್ಯ. ಕೇಳು ಕೂಡಲಸಂಗಮದೇವಾ ಮರ ಣವೇ ಮಹಾನವಮಿ ಎನಗೆ.

೯. ಕರ್ಮವೆಂಬ ಅಂಕದೊಡನೆ ತೊಡರಿದೆ. ಬಿನ್ನಪವ ಅವ ಧಾರು. ನಿಮ್ಮಾಳಿನ ಭಾಷೆಯ ಕಡೆಗಳಕ್ಕೆನೂಕುವೆ. ಕೆಡಹುವೆನಂಕವ. ಕರೆದೊಡೋಸರಿಸಿದಡೆ, ನಿಮ್ಮಾಳಲ್ಲ. ಶಿವಶರಣೆಂಬ ದಂಡೆಯನೊಡ್ಡಿ, ಗಣಮೇಳಾಪವೆಂಬಲಗಿನಲ್ಲಿರಿವೆ ಕೂಡಲಸಂಗಮದೇವ.

೧೦. ಕಟ್ಟಿದೆನೊರೆಯ. ಬಿಟ್ಟೆಜನ್ನಿಗೆಯುರ. ಮುಟ್ಟಿ ಬಂದಿರಿ ದೊಡೆ, ಓಸರಿಸುವನಲ್ಲ. ಓಡದಿರು, ಓಡದಿರು. ನಿಮ್ಮ ಶರಣರಮನೆ ಯಬಿರುದಿನ ಅಂಕಕಾರನು. ಓಡದಿರು, ಓಡದಿರು, ಎಲೇ ದೇವಾ, ಎಲೇ ಎಲೇಸ್ವಾಮಿ, ಎಲೇಎಲೇ ಹಂದೇ, ಕೂಡಲಸಂಗಮದೇವಾ.

೧೧. ಗರುಡಿಯಕಟ್ಟಿ, ಅರವತ್ತುನಾಲ್ಕು ಕೋಲೇ ಅಭ್ಯಾಸಮಾಡಿ ದೆನಯ್ಯ. ಇರಿವಗಾಯದ ಖಂಡೆಯದ ಭೇದವನಿನ್ನು ತಿಳಿಯೆನು. ಪ್ರತಿಗರುಡಿಕಾರ ಬಿರುದಿನ ಪಾಡಿಂಗೊದಗಲು, ವೀರಪಟ್ಟೆಯಕಟ್ಟಿ, ತಿಗುರನೇರಿಸಿ, ಗುರುಕಳನನೇರಿ ಕಠಾರಿಯ ಕೊಂಡಲ್ಲಿಯೇ ಹೋಯ ತ್ತಾಗಳೆ ಎಂದರೆ, ಎನ್ನ ನಿನ್ನಲ್ಲಿ ನೋಡು ಕೂಡಲಸಂಗಮದೇವ.

೧೨. ಶರಣರೊಡನೆ ಶ್ರಮವಮಾಡಿ ಮೂರು ಕೋಲ ಬಿಡುವೆ ನಯ್ಯ. ತಾಕಲಿ, ತಪ್ಪಲಿ. ಗೆಲವೆನ್ನದೆಂಬೆನಯ್ಯ. ಕಳದಿಂದ ಕಡೆಗಳ ಕ್ಕೋಡಿಸುವೆ ಕೂಡಲಸಂಗಮದೇವ.

೧೩. ಎಲೇ ಗಂಡುಕೂಸೇ, ನೀಕೇಳಾ. ನಿನಗೊಬ್ಬಗೆಂದುಟ್ಟಿಗಂ ಡುಡಿಗೆಯನು. ಮತ್ತೊಮ್ಮೆ ನಾನೂ ಗಂಡಪ್ಪೆನಯ್ಯ. ಮತ್ತೊಮ್ಮೆ ನಾನು ಹೆಣ್ಣಪ್ಪೆನಯ್ಯ. ಕೂಡಲಸಂಗಮದೇವ ನಿಮ್ಮಡಿಗೆ ವೀರನಪ್ಪೆನ ಯ್ಯ ನಿಮ್ಮ ಶರಣರಿಗೆ ವಧುವಪ್ಪೆನಯ್ಯ.

## ಮಹೇಶ್ವರನ ಭಕ್ತಿ.

೧. ಕಟ್ಟಿದೆನುಪ್ಪರಗುಡಿಯ, ಜಗವೆಲ್ಲರಿಯಲು. ಮಾಡುವೆನೆನ್ನ

ಕಾಯ ಕೆಡುವನ್ನಕ್ಕರ. ಬೇಡುವುದೆನ್ನತನುಮನಧನವ. ಎಲೇ ಬೇಡ ಲಾರದೆ? ಹಂದೆ ನೀ ಕೇಳಾ. ಈ ಬಿರಿದು ಸಂದಿತ್ತು ಕೂಡಲಸಂಗಮ ದೇವ.

೨. ಹುಟ್ಟಿತ್ತದ್ರವ್ಯವನರಿಯದವಂಗೆ ಐಶ್ವರ್ಯವಂತ ಮಗನಾದರೆ, ಲಕ್ಷ ಸಂಖ್ಯಾಯ ಹಿರಣ್ಯವ ತಂದು ಸಂತೋಷಬಡಿಸುವಂತೆ, ಕಾಳಗ ಮುಖವಾವುದೆಂದರಿಯದ ಹಂದೆ ನೃಪಂಗೆ ಒಬ್ಬ ಕ್ಷತ್ರಿಯನಹ ಕುಮಾರ ಹುಟ್ಟಿ, ಕಿಗ್ಗಡಲರಕ್ತದ ಹೊನಲಲ್ಲಿ ಕಡಿದು ಮುಳುಗಾಡುವ ಕೊಳಂಗಳ ಕಂಡುಕೊಂಡು ಪರಿಣಾಮಿಸುವಂತೆ, ಆನುಪರಿಣಾಮಿಸುವೆನಯ್ಯ, ಕೂಡಲಸಂಗಮದೇವಾ ನೀವು ಬಂದೆನ್ನ ಬೇಡಿದರೆ.

೩. ಅರ್ಥವನನರ್ಥವಮಾಡಿ ಕೋಳಾಹಳಂಗೈವುತ್ತಿರಲಿ. ಹುಟ್ಟಿದ ಮಕ್ಕಳನು ನವಖಂಡವ ಮಾಡಿ ಕಡಿವುತ್ತಿರಲಿ, ಮುಟ್ಟಿದ ಸ್ತ್ರೀಯ ಕಣ್ಣ ಮುಂದೆ ಅಭಿಮಾನವ ಕೊಂಡು, ನೆರೆಯುತ್ತಿರಲಿ, ಇಂತೀ ತ್ರಿವಿಧವು ಹೊರಗಣವು, ಇನ್ನೆನ್ನಂಗದ ಮೇಲೆ ಬರಲಿ, ಹಿಡಿಖಂಡವ ಮಾಡಿಕಡಿವುತ್ತಿರಲಿ, ಇಕ್ಕುವಶೂಲ ಪ್ರಾಪ್ತಿಸಲಿ, ಮತ್ತೆಯೂ ಲಿಂಗಾರಾಧನೆಯ ಮಾಡುವೆ, ಜಂಗಮಾರಾಧನೆಯ ಮಾಡುವೆ, ಪ್ರಸಾದಕ್ಕೆ ತಪ್ಪೆ. ಇಂತಪ್ಪ ಭಾಷೆ ಕಿಂಚಿತ್ತು ಹುಸಿಯಾದರೆ ನೀ ನಂದೇ ಮೂಗಕೊಯ್ಯಿ ಕೂಡಲಸಂಗಮದೇವ.

೪. ತನುವ ಬೇಡಿದಡೀವೆ, ಮನವ ಬೇಡಿದಡೀವೆ, ಧನವಬೇಡಿದಡೀವೆ. ಬೇಡು ಬೇಡೆಲೆ ಹಂದೇ. ಕಣ್ಣ ಬೇಡಿದಡೀವೆ, ತಲೆಯ ಬೇಡಿದಡೀವೆ. ಕೂಡಲಸಂಗಮದೇವ ನಿಮಗಿತ್ತು, ಶುದ್ಧನಪ್ಪೆ ನಿಮ್ಮ ಪುರಾತನರ ಮನೆಯಲ್ಲಿ.

೫. ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು. ನಾನು ಬೆವಹಾರವ ಮಾಡುವೆನಯ್ಯ, ಲಿಂಗಾರ್ಚನೆಗೆಂದು ನಾನು ಪರ ಸೇವೆಯ ಮಾಡುವೆನಯ್ಯ, ಜಂಗಮದಾಸೋಹಕ್ಕೆಂದು. ನಾನಾವಕರ್ಮಂಗಳಮಾಡಿದಡೆಯೂ, ಆ ಕರ್ಮದ ಫಲಭೋಗವ ನೀ ಕೊಡುವೆ ಎಂಬುದ ನಾನು ಬಲ್ಲೆನಾಗಿ, ನೀ ಕೊಟ್ಟ ದ್ರವ್ಯವ ನಿಮಗಲ್ಲದೆ, ಮತ್ತೊಂದಕ್ಕೆ ಮಾಡೆನು. ನಿಮ್ಮ ಸೊಮ್ಮ ನಿಮಗೆ ಸಲ್ಲಿಸುವೆನು, ಕೂಡಲಸಂಗಮದೇವ.

೬. ಹೊತ್ತಾರೆ ಎದ್ದು, ಕಣ್ಣ ಹೊಸೆವುತ್ತ, ಎನ್ನೊಡಲಿಂಗೆ ಮಡ

ದಿಮಕ್ಕಳಿಗೆಂದು ಕುದಿದೆನಾದರೆ, ಎನ್ನ ಮನಕ್ಕೆ ಮನವೇ ಸಾಕ್ಷಿ. ಶ್ಲೋಕ ಅಶನೇಶಯನೇ ಯಾನೇಸಂಪರ್ಕೇ ಸಹಭೋಜನೇ। ಸಂಚರಂತಿ ಮಹಾಘೋರೇ ನರಕೇ ಕಾಲಮಕ್ಷಯಂ ॥ ಎಂಬ ಶೃತಿಯ ಬಸವಣ್ಣನೋದುವನು. ಭವಿಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹೆನೆಂದು ನುಡಿವರಯ್ಯಪ್ರಮಥರು. ಕೊಡುವೆನುತ್ತರವನವರಿಗೆ. ಕೊಡಲಮ್ಮೆನು. ಹೊಲೆಹೊಲೆಯರ ಮನೆಯ ಹೊಕ್ಕಾದರೆಯೂ ಸಲೆ ಕೈಕೂಲಿಯ ಮಾಡಿದರೆಯೂ, ನಿಮ್ಮ ನಿಲವಿಂಗೆ ಕುದಿಸೆನಲ್ಲದೆ, ಎನ್ನೊಡಲವಸರಕ್ಕೆ ಕುದಿದೆನಾದರೆ, ತಲೆದಂಡ, ತಲೆದಂಡ, ಕೂಡಲಸಂಗಮದೇವಯ್ಯಾ.

೭. ದೇವದೇವ,ಬಿನ್ನಪವ ಅವಧಾರು. ವಿಪ್ರ ಮೊದಲು ಅಂತ್ಯಜಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೇ ಎಂಬೆ. ಹಾರುವ ಮೊದಲು ಶ್ವಪಚಕಡೆಯಾಗಿ, ಭವಿಯಾದವರನೆಲ್ಲರನೊಂದೇ ಎಂಬೆ. ಹೀಗೆಂದು ನಂಬುವುದೆನ್ನ ಮನವು. ಈ ನುಡಿದ ನುಡಿಯೊಳಗೆ ಎಳ್ಳ ಮೊನೆಯಷ್ಟು ಸಂದೇಹವುಳ್ಳರೆ, ನೀ ನಂದೇ ಮೂಗು ಕೊಯ್ಯಿ ಕೂಡಲಸಂಗಮದೇವ.

೮. ಒಲ್ಲೆನಯ್ಯಾ ಒಲ್ಲೆನಯ್ಯ ನಿಮ್ಮವರಲ್ಲದವರ ಸಂಗವ ಒಲ್ಲೆನಯ್ಯ. ಜಗವೆಲ್ಲರಿಯಲು ಒಲ್ಲೆನಯ್ಯ. ನೀ ಮುನಿದರೆ, ಮುನಿ. ಕೂಡಲಸಂಗಮದೇವ, ನಿಮ್ಮ ಪುರಾತನರಾಣೆ.

೯. ಆದಿಯಲಾಗಲಿ, ವೇದದಲಾಗಲಿ, ಶಾಸ್ತ್ರದಲಾಗಲಿ, ಸಮಯದಲಾಗಲಿ, ಎನ್ನವರೆನ್ನೆನು. ಎನ್ನವರೆಂದರೆ, ಸಂಗಾ ನಿಮ್ಮಲ್ಲಿಗೆ ದೂರ. ಎನ್ನವರೆಂದರೆ ಜನ್ಮಕ್ಕೆ ನಡೆವರೆ? ಎನ್ನವರಲ್ಲ, ಕೂಡಲಸಂಗಮದೇವಾ ನಿಮ್ಮಾಣೆ.

೧೦. ಅಣ್ಣತಮ್ಮ ಹೆತ್ತಪ್ಪ ಗೋತ್ರವಾದರೇನು? ಲಿಂಗಸಾಹಿತ್ಯವಿಲ್ಲದವರ ಎನ್ನವರೆನ್ನೆನಯ್ಯಾ. ನಂಟು ಭಕ್ತಿ ನಾಯಕನರಕ ಕೂಡಲಸಂಗಮದೇವ.

೧೧. ಒಡೆಯರಿಲ್ಲದ ಮನೆಯ ತುಡುಗುಣಿ ನಾಯಿ ಹೊಗುವಂತೆ, ನೀನಿಲ್ಲದವರ ಮನೆಯ ಹೊಗೆನು. ಸಂಗಯ್ಯ ಶ್ವಪಚೋಪಿಗಳಾಗಲಿ, ಕೂಡಲಸಂಗಯ್ಯ ನೀನಿದ್ದವನೇ ಕುಲಜನು.

೧೨. ಹೊನ್ನು ಹೆಣ್ಣು ಮಣ್ಣೆಂಬ ಕರ್ಮದ ಒಳಿಯಲ್ಲಿ ಸಿಲುಕಿ ವ್ರಥಾ ಬರುದೊರೆಹೋಹಕೆಡುಕ ಹಾರುವನಾನಲ್ಲ. ಹಾರುವೆನಯ್ಯ ನಿಮ್ಮ ಭಕ್ತರ ಬರವ. ಗುಡಿಗಟ್ಟಿ ಹಾರುವೆನಯ್ಯ, ನಿಮ್ಮ ಶರಣರ ಬರವ. ಕೂಡಲಸಂಗಮದೇವ ವಿಪ್ರ ಕರ್ಮವ ಬಿಡಿಸಿ ಅಶುದ್ಧನ ಶುದ್ಧನಮಾಡಿದನಾಗಿ.

೧೩. ವೇದಕ್ಕೊರೆಯ ಕಟ್ಟುವೆ. ಶಾಸ್ತ್ರಕ್ಕೆ ನಿಗಳವನಿಕ್ಕುವೆ. ತರ್ಕದ ಬೆನ್ನಬಾರನೆತ್ತುವೆ. ಆಗಮದ ಮೂಗ ಕೊಯ್ಯುವೆ ನೋಡಯ್ಯ. ಮಹಾದಾನಿ ಕೂಡಲಸಂಗಮದೇವ, ಮಾದರ ಚನ್ನಯ್ಯನ ಮನೆಯ ಮಗ ನಾನಯ್ಯ.

೧೪. ಆವಕುಲವಾದರೇನು, ಶಿವಲಿಂಗವಿದ್ದವನೇ ಕುಲಜನು. ಕುಲವನರಸುವರೇ ಶರಣರಲ್ಲಿ ಜಾತಿಸಂಕರನಾದಬಳಿಕ? ಇದಕ್ಕೆ ಪ್ರಮಾಣಂ ಶಿವೇಜಾತ ಕುಲೇಧರ್ಮ ಪೂರ್ವಜನ್ಮವಿವರ್ಜಿತಂ। ಉಮಾಮಾತಾಪಿತಾರುದ್ರ ಈಶ್ವರಃಕುಲಮೇವಚ॥ ಎಂದುದಾಗಿ, ಒಕ್ಕುದಕೊಂಬೆನವರಲ್ಲಿ ಕೂಸಕೊಡುವೆ. ಕೂಡಲಸಂಗಮದೇವಾ, ನಂಬುವೆನು ನಿಮ್ಮ ಶರಣರನು.

೧೫. ಕಳ್ಳ, ಬಂದಿಕಾರ, ಹಾವಡಿಗ, ಬಂಟನೋಲೆಯಕಾರನೆಂದೆನಾದರೆ, ನೀ ಮುಂತಾಗಿ ಬಂದಭಕ್ತರ ನೀನೆಂದೆನ್ನದಿರ್ದರೆ, ಇದೇ ದ್ರೋಹ. ನಡೆನುಡಿಗೊಮ್ಮೆ ಹುಸಿಯುಂಟಾದರೆ, ಕೂಡಲಸಂಗಮದೇವರ ತೋರಿದ ಚನ್ನಬಸವಣ್ಣನಾಣೆ.

೧೬. ಗುಮ್ಮಡಿಯಂತಪ್ಪ ತಾಯ ನೋಡೆನಗೆ. ಕಲಕೇತನಂತಪ್ಪ ತಂದೆ ನೋಡೆನಗೆ. ಮೋಟನಂತಪ್ಪ ಗಂಡ ನೋಡೆನಗೆ. ಮರಗಾಲಲಟ್ಟಟ್ಟಿ ಸದೆದು ನೋಡಯ್ಯ. ಇಂದೆನ್ನ ಒಗತನ ಹೋದರೆ, ಹೋಗಲಿ. ಮರಗಾಲ ಬಿಟ್ಟೆನಾದರೆ, ಕೂಡಲಸಂಗಯ್ಯ ನಿಮ್ಮಾಣೆ.

೧೭. ತನುವಬಂದಲೆವರಯ್ಯ ಎನ್ನ, ಮನವ ಬಂದು ನೋಡುವರಯ್ಯ ಎನ್ನ, ಧನವ ಬಂದು ಸೂರೆಗೊಂಬರಯ್ಯ ಎನ್ನ, ಜಂಗಮ ಅನವರತ. ಕೂಡಲಸಂಗಮದೇವ, ನಿಮ್ಮ ಬಯಕೆಯ ಭಂಡಾರಕ್ಕೆ ನಾನು ಶುದ್ಧನಯ್ಯ.

೧೮. ಒಡೆಯರೊಡವೆಯ ಕೊಂಡರೆ, ಕಳ್ಳಂಗಳಲಾಯಿತ್ತೆಂಬ ಗಾದೆ ಎನಗಾಯಿತ್ತಯ್ಯ. ಇಂದೆನ್ನ ಮನವ, ನಾಳೆನ್ನ ಧನವ ನಾಡ

ದೆನ್ನತನುವ ಬೇಡಿರೇತಕಯ್ಯ. ಕೂಡಲಸಂಗಮದೇವ, ಆನು ಮಾಡಿ ದುದಲ್ಲದೆ ಬಯಸಿದ ಬಯಕೆ ಸಲುವುದೇ ಅಯ್ಯ.

೧೯. ಕಲಿಕರುಳತರ್ಕೈಸಿ, ಹರಿಯ ಬಲ್ಲನಲ್ಲದೆ, ಸಾಯಕಾದಿಸು ವರೇ? ಎಡೆಗೋಲನಿಕ್ಕುವರೆ? ದಾತಾರನಧೀನವಲ್ಲದೆ ಕೂಡಲಸಂಗ ಮದೇವಯ್ಯ, ನೀವಮಾಡಿದ್ದೇತಹುದಯ್ಯ. ತನುಮನಧನದಲ್ಲಿ ವಂಚ ನೆಯ ಬಯಿಸಿದರೆಂತಹುದಯ್ಯ.

೨೦. ಬಾಳಭ್ಯಾಸವ ಮಾಡಹೋದರೆ, ಎನ್ನ ಸುರಿಗಿ ಎನ್ನ ನಟ್ಟಿ ತ್ತಯ್ಯ. ಕಲಿಯೊಡನೆ ಶ್ರಮವ ಮಾಡುವೆನು. ಗುರು ಜಗದ ಬಿನ್ನಾ ಣಿಯ ತೊಡಕ ಬಿಡಿಸಬಾರದು. ಸಮರದ ಮೇಲೆ ಹಿಡಿಯಹೋದರೆ ಚದುರಂಗದ ಮೇಲೆ ಮಸಿಯ ತೋರಿದ ಕೂಡಲಸಂಗಮದೇವಾ-

೨೧. ಸಮಚಿತ್ತೆಂಬ ನೇಮದ ಹಲಗಿಯ ಹಿಡಿದು, ಶಿವಚಿತ್ತ ವೆಂಬ ಕೂರಲಗ ಕೊಂಡು ಶರಣಾರ್ಥಿ ಎಂಬ ಶ್ರಮಗಲಿತರೆ, ಆಳುತ ನಕ್ಕೆ ದೆಸೆಯಪ್ಪೆ ನೋಡಾ. ಮಾರಾಂತಕ ಜಂಗಮ ಮನೆಗೆ ಬಂದಲ್ಲಿ ಇದಿರೆದ್ದು ನಡೆವುದು ಕೂಡಲಸಂಗಮದೇವರನೊಲಿಸುವೊಡೆ ಇದು- ಚಿಹ್ನ.

೨೨. ಅಟ್ಟಿಟ್ಟಿಕೆಯ ಮಾತನಾಡಲದೇಕೋ? ಮುಟ್ಟಿಬಂದುದಕ್ಕೆ ಅಂಜಲದೇಕೋ? ಕಾದಿದಲ್ಲದೆ ಮಾಣೆನು. ಓಡಿದರೆ ಭಂಗ ಹಿಂಗದಯ್ಯ ಕೂಡಲಸಂಗಮದೇವ, ಎನ್ನ ಭಂಗವು ನಿಮ್ಮದಾಗಿ.

೨೩. ಲಿಂಗಕ್ಕಲ್ಲದೆ ಮಾಡೆನೀ ಮನವ. ಜಂಗಮಕ್ಕಲ್ಲದೆ ಮಾ ಡೆನೀಧನವ. ಪ್ರಸಾದಕ್ಕಲ್ಲದೆ ಮಾಡೆನೀ ತನುವ. ಲಿಂಗಜಂಗಮದ ಪ್ರಸಾದಕ್ಕಲ್ಲದೆ ಬಾಯ್ದೆರೆಯೆನೆಂಬುದೆನ್ನ ಭಾಷೆ. ಅನರ್ಪಿತವಾದರೆ, ತಪ್ಪೆನ್ನದು ಮೂಗ ಕೊಯ್ಯಿ ಕೂಡಲಸಂಗಮದೇವ.

## ಮಹೇಶ್ವರನ ಪ್ರಸಾದಿ.

೧. ಅಂಕ ಕಂಡ ಕೋಲಾಸೆ ಮತ್ತೇಕಯ್ಯ? ಲೆಂಕಕಂಡ ಪ್ರಾಣದಾಸೆ ಮತ್ತೇಕಯ್ಯ? ಭಕ್ತರ ಕಂಡ ತನುಮನದಾಸೆ ಮತ್ತೇಕಯ್ಯ? ನಿಮ್ಮ ಅಂಕೆಗೆ ಜಂಕೆಗೆ ಶಂಕಿತನಾದರೆ, ಎನ್ನ ಲೆಂಕತನಕ್ಕೆ ಹಾನಿ ಕಾಣಾ, ಕೂಡಲಸಂಗಮದೇವ.

೨. ನೀನಿರಿಸಿದ ಮನದಲ್ಲಿ ನಾನಂಜೆನಯ್ಯ, ಮನವು ಮಹಾ

ಘನಕ್ಕೆ ಶರಣುವೊಕ್ಕುದಾಗಿ. ನೀನಿರಿಸಿದ ಧನದಲ್ಲಿ ನಾನಂಜೆನಯ್ಯ, ಧನವು ಸತಿಸುತ ಮಾತಾಪಿತರಿಗೆ ಹೋಗದಾಗಿ. ನೀನಿರಿಸಿದ ತನುವಿನಲ್ಲಿ ನಾನಂಜೆನಯ್ಯ, ತನು ಸರ್ವಾರ್ಪಿತವಾದಲ್ಲಿ, ನಿಯತ ಪ್ರಸಾದ ಭೋಗೋಪ ಭೋಗಿಯಾಗಿ, ಇದು ಕಾರಣ ವೀರಧೀರ ಸಮಗ್ರನಾಗಿ, ನಿಮಗಾನಂಜೆನಯ್ಯ ಕೂಡಲಸಂಗಮದೇವ.

೩. ಹಲ್ಲು ಹತ್ತಿ, ನಾಲಿಗೆ ಹೊರಳದಿದ್ದಲ್ಲಿ, ಮನವೆರಡಾದರೆ, ಆಣೆ ನಿಮ್ಮಾಣೆ. ಮಾಡುವ ನೇಮಕ್ಕೆ ಚಲವಿಲ್ಲದಿದ್ದರೆ ಆಣೆ ನಿಮ್ಮಾಣೆ. ಕೂಡಲಸಂಗಮದೇವ ಎನ್ನ ಮನವ ನೋಡಲಟ್ಟಿದರೆ, ಪ್ರಸಾದವಲ್ಲದೆ ಕೊಂಡೆನಲ್ಲದೆ, ಆಣೆ ನಿಮ್ಮಾಣೆ.

೪. ಹೊಕ್ಕಲ್ಲಿ ಹೊಕ್ಕು, ನಿಮ್ಮೊಕ್ಕುದನುಂಬುವನ ಕುಲವೇನೋ ದೇವಾ? ನೀನೊಲಿದವನ, ಸ್ವಾಮಿ, ನೀಹಿಡಿದವನ ಕುಲವೇನೋ? ಕುಲಕ್ಕೆ ತಿಲಕ ನಿಮ್ಮ ಮಾದರ ಚನ್ನಯ್ಯ ನಿಮ್ಮಿಂದಧಿಕ ಕೂಡಲಸಂಗಮದೇವ.

೫. ಹುಟ್ಟಿದ ಮಕ್ಕಳನೆಲ್ಲ ಅರ್ಥಪ್ರಾಣಾಭಿಮಾನಕ್ಕೊಡೆಯರಾದ ಪರಿಯ ನೋಡಾ. ಅಟ್ಟಡಿಗೆಯ ವಿಷವನು ನಿಮಗೆ ಕೊಟ್ಟಲ್ಲದೆ ಉಣ್ಣೆನೆಂಬ ಭಾಷೆ. ಕೂಡಲಸಂಗಮದೇವ ನಿಮಗೆಂದಟ್ಟಡಿಗೆಯ ನೀಡಿ ಸಲಿಸಿದಾತ ಕೆಂಭಾವಿಯ ಭೋಗಣ್ಣ.

೬. ಅಂಗದ ಮೇಲಣ ಲಿಂಗಹಿಂಗಿ, ಬಂದ ಸುಖವ ನಿನ್ನಾರಿಗರ್ಪಿಸುವೆ? ಹಿಂಗಲಾಗದು, ಭಕ್ತಿ ಪಥಕ್ಕೆ ಸಲ್ಲದಾಗಿ. ಹಿಂಗಲಾಗದು ಶರಣು ಪಥಕ್ಕೆ ಸಲ್ಲದಾಗಿ ಕೂಡಲಸಂಗಮದೇವರ ಹಿಂಗಿ ನುಂಗಿದುಗುಳು ಕಿಲ್ಬಿಷ.

೭. ಮೂವತ್ತೆರಡಾಯುಧದಲ್ಲಿ ಅಭ್ಯಾಸ ಮಾಡಿದರೇನು? ಹಗೆಯ ಕೊಲುವ ದೊಂದಲಗು ಸಾಲದೆ? ಲಿಂಗವ ಗೆಲುವರೆ, ಶರಣಸತಿ ಲಿಂಗಪತಿ ಎಂಬುದೊಂದು ಅಲಗು ಸಾಲದೆ? ಎನಗೆಯೂ ನಿನಗೆಯೂ ಜಂಗಮದ ಪ್ರಸಾದವೆಂಬಲಗು ಸಾಲದೆ ಕೂಡಲಸಂಗಮದೇವ?

## ಮಹೇಶ್ವರನ ಪ್ರಾಣಲಿಂಗ.

೧. ಕೊಲ್ಲೆನಯ್ಯ ಪ್ರಾಣಿಗಳನು, ಮೆಲ್ಲೆನಯ್ಯ ಬಾಯಿಚ್ಛೆಗೆ. ಒಲ್ಲೆ

ನಯ್ಯ ಪರಸತಿಯರ ಸಂಗವ. ಬಲ್ಲೆನಯ್ಯ ಮುಂದೆ ತೊಡಕುಂಟೆಂಬುದ. ಬಳ್ಳದಬಾಯಂತೆ ಒಂದೇ ಮನವ ಮಾಡಿ, ನಿಲ್ಲೆಂದು ನಿಲ್ಲಿಸಯ್ಯ ಕೂಡಲಸಂಗಮದೇವ.

೨. ಆನೆ ಅಂಕುಶಕ್ಕಲ್ಲದೆ ಅಂಜುವುದೇ ಅಯ್ಯ, ಮಾಣದೆ ಸಿಂಹದನಖವೆಂದಂಜುವುದಲ್ಲದೆ? ಆನೀ ಬಿಜ್ಜಳಂಗಂಜುವೆನೆ ಅಯ್ಯ? ಕೂಡಲಸಂಗಮದೇವ, ನೀನು ಸರ್ವಜೀವ ದಯಾಪಾರಿಯಾದ ಕಾರಣ, ನಿಮಗಂಜುವೆನಲ್ಲದೆ?

೩. ಬಂದಿಹನೆಂದು, ಬಾರದೆ ಇದ್ದರೆ ಬಟ್ಟೆಗಳ ನೋಡುತ್ತಲಿರ್ದೆನಯ್ಯ. ಇನ್ನಾರನಟ್ಟುವೆ? ಇನ್ನಾರನಟ್ಟುವೆ? ಇನ್ನಾರ ಪಾದವ ಹಿಡಿವೆನಯ್ಯ? ಕೂಡಲಸಂಗನ ಶರಣರು ಬಾರದೆ ಇದ್ದರೆ, ಅಟ್ಟುವೆ ನೆನ್ನ ಪ್ರಾಣವನು.

## ಮಹೇಶ್ವರನ ಶರಣ.

೧. ಅರಸು ಮಂಚಕ್ಕೆ ಬರಿಸಿ ಎನ್ನ ಬೆರಿಸಿದ ಬಳಿಕ ಆನಂಜುವಳೇ? ಆನುಸಿರಿಯಕ್ಕನೆ. ಪರುಷ ಮುಟ್ಟಿದ ಬಳಿಕ, ಲೋಹವೇ? ಕೂಡಲ ಸಂಗಮ ದೇವ ನೀನೊಲ್ಲದಡಾನು ಬದುಕುವೆನೆ?

೨. ಎಲ್ಲಿ ಹೊಕ್ಕಲ್ಲಿ ನಿನ್ನ ವಿಕಾರವ ಮಾಣೆ. ಇದೊಂದು ಗರುವತನವೇ? ದಾಸನ ವಸ್ತ್ರವ ಸೀಳುವುದೊಂದು ಗರುವತನವೆ? ಸಿರಿಯಾಳನ ಮಗನ ಬೇಡುವದೊಂದು ಗರುವತನವೇ? ಕೋಡಗನ ಹುಲ್ಲಲ್ಲಿ ಮುಸುಕಿಟ್ಟಂತೆ, ಕೂಡಲ ಸಂಗಮ ದೇವ ನಿಮ್ಮ ಪರಿಬೇರೆ.

೩. ಸಿರಿಯಾಳನ ಮಗನ ಬಾಣಸವ ಮಾಡಿಸಿ, ಉಣಲೊಲ್ಲದೆ ಕಾಡಿದೆ. ಚೋಳನ ಮನೆಯಲುಣಲೊಲ್ಲದೆ, ಚನ್ನನ ಮನೆಯಲುಂಡು ಒಬ್ಬರಿಗೊಂದು ಪರಿಯ ಮಾಡಿದೆ, ಕೂಡಲ ಸಂಗಮದೇವ.

೪. ಒಬ್ಬನ ಮನೆಯಲುಂಡು ಹೊತ್ತು ಕಳೆದೆ. ಮತ್ತೊಬ್ಬನ ಮನೆಯಲುಡಲೊಂದುಗಳಿಸಿದೆ. ಗರ್ವಬೇಡ, ಬೇಡ ನಿಮಗೆ. ಚನ್ನನ ಮನೆಯಲುಂಡು ಅಂಬಲಿಯನುಂಡು ಬದುಕಿದೆ. ಗರ್ವ ಬೇಡ, ಬೇಡ. ಕೂಡಲ ಸಂಗಮದೇವಯ್ಯ ಸಿರಿಯಾಳನಿಂದ ಮಾನಸ ಲೋಕವಕಂಡೆ.

೫. ಹರಿಯಜ ಮುನಿಗಳೆಲ್ಲರೂ ನಿಚ್ಚ ನಿಮ್ಮ ಬಾಗಿಲ ಕಾದಿ

ಪ್ಪರು. ಇದೇನು ಕಾರಣ? ನೀವು ಬಾಣನ ಮನೆಯ ಬಾಗಿಲ ಕಾಯ್ದಿರಿ. ಡಿಂಗರಿಗನ ಮನೆಗೆ ಅಂಗಜಾಹವಕ್ಕೆ ಹೋಗಿದ್ದವರೊಳರೆ ಕೂಡಲ ಸಂಗಮದೇವ?

೬. ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ. ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ. ಅಪ್ರಮಾಣ ಅಗೋಚರ ಅಪ್ರತಿಮ ಲಿಂಗವೆ, ಕೂಡಲ ಸಂಗಮದೇವಯ್ಯ ನೀವೆನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯ!

೭. ಗೋತ್ರ ನಾಮವ ಬೆಸಗೊಂಡರೆ, ಮಾತುನೂಕದೆ ಸುಮ್ಮನೇಕೆ ಇದ್ದಿರಯ್ಯ. ತಲೆಯ ಕುತ್ತಿ, ನೆಲನ ಬರೆವುತ್ತಿಪ್ಪಿರಿದೇನಯ್ಯ. ಗೋತ್ರ ಮಾದರ ಚೆನ್ನಯ್ಯ, ಡೋಹರ ಕಕ್ಕಯ್ಯನೆಂಬುದೇನು ಕೂಡಲ ಸಂಗಮ ದೇವ?

೮. ನಿಷ್ಠೆಯಿಂದ ಲಿಂಗವ ಪೂಜಿಸಿ, ಮತ್ತೊಂದು ಪಥವನರಿಯದ ಶರಣರು ಸರ್ಪನ ಹೆಡೆಯ ಮಾಣಿಕದಂತಿರ್ಪರು, ಭೂಷಣರಾಗಿ. ದರ್ಪಣದೊಳಗಣ ಪ್ರತಿಬಿಂಬದಂತೆ ಹಿಂಗದಿಪ್ಪರು, ಕೂಡಲ ಸಂಗಮದೇವ, ನಿಮ್ಮ ಶರಣರು.

೯. ಶಿವಲೋಕಕ್ಕೆ ಬೇರೆ ಲೋಕವಿಲ್ಲ. ಶಿವಮಂತ್ರಕ್ಕೆ ಬೇರೆಮಂತ್ರವಿಲ್ಲ ಜಗಕ್ಕೆ. ಇಕ್ಕಿದೆ ಮುಂಡಿಗೆಯ ನೆತ್ತಿಕೊಳ್ಳಿ, ಕೂಡಲ ಸಂಗಯ್ಯನೊಬ್ಬನೇ ದೈವವೆಂದು.

೧೦. ಈಶ್ವರ ಸದ್ಭಾವೇ ಕಿಂಪ್ರಮಾಣವೆಂಬ ಮೀಮಾಂಸಕನ ಮೂಗಿನ ಕೊನೆಯನು ವಿಶ್ವತೋ ಚಕ್ಷುರುತ, ವಿಶ್ವತೋ ಮುಖ, ವಿಶ್ವತೋಬಾಹುರುತ, ವಿಶ್ವತೋ ಪಾದ್ ಸ ಬಾಹುಭ್ಯಾಂದಮತಿ ಸಂಪತತ್ರೈ ದ್ಯಾವಾ ಭೂಮಿಜನಯಂ ದೇವಏಕಃ ಎಂಬ ಸುರಿಗಿಯಿಂದಿರಿದು, ವೈಶೇಷಿಕನೆಂಬ ಇಟ್ಟಿಗೆಯಲೊರಿಸಿ, ಕೂಡಲ ಸಂಗಯ್ಯನೆಂಬ ಕನ್ನಡಿಯ ತೋರುವೆನು.

೧೧. ಪಂಚ ಬ್ರಹ್ಮವ ಕೆಡಿಸಿತ್ತು, ಪ್ರಣವ ಮಂತ್ರವ ನೀಡಾಡಿತ್ತಲ್ಲಾ. ಕರ್ಮಂಗಳನೆ ಕಳೆಯಿತ್ತು. ಕ್ರಿಯಗಳನೆ ಮೀರಿತ್ತಲ್ಲಾ. ಆಗಮದ ಹಲ್ಲು ಕಳೆಯಿತ್ತು ಕೂಡಲ ಸಂಗಯ್ಯನ ಭಕ್ತಿಗಜವು.

೧೨. ವೇದನಡ ನಡುಗಿತ್ತು. ಶಾಸ್ತ್ರವಗಲಿ ಕೆಲಸಾರಿತ್ತಯ್ಯ. ತರ್ಕ ತರ್ಕಿಸಲರಿಯದೆ ಮೂಗುವಟ್ಟಿತ್ತಯ್ಯ. ಆಗಮ ಹೊರತೊಲಗಿ ಅಗಲಿದ್ದುದಯ್ಯ. ನಮ್ಮ ಕೂಡಲ ಸಂಗನು ಮಾದಾರ ಚೆನ್ನಯ್ಯನ

ಮನೆಯಲುಂಡ ಕಾರಣ.

೧೩. ಚಿಕ್ಕದೊಂದು ಹೊತ್ತಿಗೆ, ಬೆನಕನ ಕರಡಿಗೆಯಯ್ಯ! ನೀಡುಂಡುಟ್ಟ ಗೊರವನಯ್ಯ! ಪುಣ್ಯವೇನಾದಡಾಗಲಿ, ಡಕ್ಕೆಯ ಮೇಲೆ ಅಕ್ಕಿಯ ತಳಿದೆನು. ನಮ್ಮ ಕೂಡಲ ಸಂಗಮದೇವನಲ್ಲದೆ ಅನ್ಯ ದೈವ ಉಂಟೆನಿರು ಕಂಡೆಯಾ.

೧೪. ನೀನಲ್ಲದನ್ಯ ದೈವ ಉಂಟೆಂಬವನ ಬಾಯ ಕೆನ್ನೆವಾರೆ ಸೀಳದಲ್ಲದೆ, ಎನ್ನ ಮುನಿಸು ಹೋಗದಯ್ಯ. ಎನ್ನ ಕೋಪವಡಗದಯ್ಯ. ಎನ್ನ ಬಿನ್ನಪವನವಧಾರು ಕೂಡಲ ಸಂಗಮದೇವ.

೧೫. ಆರು ಮುನಿದು ಎಮ್ಮನೇನು ಮಾಡುವರು? ಊರ ಮುನಿದು ಎಮ್ಮನೆಂತು ಮಾಡುವರು? ನಮ್ಮ ಕುನ್ನಿಗೆ ಕೂಸ ಕೊಡಬೇಡ. ನಮ್ಮ ಸೊಣಗಂಗೆ ತಳಿಗೆಯಲ್ಲಿಕ್ಕ ಬೇಡ. ಆನೆಯ ಮೇಲೆ ಹೋಹವನ ಶ್ವಾನ ಮುಟ್ಟ ಬಲ್ಲುದೆ? ಕೂಡಲ ಸಂಗಮದೇವರುಳ್ಳನ್ನಕ್ಕರ ನಮಗೇನಯ್ಯ?

೧೬. ನ್ಯಾಯ ನಿಷ್ಠುರ, ದಯಾ ದಾಕ್ಷಿಣ್ಯ ಪರನಾನಲ್ಲಯ್ಯ. ಲೋಕ ವಿರೋಧಿ. ಶರಣರಗೆಯೂ ಅಂಜುವನಲ್ಲ. ಕೂಡಲ ಸಂಗಮದೇವರ ರಾಜ ತೇಜದೊಳಿಪ್ಪೆನಾಗಿ.

೧೭. ಊರ ಮುಂದೆ ಹಾಲಹಳ್ಳ ಹರಿವುತ್ತಿರಲಿ, ನಾಳೆ ಆವಿನ ಬೆನ್ನಲಿ ಹರಿಯಲಿ. ಅದೇಕಯ್ಯ? ಲಜ್ಜೆಗೆಡಲೇಕೆ? ನಾಣುಗೆಡಲೇಕೆ? ಕೂಡಲ ಸಂಗಮದೇವರುಳ್ಳನ್ನಕ್ಕರ ಬಿಜ್ಜಳನ ಭಂಡಾರ ಎನಗೇಕಯ್ಯ?

೧೮. ಹೋಗ ಬಿಟ್ಟು, ಮರಳಿ ಹಿಂದೆ ನೋಡಿ, ಮತ್ತಾಗಬೇಕೆಂಬ ಸಂದೇಹವುಳ್ಳನ್ನಕ್ಕ, ಅದೇ ಪರದಾರ, ನಾಯಕ ನರಕ ತಪ್ಪದು. ಅನ್ಯ ವಧುವೆಂಬುದು ನಿಮ್ಮ ರಾಣಿವಾಸ, ಇವೇ ದಿಬ್ಯ, ಕೂಡಲ ಸಂಗಮದೇವ.

೧೯. ಕಂಡುದಕ್ಕೆಳಸದೆನ್ನ ಮನದಲ್ಲಿ. ನೋಡಿಸೋಲೆನೆನ್ನ ಕಂಗಳಲ್ಲಿ. ಆಡಿಹುಸಿಯೆನೆನ್ನ ಜಿಹ್ವೆಯಲ್ಲಿ. ಕೂಡಲ ಸಂಗಮದೇವ, ನಿಮ್ಮ ಶರಣರ ಪರಿ ಇಂತುಟಯ್ಯ. ೬

೨೦. ಆಪ್ಯಾಯನಕ್ಕೆ ಅನ್ನವ ನೀಡುವೆ. ಲಾಂಛನಕ್ಕೆ ಶರಣೆಂಬೆ. ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ, ನೀಸಾಕ್ಷಿಯಾಗಿ ಛೀ ಎಂಬೆನು ಕೂಡಲ ಸಂಗಮದೇವ.

೨೧. ಮಾಡುವ ನೀಡುವ ಭಕ್ತನ ಕಂಡರೆ, ನಿಧಿನಿಧಾನವ ಕಂಡಂ

ತಾಯಿತ್ತಯ್ಯ. ಪಾದೋದಕ ಪ್ರಸಾದ ಜಿಹ್ವೆಯುರ ಕಂಡರೆ, ಹೋದ ಪ್ರಾಣ ಬಂದಂತಾಯಿತ್ತಯ್ಯ. ಅನ್ಯರ ಮನೆಗೆ ಹೋಗಿ, ತನ್ನುದರವ ಹೊರೆಯದ ಅಚ್ಚ ಶರಣರ ಕಂಡರೆ, ನಿಶ್ಚಯವಾಗಿ ಕೂಡಲಸಂಗಯ್ಯ ನೆಂಬೆ.

೨೨. ಗುರು ಭಕ್ತಿಯ ಮಾಡ ಬಹುದಲ್ಲದೆ, ಲಿಂಗ ಭಕ್ತಿಯಮಾಡ ಬಾರದಯ್ಯ. ಲಿಂಗ ಭಕ್ತಿಯಮಾಡಬಹುದಲ್ಲದೆ, ಜಂಗಮಭಕ್ತಿಯಮಾಡ ಬಾರದಯ್ಯ. ಜಂಗಮ ಭಕ್ತಿಯ ಮಾಡಬಹುದಲ್ಲದೆ, ಸಮಯ ಭಕ್ತಿಯ ಮಾಡಬಾರದು. ಸಮಯ ಭಕ್ತಿಯಮಾಡಬಹುದಲ್ಲದೆ, ಸಮಯಸಂತೋ ಷವ ಮಾಡಬಾರದು. ಇವೆಲ್ಲವ ಮಾಡಬಹುದಲ್ಲದೆ, ತನ್ನತಾನರಿಯ ಬಾರದು. ತನ್ನತಾನರಿದೆನೆಂಬ ಅಹಂಕಾರವುಳ್ಳರೆ, ನಿಮ್ಮವರಿಗೆ ದೂರ. ಎಲೆ ದೇವಾ ಅನ್ಯಕ್ಕೆ ಆಶೆಮಾಡಿದೆನಾದರೆ, ನಿಮ್ಮಾಣೆ, ನಿಮ್ಮ ಪ್ರಮ ಥರಾಣೆ ಕೂಡಲ ಸಂಗಮದೇವ.

೨೩. ದಾಸನಂತೆ ತವನಿಧಿಯ ಬೇಡುವನಲ್ಲ. ಚೋಳನಂತೆ ಹೊನ್ನ ಮಳೆಯ ಕರಿಸೆಂಬುವನಲ್ಲ. ಅಂಜದಿರು, ಅಂಜದಿರು. ಅವ ರಂದವ ನಾನಲ್ಲ. ಎನ್ನ ತಂದೆ ಕೂಡಲ ಸಂಗಮದೇವ ಸದ್ಭಕ್ತಿಯನೆ ಕರುಣಿಸೆನಗೆ.

೨೪. ಲಿಂಗದಲ್ಲಿ ಸಮ್ಯಕ್ಕರು, ಲಿಂಗದಲ್ಲಿ ಸಮರ್ಥರು, ಲಿಂಗ ದಲ್ಲಿ ಸೊಮ್ಮುಸಂಬಂಧವನರಿತ ಸ್ವಾಮಿ ಭೃತ್ಯರೆಲ್ಲರು ನಿಮ್ಮ ನಾ ಬೇ ಡೆನಂಜದಿರು, ಅಂಜದಿರು. ಎನಗೆ ಮರ್ತ್ಯಲೋಕದ ಮಹಾಗಣಂಗ ಳುಂಟು. ಇದು ಕಾರಣ ಕೂಡಲ ಸಂಗಮದೇವರ ಲೋಕವ ಹಂಚಿ ಕೊಳ್ಳಿ ನಿಮ ನಿಮಗೆ.

## ಮಹೇಶ್ವರನ ಐಕ್ಯ.

೧. ಅಂದಂದಿನ ಹೊಂದಿಗೆಯ ಬಿಂದುಮಾತ್ರದಲಾದ ಅಂದ ವ ಕೆಡಿಸಲರಿಯದ ಅಂಧಕರನೋಡಾ. ಸಮರಸವಿಲ್ಲದೆ ನೆರಹಿ ಮಾಡಿ ಭಕ್ತರಾದೆವೆಂಬವರ ನೇನೆಂಬೆ? ಆಚಾರ ವಂಚಕರ ಎನಗೆ ತೋರದಿರಾ, ಕೂಡಲಸಂಗಮದೇವಾ, ನಿಮ್ಮ ಧರ್ಮ.

೨. ಕಲಿಯ ಕಯ್ಯ ಕೈದು ವಿನಂತಿರಬೇಕಯ್ಯ ಎಲುದೋರಿ ಸರ ಸವಾಡಿದರೆ ಸೈರಿಸಬೇಕಯ್ಯ- ರಣದಲ್ಲಿ ತಲೆಹರಿದು ಅಟ್ಟೆ ನೆಲಕ್ಕೆ ಬಿದ್ದು

ಬೊಬ್ಬಿಡಲವಕ್ಕೊಲಿವ ನಮ್ಮ ಕೂಡಲಸಂಗಮದೇವಾ.

೩. ಆಶಿರೋಷ ಹರುಷಾದಿಗಳೆಂಬ ಕರಣೇಂದ್ರಿಯಂಗಳ ಮುಟ್ಟಲೀಯ್ಯದೆ, ಆಚಾರ ಶಿವಾಚಾರವ ಮಾಡುವೆ. ಭಯಭಕ್ತಿಯಿಂದ ತೋರುವೆ. ಮನದಲ್ಲಿ ವಂಚನೆ ಇಲ್ಲದೆ ಭಾವಶುದ್ಧ ಪೂಜೆಯ ಮಾಡುವೆ. ಎನ್ನ ಪ್ರಾಣಶಕ್ತಿಯಿಂದ ಕೂಡುವೆ ಕೂಡಲಸಂಗಮದೇವರ.

೪. ಪೂರ್ವಬೀಜ ವಾಯು ಪ್ರಾಣಿಯಲ್ಲ. ಲಿಂಗಪ್ರಾಣಿಯು ಶರಣನು. ಏಕೋಗ್ರಾಹಿ. ಭಾವ ಭೇದವಿಲ್ಲಾಗಿ, ಮನಪ್ರವೇಶಿಯು ಶರಣನು. ನಿಮ್ಮುವ ಪೂಜಿಸಿ ತನುಧರ್ಮವ ಮರೆದು, ನಿಮ್ಮ ಪ್ರತಿ ಬಿಂಬವಂತಿಪ್ಪರು, ಕೂಡಲಸಂಗಮದೇವ, ನಿಮ್ಮ ಶರಣರು.

# ಪ್ರಸಾದಿಸ್ಥಲ.

೧. ಹಸಿವಾಯಿತ್ತೆಂದು ಅರ್ಪಿತವ ಮಾಡುವರಯ್ಯ. ತೃಷೆಯಾಯಿತ್ತೆಂದು ಮಜ್ಜನಕ್ಕೆರೆವರಯ್ಯ. ಹಸಿವು ತೃಷೆ ವಿಷಯಕ್ಕೆ ಬಳಲುವರಯ್ಯ. ಹಸಿವಾಯಿತ್ತೆಂದು ಅರ್ಪಿತವ ಮಾಡಲಿಲ್ಲ. ತೃಷೆಯಾಯಿತ್ತೆಂದು ಮಜ್ಜನಕ್ಕೆರೆಯಲಿಲ್ಲ. ಇದು ಕಾರಣ ಕೂಡಲಸಂಗಮದೇವರ ಪೂಜಿಸಿ ಪ್ರಸಾದವ ಪಡೆದವರೊಬ್ಬರೂ ಇಲ್ಲ.

೨. ಮುತ್ತು ನೀರಲ್ಲಿ ಹುಟ್ಟಿ ಮತ್ತೆ ನೀರಪ್ಪುದೆ? ಗುರು ಕಾರುಣ್ಯವ ಪಡೆದು ಭಕ್ತನು ಪೂರ್ವಾಶ್ರಯವ ಬೆರಿಸಿದರೆ, ಗುರುದ್ರೋಹ, ಲಿಂಗದ್ರೋಹ, ಜಂಗಮದ್ರೋಹ, ಆಚಾರದ್ರೋಹ, ಪ್ರಸಾದದ್ರೋಹ. ಇಂತೀ ಪಂಚಮಹಾ ಪಾತಕಂಗಳು ಭಕ್ತಂಗಲ್ಲದೆ ಭವಿಗೆಲ್ಲಿಯದೊ? ಗುರುವಿದು, ಲಿಂಗವಿದು, ಜಂಗಮವಿದು, ಆಚಾರವಿದು, ಪ್ರಸಾದವಿದು ಎಂದರಿಯದಿದ್ದರೆ ಕುಂಭಿನೀ ಪಾತಕ ನಾಯಕ ನರಕ ತಪ್ಪದು ಕೂಡಲ ಸಂಗಮದೇವ.

೩. ಸೂಳೆಗೆ ಮೆಚ್ಚಿ ಸೂಳೆಯ ಬಂಟರೆಂಜಲ ತಿಂಬುವುದೀಲೋಕ. ಆಡಗ ಮೆಚ್ಚಿದ ಸೊಣಗನೆಂಜಲ ತಿಂಬುವುದೀಲೋಕ. ಲಿಂಗಮೆಚ್ಚಿ ಜಂಗಮ ಪ್ರಸಾದವ ಕೊಂಬುವರ ನೋಡಿ ನಗುವರ ಕುಂಭಿನೀಪಾತಕ ನಾಯಕ ನರಕದಲ್ಲಿಕ್ಕುವ ಕೂಡಲ ಸಂಗಮದೇವ.

೪. ಹೊಲೆಯುಂಟೇ ಲಿಂಗವಿದ್ದೆಡೆಯಲ್ಲಿ? ಕುಲವುಂಟೇ ಜಂಗಮವಿದ್ದೆಡೆಯಲ್ಲಿ? ಎಂಜಲುಂಟೆ ಪ್ರಸಾದವಿಪ್ಪೆಡೆಯಲ್ಲಿ? ಇಂತೀ ಅಪವಿತ್ರದ ನುಡಿಯ ನುಡಿವ ಸೂತಕವೆ ಪಾತಕ. ನಿಷ್ಕಳಂಕ, ನಿಜೈಕ್ಯ, ನಿರುಪಮ, ನಿರ್ಣಯ ಕೂಡಲ ಸಂಗಮದೇವ ನಿಮ್ಮ ಶರಣರಿಗಲ್ಲದಿಲ್ಲ.

೫. ಬಾರದು ಬಾರದು ಭಕ್ತಂಗೆ ಪರಧನ, ಪರಸತಿ. ಬಾರದು ಬಾರದು ವಿಷಯಿಗೆ ಪಶುಪತಿ ವ್ರತ. ಬಾರದು ಬಾರದು ಭವಭಾರಿಗೆ ಕೂಡಲ ಸಂಗಮದೇವನ ಒಕ್ಕುದಕೊಳ್ಳಬಾರದು.

೬. ಹುತ್ತದ ಮೇಲಣ ರಜ್ಜು ಮುಟ್ಟಿದರೆ, ಸಾವರು ಶಂಕಿತರಾದವರು. ಸರ್ಪಸಷ್ಟವಾದರೆಯೂ, ಸಾಯರು ನಿಶ್ಶಂಕಿತರಾದವರು.

ಕೂಡಲಸಂಗಮದೇವಯ್ಯ ಶಂಕಿತಂಗೆ ಪ್ರಸಾದ ಸಿಂಗಿಕಾಳಕೂಟ ವಿಷವು.

೭. ನಂಬಿದರೆ ಪ್ರಸಾದ, ನಂಬದಿದ್ದರೆ ವಿಷವು ನೋಡಾ. ತುಡು ಕಬಾರದು ನೋಡಾ ಲಿಂಗ ಪ್ರಸಾದ, ಸಂಗನ ಪ್ರಸಾದ. ಕೂಡಲಸಂಗನ ಪ್ರಸಾದ ಸಿಂಗಿ ಕಾಳಕೂಟ ವಿಷವು.

೮. ಪಂಡಿತನಾಗಲಿ ಮೂರ್ಖನಾಗಲಿ ಸಂಚಿತಕರ್ಮಉಂಡಲ್ಲದೆ ಮಾಣದು. ಪ್ರಾರಬ್ಧಕರ್ಮ ಭೋಗಿಸಿದಲ್ಲದೆ ತೀರದೆಂದು ಶೃತಿಸಾರು ತ್ತಿವೆ ನೋಡಾ. ತಾನಾವಲೋಕದೊಳಗಿದ್ದರೆಯೂ, ಬಿಡದು. ಕರ್ಮ ಫಲ ಗೂಡಿ ಕೂಡಲಸಂಗಮದೇವಂಗೆ ಆತ್ಮನೈವೇದ್ಯವ ಮಾಡಿದಾತನೇ ಧನ್ಯನಯ್ಯ.

೯. ಒಲ್ಲೆನೆಂಬುದು ವೈರಾಗ್ಯ. ಒಲಿವೆನೆಂಬುದು ಕಾಯದಗುಣ. ಆವಪದಾರ್ಥ ತಾನಾದರೇನು? ತಾನಿದ್ದೆಡೆಗೆ ಬಂದರೆ, ಲಿಂಗಾರ್ಪಿತವ ಮಾಡಿ ಭೋಗಿಸುವದೇ ಆಚಾರ. ಕೂಡಲಸಂಗಮದೇವರನೊಲಿಸ ಬಂದಪ್ರಸಾದಕಾಯವ ಕೆಡಿಸಲಾಗದು.

೧೦. ಒಪ್ಪವನುಡಿವರಯ್ಯ, ತುಪ್ಪವ ತೊಡೆದಂತೆ. ಶರಣ ತನ್ನ ಮರೆವನೆ, ಬಿನ್ನಾಣಿಯಂತೆ? ಕೂಡಲಸಂಗನ ಪ್ರಸಾದದಿಂದ ಬದುಕು ವನಲ್ಲದೆ, ತನ್ನ ಮೆರೆವನೆ ಶರಣ?

೧೧. ಅರ್ಪಿತ ಅರ್ಪಿತವೆಂದೆನುತಿಹಿರಿ. ಗುರುವಿಂಗೆ ಕೊಡುವುದು ಅರ್ಪಿತವೆ, ಸವಿ ಸವಿದು ಕೊಡಬೇಕಲ್ಲದೆ? ಅರ್ಪಿತ ಅರ್ಪಿತವೆನುತ್ತಿಹಿರಿ. ಲಿಂಗಕ್ಕೆ ಕೊಡುವುದು ಅರ್ಪಿತವೆ, ಸವಿ ಸವಿದು ಕೊಡಬೇಕಲ್ಲದೆ? ಅರ್ಪಿತದ ಮುಖವನರಿಯರು ನೋಡಾ. ಜಂಗಮಕ್ಕೆ ನೀಡಿ, ಜಂಗ ಮಪ್ರಸಾದವ ಕೊಂಡರೆ, ನಿನಗರ್ಪಿತ ಕಾಣಾ ಕೂಡಲಸಂಗಮ ದೇವ.

## ಪ್ರಸಾದಿಯ ಪ್ರಸಾದಿ.

೧. ಗುರುಲಿಂಗಜಂಗಮದಿಂದ ಪಾದೋದಕ ಪ್ರಸಾದವಾಯಿತ್ತು. ಆ ಭಾವವೆ ಮಹಾನುಭಾವವಾಗಿ, ಎನಗೆ ಮತ್ತೆ ಬೇರೆ ಪ್ರಸಾದವೆಂ ಬುದಿಲ್ಲ ಕೂಡಲಸಂಗಮದೇವ.

೨. ದಾಸೋಹವೆಂಬ ಸೋಹಿಗೊಂಡು ಹೋಗಿ, ಗುರುವ ಕಂಡೆ

ಲಿಂಗವ ಕಂಡೆ, ಜಂಗಮವ ಕಂಡೆ, ಪ್ರಸಾದವ ಕಂಡೆ, ಇಂತೀ ಚತುರ್ವಿಧ ಸಂಪನ್ನನಾದೆನು ಕಾಣಾ ಕೂಡಲಸಂಗಮದೇವಾ.

## ಪ್ರಸಾದಿಯ ಭಕ್ತ.

೧. ಸಜ್ಜನ ಶರಣರ ಕಂಡು ಎನ್ನ ಮನಉಬ್ಬಿತ್ತು ನೋಡಾ. ಶ್ರೀಗುರು ಪಾದವ ಹಿಡಿದು ಪಾವನನಾದೆನಯ್ಯ. ಪಾದೋದಕಪ್ರಸಾದದಿಂದ ಭವಗೆಟ್ಟೆನು ಕೂಡಲಸಂಗಮದೇವಾ.

೨. ಕಿವಿಯ ಸೂತಕ ಹೋಯಿತ್ತು, ಸದ್ಗುರುವಿನ ವಚನದಿಂದ. ಕಂಗಳಸೂತಕ ಹೋಯಿತ್ತುಸದ್ಭಕ್ತರ ಕಂಡೆನಾಗಿ. ಕಾಯದ ಸೂತಕ ಹೋಯಿತ್ತು ನಿಮ್ಮ ಚರಣವ ಮುಟ್ಟಿದೆನಾಗಿ. ಬಾಯಸೂತಕಹೋಯಿತ್ತು ನಿಮ್ಮಕೂಡನುಂಡೆನಾಗಿ. ನಿಮ್ಮ ಶರಣರನುಭಾವಿಯಾಗಿ ನಾನಾಸೂತಕಹೋಯಿತ್ತು. ಎನ್ನ ಮನದ ಸೂತಕ ಹೋಯಿತ್ತು ನೀವಲ್ಲದನ್ಯವಿಲ್ಲೆಂದರಿದೆನಾಗಿ, ಕೂಡಲಸಂಗಮದೇವ ಕೇಳಯ್ಯ

೩. ಲಿಂಗಪ್ರಸಾದಿಗಳಲ್ಲದವರ ಸಂಗ ಭಂಗವೆಂದುದು ಗುರುವಚನ. ಲಿಂಗಪ್ರಸಾದಿಗಳಲ್ಲದವರ ಸಂಗ ಮಹಾಪಾತಕವೆಂದುದು ಲಿಂಗವಚನ. "ಅಶನೇಶಯನೇಯಾನೇ ಸಂಪರ್ಕೇಸಹಭೋಜನೇ। ಸಂಚರಂತಿ ಮಹಾಘೋರೆ ನರಕೇ ಕಾಲಮಕ್ಷಯಂ"॥ ಇಂತೆಂದುದಾಗಿ ಕೂಡಲಸಂಗಮದೇವಾ ನಿಮ್ಮ ಶರಣರಿಗೆ ಶರಣೆಂದು ಶುದ್ಧನಾದೆನಯ್ಯ.

೪. ಸುಯಿಧಾನವ ತಂದು ನೀಡುವೆನಲ್ಲದೆ, ಸಂಬಂಧಿನಾನಲ್ಲವಯ್ಯ. ಕರ್ತಂಗೆ ಭೃತ್ಯಾಚಾರವ ಮಾಡಿ ಒಕ್ಕುದಕೊಂಡಿಪ್ಪೆನಯ್ಯ. ಭೋಗಾದಿಭೋಗ ಸಮಭೋಗಿಸಲು ಅಘೋರನರಕದಲ್ಲಿಕ್ಕುವ ಕೂಡಲಸಂಗಮದೇವ.

೫. ಶುದ್ಧವ ಗುರುವಿಗೆ ಕೊಟ್ಟು ಶುದ್ಧವಾಯಿತ್ತೆಂಬೆನಯ್ಯ. ಸಿದ್ಧವಲಿಂಗಕ್ಕೆ ಕೊಟ್ಟು ಸಿದ್ಧವಾಯಿತ್ತೆಂಬೆನಯ್ಯ. ಪ್ರಸಿದ್ಧವ ಜಂಗಮಕ್ಕೆ ಕೊಟ್ಟು ಪ್ರಸಿದ್ಧವಾಯಿತ್ತೆಂಬೆನಯ್ಯ. ಗುರುಲಿಂಗ ಜಂಗಮವನೇಕತ್ರಯವಮಾಡಿ ಕಾಣಲರಿಯದಿದ್ದರೆ, ಶುದ್ಧ ಸಿದ್ಧ ಪ್ರಸಿದ್ಧ ಒಡನೆಸಗುತ್ತಿದ್ದಾವೆ. ತನುಮನಧನವ ನಿವೇದಿಸಲರಿಯೆನಾಗಿ, ಕೂಡಲಸಂಗಮದೇವ ಒಲಿ ಎಂದೊಡೆ ಎಂತೊಲಿವ.

## ಪ್ರಸಾದಿಯ ಮಹೇಶ.

೧. ಒಡಲಕಳವಳಕ್ಕೆ ಬಾಯಸವಿಗೆ ಬಯಸಿ ಉಂಡೆನಾದರೆ, ನಿಮ್ಮ ತೊತ್ತಿನ ಮಗನಲ್ಲ. ಬಿಡೆ ಬಿಡೆ ನಿಮ್ಮ ನಂಬಿದ ಸದ್ಭಕ್ತರ ಒಕ್ಕುದ ನಾನುಂಬೆ. ಅವರಂದಂತೆ ನಡೆವೆ. ಎನ್ನೊಡೆಯ ಕೂಡಲಸಂಗಮದೇವ ನೀನೊಲ್ಲದವರ ನಾ ಹಿಡಿದೆನಾದರೆ ನಿಮ್ಮ ಪಾದದಾಣೆ.

೨. ಲಿಂಗಮುಖದಿಂದ ಬಂದ ಪ್ರಸಾದವನಲ್ಲದೆ ಕೊಂಡೆನಾದರೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಲಿಂಗಾರ್ಪಿತವಲ್ಲದೆ ಉದಕವ ಮುಕ್ಕುಳಿಸಿದರೆ, ಸಲ್ಲೆನು ನಿಮ್ಮ ಗಣಾಚಾರಕ್ಕಯ್ಯ. ಲಿಂಗಾರ್ಪಿತವಲ್ಲದೆ ಹಲ್ಲು ಕಡ್ಡಿಯಕೊಂಡೆನಾದರೆ ನಾಒಲ್ಲೆ ಮುಂದೆ ಭವ ಘೋರನರಕವೆಂಬುದ. ನಿಮಗೆತ್ತಿದ ಕರವ ಮತ್ತೊಂದಕ್ಕೆ ಕೈ ಎತ್ತೆನಯ್ಯ. ಅಳವರಿಯದೆ ನುಡಿದೆನು. ಕಡೆಮುಟ್ಟಿಸದಿದ್ದರೆ, ತಲೆದಂಡ ತಲೆದಂಡ ಕೂಡಲಸಂಗಮದೇವ.

## ಪ್ರಸಾದಿಯ ಪ್ರಾಣಲಿಂಗ.

೧. ಮೌನದಲುಂಬುದು ಆಚಾರವಲ್ಲ. ಲಿಂಗಾರ್ಪಿತವ ಮಾಡಿದ ಬಳಿಕ, ತುತ್ತಿಗೊಮ್ಮೆ ಶಿವಶರಣೆನ್ನುತ್ತಿರಬೇಕು. ಕರಣವೃತ್ತಿಗಳಡಗುವವು, ಕೂಡಲಸಂಗಮದೇವರ ನೆನೆಯುತ್ತ ಉಂಡರೆ.

೨. ಕಾಯದ ಕರಣದ ಕಯ್ಯಲು ಪದಾರ್ಥವಹಿಡಿವಲ್ಲಿ ನಿಮಗೆ ಕೊಡುವ ಭರದ ಭೀತಿಯಿಂದ ಆನರಿಯೆನಯ್ಯ. ಎನ್ನ ನೀನರಿದು ಸಲಹುತಿಪ್ಪೆಯಯ್ಯ. ಕೂಡಲಸಂಗಮದೇವ.

೩. ಆಳಿಕಾರನೆನಗೊಬ್ಬ ಮಗ ಹುಟ್ಟಿದನೆಂದು ಆಳಿಯ ಕೆಡಲೀಯ್ಯದೆ ನಡಿಸುವನೆಮ್ಮಯ್ಯ. ಪಂಚಭೂತ ಕಾಯವ ಭವಿ ಎಂದೆನಿಸದೆ, ಪ್ರಸಾದ ಕಾಯವ ಮಾಡಿ ಸಲಹುವನೆಮ್ಮಯ್ಯ ಆಳಿಸಾವಲ್ಲಿ ಅವಧಾನಿಯಾಗಿದ್ದರೆ ಆಳ್ದನು ನಮ್ಮ ಕೂಡಲ ಸಂಗಮದೇವ.

೪. ಶಿವಾಚಾರವೆಂಬುದೊಂದು ಬಾಳಬಾಯಿಧಾರೆ ಕಂಡೆಯಾ. ಲಿಂಗ ಮೆಚ್ಚಬೇಕು, ಜಂಗಮ ಮೆಚ್ಚಬೇಕು, ಪ್ರಸಾದ ಮೆಚ್ಚಬೇಕು, ತನ್ನಲ್ಲಿ ಸ್ವಾಯತವಾಗಿರಬೇಕು, ಬಿಚ್ಚಿಬೇರಾದರೆ, ಮೆಚ್ಚ ನಮ್ಮ ಕೂಡಲ ಸಂಗಮದೇವ.

## ಪ್ರಸಾದಿಯ ಶರಣ.

೧. ತ್ರಿವಿಧ ಪ್ರಸಾದವೆಂಬುದು ಎಂಥಾದ್ದಯ್ಯ. ಶುದ್ಧ ಪ್ರಸಾದ ಗುರುವಿನದು. ಸಿದ್ಧ ಪ್ರಸಾದಲಿಂಗದದು. ಪ್ರಸಿದ್ಧ ಪ್ರಸಾದ ಜಂಗಮದು. ಇಂತೀ ತ್ರಿವಿಧ ಪ್ರಸಾದ ಒಂದಾದವರ ತೋರಾ ಎನಗೊಮ್ಮೆ ಕೂಡಲ ಸಂಗಮದೇವ.

೨. ಆವಾವ ಭಾವದಲ್ಲಿ ಶಿವನ ನಂಬಿದ ಶರಣರು ಎಂತಿದ್ದರೇನಯ್ಯ? ಆವಾವ ಭಾವದಲ್ಲಿ ಶಿವನ ನಂಬಿದ ಮಹಿಮರು ಎಂತಿರ್ದರೇನಯ್ಯ? ಸುಚರಿತ್ರರೆಂತಿರ್ದರೇನಯ್ಯ? ಅವಲೋಹವ ಕಳೆವ ಪರುಷವೆಂತಿರ್ದರೇನಯ್ಯ? ಕೂಡಲಸಂಗನ ಶರಣರು ರಸದ ವಾರುಧಿಗಳು ಎಂತಿರ್ದರೇನಯ್ಯ?

೩. ಉರೆ ತಾಗಿದ ಮೃಗವು ಒಂದಡಿಯ ನಿಡುವುದೇ? ತನುವತಾಗಿದ ಸುಖವು ಅಗಲುವದೆ ಅಯ್ಯ? ಕೂಡಲ ಸಂಗನ ಶರಣರ ಅನುಭಾವವರಿದವರ ಮರಳಿ ಮರ್ತ್ಯರೆಂದೆನಲಹುದೆ ಅಯ್ಯ?

೪. ನಿಮ್ಮ ಶ್ರೀ ಪಾದವ ಮುಟ್ಟಿ ಎನ್ನ ಕರ್ಮ ಹರಿಯಿತ್ತು. ನಿಮ್ಮ ಪ್ರಸಾದದಿಂದ ಭವಗೆಟ್ಟೆ ನೋಡಯ್ಯ. ಮನ ಪರುಷ, ದೃಷ್ಟಿ ಪರುಷ, ಭಾವ ಪರುಷ, ಲಿಂಗ ಗಣಂಗಳು. ಕೂಡಲ ಸಂಗಮದೇವ ನಿಮ್ಮ ಶರಣರನುಭಾವದಿಂದ ನಾನು ಸುಖಿಯಾದೆನಯ್ಯ.

## ಪ್ರಸಾದಿಯ ಐಕ್ಯ.

೧. ನಡೆ ಚನ್ನ, ನುಡಿ ಚನ್ನ, ಎಲ್ಲಿ ನೋಡಿದರೆಯೂ ಚನ್ನ, ಪ್ರಮಥರೊಳಗೆ ಚನ್ನ, ಪುರಾತರೊಳಗೆ ಚನ್ನ. ಸವಿದು ನೋಡಿ ಅಂಬಲಿಯು ರುಚಿಯಾಯಿತ್ತೆಂದು ಕೂಡಲ ಸಂಗಮದೇವಂಗೆ ಬೇಕೆಂದು ಕೈದೆಗೆದನು ನಮ್ಮ ಮಾದಾರ ಚನ್ನ.

೨. ಲಿಂಗ ವಿಕಾರಿಗೆ ಅನ್ನವಿಕಾರವೆಂಬುದಿಲ್ಲ. ಜಂಗಮವಿಕಾರಿಗೆಧನವಿಕಾರವೆಂಬುದಿಲ್ಲ. ಪ್ರಸಾದ ವಿಕಾರಿಗೆ ಮನ ವಿಕಾರವೆಂಬುದಿಲ್ಲ. ಇಂತೀ ತ್ರಿವಿಧ ಗುಣವ ನರಿದಾತನು ಅಚ್ಚ ಲಿಂಗೈಕ್ಯನು ಕೂಡಲಸಂಗಮದೇವಾ.

# ಪ್ರಾಣಲಿಂಗಿ ಸ್ಥಲ.

೧. ಪ್ರಾಣಲಿಂಗ ಪ್ರತಿಗ್ರಾಹಕನಾದ ಬಳಿಕ ಲಿಂಗವಿರಹಿತವಾಗಿ ನಡೆವಪರಿ ಇನ್ನೆಂತೋ, ಲಿಂಗವಿರಹಿತವಾಗಿ ನುಡಿವ ಪರಿ ಇನ್ನೆಂತೋ ಪಂಚೇಂದ್ರಿಯ ಸುಖವನು ಲಿಂಗವಿರಹಿತವಾಗಿ ಭುಂಜಿಸಲಾಗದು, ಲಿಂಗವಿರಹಿತವಾಗಿ ಉಗುಳ ನುಂಗಲಾಗದು, ಇಂತೆಂದುದು ಕೂಡಲಸಂಗನ ವಚನ.

೨. ಹತ್ತು ಸಾವಿರ ಗೀತವ ಹಾಡಿ ಅರ್ಥವಿಟ್ಟಲ್ಲಿ ಫಲವೇನು, ಮುಟ್ಟುವ ತೆರನನರಿಯದನ್ನಕ್ಕರ? ಕಟ್ಟಿದರೇನು, ಬಿಟ್ಟರೇನು, ಮನವು ಲಿಂಗವ ಮುಟ್ಟದನ್ನಕ್ಕರ? ಮಾತಿನಲ್ಲಿ ಒಲಿಸಿ ಮಹಂತವಪ್ಪ ಲಿಂಗವ ಕಂಡೆನೆಂಬ ಪಾತಕರ ಮೆಚ್ಚ ನಮ್ಮ ಕೂಡಲಸಂಗಮದೇವ.

೩. ಗುರುತೋರಿದ ಲಿಂಗವು ಮನಸ್ಥಲವಾಗಿರಲು, ಪವನ ಭೇದದಿಂದ ಅರಿದಿಹೆನೆಂದರೆ, ಅದೇದ್ರೋಹ. ಈಡಾಪಿಂಗಳ ಸುಷುಮ್ನನಾಳವಿಡಿದು ಅರಿದಿಹೆನೆಂದರೆ, ಕೂಡಲಸಂಗಮದೇವ ಮೂಗ ಕೊಯ್ಯದೆ ಮಾಬುವನೆ?

೪. ಕಬ್ಬುನ ಪರುಷ ವೇದಿಯಾದರೇನು? ಕಬ್ಬುನ ಹೊನ್ನಾಗದೊಡೆ, ಪರುಷವದೇಕೋ? ಮನೆಯೊಳಗೆ ಕತ್ತಲೆ ಹರಿಯದೊಡೆ, ಆ ಜ್ಯೋತಿಯದೇಕೋ? ಕೂಡಲಸಂಗಮದೇವರ ಮನಮುಟ್ಟಿ ಪೂಜಿಸಿ ಕರ್ಮವ ಹರಿಯದೊಡೆ, ಆ ಪೂಜೆಯದೇಕೋ?

೫. ಅಹಂಕಾರ ಮನವನಿಂಬುಗೊಂಡಲ್ಲಿ, ಲಿಂಗತಾನೆಲ್ಲಿಪ್ಪುದೋ? ಅಹಂಕಾರಕ್ಕೆ ಎಡೆಗುಡದೆ, ಲಿಂಗತನುವಾಗಿರಬೇಕು. ಅಹಂಕಾರರಹಿತನಾದಲ್ಲಿ, ಸನ್ನಿಹಿತ ಕಾಣಾ ಕೂಡಲಸಂಗಮದೇವಾ.

೬. ನುಡಿದರೆ, ಮುತ್ತಿನ ಹಾರದಂತಿರಬೇಕು. ನುಡಿದರೆಮಾಣಿಕ್ಯದೀಪ್ತಿಯಂತಿರಬೇಕು. ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು. ನುಡಿದರೆ ಲಿಂಗಮೆಚ್ಚಿ ಅಹುದೆನಬೇಕು. ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವನೆಂತೊಲಿವನಯ್ಯ.

೭. ಮನದ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕೊಂ

ಡಿಪ್ಪನೊಬ್ಬ ದಾಸೋಹಿ. ಆದಿವಿಡಿದು ಬಂದಾತನೇ ಭಕ್ತನು, ಅನಾದಿ ವಿಡಿದು ಬಂದಾತನೇ ಜಂಗಮವು. ಆದಿಗುರು ಅನಾದಿಶಿಷ್ಯ. ಈ ಉಭಯದ ಕುಳಸ್ಥಳವಬಲ್ಲರೆ, ಆತ ಲಿಂಗಸಂಬಂಧಿ ಕೂಡಲಸಂಗಮದೇವ.

೮. ಅರಿದರಿದು ಸಮಗಾಣಿಸಬಾರದು. ತ್ರಾಸಿನ ಕಟ್ಟಳೆಯಂತಿನಿತು ವೆಗ್ಗಳವಾದರೆ, ಈಶ್ವರ ನೋಡಿ ಇಕ್ಕುದ ಮಾಣ್ಬನೆ? ಪಾತ್ರಾ ಪಾತ್ರವೆಂದು ಕಂಡೆನಾದರೆ, ಶಿವನೆಂತು ಮೆಚ್ಚುವನು? ಜೀವಜೀವಾತ್ಮ ಸರಿ ಎಂದು ಕಂಡರೆ, ಸಮವೇದಿಸದಿಪ್ಪನೇ ಶಿವನು? ತನ್ನ ಮನದಲ್ಲಿ ಯತ್ರ ಜೀವ ಸ್ತತ್ರ ಶಿವನೆಂದು, ಸರ್ವ ಜೀವದಯಾಪಾರಿಯಾದರೆ, ಕೂಡಲಸಂಗಮದೇವ ಕೈಲಾಸದಿಂದ ಬಂದು ಎತ್ತಿಕೊಳ್ಳದಿಪ್ಪನೇ ಅವರನು?

೯. ಸ್ಥಾವರ ಜಂಗಮವೆಂಬು ಭಯಪಕ್ಷ ಒಂದೇ. ಆವ ಮುಖದಲ್ಲಿ ಬಂದಡೂ ತೃಪ್ತಿ ಒಂದು. ಕೂಡಲ ಸಂಗಮದೇವರ ಆಪ್ಯಾಯನ ಒಂದೇ.

೧೦. ಮುತ್ತು ಉದುಕದಲಾಗದು, ಉದಕ ಮುತ್ತಿನಲಾಗದು. ತತ್ವ ಘಟಿಸಿದ ಶುಭ ಮುಹೂರ್ತದಲಲ್ಲದೆ, ಚಿತ್ತವೇದ್ಯವಾಗದು. ಸದ್ಗುರುವಿನ ಕರುಣಕಲ್ಲದೆ, ಕರ್ತೃ ಕೂಡಲ ಸಂಗಮದೇವರ ಒಲವಿನ ದಯದ ಚಿತ್ತವಿಡಿದಂಗಲ್ಲದೆ, ಶಿವತತ್ವ ಸಾಹಿತ್ಯವಾಗದು.

೧೧. ಕಾಯದ ಗಡಣ ಕೆಲಬರಿಗುಂಟು. ಜೀವದ ಗಡಣ ಕೆಲಬರಿಗುಂಟು. ಭಾವದ ಗಡಣ ಕೆಲಬರಿಗುಂಟು. ವಚನದ ಗಡಣ ಕೆಲಬರಿಗುಂಟು. ಪ್ರಾಣಲಿಂಗದ ಗಡಣ ಆರಿಗೂ ಇಲ್ಲ. ಕೂಡಲಸಂಗನ ಶರಣರಲ್ಲಿ ತಂಗುಟೂರ ಮಾರಯ್ಯಂಗಲ್ಲದೆ.

೧೨. ಚಂದ್ರಕಾಂತ ಸಿಲೆಯಲ್ಲಿ ಜಲವಿಲ್ಲದನ್ನಕ್ಕರ ಸೀತವ ತೋರುವ ಪರಿ ಎಂತೋ? ಸೂರ್ಯಕಾಂತದ ಸಿಲೆಯಲ್ಲಿ ಅಗ್ನಿ ಇಲ್ಲದನ್ನಕ್ಕರ ಉಷ್ಣವ ತೋರುವ ಪರಿ ಎಂತೋ? ಶರಣಂಗೆ ಭಕ್ತಿಕಾಯ ವಿಲ್ಲದನ್ನಕ್ಕರ, ಕೂಡಲಸಂಗಯ್ಯನ ನರಿವ ಪರಿ ಎಂತೋ?

೧೩. ಮುನ್ನೂರರವತ್ತು ನಕ್ಷತ್ರಕ್ಕೆ ಬಾಯ ಬಿಟ್ಟುಕೊಂಡಿಪ್ಪುದೇ ಸಿಂಪು? ಅದು ಸ್ವಾತಿಗಲ್ಲದೆ, ಬಾಯ್ದೆರೆಯದು. ಕೇಳು ಕೇಳಾ ತಂದೆ. ಇವೆಲ್ಲವಕ್ಕೆ ಬಾಯ ಬಿಟ್ಟರೆ, ತಾನೆಲ್ಲಿಯ ಮುತ್ತಹುದೋ? ಪರಮರಿಗಲ್ಲದೆ ಹರುಷವಿಲ್ಲೆಂದು ಕರಣಾದಿ ಗುಣಂಗಳ ವುರೆದರು. ಕೂಡಲಸಂಗನ ಶರಣರು ಸಪ್ತ ವ್ಯಸನಗಳಿಲ್ಲವಾಗಿ.

## ಪ್ರಾಣಲಿಂಗಿಯ ಪ್ರಾಣಲಿಂಗಿ.

೧. ಮೆಯಿಗೆ ಕಾಹ ಹೇಳುವರಲ್ಲದೆ, ಮನಕ್ಕೆ ಕಾಹ ಹೇಳುವರೆ? ಅಣಕದ ಗಂಡನ ಹೊಸಪರಿಯ ನೋಡಾ! ಕೂಡಲಸಂಗಮದೇವ ನೆನ್ನ ಮನವ ನಂಬದೆ ತನ್ನಲ್ಲಿರ್ದ ಲೇಸಕಾಹ ಹೇಳಿದನು!

೨. ಮನ ವಂಚನೆಯ ಅನ್ಯ ಲಿಂಗಾರ್ಚನೆ, ಅದು ನಿಜವಲ್ಲ ಕೂಡಲಸಂಗಮದೇವನು ಮನದಂತರ್ಯಾಮಿ ತಾನಾಗಿ.

೩. ಸರ್ಪನ ಸಂಯೋಗ, ಜ್ಯೋತಿಯ ಪತಂಗನ ಬೆಸನದಂತೆ, ಮನದ ಮದವನರಿಯದೆ, ನಿಮ್ಮ ಕೃಪೆಯಿಂದ ನಿಮ್ಮ ನೆನೆವೆ. ನೀವೆನ್ನ ಭಾವದ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕ್ಕೊಂಡಿಪ್ಪೆಯಯ್ಯ, ಕೂಡಲಸಂಗಮದೇವಯ್ಯ, ನೀನೆನ್ನ ಪ್ರಾಣನಾಥನಾಗಿ.

೪. ಪೃಥಿವ್ಯಾಪ್ತೇಜ ವಾಯ್ವಾಕಾಶ ನಿರಂಜನದೇವಾ, ನಿಮ್ಮ ಮಹಿಮೆಯು ಪ್ರಣವರೂಪಂಗಲ್ಲದೆ, ಕಾಣಬಾರದಾರಿಗೆಯೂ- ಜ್ಞಾನಜ್ಯೋತಿಯ ಧ್ಯಾನದಿಂದ ನಾಳಶುದ್ಧ ದ್ವಾರನಾಗಿ, ಆರಾಧಿಸಿ ಕಂಡೆ ನಮ್ಮ ಕೂಡಲಸಂಗಮದೇವನ.

೫. ಪಶ್ಚಿಮ ಪದ್ಮಾಸನದಲ್ಲಿ ಕುಳಿತು, ನಿಟ್ಟೆಲುವ ಮುರಿದು, ತುಟಿ ಮಿಡುಕದೆ ಅಟ್ಟಿ ಆಡಿತ್ತಲ್ಲಾ! ಬಿಟ್ಟ ಕಣ್ಣು, ಬಿಗಿದ ಹುಬ್ಬು, ಬ್ರಹ್ಮರಂಧ್ರದಲ್ಲಿ ಕಟ್ಟಿ ಗುಡಿಯ, ಕೂಡಲಸಂಗಮದೇವ ಹಿಡಿವಡೆದಾ.

೬. ಆಚಾರ ಶಿವಾಚಾರವೆಂದರಿಯದ ಕಾರಣ, ಷಡುದರ್ಶನಂಗಳೆಲ್ಲ ತಮ ತಮಗೆ ಶರಣೆನುತಿರ್ದವು. ಮಹಾತತ್ವದ ಸಮಯಾದಿ ಶೈವಂಗಳೆಂಬೆಲ್ಲ ಶರಣು, ಶರಣು ಎನುತಿರ್ದವು. ನಮ್ಮ ಕೂಡಲ ಸಂಗನ ಶರಣರು ಮಾಡಿದ ವಿಯೋಗ ಬಹಿರಂಗದಲ್ಲಿ ವರ್ತಿಸುವರಿಗೆಲ್ಲಿಯದೋ?

೭. ತಮ ತಮಗೆಲ್ಲ ನೊಸಲ ಕಣ್ಣವರು, ತಮ ತಮಗೆಲ್ಲ ನಂದಿವಾಹನ ರುದ್ರರು, ತಮತಮಗೆಲ್ಲ ಖಟ್ವಾಂಗ ಕಪಾಲತ್ರಿಶೂಲ ಧರರು. ದೇವರಾರು, ಭಕ್ತರಾರು, ಹೇಳಿರಯ್ಯ! ಕೂಡಲಸಂಗಮದೇವ, ನಿಮ್ಮ ಶರಣರು ಸ್ವತಂತ್ರರು. ಎನ್ನ ಬಚ್ಚ ಬರಿಯಬಸವನೆಂದೆನಿಸಯ್ಯ.

೮ ಗುರುವಿನಲ್ಲಿ ಸದಾಚಾರ, ಲಿಂಗದಲನು ದಿನವೇಳೆ, ಜಂಗಮದಲ್ಲನು ಭಾವ, ಸಮಯಾಚಾರ ಲಿಂಗದಲನು ದಿನವೇಳೆ. ಈ ಉಭಯಾಚಾರದಿಂದ ತಿಳಿದ ತಿಳಿವು ಲಿಂಗದಲನುದಿನವೇಳೆ. ಬೇರೆ ತೋರಲಿಲ್ಲ.

ಲಿಂಗ ಜಂಗಮುದಲ್ಲಿ ಲೀಯ್ಯವಾದ ಸಮಯಾಚಾರ, ಇದುಕಾರಣ ಕೂಡಲ ಸಂಗಮ ದೇವ ಲಿಂಗದಲ್ಲನುದಿನವೇಳೆ.

೯. ಸುನಾದ ಬಿಂದು ಪ್ರಣವ ಮಂತ್ರದಗ್ರದ ಕೊನೆಯುಲ್ಲೈದುದೇ? ಸೋಹಂ, ಸೋಹಂ ಎನುತಿರ್ದಿತ್ತು ಕೋಹಂ, ಕೋಹಂ ಅಳಿದು ಬ್ರಹ್ಮ ರಂಧ್ರದೊಳಗೆ. ಶ್ಲೋ॥ ಯತೋ ವಾಚೊನಿವರ್ತಂತೆ ಅಪ್ರಾಪ್ಯ ಮನಸಾ ಸಹ। ಅನಂತ ಬ್ರಹ್ಮಣೋ ವಿದ್ವಾನ್ ಬಿಭ್ರತಿ ಕುತಶ್ಚನಃ॥ ಇಂತೆಂದುದಾಗಿ ಅಗಮ್ಯ ಕೂಡಲ ಸಂಗಮದೇವನಲ್ಲದೆ, ಮತ್ತಾರೂ ಇಲ್ಲ.

೧೦. ಬೆಳಗಿನೊಳಗಿನ ಮಹಾಬೆಳಗು, ಶಿವ ಶಿವ ಪರಮಾಶ್ರಯುವೇ ತಾನಾಗಿ. ಶತಪತ್ರ ಕಮಲ ಕರ್ಣಿಕಾ ಮಧ್ಯದಲ್ಲಿ ಸ್ವತಃ ಸಿದ್ಧನಾಗಿಪ್ಪ ನಮ್ಮ ಕೂಡಲ ಸಂಗಮದೇವಾ.

೧೧. ಗುರು ಕರುಣ ಸದಾಚಾರ, ಲಿಂಗದಲನುದಿನವೇಳೆ. ಜಂಗಮದ ಅನುಭಾವ ಸಮಯಾಚಾರ, ಲಿಂಗದಲನುದಿನವೇಳೆ ಈ ಉಭಯಾಚಾರದಿಂದ ತಿಳಿದ ತಿಳಿವು, ಲಿಂಗದಲನುದಿನವೇಳೆ. ಬೇರೆ ತೋರಲಿಲ್ಲ. ಲಿಂಗಜಂಗಮುದಲ್ಲಿ ಲೀಯ್ಯವಾದ ಆಚಾರ ಸಮಯಾಚಾರ. ಇದುಕಾರಣ ಕೂಡಲ ಸಂಗಮದೇವ ಲಿಂಗದಲನುದಿನವೇಳೆ.

೧೨. ಉಳ್ಳವರು ಶಿವಾಲಯುವ ಮಾಡುವರು. ನಾನೇನ ಮಾಡುವೆನಯ್ಯ! ಬಡವನಯ್ಯ! ಎನ್ನ ಕಾಲೇಕಂಭ, ದೇಹವೇ ದೇಗುಲ, ಸಿರವೇ ಹೊನ್ನ ಕಳಸವಯ್ಯ! ನೋಡಯ್ಯ. ಕೂಡಲ ಸಂಗಮದೇವಯ್ಯ, ಕೇಳಯ್ಯ! ಸ್ಥಾವರಕ್ಕಳಿವುಂಟು, ಜಂಗಮುಕ್ಕಳಿವಿಲ್ಲ.

## ಪ್ರಾಣಲಿಂಗಿಯ ಭಕ್ತ.

೧. ಅಷ್ಟದಳ ಕಮಲಾತ್ಮಕನೊಳಗೆ ನೆಟ್ಟನೆ ಮನ ಪ್ರೇರಕನೆಂದು ನಾ ನಿಮ್ಮ ನಂಬಿದೆ, ಮತ್ತೊಂದ ನರಿಯದೆ, ಮತ್ತೊಂದ ಕೇಳದೆ. ನಿತ್ಯ ಸ್ವತಂತ್ರನು ನೀನೇ. ದೃಷ್ಟ ಲಿಂಗಜಂಗಮ ಒಂದೇ ಎಂದಿಪ್ಪೆನು ಪ್ರಭುವೇ ಕೂಡಲ ಸಂಗಮದೇವ.

೨. ನಿನ್ನ ನಾನರಿಯೆ. ಮುನ್ನನೀನೆಲ್ಲಿರ್ದೆ? ಎನ್ನೊಳಗಿರ್ದು, ನಿನ್ನ ತೋರಲಿಕ್ಕೆ ನೀನೇ ರೂಪಾದೆ. ಇನ್ನು ಜಂಗಮವೇ ಲಿಂಗವೆಂದು ನಂಬಿದೆ ಕೂಡಲ ಸಂಗಮದೇವ.

೩. ಗುರು ಮುನಿದರೆ, ಒಂದು ದಿನ ತಾಳುವೆ. ಲಿಂಗ ಮುನಿದರೆ, ದಿನವರೆ ತಾಳುವೆ. ಜಂಗಮ ಮುನಿದರೆ, ಕ್ಷಣ ಮಾತ್ರ ಸೈರಿಸಿದೆನಾದರೆ, ಎನ್ನ ಪ್ರಾಣದ ಹೋಕು, ಕೂಡಲ ಸಂಗಮದೇವ.

೪. ಅರಸು ಮುನಿದರೆ, ನಾಡೊಳಗಿರಬಾರದಯ್ಯ. ಗಂಡ ಮುನಿದರೆ, ಹೆಂಡತಿಯಾಗಿರಬಾರದಯ್ಯ. ಕೂಡಲ ಸಂಗಮದೇವ, ಜಂಗಮ ಮುನಿದರೆ ನಾನೆಂತು ಬದುಕುವೆನು?

೫. ರಚ್ಚೆಯ ನೆರವಿಗೆ ನಾಣನುಡಿ ಇಲ್ಲದಿಹುದೇ? ಅದರೆಂತೆನ ಬಹುದೆ ಸಜ್ಜನ ಸ್ತ್ರೀಯು. ಅದರೆಂತೆನ ಬಹುದೆ? ಭಕ್ತರತಿಯು ಕರುಳ ಕಲೆ ಪ್ರಕಟಿತ ಉಂಟೇ ಕೂಡಲ ಸಂಗಮದೇವ?

೬. ಭೂತ ಒಲಿದಾತ್ಮನ ಸೋಂಕಿದ ಬಳಿಕ, ಭೂತದ ಗುಣವಲ್ಲದೆ, ಆತ್ಮನ ಗುಣ ಉಂಟೇ? ಗುರು ಕಾರುಣ್ಯವಾಗಿ, ಹಸ್ತ ಮಸ್ತಕ ಸಂಯೋಗವಾದ ಬಳಿಕ, ಗುರು ಲಿಂಗ ಜಂಗಮವೇ ಗತಿಯಾಗಿರ್ದೆ, ಕೂಡಲ ಸಂಗಮದೇವಾ.

೭. ಹಸಿವು ತೃಷೆ ನಿದ್ರೆ ವಿಷಯಂಗಳ ಮರೆದೆ. ಇದು ಕಾರಣ, ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳ ಮರೆದೆ. ಇದು ಕಾರಣ, ಪಂಚೇಂದ್ರಿಯ ಸಪ್ತಧಾತು ಅಷ್ಟಮದಂಗಳ ಮರೆದೆ. ಇದು ಕಾರಣ, ಕೂಡಲ ಸಂಗಮದೇವಯ್ಯ ಕೇಳಯ್ಯ! ನಿಮ್ಮ ಶರಣರಿಗೆ ಆಪ್ಯಾಯನವಾದರೆ, ಎನಗೆ ತೃಪ್ತಿಯಾಯಿತ್ತು.

೮. ತನು ನಿಮ್ಮದೆಂದ ಬಳಿಕ ಎನಗೆ ಬೇರೆ ತನುವಿಲ್ಲ. ಮನ ನಿಮ್ಮದೆಂದ ಬಳಿಕ, ಎನಗೆ ಬೇರೆ ಮನವಿಲ್ಲ. ಧನ ನಿಮ್ಮದೆಂದ ಬಳಿಕ, ಎನಗೆ ಬೇರೆ ಧನವಿಲ್ಲ. ಇಂತೀ ತ್ರಿವಿಧವು ನಿಮದೆಂದರಿದ ಬಳಿಕ, ಎನಗೆ ಬೇರೆ ವಿಚಾರ ಉಂಟೇ ಕೂಡಲ ಸಂಗಮದೇವ?

## ಪ್ರಾಣಲಿಂಗಿಯ ಮಾಹೇಶ್ವರ.

೧. ಅಕಳಕಳರು ಕೊಂಡೊಯ್ವರೆನ್ನದಿರೆಂಬೋ! ನಿಮ್ಮ ಧರ್ಮ. ಬೊಬ್ಬಿಡದಿರೆಂಬೊ! ನಿಮ್ಮ ಧರ್ಮ. ಅರಸದಿರೆಂಬೋ! ನಿಮ್ಮ ಧರ್ಮ. ಅಲ್ಲಿ ಉಂಬರೆಯೂ ಸಂಗ. ಇಲ್ಲಿಯೋ ಉಂಬರೆಯೂ ಸಂಗ. ಕೂಡಲ ಸಂಗಮದೇವ ಏಕೋಭಾವ.

೨. ಅರ್ಥಪ್ರಾಣಾಭಿಮಾನವನೊಪ್ಪಿಸಿದಲ್ಲಿ ಭಕ್ತನಪ್ಪನೇ? ಅಲ್ಲ. ಆದಿರುದ್ರನ ಮಗಳು ಆದಿಶಕ್ತಿ. ಆದಿಶಕ್ತಿಯ ಮಗ ವಿಷ್ಣು. ಆ ವಿಷ್ಣು ವಿನ ಅರ್ಧಾಂಗಿ ಲಕ್ಷ್ಮಿ. ಈ ತೊತ್ತಿನ ತೊತ್ತಿನ ಪಡಿದೊತ್ತನೊಪ್ಪಿಸಿ ದಲ್ಲಿ ಭಕ್ತನಪ್ಪನೆ? ಅಲ್ಲ. ಎನ್ನ ಮನದೊಡೆಯ ಮಹಾದೇವ ನಿಮ್ಮ ಸೊಮ್ಮು ನಿಮಗೊಪ್ಪಿಸಿ, ನಾನು ಶುದ್ಧನಪ್ಪೆ ಕಾಣಾ ಕೂಡಲಸಂಗಮ ದೇವಾ.

೩. ಮಾಡುವಾತ ನಾನಲ್ಲಯ್ಯ! ನೀಡುವಾತ ನಾನಲ್ಲಯ್ಯ! ಬೇಡು ವಾತ ನಾನಲ್ಲಯ್ಯ! ನಿಮ್ಮ ಕಾರುಣ್ಯವಲ್ಲದೆ, ಎಲೇ ದೇವಾ! ಮನೆಯ ತೊತ್ತಲಸಿದಡೆ, ಒಡತಿಮಾಡಿಕೊಂಬಂತೆ, ನಿನಗೆ ನೀ ಮಾಡಿಕೋ ಕೂಡ ಲಸಂಗಮದೇವಾ.

೪. ಮುನ್ನಿನ ಜನ್ಮದಲ್ಲಿ ಗುರುಲಿಂಗಜಂಗಮವ ಪೂಜಿಸಲರಿಯ ದಕಾರಣ, ಬಹುಜನ್ಮಕ್ಕೆ ತಂದಿಕ್ಕಿದೆ ಅಯ್ಯ! ಎನಗೆ ಗುರುಪಥವತೋ ರಿದವರಾರು? ಲಿಂಗಪಥವ ತೋರಿದವರಾರು? ಜಂಗಮಪಥವ ತೋರಿದ ವರಾರು? ಪಾದೋದಕ ಪ್ರಸಾದವ ತೋರಿದವರಾರು? ತೋರುವಮನ ವೇನೀಪೆಂದರಿದೆ, ಎನಗಿನ್ನಾವ ಭಯವಿಲ್ಲ ಕೂಡಲಸಂಗಮದೇವಾ.

## ಪ್ರಾಣಲಿಂಗಿಯ ಪ್ರಸಾದಿ.

೧. ಜನ್ಮಜನ್ಮಕ್ಕೆ ಹೊಗಲೀಯ್ಯದೆ, ಸೋಹಂಪೆಂದೆನಿಸದೆ, ದಾಸೋಹಂಮೆಂದೆನಿಸಯ್ಯ! ಲಿಂಗಜಂಗಮ ಪ್ರಸಾದದ ನಿಲವ ತೋರಿ ಬದುಕಿಸಯ್ಯ! ಕೂಡಲಸಂಗಮದೇವಾ ನಿಮ್ಮ ಧರ್ಮ.

೨. ಆಶೆಯಾಮಿಷ ತಾಮಸದಿಂದ ಭವ ಬಂಧನವಾದುದನರಿಯಾ! ತ್ರಿವಿಧತ್ರಿವಿಧಾವಸ್ಥೆಯ ಮರೆಯಾ! ಓಂನಮಶ್ಶಿವಾಯಶರಣೆಂಬುದು ಜಡ ದೆ ನೆನೆ, ಮನವೇ. ॥ ಶ್ಲೋ ॥ ಮಹಾಂತ ಶಿವಲಿಂಗಸ್ಯ । ಮಹತೋ ಜಂಗಮಸ್ತಥಾ । ತತ್ಪ್ರಸಾದಸ್ತು ಮಹಂತೋ । ಮಾಹಂತ್ಯೈ ಇದಿಮಾರಿ ತಂ ॥ ಎಂದುದಾಗಿ ಕೂಡಲಸಂಗಮದೇವನ ಪ್ರಸಾದದ ಸಾನ್ನಿಧ್ಯದಿಂ ದ ಎನ್ನ ಭವಜನ್ಮ ಕರ್ಮಪಂಚಭೂತ ಪೂರ್ವ ನಾಸ್ತಿ.

೩. ಬೆಟ್ಟಕ್ಕೆ ಬೆಳ್ಳಾರ ಸುತ್ತಿತ್ತಯ್ಯಾ! ಪಾಪದ ಬಲೆಯ ತಂದು ಮುಂದೆ ಒಡ್ಡಿದಿಯ್ಯ! ಬೇಟೆಕಾರನು ಮೃಗವನಟ್ಟಿ, ಮೃಗಗೊಲೆಗೊ

ಳಗಾಗವಯ್ಯ! ಪರನೊಡ್ಡಿದ ಬಲೆಯಲ್ಲಿ ಸಿಲುಕಿದ ಮೃಗವು ಕೂಡಲ ಸಂಗಮದೇವಂಗಾರೋಗಣೆಯಾಯಿತ್ತು.

೪. ಪರಿಯಾಣವೇ ಭಾಜನನೆಂಬರು. ಪರಿಯಾಣಭಾಜನವಲ್ಲ. ಲಿಂಗಕ್ಕೆ ತನ್ನ ಮನವೇ ಭಾಜನ. ಪ್ರಾಣವನು ಬೀಸರ ಪೋಗದೆ ಓಸಾ ಸಲಾಗರ್ಪಿಸಬಲ್ಲರೆ, ಕೂಡಿಕೊಂಡಿಪ್ಪ ನಮ್ಮ ಕೂಡಲಸಂಗಮದೇವ.

೫. ಆತ್ಮಲಿಂಗ, ಪರಮಾತ್ಮ ಜಂಗಮ. ತನುಮಧ್ಯಪ್ರಸಾದ ವಾಯಿತ್ತು. ನಿಶ್ಚಿಂತನಿವಾಸವಾಯಿತ್ತು. ಕೂಡಲಸಂಗನ ಶರಣರ ಸಂಗ ದಿಂದ ನಿಶ್ಚಿಂತನಿವಾಸವಾಯಿತ್ತು.

೬. ಲೋಹಪರುಷವ ಮುಟ್ಟುವದಲ್ಲದೆ, ಪರುಷಪರುಷವ ಮು ಟ್ಟುವವೇ ಅಯ್ಯ! ಅಂಗವಿಡಿದಂಗೆ ಪ್ರಸಾದವಲ್ಲದೆ, ಲಿಂಗವಿಡಿದಂಗೆ ಪ್ರ ಸಾದವೆಲ್ಲಿಯದೋ? "ಅಣೋರಣೀಯಾನ್ ಮಹತೋಮಹೀಯಾನ್" – ಹಿರಿದಿಂಗೆ ಹಿರಿದು, ಕಿರಿದಿಂಗೆ ಕಿರಿದು, ವಾಙ್ಮನಕ್ಕೆ ಅಗೋಚರ ಕೂಡಲ ಸಂಗಮದೇವಾ, ಸ್ವರೂಪು ಪ್ರಸಾದ, ನಿರೂಪು ಲಿಂಗೈಕ್ಯ.

೭. ಜಂಗಮವೇ ಲಿಂಗವೆನಗೆ. ಜಂಗಮವೇ ಪ್ರಾಣವೆನಗೆ. ಎನ ಗೆಯೂ ನಿನಗೆಯೂ ಜಂಗಮಪ್ರಸಾದವೇ ಪ್ರಾಣ ಕಾಣಾ, ಕೂಡಲಸಂ ಗಮದೇವಾ.

೮. ಅಯ್ಯಾ ನೀನೆಂದಡೆ ಎಂಜೆನು. ನಿನ್ನ ಹಂಗೇನೂ ಅರಿಯೆನು. ನಿನ್ನ ಮುಖದಲ್ಲಿ ಒಂದಗುಳು ಸವಿಯದು. ನಿನ್ನ ಪ್ರಸಾದವ ಕೊಂಡೆನ್ನ ಭವಕ್ಕೆ ಬೀಜವಾಯಿತ್ತು. ಜಂಗಮವೇ ಲಿಂಗವೆಂದೊಕ್ಕುದ ಕೊಂಡರೆ ಎನ್ನ ಭವಂನಾಸ್ತಿಯಾಯಿತ್ತು ಕಾಣಾ, ಕೂಡಲಸಂಗಮದೇವಾ.

೯. ಜ್ಞಾನದ ಬಲದಿಂದ ಅಜ್ಞಾನದ ಕೇಡು, ಅಯ್ಯ! ಜ್ಯೋತಿಯ ಬಲದಿಂದ ತಮಂಧದಕೇಡು, ನೋಡಯ್ಯ! ಸತ್ಯದ ಬಲದಿಂದ ಅಸತ್ಯದ ಕೇಡುನೋಡಯ್ಯ! ಪರುಷದ ಬಲದಿಂದ ಲೋಹದ ಕೇಡು, ನೋಡಯ್ಯ! ಕೂಡಲಸಂಗನ ಶರಣರನುಭಾವದಿಂದೆ ಎನ್ನಭವದ ಕೇಡು ನೋಡಂಯ್ಯಾ!

೧೦. ಆಶ್ಚರವಚನ ಆದರಿಗಾಯಿತ್ತು. ವೇದ್ಯರಿಗಲ್ಲದೆ, ಸಾಧ್ಯ ವಾಗದು. ಕೂಡಲಸಂಗಮದೇವಾ! ನಿಮ್ಮನುಭಾವದಿಂದೆನ್ನ ಭವನಾಸ್ತಿ ಯಾಯಿತ್ತು.

೧೧. ಅಸಂಬಂಧ ಸಂಬಂಧವಾಯಿತ್ತು ಲಿಂಗಸಾರಾಯರಸನ್ನ ಮತದಿಂದ. ಉತ್ತುಮಮಧ್ಯಮವ ಕೆಡಿಸಿತ್ತು. ಏಕೋಸತಿಪತಿಗುಣದಿಂದ ಗರುವರ ಗರುವತನವು, ಕೂಡಲಸಂಗಯ್ಯನನುಭಾವದಿಂದ.

# ಪ್ರಾಣಲಿಂಗಿಯ ಶರಣ.

೧. ಶರಣಸನ್ನಿಹಿತಐಕ್ಯವಾದಲ್ಲಿ, ಹರಿ ಬ್ರಹ್ಮಾದಿಗಳು ಮೊದಲಾದ ಮೂವತ್ತುಮೂರು ದೇವರ್ಕಗಳು ಉಘೇ, ಉಘೇ ಎನುತ್ತಿರಲು, ಐಕ್ಯ ಬಸವಣ್ಣಂಗೆ ಠಾವಾವುದಯ್ಯ ಎಂದರೆ ಅಂಗದ ಕಳೆಯ ಬಲದಲ್ಲಿ ಬ್ರಹ್ಮನಸ್ಥಾನ, ಎಡದಲ್ಲಿ ನಾರಾಯಣನ ಸ್ಥಾನ, ಒಲ್ಲೆನಯ್ಯಾ. ಕೊರಳುಗರಳ ಸ್ಥಾನ, ಬಾಯಿ ಅಪ್ಪುವಿನ ಸ್ಥಾನ, ನಾಸಿಕ ವಾಯುವಿನ ಸ್ಥಾನ, ಕಂಗಳು ಅಗ್ನಿಯ ಸ್ಥಾನ, ಜಡೆ ಗಂಗೆಯ ಸ್ಥಾನ, ನೊಸಲು ಚಂದ್ರನ ಸ್ಥಾನ, ಹಿಂದು ಸೂರ್ಯನ ಸ್ಥಾನ, ಚರಣಂಗಳು ಅಷ್ಟ ದಿಕ್ಪಾಲಕರ ಸ್ಥಾನ, ಗುಹ್ಯ ಕಾಮನ ಸ್ಥಾನ, ಹಸ್ತಂಗಳು ಕಪಾಲ, ಖಟ್ವಾಂಗ ತ್ರಿಶೂಲ ಡಮರುಗ ಸ್ಥಾನ, ದೇಹ ರುಂಡ ಮಾಲೆಯ ಸ್ಥಾನ, ಕರ್ಣ ನಾಗೇಂದ್ರನ ಸ್ಥಾನ, ಇಂತೀ ಸ್ಥಾನಂಗಳ ನಾನೊಲ್ಲೆನಯ್ಯಾ! ಹೃದಯ ಮಧ್ಯದ ಅಂತರಾಳ ನಿರಾಳ ಏಕ ಪೀಠದ ಸಿಂಹಾಸನದ ತೆರಪುಗೊಡು ಕೂಡಲ ಸಂಗಮ ದೇವಾ.

೨. ನೀನೊಲಿದರೆ ಒಲಿ. ಒಲಿಯದಿದ್ದರೆ ಸಮವೇಧಿಸಿಕೊಳ್ಳಯ್ಯಾ! ಲಿಂಗದ ಬೆಳಗ ನೊಳಕೊಂಡು ಸಮವೇಧಿಸಿಕೊಳ್ಳಯ್ಯಾ! ಕೂಡಲ ಸಂಗಮದೇವರಲ್ಲಿ ತದ್ಗತನಾದೆನಯ್ಯಾ.

೩. ಮಾಡುವರಿಲ್ಲ, ನೀ ಮಾಡದೆ, ನಿಲಿಸಲೆ. ಬೇಡುವರಿಲ್ಲ, ನೀ ಬೇಡದೆ, ನಿಲಿಸಲೆ. ಕೂಡುವರಿಲ್ಲ, ನೀ ಕೂಡದೆ, ನಿಲಿಸಲೆ. ಕೂಡಲಿಲ್ಲನೆ ನೀ ಕೂಡದೆ, ನಿಲಿಸಲೆ. ಕೂಡಲ ಸಂಗಮದೇವ, ತಾನು ತಾನಾಗಿ ನೀ ನೋಡದೆ, ನಿಲಿಸಲೆ.

೪. ಆಲಿಕಲ್ಲ ಹರಳಿನಂತೆ, ಅರಗಿನ ಪುತ್ಥಳಿಯಂತೆ, ತನು ಕರಗಿ ನೆರೆವ ಸುಖವ ನಾನೇನೆಂಬೆ? ಕಡೆಗೋಡಿವರಿದವೆನಗಯ್ಯ, ನಯನಾಶ್ರುಜಲಂಗಳು. ನಮ್ಮ ಕೂಡಲ ಸಂಗಮದೇವರ ಮನ ಮುಟ್ಟಿ ನೆರೆವ ಸುಖವನಾರಿಗೆ ಉಸುರುವೆನು ?

೫. ನಾಲಿಗೆ ತಾಗಿದ ರುಚಿಗೆ ಮನವೇ ಸಾಕ್ಷಿ ಸಾಲದೆ ಅಯ್ಯ! ಮಾಲೆಗಾರನ ಕೇಳಿ, ನನೆಯರಳುವದೆ? ಆಗಮವ ನಿದಿರಿಂಗೆ ತೋರುವುದು ಆವಾಚಾರವಯ್ಯ? ನಮ್ಮ ಕೂಡಲ ಸಂಗನ ಕೂಡಿದ ಕೂಟವ ಕರುಳ ಕಲೆಯನಿದಿರಿಂಗೆ ತೋರುವುದು ಆಚಾರವೇನಯ್ಯಾ?

## ಪ್ರಾಣಲಿಂಗಿಯ ಐಕ್ಯ.

೧. ಎಲ್ಲರ ಗಂಡರ ಪರಿಯಂತಲ್ಲ ನೋಡವ್ವ, ನಮ್ಮನಲ್ಲ. ಸುಳಿಯುಲಿಲ್ಲ, ಸುಳಿದು ಶೃಂಗಾರವ ಮಾಡಲಿಲ್ಲ. ಕೂಡಲ ಸಂಗಮದೇವಾ, ತನ್ನೊಳಗೆನ್ನ ಒಚ್ಚಿಟ್ಟನಾಗಿ.

೨. ಜ್ಞಾನದ ಗಮನದ, ಸಹಜದ ಉದಯದಲ್ಲಿ ನಾನೇನೆಂದರಿಯೆನು. ಲಿಂಗದ ಬೆಳಗೊಳಕೊಂಡಿತ್ತಾಗಿ ನಾನೇನೆಂದರಿಯೆನು. ಕೂಡಲ ಸಂಗಮದೇವರ ಧ್ಯಾನದಿಂದ ಆನೇನೆಂದರಿಯೆನು.

೩. ಕಾಯವೆಂಬ ಘಟಕ್ಕೆ ಚೈತನ್ಯವೇ ಸುಯಿಧಾನ. ಸಮತೆಯೆಂಬ ಜಲಕರಣಾದಿಗಳೇ ಶ್ರವಣವು. ಜ್ಞಾನವೆಂಬ ಅಗ್ನಿಯ ನಿಕ್ಕಿ, ಮತಿ ಎಂಬ ಸಟ್ಟುಗದಲ್ಲಿ ಘಟ್ಟಿಸಿ, ಪಾಕಕ್ಕೆ ತಂದು, ಭಾವದಲ್ಲಿ ಕುಳ್ಳಿರಿಸಿ, ಪರಿಣಾಮ ದೋಗರವ ನೀಡಿದರೆ, ಕೂಡಲ ಸಂಗಮದೇವಂಗಾರೋಗಣೆಯಾಯಿತ್ತು.

೪. ಕಂಗಳು ತುಂಬಿದ ಬಳಿಕ ನೋಡಲಿಲ್ಲ. ಕಿವಿ ತುಂಬಿದ ಬಳಿಕ ಕೇಳಲಿಲ್ಲ. ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲ, ಮನ ತುಂಬಿದ ಬಳಿಕ ನೆನೆಯಲಿಲ್ಲ ಮಹಾಂತ ಕೂಡಲ ಸಂಗಮದೇವಾ.

೫. ಅಡಿಗಡಿಗೆ ಸ್ಥಾನಸಿಧಿ, ಅಡಿಗಡಿಗೆ ದಿವ್ಯ ಕ್ಷೇತ್ರ, ಅಡಿಗಡಿಗೆ ನಿಧಿ ನಿಧಾನ ನೋಡಾ! ಶರಣಂಗೆ ಸುತ್ತಿ ಬರೆ, ವಾರಣಾಸಿ. ಆತನಿರವೇ ಅವಿಮುಕ್ತಿ ಕ್ಷೇತ್ರ. ಕೂಡಲ ಸಂಗನಶರಣನು ಸ್ವತಂತ್ರನಾಗಿ.

# ಶರಣಸ್ಥಲ.

೧. ಧನದಲ್ಲಿ ಶುಚಿ, ಪ್ರಾಣದಲ್ಲಿ ನಿರ್ಭಯ, ಇದಾರಿಂಗಳವಡು ವುದಯ್ಯಾ! ನಿಧಾನ ತಪ್ಪಿ ಬಂದರೆ, ಒಲ್ಲೆನೆಂಬುವರಿಲ್ಲ. ಪ್ರಮಾದವಶ ಬಂದರೆ, ಹುಸಿ ಎಂಬುವರಿಲ್ಲ. ನಿರಾಶೆ ನಿರ್ಭಯ ಕೂಡಲಸಂಗಮ ದೇವ ನೀನೊಲಿದ ಶರಣಂಗಲ್ಲದಿಲ್ಲ.

೨. ಶರಣ ಸನುಮತ ವಪ್ಪ ನಿಜಗುಣ ಭರಿತವಾಹಡೆ, ಸತ್ವ ರಜ, ತಾಮಸ, ಕ್ರೋಧ, ಬಿಡದನ್ನಕ್ಕರ, ಅನುಭಾವವೆಲ್ಲಿಯದೊ? ಆತ್ಮಸ್ತುತಿ ಪರನಿಂದೆ ಬಿಡದನ್ನಕ್ಕರ, ಅರಿಷಡ್ವರ್ಗ ದಶವಾಯು ಬೆರಸಿಪ್ಪ ಕಳಂಕವಪ್ಪ ತನು ಬಿಡದನ್ನಕ್ಕರ, ಸಂಸಾರ ವ್ಯಾಧಿ ಮಾದಲ್ಲದೆ, ಶರಣ ಸಜ್ಜನಿಕೆ ಸಮಯಾಚಾರ ನಿಜವ್ರತವು ದುರಾಚಾರಿ ಗಳಿಗಳವಡದು ನಮ್ಮ ಕೂಡಲಸಂಗನ ಶರಣರಿಗಲ್ಲದೆ

೩. ಹಲಬರ ನುಂಗಿದ ಹಾವಿಂಗೆ ತಲೆ ಬಾಲವಿಲ್ಲ ನೋಡಯ್ಯಾ! ಕೊಲ್ಲುವುದು ತ್ರಿಜಗವೆಲ್ಲವ. ತನಗೆ ಬೇರೆ ಪ್ರಳಯವಿಲ್ಲ. ನಾಲ್ಕಡಿಯು ನೈದುದು. ಲೋಕವ ಕಡೆಯನೇ ಕಾಂಬುದು, ಸೂಕ್ಷ್ಮದ ಪಥದಲ್ಲಿ ನಡೆವುದು. ತನಗೆ ಬೇರೆ ಒಡಲಿಲ್ಲ. ಅಹಸ್ಮೆಂಬ ಗಾರುಡಿಗನ ನುಂಗಿತ್ತು. ಕೂಡಲಸಂಗನ ಶರಣರಲ್ಲದುಳಿದವರ.

೪ ಆದಿತ್ಯಸೋಮರು ಆಗಿ ಹೋಗುತ್ತಲಿದ್ದರು. ಬ್ರಹ್ಮಪ್ರಳಯ ಕ್ಕೊಳಗಾದ, ಹರಿ ಸಿಂಹಾಸನನಡಗಿತ್ತು. ಅಂದೋನಾಸ್ತಿ, ಇಂದೋನಾಸ್ತಿ. ಇಂತು ರೋಮಜರೆಂಬುವರು ಸಿಟ್ಟ ಗುಟ್ಟಿ, ತರುಮರದಡಿಯಲಿರ್ದರು. ಮಾರ್ಕಂಡೇಯ ಮಹಾ ಮುನಿ ಸ್ವೇಚ್ಛೆ ಮರಣಿ ಎನಿಸಿ ಕೊಂಡನಲ್ಲದೆ, ಲಿಂಗದ ನಿಜವನರಿಯನು. ಇದು ಕಾರಣ ಕೂಡಲಸಂಗಮ ದೇವಾ, ನೀವು ಮಾಡಿದ ಬಯಲು ಭಕ್ಷಿಸಿತ್ತು, ಅನಂತ ಹಿರಿಯರನು.

೫. ಆದಿಯಲ್ಲಿ ಶಿವಬೀಜವಲ್ಲದವರಿಗಲ್ಲದೆ ವೇದ್ಯವಾಗದು, ಶಿವ ಜ್ಞಾನ. ಶಿವಭಕ್ತಿ, ಲಿಂಗಸ್ಥಲ ವಳವಡದು ಜಂಗಮಸ್ಥಲ ವಳವಡದು, ಪಾದೋದಕ ಪ್ರಸಾದಸ್ಥಲ ವಳವಡದು, ನರಕದಲ್ಲಿ ಬೀಳುವ ಕರ್ಮಿಗಳಿಗೆ ಕೂಡಲಸಂಗನ ಶರಣರನು ಭಾವ ನೆಲೆಗೊಪ್ಪದು.

೬. ಮರುಳ ಕಂಡ ಕನಸಿನ ಪರಿಯಂತೆ ಶಿವಾಚಾರ. ಕರಿಮುಕನ್ನ

ಡಿಯೊಳಡಗಿದಂತಯ್ಯಾ! ಗುಣಿಯು ಅವಗುಣಿಯೊಡನಾಡಿದರೆ, ಅದೇ ಆತನ ಪೂರ್ವದ ಕರ್ಮದ ಫಲ ನೋಡಾ! ಕೂಡಲಸಂಗನ ಶರಣರನು ಭಾವ ದುಃಖಿಗಳಿಗೆ ವೇದ್ಯವಾಗದಯ್ಯ.

೭. ಉಂಬುವ ಬಟ್ಟಲು ಬೇರೆ ಕಂಚಲ್ಲ, ನೋಡುವದರ್ಪಣ ಬೇರೆ ಕಂಚಲ್ಲ, ಭಾಂಡ ಭಾಜನ ಒಂದೇ. ಬೆಳ್ಳಗೆ ಕನ್ನಡಿ ಎನಿಸಿತ್ತಯ್ಯಾ! ಅರಿದರೆ ಶರಣ, ಮರೆದರೆ ಮಾನವ. ಮರೆಯದೆ ಪೂಜೆಸು ನಮ್ಮ ಕೂಡಲಸಂಗಮದೇವನ.

೮. ಕೆರೆ ಹಳ್ಳ ಭಾವಿಗಳು ಮೈದೆಗೆದರೆ, ಗುಳ್ಳೆ, ಗೊರಚೆ, ಚಿಪ್ಪಿಗಳ ಕಾಣಬಹುದು. ವಾರುಧಿ ಮೈದೆರೆದರೆ, ರತ್ನಂಗಳ ಕಾಣಬಹುದು. ನಮ್ಮ ಕೂಡಲ ಸಂಗನ ಶರಣರು ಮನದೆರೆದು ಮಾತನಾಡಿದರೆ, ಲಿಂಗವ ಕಾಣಬಹುದು.

೯. ಪುಣ್ಯ ಪಾಪವೆಂಬುಭಯ ಕರ್ಮವನಾರು ಬಲ್ಲರಯ್ಯಾ! ಇವನಾರುಂಬರು. ಕಾಯ ತಾನುಂಬರೆ, ಕಾಯ ಮಣ್ಣು. ಜೀವ ತಾನುಂಬರೆ, ಜೀವ ಬಯಲು. ಈಯುಭಯ ನಿರ್ಣಯವ ಕೂಡಲ ಸಂಗಮದೇವ ನಿಮ್ಮ ಶರಣ ಬಲ್ಲ.

೧೦. ನಾರುಳಿಯೆ, ಹಣಿದವನಾರಾದಡೆಯೂ ಆಗಲಿ. ನಾರುಳಿದರೆ ಮುಂದೆ ಅಂಕುರಿತ ಫಲ ತಪ್ಪದು. ಮಾಡುವನ್ನಕ್ಕರ ಫಲದಾಯಕ ಮಾಟವದು, ನಿಮ್ಮ ಲ್ಲಿಸ್ವಯವಾದರೆಆ ತನೇ ಅಚ್ಚಶರಣನಯ್ಯ, ಕೂಡಲ ಸಂಗಮದೇವಾ.

೧೧. ಭಕ್ತನ ಮಠವೆಂದು ಜಂಗಮ ನಡೆದು ಬಂದಲ್ಲಿ, ಆ ಭಕ್ತನು ಕಾಣುತ್ತ ಆಸನ ತ್ಯಜೆಯ ಮಾಡುತ್ತ, ಕೈಮುಗಿದು ನಿಂದಿರ್ದು, ಬಾಗಿಬಳು ಕುತ್ತ ಜಯಂ ಮಾಡಿ. ದೇವಾ ಎಂದು ಕರೆದು, ಕುಳ್ಳಿರಿಸಿ ಪಾದಾರ್ಚನೆಯಂಮಾಡಿ, ಪಾದೋದಕವಕೊಂಡು, ವಿಭೂತಿ ವೀಳೆಯಮಂ ಕೊಟ್ಟು, ಕಂಗಳ ತುಂಬಿ, ನಿರೀಕ್ಷಿಸಿ, ಶ್ರೋತ್ರ ತುಂಬಿ ಹಾರೈಸಿ, ಬಾಯ ತುಂಬಿ ಮಾತಾಡಿ, ಏ ಗುದು ಬೆಸಸೆಂದು ತನುಗರಗಿ, ಮನಕರಗಿ ನೋಡಿ, ಮಾಡುವುದು ಭಕ್ತಿಸ್ಥಲ. ಬಡವನಾಗಲಿ. ಬಲ್ಲಿದನಾಗಲಿ, ಇನಿತು ಮುಖ್ಯವಾಗಿ ಮಾಡಿಸಿಕೊಂಬುದು ಜಂಗಮ ಸ್ಥಲ. ಈ ಎರಡೊಂದಾದ ಘನವ ನಂತಿಂತೆಂದುಪಮಿಸಬಾರದು. ಅದಂತಿರಲಿ, ಇನಿತಲ್ಲದೆ ಮಾಡಿದ ಮಾಟ ಭಕ್ತಿಸ್ಥಲಕ್ಕೆ ಸಲ್ಲದು. ಫಲದಾಯಿಕಸ್ಸೈಸೆ, ಇನಿತಿಲ್ಲದೆ ಮಾಡಿಸಿಕೊಂಬುದು ಜಂಗಮಸ್ಥಲಕ್ಕೆ ಸಲ್ಲದು. ಉಪಜೀವಕಸ್ಸೈಸೆ. ಈ ಎರಡಕ್ಕೆಯೂ ಭವಹಿಂ

ಗದು ಕಾಣಾ ಕೂಡಲ ಸಂಗಮದೇವಾ.

೧೨. ಲಿಂಗ ನಿಷ್ಠೆ ಪೂಜೆಯಲ್ಲಿ ಬೀಯವಾಯಿತ್ತು. ಭಕ್ತಿ ನಿಷ್ಠೆ ಆಚಾರಣೆಯಲ್ಲಿ ಬೀಯ್ಯವಾಯಿತ್ತು. ಪ್ರಸಾದ ನಿಷ್ಠೆ ಜಿರಿಕೆಯಲ್ಲಿ ಬೀಯ್ಯವಾಯಿತ್ತು. ಒಂದೊಂದರ ನಿಷ್ಠೆ ಅಂದಂದಿಗೆ ಬೀಯ್ಯವಾಯಿತ್ತು. ಕೂಡಲ ಸಂಗಮದೇವಾ ತ್ರಿಜಗವ ನಳಿಗೊಂಡಿತ್ತು.

೧೩. ತೆರನ ನರಿವುದಪೂರ್ವ, ಅರಿವು ಮರೆವುದು ಅಪೂರ್ವ. ಕೂಡೆ ಶರಣೆಂಬುದು ಅಪೂರ್ವ. ಕೂಡಲ ಸಂಗಮದೇವರ ಭಕ್ತಿ ಅಭಿಮಾನಿಯಜವ್ವನದಂತೆ.

೧೪. ಐದು ಮಾನವ ಕುಟ್ಟಿ, ಒಂದು ಮಾನವ ಮಾಡು ಕಂಡ್ಯಾ. ಮದವಳಿಗೆ, ಇದು ನಮ್ಮ ಬಾಳುವೆ. ಮದವಳಿಗೆ!, ಇದು ನಮ್ಮ ವಿಸ್ತಾರ. ಮದವಳಿಗೆ, ಮದವಳಿದು ನಿಜವುಳಿದ ಬಳಿಕ, ಅದು ಸತ್ಯ ಕಾಣಾ ಕೂಡಲ ಸಂಗಮ ದೇವ.

೧೫. ಕುಲ ಮದವಳಿಯದನ್ನಕ್ಕರ, ಶರಣನಾಗಲೇಕೋ? ವಿಧಿವಶ ಬಿಡವನ್ನಕ್ಕರ, ಭಕ್ತನಾಗಲೇಕೋ? ಹಮ್ಮಿನ ಬಿಮ್ಮು, ಸೊಮ್ಮಿನಸಂಬಂಧ ಬಿಟ್ಟು, ಕಿಂಕರರ ಕಿಂಕರನಾಗಬೇಕು. ಹೆಪ್ಪನೆರದ ಹಾಲು ಕೊಟ್ಟು, ತುಪ್ಪವಪ್ಪಂತೆ ಇಪ್ಪರು ಕೂಡಲ ಸಂಗಮದೇವಾ ನಿಮ್ಮ ಶರಣರು.

೧೬. ಮಣ್ಣ ಮಡಿಕೆ ಮಣ್ಣಾಗದು, ಕ್ರಿಯೆಯುಳಿದು. ಬೆಣ್ಣೆ ಕರಗಿ ತುಪ್ಪವಾಗಿ, ಮರಳಿ ಬೆಣ್ಣೆಯಾಗದು ಕ್ರಿಯೆಯುಳಿದು. ಕೂಡಲಸಂಗನ ಶರಣನಾಗಿ, ಮರಳಿ ಮಾನವನಾಗನು ಕ್ರಿಯೆಯುಳಿದು.

೧೭. ಪೂರ್ವಜನ್ಮನಿವೃತ್ತಿಯಾಗಿ, ಗುರು ಕಾರುಣ್ಯವಿಡಿದಂಗೆ, ಬಂಧನವೆಲ್ಲಿಯದೋ? ಭವವೆಲ್ಲಿಯದೋ? ಸಂಕಲ್ಪ ವಿಕಲ್ಪವೆಂಬ ಸಂದೇಹವಳಿದವಂಗೆ ಕೂಡಲಸಂಗಮದೇವರ ತ್ರಿಸಂಧ್ಯಾಕಾಲವಲ್ಲಿ ಮಾಣದೇನೆನೆವಂಗೆ.

೧೮. ಲಗ್ನವೆಲ್ಲಿಯದೋ, ವಿಘ್ನವೆಲ್ಲಿಯದೋ ಸಂಗಯ್ಯ? ದೋಷವೆಲ್ಲಿಯದೋ, ದುರಿತವೆಲ್ಲಿಯದೋ ಸಂಗಯ್ಯ? ನಿಮ್ಮ ಮಾಣದೆ ನೆನೆವಂಗೆ ಭವಕರ್ಮವೆಲ್ಲಿಯದೋ, ಬಂಧನವೆಲ್ಲಿಯದೋ ಕೂಡಲಸಂಗಮದೇವಾ.

## ಶರಣನ ಶರಣ.

೧. ಶರಣ ನಿದ್ರೆಗೈದರೆ ಜಪಕಾಣಿರೋ. ಶರಣನೆದ್ದು ಕುಳಿತರೆ ಶಿವರಾತ್ರಿ ಕಾಣಿರೋ. ಶರಣ ನಡೆದರೆ ಪಾವನ, ಶರಣ ನುಡಿದುದೇ ಪರತತ

ಕಾಣಿರೋ. ಕೂಡಲ ಸಂಗನ ಶರಣರ ಕಾಯವೇ ಕೈಲಾಸ ಕಾಣಿರೋ.

೨. ಉಪಮಿಸ ಬಾರದು ವುಪಮಾತೀತರ, ಕಾಲ ಕರ್ಮ ವಿರಹಿತರ ಭವ ವಿರಹಿತರ, ಕೂಡಲ ಸಂಗಮದೇವ, ನಿಮ್ಮ ಶರಣರ.

೩. ಭವಕ್ಕೆ ಹುಟ್ಟುವನಲ್ಲ. ಸಂದೇಹಿ ಸೂತಕಿಯಲ್ಲ. ಆಕಾರ ನಿರಾಕಾರನಲ್ಲ ನೋಡಯ್ಯಾ! ಕಾಯ ವಂಚಕನಲ್ಲ, ಜೀವವಂಚಕನಲ್ಲ, ಶಂಕೆ ಇಲ್ಲದ ಮಹಾ ಮಹಿಮ ಕಾಣಯ್ಯ! ಕೂಡಲ ಸಂಗನ ಶರಣನುಪಮಾತೀತ ನೋಡಯ್ಯ.

೪. ಬ್ರಹ್ಮಂಗೆ ವಾಕ್ಪರುಷ, ವಿಷ್ಣುವಿಗೆ ನಯನಪರುಷ, ರುದ್ರಂಗೆ ಹಸ್ತಪರುಷ, ನಮ್ಮ ಕೂಡಲ ಸಂಗನ ಶರಣರಿಗೆ ಪಾದವೇ ಪರುಷ.

೫. ಸಮುದ್ರ ಘನವೆಂಬೆನೆ? ಧರೆಯ ಮೇಲಡಗಿತ್ತು. ಧರೆಯು ಘನವೆಂಬೆನೆ? ನಾಗೇಂದ್ರನ ಫಣಾಮಣಿಯ ಮೇಲೆ ಅಡಗಿತ್ತು. ನಾಗೇಂದ್ರ ಘನವೆಂಬೆನೆ? ಪಾರ್ವತಿಯ ಕಿರುಕುಣಿಕೆಯ ಮುದ್ರೆಯುಂಗುರವಾಯಿತ್ತು. ಅಂಥ ಪಾರ್ವತೀ ತಾ ಘನವೆಂಬೆನೆ? ಪರಮೇಶ್ವರನ ಅರ್ಧಾಂಗಿಯಾದಳು. ಅಂಥ ಪರಮೇಶ್ವರನ ಘನವೆಂಬೆನೆ? ನಮ್ಮ ಕೂಡಲಸಂಗನ ಶರಣರ ಮನದ ಕೊನೆಯ ಮೊನೆಯ ಮೇಲಡಗಿದ.

೬. ಆಚಾರ ಲಿಂಗವಿಡಿದು ಅನುಭಾವ ಲಿಂಗ ಸಿದ್ಧಿ. ಅನುಭಾವ ಲಿಂಗವಿಡಿದು ಮಾರ್ಗ ಕ್ರಿಲಿಂಗ ಸಿದ್ಧಿ. ಮಾರ್ಗ ಕ್ರಿಲಿಂಗವಿಡಿದು ಮೀರಿದ ಲಿಂಗ ಕ್ರಿಸಿದ್ಧಿ. ಮೀರಿದ ಕ್ರಿಲಿಂಗವಿಡಿದು ಕ್ರಿಯಾನಿಷ್ಪತ್ತಿ ಲಿಂಗಸಿದ್ಧಿ. ಇದುಕಾರಣ, ಕೂಡಲ ಸಂಗಮದೇವಾ! ಲಿಂಗವಿಡಿದು ಲಿಂಗಸಿದ್ಧಿ.

೭. ನೆಲನೊಂದೇ ಹೊಲಗೇರಿ ಶಿವಾಲಯಕ್ಕೆ. ಜಲ ಒಂದೇ ಶೌಚಾಚಮನಕ್ಕೆ. ಕುಲವೊಂದೇ ತನ್ನ ತಾನರಿದಂಗೆ. ಫಲ ಒಂದೆ ಷಡುದರ್ಶನ ಮುಕ್ತಿಗೆ; ನಿಲವು ಒಂದೇ ಕೂಡಲಸಂಗಮದೇವಾ ನಿಮ್ಮನರಿದಂಗೆ.

## ಶರಣನ ಭಕ್ತಿ.

೧. ಮಧ್ಯ ಪಿಂಡಂಗಳೆಲ್ಲವು ಶಿವನಿದ್ದೆಡೆಯನರಿಯವು. ಪೂರ್ವ ಪಿಂಡಂಗಳೆಲ್ಲವು ಶಿವನಾದ್ಯಂತವನರಿಯವು. ಕಾಲ ಪಿಂಡಂಗಳೆಲ್ಲವು ಶಿವನ ನಿಲುಕಡೆಯನರಿಯವೆ, ಕಾಲ ಚಕ್ರದೊಳಗಾದವು. ಸಂಶಯ ಪಿಂಡಂಗಳೆಲ್ಲ ಮಡಿದು ನಿಮ್ಮ ಶರಣ ಸೇವೆಯುಳ್ಳರಿಸಯ್ಯ ಕೂಡಲಸಂಗಮದೇವಾ.

೨. ಪರಮ ತತ್ವದ ನಿಜ ಸಂಯುಕ್ತರ ತೋರಾ ಎನಗೆ! ಆನುನೀ ನೆಂಬ ಶಬ್ದ ಸೂತಕಿಗಳ ತೋರದಿರಾ ಎನಗೆ! ಮಹಾನು ಭಾವರ ತೋರಾ ಎನಗೆ! ಮಹಾ ಲಿಂಗೈಕ್ಯರ ಲಿಂಗ ಸುಖಿಗಳ ಲಿಂಗ ಗೂಡಾಗಿಪ್ಪರ ಲಿಂಗಾಭಿಮಾನಿಗಳ ತೋರಾ ಎನಗೆ! ಅಹೋರಾತ್ರಿ ನಿಮ್ಮ ಶರಣರ ಸೇವೆಯಲ್ಲಿರಿಸು ಕೂಡಲಸಂಗಮದೇವಾ.

೩. ಅಯ್ಯಾ, ಸಜ್ಜನ ಸದ್ಭಾವಿಗಳ ಸಂಗದಿಂದ ಮಹಾನು ಭಾವರ ಕಾಣಬಹುದಯ್ಯ! ಮಹಾನುಭಾವರ ಸಂಗದಿಂದ ಶ್ರೀಗುರುವ ಕಾಣಬಹುದಯ್ಯಾ! ಶ್ರೀ ಗುರುವಿನಿಂದ ಲಿಂಗವನರಿಯಬಹುದು. ಜಂಗಮವನರಿಯಬಹುದು, ಪ್ರಸಾದವನರಿಯಬಹುದು. ತನ್ನ ತಾನರಿಯಬಹುದು. ಇದು ಕಾರಣ ಸದ್ಭಕ್ತರ ಸಂಗವನೆ ಕರುಣಿಸು. ಕೂಡಲಸಂಗಮದೇವಾ ನಿಮ್ಮ ಧರ್ಮ.

೪. ಮರ ಮರ ಮಥನದಿಂದ ಅಗ್ನಿ ಹುಟ್ಟಿ, ಆ ಮರನೆಲ್ಲವ ಸುಡದಿಪ್ಪುದೆ, ಅಯ್ಯಾ? ಮಹಾನು ಭಾವರ ಮಥನದಿಂದ ಜ್ಞಾನಾಗ್ನಿ ಹುಟ್ಟಿ ಎನ್ನ ತನುಗುಣವೆಲ್ಲವ ಸುಡದಿಪ್ಪುದೆ ಅಯ್ಯಾ? ಇದು ಕಾರಣ ಮಹಾನುಭಾವಿಗಳ ತೋರಿಸಿ ಬದುಕಿಸಯ್ಯಾ, ಕೂಡಲಸಂಗಮದೇವಾ.

೫. ಅರಿದುದ ನರಿಯಲೊಲ್ಲದು, ಅದೆಂತಯ್ಯ? ಮರೆದುದ ಮರೆಯಲೊಲ್ಲದು, ಅದೆಂತಯ್ಯ? ಅರಿವು ಮರೆವ ಮನವ ಕೂಡಲಸಂಗಯ್ಯ ತಾನೇಬಲ್ಲ.

೬. ಮೊಸಲು ಬೀಸರವಾದ ಪರಿಯ ನೋಡಾ! ಕಾಲು ತಾಗಿದ ಅಗ್ಗವಣಿ, ಕೈಮುಟ್ಟಿದ ಅರ್ಪಿತ, ಮನಮುಟ್ಟಿದಾರೋಗಣೆಯನೆಂತು ಘನವೆಂಬೆನಯ್ಯ? ಬಂದ ಪರಿಯಲ್ಲಿ ಪರಿಣಾಮಿಸಿ, ನಿಂದ ಪರಿಯಲ್ಲಿ ನಿಜವ ಮಾಡಿ, ಆನಂದ ಪರಿಯಲ್ಲಿ ಕೈಕೋ, ಕೂಡಲಸಂಗಮದೇವಾ.

೭. ಹಾಲೆಂಜಲು ವತ್ಸನ, ಉದಕ ಎಂಜಲು ಮತ್ಸ್ಯನ, ಪುಷ್ಪ ಎಂಜಲು ತುಂಬಿಯ. ಎಂತು ಪೂಜಿಸುವೆನಯ್ಯ? ಶಿವಶಿವಾ ಎಂತು ಎಂತು ಪೂಜಿಸುವೆ? ಈ ಎಂಜಲನತಿಗಳವಡೆ, ಎನ್ನಳವಲ್ಲ. ಬಂದುದ ಕೈಕೋ ಕೂಡಲಸಂಗಮದೇವಾ.

೮. ಶುದ್ಧವಾಯಿತ್ತೆಂಬೆನೆ? ಸಮಾಧಾನಿ ನಾನಲ್ಲ- ಅನುವಾಯಿತ್ತೆಂಬೆನೆ? ಅವಧಾನಿ ನಾನಲ್ಲ. ಸಮಾಧಾನ ಸಾವಧಾನವರ್ಜಿತನ ನಾನರಿಯೆ. ಇದ್ದ ಪರಿಯಲ್ಲಿ ನೀಡಿದರೆ, ಬಂದ ಪರಿಯಲ್ಲಿ ಕೈಕೋ ಕೂಡಲಸಂ

ಗಮದೇವಾ.

೯. ಪಾದಾರ್ಚನೆಯ ಮಾಡುವೆನಯ್ಯಾ ಪಾದೋದಕದ ಹಂಗಿಂಗೆ. ಶರಣಾರ್ಥಿ ಎಂಬೆನಯ್ಯ ಒಕ್ಕುದಕೊಂಬ ಹಂಗಿಂಗೆ. ಎಡೆ ಯಾಟ ಕಡಬಡ್ಡಿಯ ಕೊಟ್ಟು ಕೆಟ್ಟಿತ್ತು ನೋಡಾ. ಭಕ್ತಿ ಕೂಡಲಸಂಗನ ಶರಣರ ನಿಲವನರಿಯದೆ ಮುಯ್ಯಗೆ ಮುಯ್ಯಾಗಿ ಕೆಟ್ಟಿತ್ತಯ್ಯ ಎನ್ನ ಭಕ್ತಿ.

೧೦. "ಯಸ್ಯರ್ೇತಸ್ಯ" ಭವತಿ ಎಂದು ಕಟ್ಟಾಚಾರದಲ್ಲಿದ್ದು, ನಾನು ಅನುಸರಿಸಿಕ್ಕೊಂಡು, ನಡೆವನ್ನಕ್ಕರ, ಕರ್ಮ ಕಾಂಡಿಯಲ್ಲ. ಉತ್ಪತ್ತಿ ಸ್ಥಿತಿ ಭೋಗ ಭುಕ್ತಿ ಕಾಯವುಳ್ಳನ್ನಕ್ಕರ, ಭಕ್ತಿಕಾಂಡಿಯಲ್ಲ. ಪರವು ಸಾಧ್ಯವಾಯಿತ್ತೆಂದು ಕ್ರಿಯೆಲ್ಲವ ಮೀರಿ ನಡೆವೆನು, ಪರತತ್ವವನರಿದೆನೆಂಬನ್ನಕ್ಕರ ಜ್ಞಾನ ಕಾಂಡಿಯಲ್ಲ. ಕರ್ಮ ಕಾಂಡಿ, ಭಕ್ತಿ ಕಾಂಡಿ, ಜ್ಞಾನ ಕಾಂಡಿ, ಇಂತೀತ್ರಿ ವಿಧದಲ್ಲಿ ವಂಚಕನಾದರೆ ಈಸು ವಿಧದೊಳಗೆ ಅಂಗವಿಲ್ಲ, ಮೇಲೆ ಸತ್ಪುರುಷರ ಸಂಗವಿಲ್ಲ, ಯುಕ್ತಿ ಇಲ್ಲ. ಎನಗೆ ಭಕ್ತಿ ಎಂತಹುದಯ್ಯ? ಬಲ್ಲವರ ಬೆಸಗೊಂಡರೆ, ಎನ್ನ ಬಿಮ್ಮು ಕೆಟ್ಟಿತ್ತಿಹುದೆಂದು, ಮೆಲ್ಲನೆ ಪ್ರಸಂಗದಿಂದ ತಿಳಿದು ನೋಡುವೆ ಕೂಡಲಸಂಗಮದೇವಾ. ಎನ್ನವಗುಣವನೋಡದೆ ಶಿವರಾತ್ರಿಯ ಸಂಕಣ್ಣಂಗೆ ಕರುಣಿಸಿದಂತೆ ಎನಗೆ ಕೃಪೆಯ ಮಾಡಯ್ಯಾ.

೧೧. ಕಳಾ ಬಿಂದು ವಟಾ ಮುಖಿ ಎಂಬ ಹೆಂಗುಸಿನ ಕೈಯ್ಯಲು, ಜಲಾಕಾರವೆಂಬ ಗಡಿಗೆ ಇದ್ದಿತ್ತು. ಆ ಗಡಿಗೆಯಲ್ಲು ಚನ್ನಬಸವಣ್ಣ ನೀರು ತಂದ. ಮಡಿವಾಳಯ್ಯ ಸುಯಿ ಧಾನವ ತಂದ. ಇದರೊಲೆಯನುರುಹಿ ಕೊಂಡಾ ಕೂಡಲಸಂಗಮದೇವಾ.

೧೨. ದಿಟ ಮಾಡಿ ಪೂಜಿಸಿದರೆ, ಸಟಿ ಮಾಡಿ ಕಳೆವೆ. ಸಟಿಮಾಡಿ ಪೂಜಿಸಿವಡೆ, ದಿಟಮಾಡಿ ಕಳೆವೆ. ಏನೆಂಬೆನೆಂತೆಂಬೆ? ಸುಖಕ್ಕೆ ಹೊತ್ತಿಸಿದ ದೀವಿಗೆ ಮನೆ ಎಲ್ಲವ ಸುಟ್ಟಂತೆ, ಆನು ಮಾಡಿದ ಭಕ್ತಿ ಎನಗಿಂತಾಯಿತ್ತು, ಕೂಡಲಸಂಗಮದೇವಾ.

೧೩. ಎಂಬತ್ತೆಂಟು ಪವಾಡವ ಮೆರೆದು, ಹಗರಣದ ಚೋಹದಂತಾಯಿತ್ತೆನ್ನ ಭಕ್ತಿ. ತನುವಿನೊಳಗೆ ಮನಸಿಲುಕದೆ, ಮನದೊಳಗೆ ತನು ಸಿಲುಕದೆ, ತನು ಅಲ್ಲಮನಲ್ಲಿ ಸಿಲುಕಿತ್ತು. ಮನ ಚನ್ನಬಸವಣ್ಣನಲ್ಲಿ ಸಿಲುಕಿತ್ತು. ನಾನೇತರಲ್ಲಿ ನೆನೆವೆನಯ್ಯ, ಕೂಡಲಸಂಗಮದೇವಾ?

೧೪. ಭಕ್ತನೆನಿಸುವೆನಯ್ಯ, ಮೆಲ್ಲಮೆಲ್ಲನೆ. ಮುಕ್ತನೆನಿಸುವೆ

ನಯ್ಯ ಮೆಲ್ಲಮೆಲ್ಲನೆ. ಪ್ರಾಣಿ ಶರಣ ನೆನಿಸುವೆನಯ್ಯ, ಮೆಲ್ಲಮೆಲ್ಲನೆ. ಎಡ ಹುವ ಗುಳಿಗಳದಾಂಟಿ ಬರಬರ ಲಿಂಗೈಕ್ಯ ನೆನಿಸುವೆನಯ್ಯ. ಕೂಡಲಸಂಗಮದೇವಾ, ನಿಮ್ಮಿಂದಧಿಕ ನೆಸಿಸುವೆನಯ್ಯಾ.

೧೫. ಬಸವ ಬಾರಯ್ಯ! ಮರ್ತ್ಯಲೋಕದೊಳಗೆ ಭಕ್ತರುಂಟೆ ಹೇಳಯ್ಯ! ಮತ್ತಾರೂ ಇಲ್ಲವಯ್ಯಾ ನಾನೊಬ್ಬನೇ ಭಕ್ತನು. ಮರ್ತ್ಯಲೋಕ ದೊಳಗಣ ಭಕ್ತರೆಲ್ಲರು ಜಂಗಮು ಲಿಂಗ, ನೀನೇ ಅಯ್ಯ, ಕೂಡಲಸಂಗಮದೇವಾ.

## ಶರಣನ ಮಾಹೇಶ್ವರ.

೧. ಪರಮಪ್ರಭುವೆ ನೀ ಮುನಿದೆನ್ನ ಮರ್ತ್ಯಲೋಕದೊಳಗಿರಿಸಿದರೆ ಆನು ಸೈರಿಸಿದೆನಯ್ಯ. ಕುಲಮದ ಛಲಮದವಿದ್ದೆನಯ್ಯ. ದರ್ಶನಭ್ರಾಂತಿ ಇಲ್ಲವಯ್ಯ. ಕ್ರಿಯಾ ಕರ್ಮ ಸೂತಕವಿದ್ದೆನಯ್ಯ! ॥ ಶ್ಲೋ ॥ ಯದ್ಯಪಿ ಸ್ಯಾತ್ ತ್ರಿಕಾಲಜ್ಞಶ್ಚ । ತ್ರೈಲೋಕ್ಯಾಕರ್ಷಣಕ್ಷಮಃ ॥ ತಥಾಪಿ ಲೌಕಿಕಾಚಾರಂ । ಮನಸಾ ಪಿನ ಲಂಘಯೇತ್ ॥ ಇಂತೆಂಬುದ ಮೀರಿದೆನಾಗಿ, ಲಿಂಗಯ್ಯ ನಿನ್ನ ನಂಬಿದ್ದೆನಯ್ಯ. ಇನ್ನು ಕಲಿಯುಗದಲ್ಲಿ ಬಳಸಿದೆನಾದರೆ, ಕೂಡಲಸಂಗಮದೇವಾ ನಿಮ್ಮ ರಾಣಿವಾಸದಾಣೆ.

೨. ತನುಮನಧನವೆಂಬ ಕನ್ನಡಿಯ ನೋಡಯ್ಯ! ಎನ್ನದು ಅಲ್ಲ, ನಿನ್ನದು ಅಲ್ಲ. ಬರಿಯ ಭ್ರಮೆಯ ಮಾತು. ಆ ಭ್ರಮೆಗೊಳಗಾದೆ. ನಿಮ್ಮ ಶ್ರೀಚರಣವ ಬಿಡೆ ಕೂಡಲಸಂಗಮದೇವಾ.

೩. ಭಕ್ತ, ಮಾಹೇಶ್ವರ, ಪ್ರಸಾದಿಪ್ರಾಣಲಿಂಗಿ, ಶರಣೈಕ್ಯನು ಮೆಲ್ಲಮೆಲ್ಲನೆ ಆದೆನೆಂಬನ್ನಕ್ಕರ, ನಾನೇನು ವಜ್ರದೇಹಿಯೆ? ನಾನೇನು ಅಮೃತ ಸೇವನೆಯನು ಮಾಡಿದೆನೆ? ಆನು ಮರುಜೀವಣಿಯ ಕೊಂಡೆನೆ? ನುಡಿದ ನುಡಿಯೊಳಗೆ ಷಡುಸ್ಥಲಬಂದು, ಎನ್ನ ಮನವನಿಂಬುಗೊಳ್ಳದಿದ್ದರೆ, ಸುಡವೆ ನೀ ತನುವನು ಕೂಡಲಸಂಗಮದೇವಾ.

೪. ಕುಲಗೆಟ್ಟರೆ, ಕೆಡಬಹುದಲ್ಲದೆ, ಛಲಗೆಡಬಾರದು. ಛಲಗೆಟ್ಟರೆ ಕೆಡಬಹುದಲ್ಲದೆ, ಭಕ್ತಿಯನು ಕೆಡಬಾರದು. ಭಕ್ತಿಯನು ಕೆಟ್ಟರೆ, ಕೆಡಬಹುದಲ್ಲದೆ ಆಯತ ಕೆಡಬಾರದು. ಅಯತ ಕೆಟ್ಟರೆ ಕೆಡಬಹುದಲ್ಲದೆ, ಸ್ವಾಯತ ಕೆಡಬಾರದು. ಎಲೆ ಕೂಡಲಸಂಗಮದೇವಯ್ಯ ಮುನ್ನ ಮುಟ್ಟಿ

ತ್ತಿಮುಟ್ಟಿತ್ತು. ಇನ್ನು ಮುಟ್ಟಿದೆನಾದರೆ ನಿಮ್ಮ ರಾಣಿವಾಸದಾಣೆ.

೫. ಅಷ್ಟವಿಧಾರ್ಚನೆ ಷೋಡಶೋಪಚಾರವಲ್ಲದೆ, ನಿಮ್ಮ ಮುಟ್ಟಲರಿಯದವರ ಕಂಡಡೆ ಅಯ್ಯ ಎಂತೆಂಬೆನಯ್ಯಾ? ಆವಭಾವದಲ್ಲಿ ಆವಜ್ಞಾನದಲ್ಲಿ ಆವಮುಖದಲ್ಲಿ ಅರಿವರಾದರಯ್ಯ! ಏನೆಂಬೆ? ನಿಮ್ಮಲ್ಲಿ ಸವ್ಯಕ್ತರಾದ ನಿತ್ಯ ಶರಣರ ಕಂಡು, ಕೂಡಲಸಂಗಮದೇವಾ, ಅವರನಯ್ಯ ಎಂಬೆನು.

೬. ಮರನ ಹೂವ ಕೊಯ್ದು, ಮರಕ್ಕೇರಿಸಿ, ನದಿಯುದಕವ ನದಿಗರ್ಪಿಸಿ ಕರುವನಗಲಿಸಿ ತಾಯಮೊಲೆವಾಲ ಮರುಗಿಸಿ ಕರಮುಣಬೇಡವೋ! ಕೂಡಲಸಂಗಮದೇವ ಮಾಡಿದ ಮಾಯೆ ಹಲಬರ ಬಾಯ ಟೊಣೆದು ಹೋಯಿತ್ತು.

೭. ತಾಪತ್ರಯವೆಂದರೆ, ರೂಪು ಕಾಣುತ್ತ ಕನಲಿದೆ. ಕೋಪದಲ್ಲಿ ಶಿವಕಳೆಯದ ಕರಡಿಗೆಯನೆ ಮುರಿದ. ಧೂಪದ ಗುಂಡಿಗೆಯನೊಡೆದ. ದೀಪಾರತಿಯ ನಂದಿಸಿದ. ಬಾಹ ಪರಿಯಾಣದೋಗರವ ತುಡುಕಿದ. ಪಾಪಕರ್ಮ ಹರನು ಕೂಡಲಸಂಗಮದೇವಾ ನಿಮ್ಮ ಶರಣನು.

೮. ಈ ಲೋಕದ ಭೀತರು ಆ ಲೋಕದ ಕಲಿಗಳು. ಸಾಲೋಕ್ಯ ಸಾಮೀಪ್ಯ, ಸಾರೂಪ್ಯ, ಸಾಯುಜ್ಯರೆಲ್ಲರು ಅಜಾತಂಗೆಸರಿಯೇ? ಮೂಜಗದಲ್ಲಿ ನಿರುತರು ಕೂಡಲಸಂಗನ ಶರಣರು ತ್ರಿವಿಧವನರಿಯರು.

೯. ತಾಗುನಿರೋಧ ಆಗುಹೋಗು ಗಳನರಿಯದ ಶರಣರ ಚರಿತ್ರವ ನೋಡಿ, ನೋಡಿ ಬೆರಗಾದೆನಯ್ಯಾ. ಕೂಡಲಸಂಗಮದೇವರಲ್ಲಿ ತಾನೇ ಸುಯಿಧಾನಿಯಾಗಿ.

೧೦. ಜಗವಸುತ್ತಿಪ್ಪುದಲ್ಲಾ ನಿನ್ನ ಮಾಯೆಯಯ್ಯಾ! ನಿನ್ನ ಸುತಿಪ್ಪುದೆನ್ನ ಮನವು ನೋಡಯ್ಯಾ! ನೀನು ಜಗಕ್ಕೆ ಬಲ್ಲಿದನು. ಆನು ನಿನಗೆ ಬಲ್ಲಿದನು, ಕಂಡೆಯ್ಯಾ! ಕರಿಯು ಕನ್ನಡಿಯೊಳಗಡಗಿದಂತಯ್ಯ ಎನ್ನೊಳಗೆ ನೀನಡಗಿದೆ ಕೂಡಲಸಂಗಮದೇವಾ.

## ಶರಣನ ಪ್ರಸಾದಿ.

೧. ಎನಗೆ ಗುರುವಿನ ಪ್ರಸಾದ. ನಿನಗೆ ಚೆನ್ನನ ಪ್ರಸಾದ. ಎನಗೆಯೂ ನಿನಗೆಯೂ ಸಮಯಾಚಾರ ಸರಿ. ಕೂಡಲಸಂಗಮದೇವಾ, ನೀನೆನಗೆ ಚಿಕ್ಕ ತಮ್ಮ.

೨. ಶುದ್ಧಾತ್ಮ ಪರಮಾತ್ಮರಿಬ್ಬರು ಒಂದು ರತ್ನಕ್ಕೆ ಹೆಣಗಾಟವ

ಮಾಡುತ್ತಿಹರು. ಆವರ ಹೆಣಗಾಟವ ನೋಡಿ, ಆ ರತ್ನವ ಸೆಳೆದುಕೊಳ್ಳೊಂಡರೆ, ಕೂಡಲ ಸಂಗಮದೇವಂಗಾರೋಗಣೆಯಾಯಿತ್ತು.

೩. ಆ ರತ್ನ ಪ್ರಸಾದವನಾರಾಧಿಸುತ್ತಿರಲು, ಆ ಪ್ರಸಾದದಲ್ಲಿ ಬೀಳುತ್ತ ಆಳುತ್ತಿದ್ದಿತ್ತು ನೋಡಾ! ಅದಹಲಬರು ನೋಡಿ ನೋಡಿ, ಹೋಗುತ್ತಿದ್ದರು, ಆ ಪ್ರಸಾದವು ತಾನೇ ಬಂದು ಎನ್ನ ಸುತ್ತಿಕೊಳ್ಳೊಂಡಿತ್ತು. ಇದು ಪದಾರ್ಥವ ಮಾಡಿಕೊಳ್ಳೊಂಡಾ, ಕೂಡಲ ಸಂಗಮದೇವಾ.

೪. ಎಲ್ಲರ ಗಂಡರು ಬೇಂಟೆಯ ಹೋದರು. ನೀನೇಕೆ ಹೋಗೆ, ಎಲೆ ಗಂಡನೆ. ಸತ್ತುದತಾರದಿರು. ಕೈಮುಟ್ಟಿ ಕೊಲ್ಲದಿರು. ಅಡಗು ಇಲ್ಲದೆ ಮನೆಗೆ ಬಾರದಿರು. ದೇವರ ಧರ್ಮದಲೊಂದು ಬೇಂಟೆ ದೊರೆಕೊಂಡರೆ, ಕೂಡಲ ಸಂಗಮದೇವಂಗರ್ಪಿತವ ಮಾಡುವೆ ಎಲೆ ಗಂಡನೇ.

## ಶರಣನ ಪ್ರಾಣಲಿಂಗಿ.

೧. ಕಣ್ಣೊಳಗೆ ಕಣ್ಣಿರ್ದು ಕಾಣಲೇಕರಿಯಿರಯ್ಯ! ಕಿವಿಯೊಳಗೆ ಕಿವಿಯಿರ್ದು, ಕೇಳಲೇಕರಿಯಿರಯ್ಯ! ಘ್ರಾಣದೊಳಗೆ ಘ್ರಾಣವಿರ್ದು ವಾಸಿಸಲೇಕರಿಯಿರಯ್ಯ! ಜಿಹ್ವೆಯೊಳಗೆ ಜಿಹ್ವೆ ಇರ್ದು, ರುಚಿರಲೇಕರಿಯಿರಯ್ಯ! ಸ್ಪರ್ಶನದೊಳಗೆ ಸ್ಪರ್ಶನವಿರ್ದು, ಸ್ಪರ್ಶಿಸಲೇಕರಿಯಿರಯ್ಯ! ಪ್ರಾಣದೊಳಗೆ ಪ್ರಾಣವಿರ್ದುದನೇಕರಿಯಿರಯ್ಯ! ಕಾಯದೊಳಗೆ ಕಾಯವಿರ್ದು, ಬಿಚ್ಚಿ ಬೇರಾಗದು. ಕೂಡಲ ಸಂಗಮದೇವಾ ನೀನಿಕ್ಕಿದ ಅಣಕದ ಭೇದವ ಭೇದಿಸಬಾರದಯ್ಯಾ.

೨. ಗ್ರಹಬಂದು ಆವರಿಸಲೊಡನೆ, ತನ್ನ ಮರಿಸುವದು, ಅಯ್ಯ! ಮತ್ತೊಂದಕ್ಕಿಂಬು ಗೊಡಲೀಯದಯ್ಯ! ಕೂಡಲ ಸಂಗಮದೇವನ ಅರಿವು ಅನುಪಮವಾಗಲೊಡನೆ, ವ್ಯವಹಾರದೊಳಗಿರಲೀಯದಯ್ಯ.

೩. ಭೌತಿಕದ ಸೀರೆಯ ಸಾತ್ವಿಕ ನೆರೆಯುಟ್ಟರೆ, ಭೌತಿಕ ಸಾತ್ವಿಕ ನಾವ, ಸಾತ್ವಿಕ ಭೌತಿಕನಾದ ಈ ಮಾತು ಬಿದ್ದುದು ನೋಡಾ, ರಾಜಬೀದಿಯಲ್ಲಿ. ಭೂತ ಕೆಣಕಿದರಿಲ್ಲ. ಮಾತು ಮುಚ್ಚಿದರಿಲ್ಲ. ಓತು ಕೂಡುವ ಅನುವ ಕೂಡಲ ಸಂಗಮದೇವ ತಾನೇ ಬಲ್ಲಾ.

## ಶರಣನ ಐಕ್ಯ.

೧. ಮನೆಯ ಗಂಡನ ಮನೆವಾರ್ತೆಯನೇನ ಹೇಳುವೆನವ್ವ! ಅಂಗ ವಿದ್ಯೆಯನೊಲ್ಲ. ಕಂಗಳೊಳಗಣ ಕಸವ ಕಳೆವಲ್ಲದೆ, ನೋಡಲೀಯ್ಯ. ಕೈ

ದೊಳೆದಲ್ಲದೆ ಮುಟ್ಟಲೀಯ್ಯ. ಕಾಲದೊಳದಲ್ಲದೆ, ಹೊಂದಲೀಯ್ಯ. ಇಂತು ಸರ್ವಾಂಗವನ ತಲೆದೊಳೆದ ಕಾರಣ, ಕೂಡಲ ಸಂಗಮದೇವನೆನ್ನ ಕೂಡಿ ಕೊಂಡನವ್ವಾ.

೨. ಅಳಿಯನ ಕಂಡರೆ ನಾಚೆಂಬೆ ಮಗಳೇ. ಅಳಿಯನ ಕಂಡರೆ, ತೊಲಗೆಂಬೆ ಮಗಳೇ. ನಾಚುವರೆ ಮರೆ ಇಲ್ಲ. ತೊಲಗುವರೆ ನೆಲವಿಲ್ಲ. ಇಬ್ಬರಿಗೊಬ್ಬ ಗಂಡನಾದ ಬಳಿಕ, ಇನ್ನೆಲ್ಲಿಯ ಮರೆ ಮಗಳೇ. ಕೂಡಲ ಸಂಗಮ ದೇವನೆಂಬ ಗಂಡನಾದ ಬಳಿಕ, ಇನ್ನೆಲ್ಲಿಯ ಮರೆ ಮಗಳೇ.

೩. ಸತ್ಯವಿದೆ, ಸಮಾಧಾನವಿದೆ, ಮನಕ್ಕೆ ಬಾರದಿದೇನಯ್ಯ! ಸರ್ವ ಸನುಮತವಿದೆಂಬ ಸುಖವಿದೆ, ಮನಕ್ಕೆ ಸೋಂಕದೇನಯ್ಯ! ಆನು ನೀನೆಂಬುದೊಂದು ಘನವಿದೆ. ಕೂಡಲ ಸಂಗಮದೇವಾ, ಭ್ರಮೆಯೂ.

೪. ಸಿನೆ ಬಂಜೆಯರಿಬ್ಬರಿಗೊಬ್ಬ ಮಗ ಹುಟ್ಟಿ, ಅವನೆನ್ನ ಋಣ ಕ್ಕೊಡೆಯನಾದ, ಅವನೆನ್ನ ಧನಕ್ಕೊಡೆಯನಾದ, ಆನು ಗಳಿಸಿದ ಒಮ್ಮನಕ್ಕೆ ಅಗಲದೆ ಮೋಹಿತನಾದ. ಕೂಡಲ ಸಂಗಮದೇವನಂತಪ್ಪ ಮಗ ಹುಟ್ಟಿದ ಬಳಿಕ, ಇದೇನಯ್ಯ? ನಾನು ಕಾಯ ಮಾತೆಯಾಗಿ ಜೀವಪಿತನಾಗಿ, ನೀವಿರಿಸಿದಂತೆ.

೫. ಪೂಜೆಯುಳ್ಳನ್ನಬರ, ಲಿಂಗವ ಹಾಡಿವೆ. ಮಾಟವುಳ್ಳನ್ನಬರಜಂಗ ಮವ ಹಾಡಿದೆ. ಜಿಹ್ವೆಯುಳ್ಳನಬರ, ಪ್ರಸಾದವ ಹಾಡಿದೆ. ಈ ತ್ರಿವಿಧ ನಾಸ್ತಿ ಯಾದ ಬಳಿಕ ಎನ್ನನಾ ಹಾಡಿಕೊಂಡೆ, ಕಾಣಾ ಕೂಡಲಸಂಗಮದೇವಾ.

೬. ಅನಾಯಾಸದಿಂದೆ ಮನೆಯ ಮಾಡಿ, ನಿಸಿಾಯಾಸದಿಂದ ಪರಮ ಸುಖಿ. ರೂಪಿಸುವಲ್ಲಿ ರೂಪಾಧಿಕ. ನೋಡುವಲ್ಲಿ ನೋಟ ಘನ. ಇಂಥ ಸಹಜ ಸಂಗಿಯ ನಿಲವಿನ ಪರಿ. ಉದಕದೊಳಗಣ ಬಿಂದು ಉದ ಯಿದ ರತ್ನದಂತೆ, ಕೂಡಲ ಸಂಗನ ಶರಣರ ನಿಲವು.

೭. ಮರುಳು ತಲೆ, ಹುರುಳು ತಲೆ, ನೀನೆದೇವಾ! ಹೆಂಗಸು, ಗಂಡಸು ನೀನೇದೇವಾ! ಸಂಗಮದೇವಾ, ಎಮ್ಮಕ್ಕನ ಗಂಡ ನೀನೇದೇವಾ! ಕೂಡಲ ಸಂಗಮದೇವಾ, ಭ್ರಾಂತಳಿದು ಭಾವನಿಂದುದಾಗಿ.

೮. ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ, ತೆರಹಿಲ್ಲದ ಸಂಭಾಷಣೆಯ ಸುಖವು, ತೆರಹಿಲ್ಲದ ಸಂಬುಗೆ, ತೆರಹಿಲ್ಲದ ಸ್ವಾನುಭಾವ ಸುಖವು, ತೆರಹಿಲ್ಲದ ಮಹಿಮೆ, ತೆರಹಿಲ್ಲದ ವಿಚಾರ ಕೂಡಲಸಂಗಮದೇವಾ, ನಿಮ್ಮ ಶರಣರಿಗೆ.

# ಐಕ್ಯಸ್ಥಳ.

೧. ಮೂರರಾಪ್ಯಾಯನ ಐದುಬೆಟ್ಟವನಿಂಬುಗೊಂಡುದು. ಅಕಟ ಕಟಾ! ಮಾಡಿ ಕೆಟ್ಟರು, ಮಾಡದೇ, ಕೆಟ್ಟರು. ನೀಡಿ ಕೆಟ್ಟರು, ನೀಡದೆ ಕೆಟ್ಟರು. ಕೂಡಲಸಂಗಮದೇವರ ಬಸುರಮಧ್ಯದ ಬಯಲ ಸಮಾಧಿಯು ಳ್ಳಿಕ್ಕದೆ ಕೆಟ್ಟರು.

೨. ಉಮಾದಿನಾಥರು ಕೋಟಿ, ಪಂಚವಕ್ತ್ರರು ಕೋಟಿ, ನಂದಿ ವಾಹನರೊಂದು ಕೋಟಿ ನೋಡಯ್ಯ. ಸದಾಶಿವರೊಂದು ಕೋಟಿ, ಗಂಗೆ ವಾಳುಕಸಮರುದ್ರರು ಇವರೆಲ್ಲರು. ಕೂಡಲಸಂಗನ ಸಾನ್ನಿಧ್ಯರಲ್ಲದೆ, ಸ ಮರಸವೇದ್ಯರೊಬ್ಬರೂ ಇಲ್ಲ.

೩. ರಕ್ಕಸಿಯ ಮನೆಯಲು ಭೋಜನವನುಂಡು, ತೃಪ್ತಿಯಾಯಿ ತ್ತೆಂದು, ಬೆಸಗೊಂಡರೆ ಹೇಳಿಹೆನು. ನೀರ ಕೈಯ್ಯಲು, ಕಿಚ್ಚು ಬೇಗೆಯ ಕೊಟ್ಟಂತೆ. ಸಾಯುಜ್ಯಪದವಿಯನವರೆತ್ತಬಲ್ಲರು? ಮಹಾದಾನಿ ಕೂಡ ಲಸಂಗನ ಸಮರಸ ಸುಖವನವರೆತ್ತಬಲ್ಲರು?

೪. ಬಯಲರೂಪವ ಮಾಡಬಲ್ಲವನೇ ಶರಣಲಿಂಗಾನುಭಾವಿ. ಬಯ ಲರೂಪ ಮಾಡಲರಿಯದಿರ್ದರೆಂತು ಶರಣನೆಂಬೆ? ಆ ರೂಪು ಬಯಲಮಾ ಡಲರಿಯದಿರ್ದಡೆ, ಎಂತು ಲಿಂಗಾನುಭಾವಿ ಎಂಬೆ? ಈ ಉಭಯ ಒಂ ದಾದರೆ ನಿಮ್ಮಲ್ಲಿ ತೆರಹುಂಟೆ ಕೂಡಲಸಂಗಮದೇವಾ?

೫. ದೇವಲೋಕ, ಮರ್ತ್ಯಲೋಕವೆಂಬ ಸೀಮೆಯುಳ್ಳನ್ನಕ್ಕರ ಕೇವಲಶರಣನಾಗಲರಿಯ. ಸತ್ತುಬೆರಸಿಹೆನೆಂದರೆ, ಕಬ್ಬಿನತುದಿಯಮೆಲ್ಲಿ ದಂತೆ ಕೂಡಲಸಂಗಮದೇವ.

೬. ಮಾತಿಲ್ಲ, ನುಡಿಇಲ್ಲ. ಏತಕ್ಕೆ ಮುನಿದಿರಿ? ಮಾತನಾಡಿದರೇತ ಕಯ್ಯ? ಬೆಳಸೆಂಬುದನರಿಯಿರಿ. ಮಾತುಕೆಟ್ಟಲ್ಲದೆ, ತಾನಾಗಬಾರದು. ಕೂಡಲಸಂಗಮದೇವಾ ಮಾತಿಂದ ಬಕ್ಕು, ಭವಭಾರ ಘೋರ.

೭. ಏನಾದರೆಯೂ ಸಾಧಿಸಬಹುದು. ಮತ್ತೇನಾದರೆಯೂ ಸಾಧಿ ಸಬಹುದು. ತಾನಾರೆಂಬುದು ಸಾಧಿಸಬಾರದು. ಕೂಡಲಸಂಗಮದೇವರ ಕರುಣವುಳ್ಳವಂಗಲ್ಲದೆ.

೮. ಜೀವಾತ್ಮ ಅಂತರಾತ್ಮರ ಸುದ್ದಿಯ ಬೆಸಗೊಂಬರೆ, ಹೇಳಿಹೆಕೇಳಿ ಭೋ. ಹುಸಿಯ ಸಂಕೋಲೆಯಾಗಿರ್ದಲ್ಲಿ, ಕಾದುಕ್ಕೊಂಡಿರ್ದನೊಬ್ಬ.

ಕಥೆ ಕನಸು ಮಾಡಿ ಹೇಳುತ್ತಿರ್ದನೊಬ್ಬ. ಪರಾಪರಕ್ಕೆ ಹೋಗಿ, ಪರ ಮನ ಸುದ್ದಿಯ ಕೊಂಡು ಬರುತ್ತಿರ್ದನೊಬ್ಬ. ಅವರಿಬ್ಬರನು ಕೆಡೆ ಪೆಟ್ಟಿ ಹೋಹಾಗ, ಲೋಕ ನಿರ್ಬುದ್ಧಿಗೊಂಡಿತ್ತು ಕೂಡಲಸಂಗಮದೇವಾ.

೯. ಸಮರತಿ, ಸಮಕಳೆ, ಸಮಸುಖ, ಸ್ವಾನುಭಾವ, ಹಿರಿದು ಕಿರಿದನಾರು ಬಲ್ಲರು? ಪಾಷಾಣ ಪರಿಕ್ಷಾವಂತನಂತೆ, ಗುರುವಿಲ್ಲದ ವರಂತಿರಲಿ. ಕೂಡಲಸಂಗಮದೇವಯ್ಯ, ಗುರುವುಳ್ಳವರ ನಿಜವಿಂತುಟು.

೧೦. ಗುರುಶಿಷ್ಯ ಸಂಬಂಧವಾದುದಕ್ಕೆ ಇದು ಚಿಹ್ನ, ಹಿಂದು ಬಿಟ್ಟು ಮುಂದೆ ಹಿಡಿಯಬೇಕು. ಕೂಡಲಸಂಗಮದೇವಾ, ಕೇಳಯ್ಯ! ಕಿಚ್ಚಿ ನೊಳಗೆ ಕೋಲ ಬಚ್ಚಿಟ್ಟಂತಿರಬೇಕು.

೧೧. ಲಿಂಗಪೂಜಿಸಿ ಫಲವೇನಯ್ಯ? ಸಮರತಿ ಸಮ ಕಳೆ ಸಮ ಸುಖವನರಿಯದನ್ನಕ್ಕರ, ಲಿಂಗವ ಪೂಜಿಸಿ ಫಲವೇನಯ್ಯ? ಕೂಡಲಸಂ ಗಮದೇವರ ಪೂಜಿಸಿ ನದಿಯೊಳಗೆ ನದಿ ಬೆರಿಸಿದಂತಾಗದನ್ನಕ್ಕರ?

## ಐಕ್ಯನೈಕ್ಯ.

೧. ಒಲೆಯೊಡೆಯನುರುಹಿದರೆ, ಹೊಗೆ ಗೋಳಕನಾಥನ ಕೊರಳ ಸುತ್ತಿತ್ತು. ಮಡಿತಳನ ಜಡೆ ಸೀಯಿತ್ತು. ಮರೀಚಿಕನ ಸಿರಬೆಂದಿತ್ತು. ರು ದ್ರನ ಹಾವುಗೆ ಉರಿಯಿತ್ತು. ದೇವಗಣಂಗಳು ನೀವಾಟವಾದರು. ಮಡದಿ ಯರೈವರು ಮುಡಿಯ ಹಿಡಿದುಕ್ಕೊಂಡು ಹೋದರು. ಕೂಡಲಸಂಗಮ ದೇವ ಭಸ್ಮಧಾರಿಯಾದ.

೨. ಆ ಭಸ್ಮತಾಗಿ, ಬ್ರಹ್ಮ ತನ್ನ ಕಪಾಲ ವಿಡಿದನು. ಗಣನಾಥನ ಐವತ್ತೆರಡು ಸಿರಹರಿದು ಬಿದ್ದವು. ಭಸ್ಮತಾಗಿ, ಅಂಡಜ ಮುಗ್ಧೆಯ ಮೂ ರು ಮೊಲೆ ಹರಿದು ಬಿದ್ದವು. ನಾದಪ್ರಿಯ ನಂದಿಯನೇರಿಕ್ಕೊಂಡು, ಕುಳಿ ತು ಅತೀತನ ಮೇಲೆ, ಆನಂದ ಸಿಂಹಾಸನವ ನಿಕ್ಕಿಕೊಂಡು, ಕುಳಿತು ಕೂಡಲಸಂಗಮದೇವರ ದೇವತ್ವ ಕೆಟ್ಟಿತ್ತು.

೩. ನಾನೊಮ್ಮೆ ಬೇಂಟೆಯ ಹೋದರೆ ಭಸಿತಕ್ಕಾಹುತಿಯನಿಕ್ಕಿ ಹೆನೆಂದು, ಸಾಸಿರದೇಳುನೂರು ವರುಷ ಒಬ್ಬ ರಾಜನ ಕೊಂದೆನು. ಅವನ ಹೆಂಡತಿ ಅಯಿವತ್ತೆರಡು ಕಣ್ಣವಳು. ಅವಳು ತನ್ನ ಹೂಮುಡಿಯ ಬಿಟ್ಟು ಅತ್ತಳು. ಅವಳ ಬಾಯಲ್ಲಿ ಅಜಬಿದ್ದ. ಕಂಗಳಲಿ ಧೂಮ ಕೇತುಬಿದ್ದ ಕೂಡಲಸಂಗಮದೇವರ ದೇವತ್ವ ಕೆಟ್ಟಿತ್ತು.

೪. ಲಿಂಗಾರ್ಚನೆಯ ಮಾಡುವ ಮಹಿಮರೆಲ್ಲರು ಸಲುಗೆವಂತರಾ

೧; ಒಳಗೈದಾರೆ. ಆನುದೇವ, ಹೊರಗಣವನು. ಸಂಭೋಳಿ, ಸಂಭೋಳಿ ಎನ್ನುತ್ತ, ಇಂಬಿನಲ್ಲಿದ್ದೆನೋ. ಕೂಡಲಸಂಗಮದೇವಾ, ನಿಮ್ಮ ನಾಮ ವಿಡಿದ ಅನಾಮಿಕ ನಾನು.

೫. ಶಿವ, ಶಿವಾ, ಮೂರ್ತಿಗೆ ಸತ್ಯ ಶುದ್ಧ ಉಂಟೆಂಬಿರಿ, ಸತ್ಯಶುದ್ಧವುಳ್ಳವಂಗೆ ಗುರುವಿಲ್ಲ. ಸತ್ಯ ಶುದ್ಧವುಳ್ಳವಂಗೆ ಲಿಂಗವಿಲ್ಲ. ಸತ್ಯಶುದ್ಧ ವುಳ್ಳವಂಗೆ ಜಂಗಮವಿಲ್ಲ. ಸತ್ಯಶುದ್ಧವುಳ್ಳವಂಗೆ ಪ್ರಸಾದ ವಿಲ್ಲ? ಸತ ಶುದ್ಧವುಳ್ಳವಂಗೆ ಗೂತ್ರವಿಲ್ಲ. ಕೇಳಿರೇ, ಸತ್ಯ ಶುದ್ಧ ವುಳ್ಳವರಿಗೆ ಉಪ ಚಾರ ಉಂಟು. ಸತ್ಯಶುದ್ಧ ದೇವರಿಗೆ ಧ್ಯಾನಮೌನ ಅನುಷ್ಠಾನ ಉಂಟು. ಸತ್ಯಶುದ್ಧ ಉಪದೇಶಕ್ಕೆ ಜಪತಪ ಸಂಧ್ಯಾ ಸಮಾಧಿ ಹೋಮನೇಮ ನಿತ್ಯ, ಅಷ್ಟ ವಿಧಾರ್ಚನೆ ಷೋಡಶೋಪಚಾರ ಉಂಟು. ಸತ್ಯಶುದ್ಧ ದೇವರಿಗೆ ಉಪಚಾರ ಉಂಟಾದ ಕಾರಣ ಇಂತಪ್ಪ ಸತ್ಯಶುದ್ಧ ಗುರುವಿಂಗೆ ಶರಣೆನ್ನೆ. ಇಂತಪ್ಪ ಸತ್ಯಶುದ್ಧ ಜಂಗಮಕ್ಕೆ ಶರಣೆನ್ನೆ. ಇಂತಪ್ಪ ಸತ್ಯಶುದ್ಧ ಪ್ರಸಾದಕ್ಕೆ ಕೈಯ್ಯಾನೆ. ಇವರೆಲ್ಲರು ಬ್ರಹ್ಮನ ಮಕ್ಕಳು. ಎನಗೆ ಸತ್ಯವೂ ಇಲ್ಲ, ಅಸತ್ಯವೂ ಇಲ್ಲ, ಆವ ಸಹಜವೂ ಇಲ್ಲ, ನಿಜಲಿಂಗೈಕ್ಯ ಕಾಣಾ ಕೂಡಲಸಂಗಮದೇವಾ.

## ಐಕ್ಯನ ಭಕ್ತ.

೧. ಭಕ್ತನಾಯಿತ್ತೆ, ಭಕ್ತಿದಾಸೋಹ. ಯುಕ್ತನಾಯಿತ್ತೇ, ಯುಕ್ತಿ ದಾಸೋಹ. ಐಕ್ಯನಾಯಿತ್ತೇ, ಮಮಕಾರದ ದಾಸೋಹ. ಸರ್ವದಲ್ಲೂ ದಾಸೋಹವೇ ಬೇಕು. ದಾಸೋಹವನುವ ಕೂಡಲಸಂಗಯ್ಯ ತಾನೇಬಲ್ಲ.

೨. ಜಲವ ನುಂಗಿತ್ತಯ್ಯ ಎನ್ನ ಕರವು. ಪತ್ರಿಯ ನುಂಗಿತ್ತಯ್ಯ ಎನ್ನ ಶಿಖಿ. ಇದೇನಯ್ಯ? ಮಂತ್ರ ಭಿನ್ನವಾಯಿತ್ತು. ಈ ದ್ವಿವಿಧ ಒಂದಾಗದ ಮುನ್ನ ಕೂಡಲಸಂಗಮದೇವರು ಪೂಜೆಗೊಂಡರು.

೩. ಎಲ್ಲವ ಬೇಡಿದರೆಮ್ಮವರು. ಒಂದ ಬೇಡ ಮರೆದರಯ್ಯ! ಮರ್ತ್ಯಲೋಕದಮಳಗಣಂಗಳು ಒಂದ ಬೇಡಮರೆದರು. ಕೂಡಲಸಂಗಮ ದೇವ, ಎನ್ನಬೇಡ ಮರೆದರಯ್ಯ.

೪. ಭಿತ್ತಿ ಇಲ್ಲದ ಚಿತ್ರದಂತೆ, ಭಕ್ತಿ ಇಲ್ಲದ ಪ್ರಮಥನಾಗಿ, ಎಂದಿಪ್ಪೆನಯ್ಯಾ! ಸತ್ಯವಿಲ್ಲದ ಶರಣನಾಗಿ, ಎಂದಿಪ್ಪೆನಯ್ಯಾ. ಗೆರೆ ಇಲ್ಲದ ಕೋಲಿನಲ್ಲಿ ಉದ್ದರೆಯ ನಿಕ್ಕಿದ ಭಂಡಾರದ ಹರದನಂತೆ ಇಪ್ಪೆನಯ್ಯಾ ಕೂಡ ಲಸಂಗಮದೇವಾ.

೫. ಆಯುತ ಒಂವೆಡೆಯಲ್ಲಿ ತೆರನನರಿಯರಾಗಿ, ನೋಡಬಾರದು, ನುಡಿಸಬಾರದು. ಆರೂ ತಿದ್ದಬಾರದಡೊಂಕು, ಕೂಡಲಸಂಗಯ್ಯನ ಭಕ್ತಿ.

## ಐಕ್ಯನ ಮಾಹೇಶ್ವರ.

೧. ಸತ್ತು ಹುಟ್ಟುವನಲ್ಲ, ಸಂದೇಹಿಸೂತಕಿಯಲ್ಲ, ಆಕಾರ ನಿರಾಕಾರನಲ್ಲ, ನೋಡಯ್ಯ! ಕಾಯುವಂಚಕನಲ್ಲ, ಜೀವವಂಚಕನಲ್ಲ, ನಿರಂತರ ಸಹಜ ನೋಡಯ್ಯ! ಶಂಕೆ ಇಲ್ಲದ ಮಹಾ ಮಹಿಮ ನೋಡಯ್ಯ. ಕೂಡಲಸಂಗನ ಶರಣರು ಉಪಮಾತೀತರು ನೋಡಯ್ಯ.

೨. ಧರೆಗಗನ ದಶದಿಕ್ಕುಮೆಂಬುವ ನಾನರಿಯೆನಯ್ಯಾ! “ ಲಿಂಗ ಮಧ್ಯೆ ಜಗತ್ಸರ್ವಂ” ಎಂಬುದ ನಾನರಿಯೆನಯ್ಯಾ! ಲಿಂಗ ಸೋಂಕಿನ ಸುಖದೊಳಗೆ, ಕೂಡಲಸಂಗಮದೇವಯ್ಯ, ಅಂಬುಧಿಯೊಳಗೆ ಬಿದ್ದ ಆಲಿಕಲ್ಲಿನಂತೆ ಭಿನ್ನ ಭಾವವನರಿಯದೆ “ ಶಿವ ” ಎನುತಿರ್ದೆ ನಾನು.

## ಐಕ್ಯನ ಪ್ರಸಾದಿ.

೧. ಮಿಥ್ಯವನಳಿದುಳಿದ ಸತ್ಯ ಪ್ರಸಾದಿ. ಅಂಜನವಿಲ್ಲದ ನಿರಂಜನ ಪ್ರಸಾದಿ. ದುಃಖವನಳಿದ ಘನಾನಂದ ಪ್ರಸಾದಿ. ಅನಿತ್ಯವಿಲ್ಲದ ನಿತ್ಯ ಪ್ರಸಾದಿ. ಖಂಡಿತವಿಲ್ಲದ ಅಖಂಡಿತ ಪ್ರಸಾದಿ. ಕೂಡಲಸಂಗಮದೇವರಲ್ಲಿ ತಾನೇ ಪ್ರಸಾದಿ.

೨. ಹುಸಿಯಿಂದ ಜನಸಿದೆನಯ್ಯ, ಮರ್ತ್ಯಲೋಕದೊಳಗೆ. ಹುಸಿಯಿಂದ ಲಿಂಗದ ಹೆಸರುಗೊಂಡು ಕರೆವೆನಯ್ಯ! ಅದು ಎನಗೆ ಭಾವವೂ ಅಲ್ಲ. ನಿರ್ಭಾವವೂ ಅಲ್ಲದೆ, ತಾನೇ ನಿಂದಿತ್ತಯ್ಯ! ಅದರ ಅವಯವಂಗಳೆಲ್ಲವು ಜಂಗಮವಯ್ಯ! ಅದಕ್ಕೆ ಎನ್ನಲ್ಲಿ ಉಳ್ಳ ಸುಯಿಧಾನವ ಮಾಡಿ ನೀಡುವೆನಯ್ಯಾ! ಆ ಪ್ರಸಾದಕ್ಕೆ ಶರಣೆಂಬೆನಯ್ಯ! ಅದು ಎನಗೆ ಸಾರವೂ ಅಲ್ಲ, ನಿಃಸ್ಸಾರವೂ ಅಲ್ಲ. ಆ ಪ್ರಸಾದದೊಳಗೆ ನಾನೆ ತತ್ಗತನಾದೆನಯ್ಯಾ, ಕೂಡಲಸಂಗಮದೇವಾ.

೩. ಬೆಳಗಿನೊಳಗಿನ ಬೆಳಗು, ಮಹಾಬೆಳಗೆಂಬೆ. ಪ್ರಸಾದದಲ್ಲಿ ಒದಗಿದ ಪ್ರಸಾದಿಯ ಪರಿಣಾಮದ ಪರಮಾನಂದವನೇನೆಂದುಪಮಿಸುವೆನಯ್ಯಾ! ಪರಮಾಶ್ರವೇ ತಾನಾಗಿ ಕೂಡಲಸಂಗಮದೇವಯ್ಯ! ಚನ್ನಬಸವಣ್ಣನೆಂಬ ಮಹಾ ಪ್ರಸಾದಿ ಎನ್ನ ವಾಙ್ಮನಕ್ಕೆ ಅಗೋಚರನಾಗಿರ್ದುದ ನಾನೇನುಪಮಿಸುವೆನಯ್ಯಾ.

## ಐಕ್ಯನ ಪ್ರಾಣಲಿಂಗಿ.

೧. ಆಯುತವೆಂಬುದು ಭಂಗ, ಸ್ವಾಯುತವೆಂಬುದು ಭಾವ, ಆಯುತವನರಿಯ. ಸ್ವಾಯುತವನರಿಯೆ. ಭಾವದಲ್ಲಿ ವ್ರತಗೆಟ್ಟುದಾಗಿ, ಆ ಭಾವದಲ್ಲಿ ಜೀವ ಸಂಹಾರಿ, ಕೂಡಲಸಂಗಮದೇವ ಸರ್ವನಿವಾಸನಾಗಿ.

೨. ಸ್ವಯಲಿಂಗದನುಭಾವ ತನಗೆ ದೊರೆಕೊಂಡಬಳಿಕ, ದೇವಲೋಕವೆಂಬುದೇನೋ, ಮರ್ತ್ಯಲೋಕವೆಂಬುದೇನೊ? ಆವುದರಲ್ಲಿಯೂ ಭೇದವೇನಯ್ಯ! ಕೂಡಲಸಂಗಮದೇವಾ, ಸರ್ವವೂ ನೀವಾದಬಳಿಕ, ಆಲಸ್ಯ ಉಂಟೇ?

೩. ಏನೆಂಬೆನೇನೆಂಬೆ? ಏನೆಂಬೆನೇನೆಂಬೆನೆರಡೊಂದಾದುದ? ಏನೆಂಬೆನೆಂಬೆನೆಂಬೆನವಿರಳ ಘನವ? ಮಹಾದಾನಿ ಕೂಡಲಸಂಗಮದೇವ ತಾನೇ ಬಲ್ಲ.

೪. ಕುರುಹಿಲ್ಲ, ಕುರುಹಿಲ್ಲ, ಲಿಂಗವೆಂದೆಂಬರೆ. ತೆರಹಿಲ್ಲ, ತೆರಹಿಲ್ಲ, ಜಂಗಮವೆಂದೆಂಬರೆ. ಇದೇ ನೋಡಾ, ಶಿವಾಚಾರ. ಇದೇ ನೋಡಾ, ಶಿವದೊಡಕು. "ಆತ್ಮಾನಾಂ ಪ್ರಕೃತಿ ಸ್ವಭಾವ" ಎಂದುದಾಗಿ, ಮುಟ್ಟಬಾರದ ಠಾವನುರೆಗೊಂಡಿಪ್ಪ, ಮಮಕರ್ತ ಕೂಡಲಸಂಗಮದೇವಾ.

## ಐಕ್ಯನ ಶರಣ.

೧. ಭೂತೋಯ ಪಾವಕ ಸಮಿರಣ ಅಂಬರಾದಿಗಳಿಲ್ಲ, ಆದಿಯಾಧಾರಪರಮಾತ್ಮಲಿಂಗದಲ್ಲಿ. ಆದಿಮಧ್ಯಾವಸಾನವನರಿಯದ ಅಗಮ್ಯವೇದಾದಿ ಸಕಲಶಾಸ್ತ್ರಪ್ರಮಾಣರು ಅದನಿಂತಿಂತೆಂದುಪಮಿಸಲಿಲ್ಲ, ಮಹಾಂತ ಕೂಡಲಸಂಗಮದೇವ.

೨. ಮಹಾಲಿಂಗದಸ್ಥಾನಂಗಳು ಮಹಲಿಂಗದ ಹೆಸರಲ್ಲದೆ ಲಿಂಗ ಬೇರೆ ರೂಪನಿರೂಪನಲ್ಲ. ಅಂಗ ಬೇರೆ, ಕಾಯಸಂಬಂಧಿಯಲ್ಲ. ಲಿಂಗವು ಬೇರೆ, ಮಹಾಘನದಿಂದತ್ತತ್ತಲೆ ಕೂಡಲಸಂಗಮದೇವರ ನಿಲುವು ಆರಿಗೆಯೂ ಅರಿಯಬಾರದು.

೩. ಹುತ್ತಕ್ಕೆ ಏಸುಬಾಯಾದರೇನು? ಸರ್ಪನಿಪ್ಪುದೊಂದೇಸ್ಥಾನ. ಭಾವಭಾವಿಸಿ ಭ್ರಮೆಯಳಿದು ನೋಡಾ! ಆ ಭಾವ ಭಾವಿಸಲು ನಿರ್ಭಾವ ನೋಡಾ, ಕೂಡಲಸಂಗಮದೇವಾ.

೪. ವೇದವೇದಿಸಲರಿಯದೆ, ಅಭೇದ್ಯಲಿಂಗವೆಂದು ನಡುನಡು ಗಿತ್ತು. ಶಾಸ್ತ್ರ ಸಾಧಿಸಲರಿಯದೆ ಅಸಾಧ್ಯಲಿಂಗವೆಂದು ಸಾರುತ್ತಿದ್ದಾವೆ. ತರ್ಕತರ್ಕಿಸಲರಿಯದೆ, ಅತರ್ಕ್ಯ ಲಿಂಗವೆಂದು ಮೌನಗೊಳ್ಳಲು, ಆಗ ಮಗಮಿಸಲರಿಯದೆ ಅಗಮ್ಯಲಿಂಗವೆಂದು ತೊಲಗಿ ಹೋದವು. ನರರು ಸುರರು ಅದರಂತವ ಕಾಣರು. ನಮ್ಮ ಕೂಡಲಸಂಗನ ಪ್ರಮಾಣ ಶರಣ ಬಲ್ಲ.

೫. ವೇದಾತೀತ, ಷಡುವರ್ಣರಹಿತ, ಅಷ್ಟತ್ರಿಂಶತ್ಕಳಾತೀತ, ಅಗಮ್ಯ ಅಗೋಚರವ್ಯೋಮಾತೀತ ಕೂಡಲಸಂಗಮದೇವಾ.

೬. ವಿಶ್ವಜಿತನು, ದನುಜಜಿತನು, ಸರ್ವಜಿತನು, ಸುತ್ರಾಮ ಜಿತನು, ಸುಸಂವೇದ್ಯನು, ವೇದನಾದಾತೀತನು ತುರೀಯ ಪರಮಾನಂದನಿರವಯ ಕೋಟಿ ಸೂರ್ಯಪ್ರಭೆಯ ಬೆಳಗಿನ ಸಹಸ್ರ ಕಿರಣದ ಅಗ್ರ ಪಟಲದ ಬೆಳಗು ಕೂಡಲಸಂಗಮದೇವಾ.

೭. ಸಹಸ್ರಶೀರ್ಷನಾದಿ ಪುರುಷನು. ವೇದಪುರುಷನೊಬ್ಬ ಪುರುಷನು. ಜ್ಯೋತಿಪುರುಷನೊಬ್ಬ ಪುರುಷನು, ತ್ರಿಪಾದೂರ್ಧ್ವ ಪುರುಷನೊಬ್ಬಪುರುಷನು. ಉದನ್ಮುಖನೊಬ್ಬ ಪುರುಷನು. ಉದಯಪುರುಷನೊಬ್ಬ ಪುರುಷನು. ವಿರಾಟ ಪುರುಷನೊಬ್ಬ ಪುರುಷನು. ಆದಿಪುರುಷನೊಬ್ಬಪುರುಷನು. ವಿಯತ್ಪುರುಷನೊಬ್ಬಪುರುಷನು. ತದ್ವಿಯತ್ಪುರುಷರಿಲ್ಲದ ಪ್ರಭೆಯನೋಡಿರೇ. ವೇದನಾದಾತೀತ ತುರೀಯ ಪರಮಾನಂದ ನಿರವಯ ಷಟ್‌ತ್ರಿಂಶತ್ ಪ್ರಭಾ ಪಟಲದ ಬೆಳಗಿದೆ ನೋಡಿರೋ. ಬೆಳಗಿನೊಳಗಿನ ಮಹಾಬೆಳಗಿನ ಬೆಳಗು ನಮ್ಮ ಕೂಡಲಸಂಗಮದೇವಯ್ಯ.

೮. ಘನಗಂಭೀರ ಮಹಾಘನದೊಳಗೆ ಘನಕ್ಕೆ ಘನ ವಾಗಿರ್ದನಯ್ಯ! ಕೂಡಲಸಂಗಮದೇವನೆಂಬ ಮಹಾಬೆಳಗಿನೊಳಗಿರ್ದು, ಶಬ್ದ ಮುಗ್ಧನಾದುದನೇನೆಂಬೆನಯ್ಯ.

೯. ಸಮಸ್ತ ಕತ್ತಲೆಯ ಮುಸಕವಕಳೆದಿಪ್ಪ ಇರವನೋಡಯ್ಯ! ಬೆಳಗಿಂಗೆ ಬೆಳಗು ಸಿಂಹಾಸನವಾಗಿ, ಬೆಳಗು ಬೆಳಗು ಕೂಡಿದ ಕೂಟವ ಕೂಡಲಸಂಗಯ್ಯ ತಾನೇ ಬಲ್ಲ.

೧೦. ಅಂತರಂಗ, ಬಹಿರಂಗ, ಆತ್ಮಸಂಗ ಒಂದೇ ಅಯ್ಯಾ! ನಾದ, ಬಿಂದು, ಕಳಾತೀತ, ಆದಿಯಾಧಾರನೀನೇ ಅಯ್ಯ! ಆರೂಢದ ಕೂಡಿದ ಕೂಟದ ಸುಖವ ಕೂಡಲಸಂಗಯ್ಯ ತಾನೇಬಲ್ಲ.

# ಶಿವಾನುಭವ

(ತ್ರೈಮಾಸಿಕವು.)

ಸಂಪಾದಕ

**ರಾ|| ಸಾ|| ಫ. ಗು. ಹಳಕಟ್ಟಿ**

ಬಿ. ಎ. ಎಲ್ ಎಲ್. ಬಿ

**ವಿಜಾಪುರ.**

**೩ನೇ ಸಂಚಿಕೆ**

ಅಗಸ್ಟ ೧೯೩೬.

# ವಿಷಯಾನುಕ್ರಮಣಿಕೆ.



---

## ಶಿವಾನುಭವದ ವರ್ಗಣಿ ದರ.

**ಪೋಷಕರು.** ೧೦ ರೂ. ೮ ಆಣೆ **ಆಶ್ರಯದಾತರು.** ೫ ರೂ. ೮ ಆಣೆ. **ವರ್ಗಣೀದಾರರು.** ೩ ರೂ. ೮ ಆಣೆ ಅಂಚೇ ವೆಚ್ಚಸಹವಾಗಿ ಬಿಡಿಸಂಚಿಕೆ ೧ ರೂ. ೪ ಆಣೆ

**ಮ್ಯಾನೇಜರ ಶಿವಾನುಭವ ವಿಜಾಪುರ.**

---


ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ [illegible]ಸಲೀಬುರಜ ಹತ್ತರ ತಮ್ಮ ೧೬೨೦ (ಅ) ನೇ ಮನೆಯಲ್ಲಿ ಪ್ರಕಟಿಸಿದರು.



ವರದಾನಿ ಗುಡ್ಡವ್ವನ್ನ ದೇವಸ್ಥಾನ ಗುಡ್ಡಾಪುರ— ಜತ್ತ ಸಂಸ್ಥಾನ.

# ಶಿವಾನುಭವ.

ಸಂಪುಟ. ೧ ಅಗಷ್ಟ. ೧೯೨೬ ಸಂಚಿಕೆ. ೩

## ಶಿವಾನುಭವದ ಅವಶ್ಯಕತೆ.

ಲೇಖಕಃ— ಪಂಡಿತ. ಶ್ರೀ ಶಂಭುಲಿಂಗ ಸ್ವಾಮಿಗಳು ಹಿರೇಮಠ

**ಬರಿದೆ ಭ್ರಮೆಯೊಳು ಬಿದ್ದು ಕೇಡಬೇಡವೆಲೆ ಮನುಜ।**
**ಪರವಸ್ತುವನೆ ಮರೆದು ಲೌಕಿಕವ ನಂಬಿ॥** (ಸರ್ಪಭೂಷಣ)

ಅನಂತ ರೂಪವಾಗಿರುವ ಈ ವಿಶ್ವದಲ್ಲಿ, ಪರ್ಯಾಲೋಚಿಸಿದರೆ ಮಾನವ ಜನ್ಮವೇ ಸರ್ವೋತ್ಕೃಷ್ಟವಾದುದೆಂದು ಸಿದ್ಧವಾಗುವದು. ಮಾನವನಿಗೆ ತನ್ನ ಜನ್ಮದ ಯೋಗ್ಯತೆಯು ಎಂತಹದೆಂಬುದು ಗೊತ್ತಾದರೇನೆ ಸಾತ್ವಿಕ ವೃತ್ತಿಯ ವಿಕಾಸವೂ, ಎಲ್ಲ ಜೀವಿಗಳಲ್ಲಿ ಸಮತೆಯೂ, ಅಹಂಭಾವದ ಅಭಾವವೂ, ಕರ್ತವ್ಯದ ಜಾಗ್ರತೆಯನ್ನು ಸ್ಥಿರಗೊಳಿಸುವ ಮನೋನಿಗ್ರಹವೂ ಮುಂತಾದುದು ಅವನಲ್ಲಿ ತಲೆದೋರಲು ಅನುವಾಗುವದು. ಆತ್ಮವಿಶ್ವಾಸವನ್ನು ಜೊತೆಗೊಳಿಸಿ ಆತ್ಮೋದ್ಧಾರದ ನಿಲುಕಡೆಗೆ ಒಯ್ದು ಮುಟ್ಟಿಸತಕ್ಕುದಾದ ಅಧ್ಯಾತ್ಮಿಕ ಉನ್ನತಿಯನ್ನು ಪ್ರತಿಯೊಬ್ಬನೂ ಪಡೆಯಬೇಕಾದುದು ಅತ್ಯಾವಶ್ಯಕವಾದ ಆದ್ಯಕರ್ತವ್ಯವು. ಇಷ್ಟೇ ಅಲ್ಲ, ಮನುಷ್ಯನು ತನ್ನ ಜನ್ಮದ ಯೋಗ್ಯತೆಯನ್ನು ಎಲ್ಲಿಯ ವರೆಗೆ ತಿಳಿದವನಾಗಿರುವನೋ ಅಲ್ಲಿಯ ವರೆಗೂ ಅವನು ಕಲಿತವನೂ ಶರೀರದಿಂದ ಗಟ್ಟಿಮುಟ್ಟನೂ ಮನೋನ್ನತೆಯುಳ್ಳವನೂ ಆಗಿದ್ದರು ಸಹ, ಆ ವಿದ್ವತ್ತೆ, ಗಟ್ಟಿಮುಟ್ಟತನ, ಉನ್ನತಿಗಳಿಗೆ ಅಧ್ಯಾತ್ಮ ಜ್ಞಾನದ ಜೋಡು ಇಲ್ಲವಾದುದರಿಂದ ಅವನು ಏಕಾಂಗಿಯಂತಲೇ ಹೇಳಿಸಿಕೊಳ್ಳಲ್ಪಡುತ್ತಾನೆ. ಜಗತ್ತಿನಲ್ಲಿ ಒಟ್ಟಿಗೆ ನೋಡಿ

ದರೆ ವ್ಯಾವಹಾರಿಕ ಕೃತ್ಯಗಳನ್ನು ಮಾಡುವದಿಷ್ಟೇ ಮನುಷ್ಯನ ಉತ್ಕೃ
ತನು ಧ್ಯೇಯವಾಗಿರುವದೆಂತಲೂ ಹೇಳಲಿಕ್ಕೆ ಬರುವ ಹಾಗಿಲ್ಲ. ಎಂತಹ
ಬಿಕ್ಕಟ್ಟಿನ ಪ್ರಸಂಗ ಬಂದೊದಗಿದರೂ ಮನಸ್ಸು ಚಂಚಲವಾಗದ ಹಾಗೆ
ಮಾಡಿ ಅಧ್ಯಾತ್ಮಿಕ ಉನ್ನತಿಯಿಂದ ಮನಸ್ಸಿಗೆ ಪೂರ್ಣ ಶಾಂತಿಯನ್ನು ಒದ
ಗಿಸಿಕೊಡಲು ಶಕ್ಯವಿದೆ. ಹಂಸದ ಚಂಚೂಪುಟವು ಹಾಲು ನೀರುಗಳನ್ನು
ಬೇರ್ಪಡಿಸುತ್ತಿರುವಂತೆ, ಅಧ್ಯಾತ್ಮಿಕ ಸಂಸ್ಕಾರ ವಿಶಿಷ್ಟವಾದ ಮನೋವೃ
ತ್ತಿಯು ವಿಶ್ವದೊಳಗಣ ಸಾರಾಸಾರವನ್ನು ವಿಂಗಡಿಸುವದು ಅಧ್ಯಾತ್ಮ
ಉನ್ನತಿಯ ಹಾದಿಯನ್ನೇ ಅರಿಯದುದಾದ ಮನವು ಸಮಾಧಾನವನ್ನು
ಹೊಂದದೆ ಬಿಸಿಲ್ಗುದುರೆಯನ್ನು ನೀರೆಂದು ತಿಳಿದು ಕೋಟಲೆಗೊಳ್ಳುವ
ಪಶುವಿನಂತೆ, ಅಸಾರ ರೂಪಗಳಾದ ವಸ್ತುಗಳ ಹಂಬಲದಿಂದ ಬಹಳವಾಗಿ
ಬಳಲುವದು. ನೀರು ಹಸರು, ಕೆಂಪು ಮೊದಲಾದ ಬೇರೆ ಬೇರೆಗಳಾದ
ಬಣ್ಣಗಳ ಸಂಸರ್ಗ ಮೂಲಕ ಆಯಾಯ ರೂಪುಗಳನ್ನು ಪಡೆಯುವಂತೆ
ಮನುಷ್ಯನ ಇಚ್ಛೆಯು ಮೊದಲು ಶುದ್ಧವಾಗಿರುವದು. ಅದು ಬಹಿರ್ಮು
ಖವಾಗಿ ಹೊರಗಣ ಬೇರೆಬೇರೆಗಳಾದ ವಿಷಯಗಳನವಲಂಬಿಸಿ ವನಿತೇಚ್ಛೆ
ಧನೇಚ್ಛೆ ಮುಂತಾದ ಹೆಸರುಗಳನ್ನು ಪಡೆಯುವದು. ಬಾಹ್ಯ ವಿಷಯ
ಗಳ ಹಂಬಲವುಳ್ಳ ಮನಸ್ಸು ಯಾವಾಗಲೂ ನಾನಾ ವಿಧ ಕಲ್ಪನೆಗೊಳ
ಗಾಗಿ ನಿಜವಾದ ಶಾಂತಿಯನ್ನು ಪಡೆಯದೆ ಕೊರಗುತ್ತಿರುವದು. ಆದರೆ
ಸಾರ ಭೂತವೆನ್ನಿಸುವ ಅಧ್ಯಾತ್ಮಿಕ ವಿಷಯದ ಕಡೆಗೆ ಹೊರಳಿದ ಅಂತರ್ಯ
ವೃತ್ತಿಯುಳ್ಳದಾದ ಮನಸ್ಸಾದರೋ ತೀವ್ರವಾಗಿ ಸುಖಶಾಂತಿಯನ್ನು
ಹೊಂದುವದು. ಇಷ್ಟೇ ಅಲ್ಲ, ಅಧ್ಯಾತ್ಮಿಕ ವಿಷಯದಲ್ಲಿ ವಿಶೇಷವಾಗಿ ಆಸ
ಕ್ತಿಯುಳ್ಳದಾದ ಚಿತ್ತವೃತ್ತಿಗೆ ಇಂಥಾದ್ದೇ ಇಷ್ಟೇ ಲಾಭವಾಗುವದೆಂದು
ಹೇಳಲಿಕ್ಕೆ ಬರುವದಿಲ್ಲ. ಆದರೆ ಅದನ್ನು ಸಾಧಿಸದಿರುವವರಿಂದ ಮಾತ್ರ
ಅಪರಿಮಿತ ಹಾನಿಯಾಗುವದು ನಾನು ಯಾರು? ಎಲ್ಲಿಂದ ಬಂದೆನು?
ನಾನು ಈ ವಿಧವಾಗಿ ಜನ್ಮವನ್ನೆತ್ತಿ ಸಂಸೃತಿ ಪ್ರವಾಹದೊಳು ಬಿದ್ದು ಹರಿದು
ಹೋಗುತ್ತಿರಲು ಕಾರಣವೇನು? ಕಡೆಗೆ ನಾನು ಎಲ್ಲಿಗೆ ಹೋಗಬೇಕಾಗಿ
ರುವದು? ದಿನಾಲೂ ಮಾನಸಿಕ ಶಾರೀರಕ ಕರ್ಮಗಳನ್ನು ಮಾಡಲೇ
ಬೇಕಾದುದೆಂಬೀ ಕೋಟಲೆಯು ನನ್ನ ಬೆಂಬಿಡದಿರಲು ಕಾರಣವೇನಿರ
ಬಹುದು? ಇದೆಲ್ಲದರ ನಿಯಂತೃತ್ವವು ಯಾರ ಕಡೆಗಿರುವದು? ಅವನು
ಇದೆಲ್ಲವನ್ನೂ ಮಾಡುವದರಲ್ಲಿ ಹೇತುವೇನಿರಬಹುದು? ಮುಂತಾದುದರ

ವಿಚಾರವಿಲ್ಲದವನು ಮನುಷ್ಯ ಕೋಟಿಯಲ್ಲಿ ಪರಿಗಣಿಸಲ್ಪಡುತ್ತಿರುವವನಾದರೂ ಮಾನವ ಜನ್ಮದ ಯೋಗ್ಯತೆಯನ್ನರಿಯದವನಾದುದರಿಂದ ಅವನು ಒಂದು ತರದ ಪಶುವೆಂತಲೇ ಹೇಳಿಸಿಕೊಳ್ಳಲ್ಪಡುತ್ತಾನೆ. ಮನುಷ್ಯ ಜನ್ಮದ ಮಹತ್ವವನ್ನರಿತು, ಅದರಿಂದ ಸಾಧಿಸಲ್ಪಡತಕ್ಕದ್ದು ಮುಖ್ಯವಾದುದು ಯಾವುದು, ಎಂಬೀ ಮುಂತಾದ ವಿಚಾರ ಪರಾಯಣನಾದವನಿಗೆ ಅಧ್ಯಾತ್ಮಿಕ ಜ್ಞಾನದಿಂದ ಈ ಮೇಲೆ ತೋರಿಸಲ್ಪಟ್ಟ ಎಲ್ಲದರ ಜಿಜ್ಞಾಸೆಯು ತೃಪ್ತವಾಗಿ, ಆ ಮೂಲಕ ವಿಶಿಷ್ಟತರವಾದ ಮಾನಸಿಕ ಹಾಗೂ ಶಾರೀರಕ ಸ್ವಾಸ್ಥ್ಯವು ಲಭಿಸುವದು. ಈಶ್ವರ ವಿಷಯಕವಾದ ಜ್ಞಾನದಿಂದ, ಸಾಮಾನ್ಯವಾಗಿ ತೋರುತ್ತಿರುವ ಕ್ಷುಲ್ಲಕ ಪದಾರ್ಥಗಳಲ್ಲಿಯು ಸಹ ಎಷ್ಟು ಅಲೌಕಿಕತ್ವವು ತುಂಬಿದೆಯೆಂತಲೂ ಈ ನಾಮ ರೂಪಾತ್ಮಕ ವಿಶ್ವ ಪ್ರಪಂಚ ನಿರ್ಮಾಣದಲ್ಲಿ ಅವನು ತೋರಿಸಿದ ಕೌಶಲ್ಯವು ಎಷ್ಟು ವಿಚಿತ್ರವಾಗಿರುವದೆಂತಲೂ ಎಂಬ ಮೊದಲಾದ ಪರಮೇಶ್ವರನ ಅಗಾಧವಾದ ಸಾಮರ್ಥ್ಯದ ಬಗ್ಗೆ ಮನುಷ್ಯನ ಬುದ್ಧಿವೃತ್ತಿಯು ಕುಂಠಿತವಾಗುವದಲ್ಲದೇ ತನ್ನಲ್ಲಿ ಅಹಂಮನ್ಯತೆಯು ಅಡಗಿ ಸಾರ್ವತ್ರಿಕವಾಗಿ, ಉಚ್ಚತಮವೂ ಸಾತ್ವಿಕವೂ ಆದ ಭಾವನೆಯು ಉಂಟಾಗುವದು. ಮನುಷ್ಯನಿಗೆ ಒಮ್ಮೆ ಈ ತರದ ಅಧ್ಯಾತ್ಮಿಕ ದೃಷ್ಟಿಯು ಪ್ರಾಪ್ತವಾಯಿತೆಂದರೆ ಅವನ ಬಲವೇ ಬೇರೆಯಾಗುತ್ತದೆ. ಈಶ ನಿರ್ಮಿತವಾದ ಈ ಪ್ರಪಂಚವು ಅಧ್ಯಾತ್ಮ ಭಾವನೆಯುಳ್ಳವನನ್ನು ಬಾಧಿಸಲಾರದು. ಪ್ರಪಂಚವು ಅಂದರೆ ನಾಮರೂಪಾತ್ಮಕ ವಿಸ್ತಾರವು. ಆತ್ಮಾನಾತ್ಮ ವಿವೇಕವುಳ್ಳವನಿಗಾದರೂ ಶರೀರಾದಿ ಪ್ರಪಂಚವಿರುವದಿಲ್ಲವೆಂತಲ್ಲ, ಆದರೂ ಅವನು ನಾಮರೂಪಾತ್ಮಕಗಳಾದ ಶರೀರಾದಿ ಆ ಅನಾತ್ಮ ಪದಾರ್ಥಗಳಲ್ಲಿ ನಾನು ನನ್ನದು ಎಂಬ ಅಹಂಕಾರ ಮಮಕಾರ ರಹಿತನಾಗಿರುವದರಿಂದ ಬಾಧಕವಿಲ್ಲ. ಆತ್ಮಾನಾತ್ಮ ವಿವೇಕ ಶೂನ್ಯನಿಗಾದರೋ ಆ ಶರೀರಾದಿ ಪ್ರಪಂಚವು ಬಾಧಕವಾಗಿರುವದು. ಆದ್ದರಿಂದಲೇ ಅಧ್ಯಾತ್ಮ ಸಂಸ್ಕಾರ ವೃತ್ತಿಯುಳ್ಳವನು ಯಾವಾಗಲೂ ತನ್ನಲ್ಲಿ ವಿವೇಕವು ಜಾಗರೂಕವಾಗಿರುವದರಿಂದ ಧೈರ್ಯವುಳ್ಳವನೂ ಸಮಾಧಾನಿಯೂ ಆಗಿರುತ್ತಾನೆ. ದೇಹ ಮುಂತಾದ ಅನಾತ್ಮ (ಅಸಾರ) ಪದಾರ್ಥಗಳಲ್ಲಿ ನಾನು ನನ್ನದು ಎಂಬ ತಾದಾತ್ಮ್ಯ ಬುದ್ಧಿಯುಳ್ಳವನಾದರೋ ಪ್ರಪಂಚಿ ಮೋಹಿ ಎನಿಸುತ್ತಾನೆ. ಇಂತಹ ಮನುಷ್ಯನೇ ಸಂಸಾರಿಯು, ಸಂಸಾರಿಯೇ ಬದ್ಧನು; ಸಂಸಾರಿಯೆನಿಸುವ ಜೀವನಿಗೆ ಎಂದೂ ಶಾಂತಿಯೇ ಇಲ್ಲ. ಯಾಕಂದರೆ ಪ್ರಾಪಂಚಿಕ ವಿಷಯಗಳ ಮೇಲಣ ಮೋಹವು ಆತ್ಮನ ಸಾಹಜಿಕ

ವಾದ ಶಾಂತಿಗೆ ಪ್ರತಿಬಂಧಕವಾಗಿದೆ. ಆದ್ದರಿಂದಲೇ ಬಲ್ಲವರು "ಮೋಹವೇ ಸಂಸೃತಿ ದುಃಖಕ್ಕೆ ಬೀಜ" ವೆಂದು ಹೇಳುತ್ತಾರೆ. ಇದರಿಂದ ವನಿತಾದಿ ಪ್ರಾಪಂಚಿಕ ವಿಷಯಗಳು ಬಂಧಕಗಳಲ್ಲ; ಅವುಗಳ ಮೇಲಿನ ಮೋಹವೇ ಜೀವನ ಸಂಸಾರ ದೆಟಿಯಾಟಕ್ಕೆ ಹೇತುವೆಂಬುದು ಸಿದ್ಧವಾಗುವದು. ಹೊರಗೆ ತೋರಿಕೆಗೆ ಮಾತ್ರ ಹೆಂಡತಿ, ಮಕ್ಕಳು, ಮನೆ ಮುಂತಾದುದನ್ನು ಬಿಟ್ಟು ಬಿಡಾಡಿಗಳಾಗಿ ತಿರುಗಾಡುನವರೆಲ್ಲ ಇತೋ ಭ್ರಷ್ಟಃ ತತೋ ಭ್ರಷ್ಟಃ ಎಂಬಂತಾಗಲು ವಿಷಯಗಳಲ್ಲಿಯ ಮನೋಗತ ವ್ಯಾಮೋಹವನ್ನು ಬಿಡದಿರುವಿಕೆಯೇ ಕಾರಣವೆಂದು ಹೇಳಬಹುದು. "ಮನ ವಿರಕ್ತಿಗೆ ಮುಕ್ತಿಯಲ್ಲದೆ ತನು ವಿರಕ್ತಿಗೆ ಇಲ್ಲ" ಎಂಬಂತೆ ವಿಷಯಗಳ ಮೋಹವನ್ನಳಿಯದವರು ಅಡವಿಯಲ್ಲಿ ಏಕಾಂಗಿಗಳಾಗಿರುತ್ತಿದ್ದರೂ ಅಶುದ್ಧ ಚಿತ್ತರಾಗಿಯೇ (ಸಂಸಾರಿಗಳಾಗಿ) ಯೇ ಇರುತ್ತಾರೆ. ಮನೆಗಳಲ್ಲಿ ಮಡದಿ, ಮಕ್ಕಳು ಮುಂತಾದವರಿಂದೊಡಗೂಡಿ ಪ್ರಪಂಚವನ್ನು ಮಾಡುತ್ತಿದ್ದರೂ ಆಧ್ಯಾತ್ಮ ಸಂಸ್ಕಾರ ವಿಶೇಷದಿಂದ ವ್ಯಾಮೋಹ ರಹಿತರಾಗಿರುವವರು ಶುದ್ಧಾಂತಃಕರುಣಿಗಳೂ ಜೀವನ್ಮುಕ್ತರೂ ಆಗಿರುತ್ತಾರೆ.

ಮೋಹವು ತೊಲಗಬೇಕಾದರೋ ದೋಷದೃಷ್ಟಿಯು ಬೇಕು; ಅಂದರೆ- ಯಾವ ವಿಷಯದಲ್ಲಿ ನಮಗೆ ಮೋಹವಿರುವದೋ ಅದು ಸುಖಕ್ಕೆ ಸಾಧನವೆಂಬ ಭಾವನೆ ಇರದಹೊರತು ಸಂಭವಿಸದು. ಅದೇ ವಿಷಯವೇ ನಮಗೆ ಪ್ರತಿಕೂಲವಾಗಿ ದುಃಖಕ್ಕೆ ಸಾಧನವೆಂದು ಯಾವಾಗ ತಿಳಿಯಲ್ಪಡುವದೋ ಆಗಳೇ ಆ ವಿಷಯದಲ್ಲಿ ಮೋಹಕ್ಕೆ ವಿರುದ್ಧವಾದ ದ್ವೇಷರೂಪ ದೋಷ ದೃಷ್ಟಿಯುಂಟಾಗುವದು. ಪ್ರತಿಯೊಂದು ವಿಷಯವು ಯಾವಾಗಲೂ ಸುಖಕ್ಕೇನೆ ಸಾಧನವಾಗಿರುವದೆಂದು ಹೇಳಲಾಗುವದಿಲ್ಲ; ಇಷ್ಟೇ ಅಲ್ಲ ಜಗತ್ತಿನಲ್ಲಿ ಆನಂದನಿಧಿಯಾದ ಪರಶಿವನ ಹೊರತು ಉಳಿದ ಯಾವ ವಿಷಯಗಳಾದರೂ ಅನಿತ್ಯ, ಜಡ, ದುಃಖರೂಪಗಳಾದುದರಿಂದ ಅವುಗಳೆಲ್ಲವೂ ಸುಖರೂಪಗಳೂ ಅಲ್ಲ. ಸುಖಕ್ಕೆ ಸಾಧನಗಳಂತೂ ಅಲ್ಲವೇ ಅಲ್ಲ. ಹಾಗಾದರೆ, ವಿಷಯಗಳು ಸುಖರೂಪಗಳಾಗದಿದ್ದರೆ ಹೋಗಲಿ, ಸುಖಕ್ಕೆ ಸಾಧನಗಳೂ ಆಗಲಾರವೆ? ಹಾಗಲ್ಲದ ಪಕ್ಷದಲ್ಲಿ, ದೊಡ್ಡ ದೊಡ್ಡ ಪಂಡಿತರೆನಿಸಿಕೊಳ್ಳುವ ಭೌತಿಕ ಸುಖವಾದಿಗಳು ದಡ್ಡರೇನು? ಅಂದರೆ ಅವರಿಗೆ ನಾವು ದಡ್ಡರೆಂದು ಹೇಳಲಾರೆವು. ಆದರೆ- ವಿಷಯಗಳೇ ಸುಖಕ್ಕೆ ಸಾಧನಗಳೆಂದು ಅವರು ಹಟಹಿಡಿದರೆ ಮಾತ್ರ ಅವರ

ಸ್ನ, ಮಳಲನ್ನ ಗಾಣದಲ್ಲಿ ಸುರುವಿ ತಿಪರೀವ ಎಣ್ಣೆಯನ್ನ ಪಡೆದು ಹಣ ವನ್ನ ಗಳಿಸಿ ಸುಖಿಯಾಗುವೆನೆಂಬ ಅತಿಮರುಳನ ಜೋಡಿಗೆ ಕುಳ್ಳಿರಿ ಸದಿರಲಾರೆವು. ತುಷ್ಯತು ದುರ್ಜನ ನ್ಯಾಯದಂತೆ, ವಿಷಯಗಳಿಂದ ಸುಖ ವುಂಟೆಂದೊಪ್ಪಿದರೂ, ತನ್ಮೂಲಕ ಈ ಜಗತ್ತಿನಲ್ಲಿ ಯಾವನು ತಾನೇ ಕೃತಾರ್ಥನಾಗಿದ್ದಾನೆ. ಹಾಗೂ, ವಿಷಯ ಸುಖವು ಹಂಗಿನದು. ವಿಷ ಯಗಳು ಮತ್ತು ಅವುಗಳನ್ನುಪಭೋಗಿಸತಕ್ಕ ಇಂದ್ರಿಯಾದಿಗಳು ಒಂ ದೇ ಕಾಲದಲ್ಲಿ ಸರಿಯಾಗಿ ಇದ್ದರೇನೆ ಅಲ್ಲವೆ? ಹಾಗಿದ್ದರೂ ಮನುಷ್ಯ ನ ಮನಸ್ಸು ಯಾವಾಗಲೂ ಒಂದೇತರದ ಒಂದೇವಿಷಯದ ಇಚ್ಛೆಯು ಳ್ಳದ್ದಾಗಿಯೂ ಅದೊಂದನ್ನೇ ತನಗೆ ಸುಖಸಾಧನವಾದುದನ್ನಾಗಿ ನಂಬು ವದೇ? ವಿಷಯಗಳಾದರೂ ಆತರದ ವಿಶ್ವಾಸಕ್ಕೆ ಪಾತ್ರಗಳಾಗಿವೆಯೊ? ಈ ದಿವಸ ಯಾವ ವಿಷಯವು ಸುಖಸಾಧನವಾದುದೆಂದು ತಿಳಿಯಲ್ಪಡು ತ್ತಿರುವದೋ ಮರುದಿವಸವೇ ಇಷ್ಟೇಅಲ್ಲ ಮರುಗಳಿಗೆಯಲ್ಲಿಯೇ ಅದೇ ವಿಷಯವು ತನಗೆ ದುಃಖವನ್ನುಂಟುಮಾಡುವದೆಂಬುದಾಗಿ ಮೋಹವಿದ್ದೆಡೆ ಯಲ್ಲಿ ದೋಷದೃಷ್ಟಿಯು ಬಂದು ಕುಳಿತುಕೊಳ್ಳುವದು. ಹೀಗೆಯೇ, ವಿಷ ಯಗಳು ನಿಯತಗಳಾದ ಸುಖಸಾಧನಗಳೆಂದು ಯಾವನೂ ಸಿದ್ಧಮಾ ಡಲಾರನು.

ಗುದ್ದಿಸಿಕೊಳ್ಳುವದೊಂದು ಸುಖಸಾಧನವೇ? ಅಲ್ಲ; ಆದರೂ, ವಾತ ರೋಗಿಯು ಅದನೊಪ್ಪುವನು. ಹಾಗೆಯೇ, ಸ್ವಸ್ವರೂಪದ [ಪರಮಾತ್ಮನ] ಜ್ಞಾನವಿಲ್ಲದವರು ಅಂದರೆ- ಅಜ್ಞಾನವೆಂಬ ರೋಗವುಳ್ಳವರು ಕಷ್ಟಕರ ಗಳಾದ ವಿಷಯಗಳನ್ನೇ ಸುಖಸಾಧನಗಳೆಂದು ಹೇಳುತ್ತಿರುವದು ಅಚ್ಚ ರಿಯಲ್ಲ. ಅಜ್ಞಾನವೆಂದರೆ- ಅನಿತ್ಯ, ಅಶುಚಿ, ದುಃಖಮಯಗಳಾದ ವಿಷ ಯಗಳಲ್ಲಿ ನಿತ್ಯ, ಶುಚಿ, ಸುಖಮಯ ಭಾವನೆಯು; ಈ ಭಾವನೆಯೇ ಮೋಹರೂಪವಾಗಿರುವದು.

ಅಸ್ಥಿಗತಜ್ವರವು, ಅರುಚಿ- ಬಾಯಾರಿಕೆ ಮೊದಲಾದ ವಿಕಾರಗಳಿಂ ದ ತಿಳಿಯಲ್ಪಡುತ್ತಿರುವಂತೆ, ಮನುಷ್ಯನ ಮನೋಗತವಾದ ವಿಷಯ ವ್ಯಾಮೋಹವು ಪ್ರತಿಕೂಲಾನುಕೂಲಗಳ ಸಂದರ್ಭಗಳಲ್ಲಿ ರಾಗದ್ವೇಷಾ ದಿಗಳ ಮೂಲಕ ಅರಿಯಲ್ಪಡುತ್ತದೆ. ಆ ಜ್ವರರೋಗ ಪೀಡಿತನ ಬಾಯಾ ರಿಕೆಯು ಅವನು ಬೇಡಿದ ಹಾಗೆಲ್ಲ ನೀರನ್ನು ಕೊಡುತ್ತ ಹೋದರೇನೇ ಅವನಿಗೆ ಸುಖವುಂಟಾಗುವದೆಂದು ಹೇಳುವದು ಮೂಢತನವು. ಹಾಗೆ

ಯೇ ಆತ್ಮನನ್ನು ಅಂಟಿಕೊಂಡಿರುವ ಅಜ್ಞಾನ (ಮೋಹ) ರೂಪವಾದ ಅಸ್ಥಿಗತಜ್ವರನಿವೃತ್ತಿಗೆ ಉಪಾಯವಾವುದೋ ಅದನ್ನು ಯೋಜಿಸದೆ ವಾಸನಾರೂಪ ಬಾಯಾರಿಕೆಯನ್ನು ಕಳೆಯುವದಕ್ಕೆಂದು ಮನಸ್ಸು ಬೇಡಿದ ಹಾಗೆಲ್ಲ ವಿಷಯಗಳೆಂಬ ನೀರುಗಳನ್ನು ಒದಗಿಸಿಕೊಡಲು ವಾಸನಾರೂಪ ಬಾಯಾರಿಕೆಯು ಮತ್ತಿಷ್ಟು ಹೆಚ್ಚಾಗುತ್ತಲೇ ನಡೆಯುವದೆಂಬ ಸಂಗತಿಯು ಸರ್ವಾನುಭವಸಿದ್ಧವಾಗಿರುವದು. ಇದೇ ಮಾತನ್ನು ಕೃಷ್ಣನು ಸಹ— 'ಮನದ ವಾಸನೆಯು, ಎಷ್ಟು ವಿಷಯಗಳನ್ನು ಉಪಭೋಗಿಸಿದರೂ ಶಾಂತವಾಗುವದಿಲ್ಲ; ಮತ್ತೇನಂದರೆ, ಉರಿಯಲ್ಲಿ ತುಪ್ಪವನ್ನು ಸುರುವಿದರೆ ಅದು ಹೇಗೆ ಮತ್ತಿಷ್ಟು ಧಗಧಗಿಸುವದೋ ಹಾಗೆಯೇ ಹೆಚ್ಚಾಗುವದೆಂದು ನುಡಿದಿದ್ದಾನೆ.

ವಿಷಯವಾಸನೆಯೆಂಬ ಪಿಶಾಚಗ್ರಸ್ತರಾಗಿರುವ ಸಹಸ್ರಾಧಿಪನೇನು, ಸಾಹುಕಾರನೇನು, ಸಾರ್ವಭೌಮನೇನು, ಇಂದ್ರನೇನು, ಬ್ರಹ್ಮನೇನು, ಯಾರಿಗೂ ನಿಶ್ಚಿಂತತೆಯೂ (ಶಾಂತಿಯೂ) ನಿಜಾನಂದವೂ ಇಲ್ಲವೇ. ಅವರೆ ವಿರತಿಯಿಂದಿತರ ಸಂಪದಸುಖವುಂಟೇ? ಎಂದು ನಿಜಗುಣಾರಾಧ್ಯನು ಹೇಳುತ್ತಿರುವ ಮೇರೆಗೆ, ವಿಷಯವ್ಯಾಮೋಹವಿಲ್ಲದಾತನೇ ಅಚ್ಚಸುಖಿಯು. ಇದಕ್ಕೆ ವಿಪರೀತವಾಗಿ, ಹೊಟ್ಟೆತುಂಬ ಕೂಳನುಂಡು ಕಣ್ಣುತುಂಬ ನಿದ್ದೆಮಾಡಿ, ಪುಸಿಲಾಟ ಮೊದಲಾದುದರಲ್ಲಿ ಕಾಲಕಳೆಯುವದೇ ಅಚ್ಚ ಸುಖವೆಂಬುದಾಗಿ ಬಡಬಡಿಸುವ ಹುಚ್ಚುಮನುಜರೀಗ ಹೆಚ್ಚಾಗುತ್ತಲಿದ್ದಾರೆ. ಮನವೆಳಸಿದ ವಿಷಯಗಳನ್ನು ಮನವಾರೆ ಉಪಭೋಗಿಸಲು ಅನುಕೂಲಗಳಾದ ಸಾಧನಸಾಮುಗ್ರಿಗಳು ಎಲ್ಲಿ ನೋಡಿದಡಲ್ಲಿ ಹೇಗೆ ಬೇಕೋ ಹಾಗೆ ದೊರೆಯುತ್ತಿರುವ ಈಗಿನ ಕಾಲವೇ ಸುಧಾರಿಸಿದ ಕಾಲವಂತೆ! ಹಿಂದಿನಕಾಲದ ಹಿಂದುಗಳ ಮಿದುಡು ಮದಡವಾಗಿತ್ತಂತೆ!! ಅಯ್ಯೋ ಅಜ್ಞಾನವೇ!!!

ಗುಡ್ಡವನ್ನೆಲ್ಲ ತೋಡಿ ಕಡೆಗೆ ಒಂದು ಇಲಿಯನ್ನು ಸಂಪಾದಿಸಿದನೆಂಬ ಗಾದೆಯಮಾತಿನ ಹಾಗೆ, ನೆಲ - ನೀರು - ಬೆಂಕಿ - ಗಾಳಿ ಮುಂತಾದ ಜಡಪದಾರ್ಥಗಳನ್ನೆಲ್ಲ ಮಥಿಸಿ ವಿಷಯೋಪಭೋಗದ ಎಷ್ಟು ಸಾಮುಗ್ರಿಗಳನ್ನು ಹೆಚ್ಚಿಸಿದರೂ ಕಡೆಗೆ ಅದರಿಂದ ಸುಖಭಾಸ ಮಾತ್ರ ದೊರೆದಂತಾಗುವದಲ್ಲದೇ ನಿಜವಾದ ಸುಖವು ಲಭಿಸುವದುಂಟೇ? ವಿಷಯಜನ್ಯ ಸುಖಾಭ್ಯಾಸಕ್ಕೂ ನಿರ್ವಿಷಯರೂಪವಾದ ನಿಜಾನಂದಕ್ಕೂ ಪೂರ್ವ

ಪಶ್ಚಿಮ - ಪೂರ್ವ- ಆವಾಸಿಗಳಿರುವಷ್ಟು ವ್ಯತ್ಯಾಸವಿದೆ. ರೋಗಿಯು ಎದುರಿಗೆ ಅಪಥ್ಯ ಪದಾರ್ಥಗಳನ್ನು ಇರಿಸಿದ್ದರೆ, ಮೊದಲೇ ಬಾಯಿ ಸವಿ ಗೆಳೆಸುವ ಆವನು ಅವುಗಳನ್ನು ತಿನ್ನದಿರುವನೇ? ತಿಂದಕೂಡಲೇ ರೋಗವು ಮತ್ತಿಷ್ಟು ಉಲ್ಬಣವಾಗದಿರುವದೇ? ಹಾಗೆಯೇ, ವಿಷಯಗಳಲ್ಲಿ ಪ್ರವೃತ್ತಿಸುವದೇ ಸ್ವಾಭಾವಿಕವಾದ ಮನೋವೃತ್ತಿಯುಳ್ಳ ಜೀವಿಗಳಿಗೆ ಅವರಿಷ್ಟಪ್ರಕಾರ ವಿಷಯಸುಖಸಾಧನಗಳನ್ನು ಕಲ್ಪಿಸಿ ಕೊಟ್ಟ ಹಾಗೇ ಆವರ ಸಂಸೃತಿರೋಗವು ಉಲ್ಬಣವಾಗುವದಲ್ಲದೇ ನಿಜಾನಂದಕ್ಕೆ ಎರವಾಗಿರುವದಲ್ಲವೇ? ಇದರಿಂದ, ಭೌತಿಕಸುಖವಾದಿಗಳನ್ನು 'ಸ್ವಯಂನಷ್ಟಃ ಪರಾನ್ನಾಶಯತಿ, ಎಂಬ ನಾಣ್ಣುಡಿಗೆ ಗುರಿಯಾದವರೆಂದು ಹೇಳಬಾರದೇಕೆ? ಈಗಾದರೂ ಎಲ್ಲರೂ ವಿಮಾನವಲ್ಲಿ ಕುಳಿತು ವಿಹರಿಸುವ ಕಾಲವು; ಮುಂದೆ ಇದಕ್ಕಿಂತಲೂ ಮಿಗಿಲಾದ ವ್ಯಾವಹಾರಿಕ ಸೌಕರ್ಯಗಳೂ ಒದಗಿಸಲ್ಪಡುವದಾದರೂ ಅಷ್ಟುಮಾತ್ರದಿಂದಲೇ ಜೀವಿಗಳು ತೃಪ್ತರಾಗುವದಕ್ಕೆ ಬದಲು ಅದಕ್ಕಿಂತಲೂ ಹೆಚ್ಚಿನ ಸೌಕರ್ಯಗಳನ್ನು ಕಂಡುಹಿಡಿಯುವದಕ್ಕಾಗಿ ಈಗಿನಂತೆಯೇ ಹೆಣಗಾಡುವವರಾಗಿ, ಮತ್ತೂ ಅಚ್ಚಸುಖದ ಹಾದಿಯನ್ನೇ ಬಿಟ್ಟು ಬಹು ವಿಧವಾದ ಕೋಟಲೆಗೊಳಗಾಗಿ ಬಳಲುವರೆಂಬ ಭವಿಷ್ಯವನ್ನು ಈಗಲೇ ಧಾರಳವಾಗಿ ಹೇಳಲು ಅಡ್ಡಿಯೇನು?

ಹೂವು, ಗಂಧ, ಹೆಣ್ಣು ಮುಂತಾದ ವಿಷಯ ಜನ್ಯ ಸುಖವನ್ನೇ ಮುಖ್ಯವಾದ ಧ್ಯೇಯವಾಗಿಟ್ಟುಕೊಂಡಿರುವವರು, ಕೇವಲ ಸ್ವಾರ್ಥಿಗಳಾಗಿ ವ್ಯವಹರಿಸುತ್ತಾರೆ. ಇವರು ತಮ್ಮ ವಿಷಯೋಪಭೋಗಕ್ಕೆ ತುಸುವಾದರೂ ಕೊರತೆಬರಬಾರದೆಂಬ ಹೇತುವಿನಿಂದ ಹಗಲಿರುಳೆನ್ನದೇ ಆ ಬಗ್ಗೆ ಬಹು ಶ್ರಮಪಟ್ಟು ಸ್ವಕಾರ್ಯವನ್ನೇ ಸಾಧಿಸಿಕೊಳ್ಳುತ್ತಾರೆ. ಇಂಥವರಿತ ಪಾರಮಾರ್ಥಿಕವಿಚಾರವೆಂದರೆ ಸ್ವಪ್ನೇಪಿ ಪರಿಚಯವಿರುವದಿಲ್ಲ; ಅಥವಾ ಯಾರಾದರೂ ತದ್ವಿಷಯಕವಾಗಿ ಒಂದೆರಡು ಮಾತುಗಳನ್ನು ಪ್ರಸ್ತಾಪಿಸಿದರೆ ಅದನ್ನು ಇವರು ಕಿವಿಯಲ್ಲಿ ಸಹ ಹಾಕಿಕೊಳ್ಳುವದಿಲ್ಲ. ಅಕಸ್ಮಾತ್ತಾಗಿ ಕಿವಿಗೆ ಬಿದ್ದರೂ ಈ ವಿಷಯಾಂಧರು– ಅದರಲ್ಲೇನಿದೆ ಗೊಡ್ಡುವೇದಾಂತ, ಬಿಡು ಆ ಮಾತಿನಿಂದ ನಮಗೇನು? ಎಂದು ಮೊದಲಾಗಿ ಹೀಯಾಳಿಸಿ ಬಿಡುವರು. ಇಷ್ಟೇಅಲ್ಲ, ವೇದಾಂತವೆಂದರೆ– ದುಡಿಯಲಾರದ ಸೋಮಾರಿಗಳೂ, ವ್ಯವಹಾರಿಕ ಜ್ಞಾನವಿಲ್ಲದ ಮದಡರೂ

ಏನೇನೋ ಭಾವಿಸಿಕೊಂಡು ಒರೆದಿಟ್ಟಿರುವ ಕೆಲಸಕ್ಕೆ ಬಾರದ ಮಾತುಗಳೇ ಸರಿ; ಎಂಬುದಾಗಿ, ಒರಹದಿಂದ ಹುಲುಬುಗೊಳಿಸುತ್ತಲೂ ಇದ್ದಾರೆ. ಆರ್ಯಸಂಸ್ಕೃತಿಗೆ ದೂರರಾಗಿರುವವರ ಬಾಯಿಂದ ಈ ತರದ ನುಡಿಗಳು ಹೊರಡುವದು ಸಾಹಜಿಕವಾದುದೇ ಸೈ; ಆದರೆ ಯಾರಿಗೆ ಪರಮಪುರುಷಾರ್ಥವೇ ( ಪಾರಮಾರ್ಥಿಕ ಸುಖ, ಮೋಕ್ಷ) ತಮ್ಮ ಮುಖ್ಯವಾದ ಗುರಿಯಾಗಿದ್ದಿತೋ ಅಂತಹ ಆರ್ಯರ ವಂಶೀಯರೆಂದು ಹೇಳಿಸಿಕೊಳ್ಳಪಡುತ್ತಿರುವವರು ಸಹ ವಿಷಯಾಸಕ್ತತೆಯಿಂದ ಕಂಗೆಟ್ಟು ಕಂಗಾಲರಾಗಿ ತಾವು ಯಾರೆಂಬುದರ ಪರಿವೆಯಿಲ್ಲದೆ ಮನಬಂದಂತೆ ವ್ಯವಹರಿಸಲುದ್ಯುಕ್ತರಾಗಿಹುದಾದರೋ, ಎಮ್ಮಿಕರದ ಜತೆಯಿಂದ ಆಕಳಕರವೂ ಎಂಬ ಗಾದೆಯ ಮಾತನ್ನು ನೆನಪಗೆ ತಂದುಕೊಡುವದಿಲ್ಲವೇ? ಈ ಮೇಲೆ ಉದಾಹರಿಸಲ್ಪಟ್ಟಿರುವ ಕನ್ನಡಿಗ ಸಂತನ ನುಡಿಯಂತೆ, ಅಚ್ಚ ಸುಖವು ದೊರೆಯುವ ಹಾದಿಯನ್ನೇ ಬಿಟ್ಟು ಲೌಕಿಕ (ಬಾಹ್ಯ) ವಿಷಯುಗಳ ಬೆನ್ನು ಹತ್ತಿ ಅವುಗಳಿಂದಲೇ ನಮಗೆ ಸುಖವುಂಟೆಂದು ನಂಬಿ ಹಗಲಿರುಳು ಹಲವು ಹುನ್ನಾರದಲ್ಲಿ ತೊಡಗಿ ತಳಮಳಿಸುವವರ ಬಾಳು, ಭ್ರಮೆಮೂಲಕವಾದುದೇ ಸೈ.

ಮಿತಿಮೀರಿದ ವಿಷಯುವಾಸನಾರೂಪಪ್ರವಾಹಕ್ಕೆ ಬಿದ್ದಿರುವ ಈಗಿನ ಕಾಲದ ಜನದ ಸ್ಥಿತಿಯು, ಒಡಲು ತುಂಬಿ ಹರಿಯುವ ಹೊಳೆಯ ಶೆಳವಿಗೆ ಶಿಲ್ಕಿದವನ ಹಾಗಿರುವದು. ವೃಕಾಗ್ನಿಯೆಂಬ ದೋಷದೂಷಿತವಾದ ಉದರ ವುಳ್ಳವನಿಗೆ ಹಸಿವು ಹಿಂಗದಿರುವಂತೆ, ವಿಷಯುವಾಸನಾದೋಷದೂಷಿತವೃತ್ತಿಯುಳ್ಳವರಿಗಾದರೂ ತೃಪ್ತಿಯೆಂಬುದು ಎಂದೂ ಇಲ್ಲ. ದೇವಾಸುರರೊಂದುಗೂಡಿ ಜಲಮಥನ ಮಾಡಿದರು ಸಹ ಅವರ ಪ್ರಯತ್ನಕ್ಕೆ ಸರಿಯಾಗಿ ಕೆಲವು ವಿಷಯೋಪಭೋಗ ಸಾಮುಗ್ರಿಗಳು ದೊರೆತವು; ಆದರೂ ಅವರು ಅಷ್ಟಕ್ಕೇ ಹಿಂದಕ್ಕೆ ಸರಿಯದೇ ಮತ್ತೂ ಕಡಲನ್ನು ಕಡೆದುದರಿಂದ ಕಡೆಗೆ ವಿಷ (ದುಃಖ) ರೂಪ ಫಲವನ್ನು ಹೊಂದಿ ಕಂಗೆಟ್ಟು ಕಂಗಾಲಾಗಿ ಹೋದರಲ್ಲವೇ? ಹಾಗೆಯೇ, ಜಡಗಳೂ ಅದಿತ್ಯಗಳೂ ಆದ ಅಸಾರರೂಪ ಅನಾತ್ಮಪದಾರ್ಥಗಳ ಮಥನಾಸ್ತಕರಾಗಿ ತೃಪ್ತಿಪಡೆಯದೆ ದಿನದಿನಕ್ಕೆ ಹೆಚ್ಚಾಗಿ ವಿಷಯೋಪಭೋಗಸಾಮುಗ್ರಿಗಳನ್ನೇ ಕಂಡು ಹಿಡಿಯಲು ಯತ್ನ ಮಾಡುತ್ತಿರುವವರ ಗಡಬಿಡಿಯು ಗದ್ದಲದ ಸದ್ದು ಇಂದಿಲ್ಲ ಮುಂದೆ ಕೆಲವೆಡೆಯಲ್ಲಿಯಾದರೂ ಕ್ರಮೇಣ ಅಡಗಬಹುದು. ಆ

ಗಾದರೂ, ಹಿಡೋ ನಾವು ಹಾದಿಯನ್ನೇ ತಪ್ಪಿದ್ದೇವೆ; ಎಚ್ಚೆತ್ತು ಅಚ್ಚ ಸುಖದ ಕಡೆಗೆ ಹೊರಳದಿರಲಾರರು.

ಮುಂದಿನ ಮಾತು ಮುಂದೆ, ವಾಚಕರೇ! ನೀವು ಯಾರು? ಈಗ ನಿಮ್ಮ ಕೈಯಲ್ಲಿ ಏನಿರುವದು? ನೀವು ಮನುಷ್ಯರು: ನಿಮ್ಮ ಮನಸ್ಸಿನ ಒಲವನ್ನು ಪಾರಮಾರ್ಥಿಕ [ಸತ್ಯ] ಸುಖದ ಕಡೆಗೆ ಹೊರಳಿಸಿ, ನಿಮ್ಮ ಆತ್ಮೋನ್ನತಿಯನ್ನು ಪಡೆಯುವದು ನಿಮ್ಮ ಕೈಯಲ್ಲಿದೆ. ಇದು ನಿಜವೋ? ಅಥವಾ ನೀವು ಯಾರು? ಅನಿತ್ಯ, ಅಶುಚಿ, ದುಃಖರೂಪ ಅನಾತ್ಮ ವಿಷಯಗಳಿಗೆ ಹೇಸಿ, ಮನುಷ್ಯ ಜನ್ಮವನ್ನು ಸಾರ್ಥಕಗೊಳಿಸಲುದ್ಯುಕ್ತರಾದ ಮುಮುಕ್ಷುಗಳಲ್ಲವೇ? ಅದು ಹೇಗೆಂದರೆ- ಈಗ ನಿಮ್ಮ ಕೈಯಲ್ಲಿ ಏನಿದೆ? **'ಶಿವಾನುಭವ,'** ಎಂಬ ಸದ್ಗ್ರಂಥವಿದೆಯಲ್ಲವೆ? ಇದು ನಿಮ್ಮ ಅಂತರಂಗದೊಳಗಣ ಅಚ್ಚ ಸುಖದ [ಪರವಸ್ತುವಿನ] ಪ್ರಾಪ್ತಿಯ ಬಯಕೆಯನ್ನು ತೋರ್ಪಡಿಸುತ್ತಿದೆಯಲ್ಲವೇ? ಶಿವನೇ ಪರವಸ್ತುವು, ತದವ್ಯತಿರಿಕ್ತವಾದುದೆಲ್ಲವೂ ಅಶಿವಾತ್ಮಕವಾದುದು.; ಅಂದರೆ- ಶಿವನು ಅಚ್ಚಸುಖದ ನಿಧಿಯು: ನಿಜಾನಂದರೂಪನಾದ ಶಿವನ ಸಾಕ್ಷಾತ್ಕಾರವುಳ್ಳವನು ನಿತ್ಯತೃಪ್ತನಾಗುತ್ತಾನೆ. ಸಾಕ್ಷಾತ್ಕಾರ ಅಂದರೆ- ಅನುಭವವು; ಇಂತಪ್ಪ ಶಿವನ ಅನುಭವ (ಶಿವಾನುಭವ) ದಿಂದಲೇ ನೀವು ನಿಜವಾದ ಸುಖವನ್ನು ಹೊಂದಿ ನಿತ್ಯ ಶಾಂತರೆನಿಸುವಿರಿ. ಛಾಂದೋಗ್ಯದಲ್ಲಿ- ತ್ರಿಲೋಕ ಸಂಚಾರಿಯೆಂದು ಸುಪ್ರಸಿದ್ಧನಾದ ನಾರದನು ಎಲ್ಲಕಡೆಯಲ್ಲಿಯೂ ಯಾವದರಿಂದಲೂ ನಿಜಸುಖ ಶಾಂತಿಯನ್ನು ಪಡೆಯದೆ ಕೊನೆಗೆ ಶ್ರೀ ನಂದಿಕೇಶ್ವರ ಶಿಷ್ಯನೂ ತನಗೆ ಅಣ್ಣನೂ ಆದ ಸನತ್ಕುಮಾರನ ಬಳಿಗೆ ಹೋಗಿ, ಎಲೈ ಅಚ್ಚಸುಖಿಯೇ! ನನಗಾವರೂ ನಿಜಾನಂದವೂ ಶಾಶ್ವತವಾದ ಶಾಂತಿಯೂ ದೊರೆಯಲು ಉಪಾಯವೇನು? ಎಂದು ಬಿನ್ನಹ ಮಾಡಿಕೊಳ್ಳಲು, ಆಗ ಆ ಅನುಪಮಾನಂದಾಬ್ಧಿಯು--ಅಯ್ಯಾ ನಾರದನೇ, " ಯಾವ ಪರವಸ್ತುವುಂಟೋ ಅದುವೇ ನಿಜಾನಂದರೂಪವಾದುದು; ಅದಕ್ಕಿಂತ ಬೇರೆ ಯಾವುದೆಲ್ಲವೂ ಅತೃಪ್ತಿಕರವಾದುದಾದ್ದರಿಂದ ಅನಿತ್ಯವೂ ದುಃಖರೂಪವೂ ಆಗಿರುವದು. ನೀನು ನಿಜವಾದ ಆನಂದವನ್ನು ಪಡೆದು ನಿತ್ಯತೃಪ್ತನಾಗುವ ಒಳ್ಳೇ ಹಂಬಲವುಳ್ಳವನಾಗಿರುವ ಪಕ್ಷದಲ್ಲಿ, ಈಗಳೇ ಪರವಸ್ತುವಿನ ಸಾಕ್ಷಾತ್ಕಾರ (ಶಿವಾನುಭವ)ದಕಡೆಗೆ ನಿನ್ನ ಮನೋವೃತ್ತಿಯನ್ನು ಹೊರಳಿಸು. ಹಾಗೂ ಅದು ಲಭಿಸುವ ಬಗ್ಗೆ ಯೋಗ್ಯವಾದ ಯತ್ನವನ್ನೂ

ಮಾಡುವವನಾಗು; ಅಂದರೆ ಮಾತ್ರ, ನಿಜಸುಖಶಾಂತಿಯನ್ನು ಹೊಂದಬೇ
ಕೆಂಬ ನಿನ್ನ ಮನೋರಥವು ಕೈಗೂಡುವದು. ಮತ್ತು ಅದರಿಂದ ನೀನು
ಕೃತಾರ್ಥ ಆಗುವಿ, ಎಂದು ಮುಂತಾಗಿ ಬೋಧಿಸಿರುವನು. ಜಗತ್ತಿನ
ಲ್ಲಿಯಾದರೋ ಯಾವಾಗಲೂ ಪ್ರತಿಯೊಂದು ಪ್ರಾಣಿಯೂ ಸುಖವನ್ನೇ
ಬಯಸುವದಲ್ಲದೆ ದುಃಖವೆಂಬುದು ಲೇಶವಾದರೂ ಬೇಡ; ಅದರೆ, ಆ ಸುಖ
ವೆಂಬುದಾದರೋ ಎಂದೂ ಕೆಡದಿರುವಂತಹದಾಗಿರಬೇಕು, ಎಂಬುದೇ
ಸುಖಾಭಿಲಾಷಿಗಳಾದ ಸರ್ವರ ಮನೋಗತಾಭಿಪ್ರಾಯವಾಗಿದೆ. ಆದರೂ
ಬಯಿಕೆಗನುಸಾರವಾದ ಸಾಧನ ಪ್ರವೃತ್ತಿಯಿರಬೇಕಾದುದು ನ್ಯಾಯವಲ್ಲ
ವೆ? ಸಾಧ್ಯಕ್ಕೆ ಪ್ರತಿಕೂಲವಾದ ಸಾಧನದಿಂದ ಮನೋರಥವು ಫಲಿಸು
ವದುಂಟೆ? ವಿಜಾಪುರದಿಂದ ಮೂಡಣಕ್ಕಿರುವ ತಾಳೀಕೋಟೆಗೆ ಹೋಗ
ಬೇಕೆಂಬ ಬಯಿಕೆಯುಳ್ಳಾತನು, ಪಡುವಣಕ್ಕಿರುವ ಪ್ರತಿಕೂಲವಾದ ಅಥ
ಣಿಯ ಹಾದಿಯನ್ನು ಅನುಸರಿಸಿ ನಡೆದರೆ ಅವನ ಮನೋರಥವು ಈಡೇ
ರುವದೇ? ಹಾಗೆಯೇ, ನಿಜಸುಖದ ಬಯಿಕೆಯೇನೋ ಎಲ್ಲರಿಗೂ ಇದ್ದೆ
ಇರುವದು ಸಾಹಜಿಕವು. ಆದರೆ ಆದರ ಹಾದಿಯನ್ನೇ ತಪ್ಪಿ ನಡೆಯು
ವದಾದರೆ 'ಕಲ್ಪಕೋಟಿಶತೈರಪಿ, ಯಾವನಿಗೂ ಅದು ಲಭಿಸದೆಂಬುದು
ಸಿದ್ಧಾಂತವು. ಅದು ಕಾರಣವೇ, ನಿತ್ಯ ತೃಪ್ತಿಯ ಹಂಬಲವುಳ್ಳ ಅಸ್ಮದಾ
ದಿ ಜೀವಿಗಳಲ್ಲಿ ಯಾರಾದರೂ ಸರಿಯೇ; ಹಿಂದೆ- ಇಂದು- ಮುಂದೆ, ಎಂ
ದಾದರೂ ನಿತ್ಯಾನಂದ ಘನವೆನಿಸುವ ಪರವಸ್ತು ಸಾಕ್ಷಾತ್ಕಾರ (ಶಿವಾನು
ಭವ) ವನ್ನು ಪಡೆಯಲೇಬೇಕು; ಆ ಬಗ್ಗೆ ಯತ್ನಮಾಡುವ ಬಗೆಯಾವು
ದೆಂದರೆ ಅವಿಚಾರ ರಮಣೀಯಗಳಾದ ಅನಾತ್ಮ ಪದಾರ್ಥಗಳ ವ್ಯಾಮೋ
ಹವನ್ನು ಮೆಲ್ಲಮೆಲ್ಲಗೆ ಬಿಡಲೇಬೇಕು; ಈ ತರದ ಅನುಸಂಧಾನಾತ್ಮಕ
ವ್ಯಾಸಂಗಕ್ಕೆ ಸಂಬಂಧಪಟ್ಟ ಶ್ರವಣ ಮನನ ನಿಧಿಧ್ಯಾಸಗಳೂ ಕರಣ
ತ್ರಯದಲ್ಲಿ ತದ್ವಿಷಯಕವಾದ ಭಕ್ತಿ ವ್ರತ ಅರ್ಚನ ಧ್ಯಾನ ಜ್ಞಾನಗಳೆಂ
ಬ ಶಿವಯೋಗಾಚರಣಗಳೂ ಅನುಷ್ಠಿಸಲ್ಪಡುತ್ತಲೇ ಇರಬೇಕು. ಅಂತು,
ಕಾಲತ್ರಯದಲ್ಲಿ ಯಾರಿಗಾದರೂ **ಶಿವಾನುಭವದ** ಅವಶ್ಯಕತೆಯುಂಟು

# ಲಿಂಗ ಹೋದರೆ ಆತ್ಮಘಾತ ಮಾಡಬಹುದೋ?

**ಲೇಖಾಂಕ. ೨**

ಲೇಖಕ:— ಸಿದ್ಧರಾಮಪ್ಪಾ ದುಂಡಪ್ಪಾ ಪಾವಟೆ. ಬಿ, ಎ, ಎಲ್ ಎಲ್. ಬಿ.
ಹುಬ್ಬಳ್ಳಿ

**ನೇತ್ರದಿಂ ಮನಮಂ ಮನಸಿನಿಂ।**
**ಗಾತ್ರಸೂತ್ರಾನಿಲನನಲ್ಲಿಂ।**
**ಶ್ರೋತ್ರಮಂ ಸ್ಪರ್ಶನವ ರಸನೆಯ ನಾಸಿಕೆಯ ನಿಡಿದು॥**
**ಪಾತ್ರಗೊಂಡಾ ಕಾರಣಾಂಗವ।**
**ನಾತ್ರಿ ಪಾಶಂಗಳನು ಪರಿವೃತ।**
**ಗೋತ್ರಧರಜಾತಾರಿಲಿಂಗನೆ ಮೆರೆಯ ಮೈದುಂಬಿ॥**

ಪುನರ್ಲಿಂಗಧಾರಣೆಗೋಸ್ಕರ ಕೆಳಗೆ ಕಾಣಿಸಿದ ಒಂದು ವಚನವಿದ್ದು ಅದನ್ನು ಇಲ್ಲಿ ವಿಚಾರಿಸುವಾ.

"ಗುರು ಕಾರುಣ್ಯವುಳ್ಳ ಸದ್ಭಕ್ತನ ಲಿಂಗ ಓಸರಸಿದೊಡೆ ವ್ರತಗೇಡಿ ಎಂದು ಕಳೆಯಬಾರದು। ಮುಂದೆ ಗುರುಕಾರುಣ್ಯಯುಂಟಾಗಿ॥ಸಾಕ್ಷಿ॥ ಶುಭ್ರಂ ಸುಲಭಂ ಶುದ್ಧಂ ಸಹಸ್ರಜನಿಪಾವನಂ" ಯೆಂದುದಾಗಿ. ಮತ್ತೆ ॥ಸಾಕ್ಷಿ॥ ಅಲಿಂಗೀ ಲಿಂಗ ರೂಪೇಣಯೋ ಲಿಂಗಮುಪಜೀವತಿ। ಸ ಪಚ್ಯತಿ ಮಹಾಘೋರೇ ನರಕೇ ಕಾಲ ಮಕ್ಷಯಂ" ಎಂದುದಾಗಿ, ಶಸ್ತ್ರ ತಾಡನ ದಿಗ್ಬಲಿ ದಹನ ಈ ಆರರಲ್ಲಿ ಸತ್ತರೆ, ಅಘೋರ ನರಕದಲ್ಲಿಕ್ಕುವ ನಮ್ಮ ಕೂಡಲ ಚನ್ನಸಂಗಮ ದೇವ.

ಎಂಬೀ ವಚನವು ಲಿಂಗ ಕಳೆದ ಭಕ್ತನು ಮತ್ತೊಮ್ಮೆ ಲಿಂಗಧಾರಣವನ್ನು ಹೊಂದಬೇಕೆನ್ನುವಲ್ಲಿ ಹವಣಿದೆ

ಈ ವಚನವು ನನ್ನ ಮತಕ್ಕೆ ಬಲದಾದೊಂದು ಬಿಗುಹನ್ನು ಸಡಿಲಿಸುವಂತೆ ತೋರುತ್ತದೆ. ಆದರೆ ನಿಜವಾಗಿ ನನ್ನ ಪಕ್ಷವನ್ನು ಭದ್ರಗೊಳಿಸಲಿದೊಂದು ಮಹತ್ವದ ಪ್ರಮಾಣವಾಗಿದೆ.

## ಶಿಶು ಲಿಂಗಧಾರಣ.

**ಬೀದಿಯ ಬಸವಂಗೆ ದೇಗುಲ ಪಶುವಿಂಗೆ ಹುಟ್ಟಿದ ಕರುವುಗಳು ಬಸವಿ ಬಸವಪ್ಪಗಳಪ್ಪವೆ? ಲಿಂಗ ಮುದ್ರೆಯನೊತ್ತಿದನ್ನಕ್ಕರ? ಭಕ್ತಂ**

ಗೆಯು ಭಕ್ತಿಗೆಯು ಹುಟ್ಟಿದ ಮಕ್ಕಳೆಂದನು ಸರಣೆಯ ಮಾಡಿದೊಡೆ ಅಘೋರ ನರಕ ವೆಂದು ನಮ್ಮ ಕೂಡಲ ಚನ್ನಸಂಗಯ್ಯನ ವಚನ.

"ಶಿವ ಭಕ್ತರಲ್ಲಿ ಗರ್ಭೋತ್ಪತ್ತಿಯಾದ ಶಿಶುವಿಂಗೆ ಪಾದೋದಕದಿಂದ ಜಳಕವ ಮಾಡಿಸುವುದು. ವಿಭೂತಿಯ ಪಟ್ಟಮಂ ಕಟ್ಟಿ ಲಿಂಗ ಸಾಹಿತ್ಯವ ಮಾಡಿ ಪ್ರಸಾದದ ಎಣ್ಣೆ ಬೆಣ್ಣೆ ಹಾಲು ತುಪ್ಪವ ನೆರದು ಸಲಹುವುದೆ ಆಚಾರ. ಅದಕ್ಕೆ ಇರುಳು ಗಾಳಿ ಭೂತ ಸೋಂಕಿತೆಂದು ಕಾಣಿಕೆಯ ಬೆಸಗೊಂಡು ಲೌಕಿಕಾಚಾರವ ಮಾಡುವ ಭಕ್ತಂಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ ಪಾದೋದಕವಿಲ್ಲ ಪ್ರಸಾದವಿಲ್ಲ. ಅವಂಗೆ ಮುಕ್ತಿಯಿಲ್ಲ. ಇದನರಿದು ಅಷ್ಟಾವರಣ ಪಂಚಾಚಾರದಲ್ಲಿ ನಚ್ಚು ಮಚ್ಚು ಅಚ್ಚೊತ್ತಿದಂತಿಲ್ಲದವರ ಮೆಚ್ಚುವರೆ ನಮ್ಮ ಕೂಡಲ ಚನ್ನ ಸಂಗಯ್ಯನ ಶರಣರು?"

"ಸದ್ಭಕ್ತರಲ್ಲಿ ಹುಟ್ಟುವ ಮಕ್ಕಳು ಭವಿಯನಾಚರಿಸಿದೊಡೆ ಪಂಚ ಮಹಾಪಾಪವೆಂದುದು ಗುರು ವಚನ ॥ ಸಾಕ್ಷಿ ॥ ತಾಲಷೋಡಶಭಾಗೇನ ತೃಣಾಗ್ರಂ ಬಿಂದುರುಚ್ಯತೇ ಅಣು ಮಾತ್ರಪ್ರಮಾಣೇನ ರೌರವಂ ನರಕಂ ವ್ರಜೇತ್ ಎಂದುದಾಗಿ ಇದುಕಾರಣ ಕೂಡಲ ಚನ್ನ ಸಂಗಯ್ಯ ನಿಮ್ಮ ಶರಣರಿಗೆ ಸಂತಾನವಿಲ್ಲದೆ ಹೋಗಲಿ"

ಇಂತೆಂದು ಶ್ರೀಚನ್ನಬಸವನ ವಚನಗಳಿವೆ. ಇವುಗಳ ವಿವರವನ್ನು ತಿಳಿದೊಡೆ ಈ ವಿಷಯದ ತೊಡಕು ಸಡಿಲುವುದು.

ಸಂಸಾರವತ್ತಣಿಂದ ಹೇಸಿ ಹಿಂದೆಗೆದು ಗುರುವ ಸಾರಿ ಶಿವಲಿಂಗಧರನಾಗಲು, ಗುರುವು "ಮಗನೆ ನಾನು ಕೊಟ್ಟ ಲಿಂಗವಿದನು ಹಿಂಗದೆ ಅಂಗವಲ್ಲಿ ಧರಿಸುವ ಪರಿಯನ್ನು ಲಾಲಿಸು ಈ ಲಿಂಗಕ್ಕೆ ನಿನ್ನ ಅಂಗವೆ ಪೆಜ್ಜೆ ಆಚಾರವೆ ಶಿವಘಾರ. ಆಚಾರದ ಆಧಾರವಿಲ್ಲದೆ ಲಿಂಗವು ಅಂಗಲೀನವಾಗದು. ಅಂಗವಲ್ಲಿ ಲೀನವಾಗುವುದರಿಂದಲೆ ಲಿಂಗವೆನಿಸಿತು.

ಆಚಾರವು ಸುತ್ತಿಸುಳಿವ ನಿನ್ನ ಮನವನ್ನೂ ಪ್ರಾಣವನ್ನೂ ಲಿಂಗದಿಂದ ಬೇರಾಗದಂತಿರಿಸುವುದರಿಂದ ಆಚಾರವೆನಿಸಿತು. ಆಚಾರ ಸ್ವಲ್ಪ ಸುಳಿದಾಟ. ಗಾಢನಿದ್ರೆಯಲ್ಲಿ ಮಲಗಿದವನು ಆ ನಿದ್ರೆಯಲ್ಲಿ ಮೈದುರಿಸಿ ಮತ್ತೆ ಮಲಗುವಂತೆ, ತುರಿಸುವಾಗಲೂ ದೇಹವ್ಯಾಪಾರವನ್ನಭಿಮಾನಿಸದಂತೆ ಲೌಕಿಕದಲ್ಲಿ ಸುಳಿದು ಲಿಂಗಸುಷ್ಟಿಯನ್ನನುಭವಿಸುವ ಸ್ಥಿತಿಯೇ ಆಚಾರವು ಅಂದರೆ ಲಿಂಗಮಯನಾಗಿರುವ ಬಾಳುವೆ ಆಚಾರವು.

ಈ ಆಚರಣೆಯು ಮನುಷ್ಯನಲ್ಲಿ ದಿನ ಕ್ರಮದಿಂದಳವಡಬೇಕು. ಒಗ್ಗೆ ಶಿವಭಕ್ತಿಯನುರಾಗದಿಂದ ನಡೆವುತ್ತಿರಲು ಅದು ದಿನದಿನಕ್ಕೆ ತಾನೆ ಒಡೆಮ ಮೂಡುವುದು. ಪತಿಪರಾಯಣಳಾದ ಸತಿಗೆ ಪತಿಯಲ್ಲಿ ನಡೆವ ಪಿಪರವು ತಾನೆ ಹೊಳೆವುದಾದರೂ, ತಂದೆತಾಯಿಗಳುಪದೇಶವು ವಿಫಲ ವಲ್ಲ. ಅದರಂತೆ ನಾನೀಗ ಹೇಳುವ ಮಾತುಗಳು.

ಲಿಂಗವನ್ನಗಲದೆ, ನಿನ್ನ ಹೆಂಡರು ಮಕ್ಕಳನ್ನು ಲಿಂಗಹೀನರೆನಿಸದೆ ಲಿಂಗಾಚಾರಿಯಾಗು; ಲಿಂಗಧರರಲ್ಲಿ ಕುಲವನೆಣಿಸದೆ ಲಿಂಗಧರರಲ್ಲದರ ನ್ನು ಬಳಕೆಗೆಯ್ಯದೆ ಶಿವಾಚಾರಿಯಾಗು; ಶಿವಧರ್ಮದ ನಿಯತಿ ತಪ್ಪದೆ ನಿಯತಾಚಾರಿಯಾಗು; ಹಿಂದಿನ ಶರಣರ ನಡೆಯನ್ನು ನೆನೆದು ಧರೆಯ ಸದ್ಭಕ್ತರು ಮೆಚ್ಚುವಂತೆ ನಡೆದು ಸದಾಚಾರಿಯಾಗು; ಶಿವನಿಂದೆ ಶಿವ ಗಣ ನಿಂದೆ ಇಂತಿದೆಲ್ಲವನ್ನು ಸೈರಿಸದೆ ಗಣಾಚಾರಿಯಾಗು. ಈ ಪಂಚಾ ಚಾರಗಳನ್ನು ಪಾಲಿಸಿದೆಯಾದರೆ ಲಿಂಗವು ನಿನ್ನಂಗವನೆಡೆಗೊಳ್ಳುದು.

ಗುರುವಿನುಕ್ತಿಯಿಂದ ತನ್ನ ಗರ್ಭದಲ್ಲಿ ಜನಿಸಿದ ಬಾಲನಿಗೆ ತಂ ದೆಯು ಮೇಲೆ ಉದಾಹರಿಸಿದ ವಚನಗಳಲ್ಲಿ ವಿವರಿಸಿದಂತೆ ಲಿಂಗಧಾ ರಣವ ಮಾಡಿ ಆ ಮಗನನ್ನು ಶಿವಾಚಾರದ ನಡೆಯಲ್ಲಿ ನಡೆಗಲಿಸುವನು.

ಈ ಲಿಂಗಧಾರಣವು ಶಿಶುವಿಗೆ ಶಿವಮಾರ್ಗದ ರೂಢಿಯನ್ನು ಮಾ ಡುವುದಾದರೂ, ತಂದೆತಾಯಿಗಳ ಆಚಾರಕ್ಕೆ ಅಂಗವಾಗಿದೆ. ಅದರಂ ತೆಯೇ ಲಿಂಗಧಾರಿಗಳ ಬಳಕೆಗೆ ಸಾಧನವಾಗಿದೆ. ಸದಸದ್ವಿವೇಕ ಜನಿ ಸುವ ಆರಂಭಕಾಲಕ್ಕೆ ಅಂದರೆ ಎಂಟರಿಂದ ಹದಿನಾರನೆಯ ವರ್ಷದ ತನಕ ಆಯಾ ಬಾಲಕನ ಬುದ್ಧಿಯ ಹದವಂತೆ ದೀಕ್ಷಾಸಂಸ್ಕಾರವಾಗು ವದವಶ್ಯವು

## ಗುರುಕಾರುಣ್ಯ.

ಮೇಲ್ಕಂಡ ವಿಷಯಗಳನ್ನು ನಾವು ಸೂಕ್ಷ್ಮದೃಷ್ಟಿಯಿಂದವಿಚಾರಿ ಸಿದರೆ, ಈ ಲೇಖದ ಆರಂಭದಲ್ಲಿ ಉದಾಹರಿಸಿದ ಶಿವಶರಣರ ವಚ ನವು ಕೇವಲ ತಂದೆಯ ಆಚಾರಕ್ಕಾಗಿ ಲಿಂಗಧಾರಣವಾದ ಶಿಶುವಿನ ಲಿಂ ಗವು ಜಾರಿದ ಸಂಬಂಧವಾಗಿದೆಯೇ ಹೊರ್ತು ಬೇರೊಂದಿಲ್ಲ. "ಕಳೆಯ ಬಾರದು" "ಕೊಲ್ಲಬಾರದು" ಎಂಬ ನುಡಿಗಳು ಲಿಂಗವು ಹೋದ

ಭಕ್ತನನ್ನು ಕಳೆವ ಮತ್ತು ಕೊಲ್ಲುವನೋರ್ವನುಂಟೆಂದು ತೋರಿಸುತ್ತವೆ. ಕಳೆವನೂ ಕೊಲ್ಲುವನೂ ತನಗೋರ್ವನುಳ್ಳವನು ಶಿಶುವಾಗಿರುವನಲ್ಲದೆ ಪ್ರೌಢನಾಗಿರಲಾರನು. ಇದರಲ್ಲಿಯ ಆಗಮವಾಕ್ಯವು "ಸಹ ಪ್ರಾಣಾನ್ ಪರಿತ್ಯಜ" ಎಂದು ಇದೆ. ಪ್ರಾಣವನ್ನು ಪರಿತ್ಯಾಗಮಾಡು ಎಂದು ಇದೆ. ಆದರೆ ಮುಂದಿಯಿಂದ ಕೊಲ್ಲಿಸಿಕೊಳ್ಳು ಎಂದು ಇಲ್ಲ.

"ಗುರುಕಾರುಣ್ಯವುಳ್ಳ" ಎಂಬ ಶಬ್ದದಿಂದ ಮುಂದೆ ಗುರುಕಾರುಣ್ಯವನ್ನು ಹೊಂದಲುಳ್ಳ ಎಂಬರ್ಥವು ಹೊರಡುತ್ತದೆ. ಈ ಅರ್ಥವನ್ನೇ ಮುಂದೆ "ಗುರುಕಾರುಣ್ಯಮುಂಟಾಗಿ" ಎಂಬೀ ಶಬ್ದಗಳು ಒಡೆದುಹೇಳುತ್ತವೆ. ಹುಟ್ಟುತ್ತಲೆ ತಂದೆತಾಯಿಗಳ ಆಚಾರಕ್ಕೆ ಸಂಗತವಾಗುವಂತೆ ಲಿಂಗಧಾರಣವಾಯ್ತು. ಆ ಲಿಂಗಧಾರಣದಿಂದೊದಗಿದ ಶಿವಸಂಸ್ಕಾರಗಳಿಂದ ಲಿಂಗಾಭಿಲಾಷೆಯಾಗುವದು. ಲಿಂಗಾಭಿಲಾಷೆಯಿಂದ ಗುರುವಿನಡಿ ಸಾರುವ ಬುದ್ಧಿಯೊಗೆಯುವುದು. ಆಗ ಗುರುವು ಲಿಂಗದ ವಿಚಾರವನ್ನು ತಿಳುಹುವನು. ಈ ಮಧ್ಯದಲ್ಲಿ ಲಿಂಗವು ಓಸರಿಸಿದರೆ ತಂದೆತಾಯಿಗಳು ಅವಿವೇಕದಿಂದ ಕೊಲ್ಲಬಾರದೆಂದು ಈ ವಚನ ತಾತ್ಪರ್ಯವು. ಬೇರೊಂದಲ್ಲ.

ಆಗಲಿ. ಎರಡು ವಚನಗಳಿಗೆ ಒಂದೊಂದು ಹಂಚಿಕೆಯಿಂದ ಅರ್ಥವನ್ನು ಹಚ್ಚಿದಿರಿ. ಆದರೆ ಲಿಂಗವು ಗಲಿತವಾದರೆ ಪ್ರಾಣತ್ಯಾಗವ ಮಾಡಬಾರದೆಂಬ ವಚನಗಳು ಒಂದೆರಡಿಲ್ಲ. ಇನ್ನೂ ಅನೇಕವಿವೆ. ಇವುಗಳಿಗೇನು ಹಾದಿ ಎಂದು ನೀವು ಕೇಳಬಹುದು.

ಇವುಗಳಲ್ಲಿ ಒಂದು "ದೇವರು ಬಿದ್ದರು ದೇವರು ಬಿದ್ದರು ಎಂದು ಸಾಹಿತ್ಯದ ಕೂಡ ಸಾಯಬೇಕೆಂಬರಿ. ಅದಾವಾಗ ಬಿದ್ದಿತ್ತೆಂದರಿಯಿರಿ ಅದಾವಾಗ ಇದ್ದಿತ್ತು ಆದಾವಾಗ ಬಿದ್ದಿತ್ತೆಂಬುವದು ನೀವು ಬಲ್ಲಿರೆ ಹೇಳಿರೆ? ಸಾಕ್ಷಿ॥ ಅದೃಶ್ಯೇ ಭಾವನಾನಾಸ್ತಿ ದೃಶ್ಯಮೇವವಿನಶ್ಯತಿ। ಅವರ್ಣಮಕ್ಷರಂ ಬ್ರಹ್ಮ ತದ್ಧ್ಯಾಯಂತಿ ಹಿಯೋಗಿನಃ" ಇದುಕಾರಣ ಕೂಡಲ ಚನ್ನಸಂಗಯ್ಯ ನಿಮ್ಮನರಿದಾಗ ಇದ್ದಿತ್ತು ಮರೆದಾಗ ಬಿದ್ದಿತ್ತು.

ಈ ವಚನದಲ್ಲಿ ಲಿಂಗವು ಬಿದ್ದರೆ ಪ್ರಾಣವನ್ನು ಬಿಡಬಾರದು. ಲಿಂಗವನ್ನರಿವುದೇ ಲಿಂಗಧಾರಣವು. ಲಿಂಗವನ್ನು ಮರೆವುದೇ ಲಿಂಗವನ್ನು ಹಿಂಗುವಣವು ಎಂದು ಈ ನುಡಿಯು ಒಡೆದು ಹೇಳುತ್ತಿದೆ. ಲಿಂಗದರಿವಿದ್ದರಾಯ್ತು, ಲಿಂಗವು ಬೀಳಲೊಲ್ಲದೇಕೆ; ಎಂದು ಇದರ ಬಹಿರಂಗದ ಸ್ಪಷ್ಟ ಅರ್ಥವಿದೆ.

ಆದರೆ ಇದರ ಅರ್ಥವು ಹಾಗಲ್ಲ. ಈ ವಚನದಲ್ಲಿ ಲಿಂಗವು ಬಿದ್ದಿತಾವಾಗ ಇದ್ದಿತಾವಾಗ ಎಂಬುದರ ಜ್ಞಾನವಿಲ್ಲದೆ ಲಿಂಗವು ಬಿದ್ದಿತೆಂದು ಪ್ರಾಣಕೊಡುವವನನ್ನು ಕುರಿತು ನಿಂದೆಯುದೆ. ಅಂದರೆ ಪರಶಿವನು ಕಣ್ಣಿಗೆ ಕಾಂಬನಲ್ಲ. ಕಾಣದ ವಸ್ತುವಿನಲ್ಲಿ ಭಾವನೆಯು ಉಂಟಾಗಲಾರದು-ಕಾಂಬುದೆಲ್ಲವು ನಶ್ವರವಾದುದು. ಆದರಿಂದ ಕಾಣಬಾರದ ಶಿವನನ್ನು ಕಾಣುವ ಲಿಂಗಾಕೃತಿಯಿಂದ ಯೋಗಿಗಳು ಧ್ಯಾನಿಸುವರು; ಮತ್ತು ಪೂಜಿಸುವರು. ಅಂತರಾತ್ಮನಾಗಿದ್ದ ಭಾವಲಿಂಗವು ಇಷ್ಟಲಿಂಗದ ರೂಪದಲ್ಲಿರುವ ಈ ಪರಿಯನ್ನು ತಿಳಿಯದೆ, ಲಿಂಗವನ್ನು ಧರಿಸಿ ಅದು ಶರೀರದಿಂದುರುಳಿದರೆ ಪ್ರಾಣವನ್ನು ಬಿಡುವುದು ಮರುಳತನವು. ಲಿಂಗದ ತತ್ವವನ್ನು ತಿಳಿಯದೆ ಲಿಂಗವನ್ನು ಧರಿಸಿದೆಯಾದರೆ ಆ ಲಿಂಗವು ನಿನ್ನ ಮೈಯಿಂದ ಬಿದ್ದಿರುವದು. ಲಿಂಗವನ್ನು ತಿಳಿದೆಯಾದರೆ ಆ ಲಿಂಗವು ನಿನ್ನ ಮೈಯಲ್ಲಿರುವದು. ಲಿಂಗವೆಂದರೇನೆಂದು ತಿಳಿಯದೆ ಲಿಂಗವನ್ನು ಧರಿಸಿದಷ್ಟಕ್ಕೆ ಅದು ನಿನ್ನ ಮೈಮೇಲೆ ಇದ್ದಹಾಗಲ್ಲ. ಅಂದಬಳಿಕ ತಿಳಿಯದೆ, ಧರಿಸಿದ ಲಿಂಗವು ಬಿದ್ದರೇನು, ಇದ್ದರೇನು, ಇಂತೆಂದು ಈ ವಚನದ ಅಭಿಪ್ರಾಯವು.

ಲಿಂಗವು ತಿಳಿದ ಬಳಿಕ ಬಿದ್ದರೇನು? ಇದ್ದರೇನು? ಎಂಬುದೇ ಈ ವಚನಾರ್ಥವಲ್ಲ.

## ವಚನಾಂತರ ಸಾಕ್ಷಿ.

**"ಕರಮನನೇತ್ರವೆಂಬ ತ್ರಿಸ್ಥಾನದಲ್ಲಿರಿಸಲೀಯದೆ ಭೇದವ ಮಾಡಿ ಅಗಲಿಸುವ ಜಪತಪ ತಾನೇಕೋ? ಪರಿಪೂರ್ಣವಾದ ವಸ್ತು ಕರಕಮಲದಲ್ಲಿರಲ್ಕಾಗಿ ಅಗಲಿಸಿ ದೂರಕಿಕ್ಕಿ ಎಂಬುವ ತೆರಹವ ಮಾಡಿ ಖಂಡಿಸಿ ಕಂಡಿಹೆನೆಂಬ ಧ್ಯಾನವ ಮಾನವೇಕೋ? ಕೂಡಲಚನ್ನ ಸಂಗಮದೇವ. ಎಂಬೀ ವಚನವು ಲಿಂಗದ ಪರಿಪೂರ್ಣತ್ವವನ್ನರಿತು ಅದನ್ನು ಕರಸ್ಥಲದಲ್ಲಿರಿಸಬೇಕು. ಅಗಲಿಸಬಾರದೆಂದು ಒಡೆದುಹೇಳುತ್ತಿದೆ.**

ಈ ವಚನವು ಶಿವನನ್ನಗಲಿಸುವ ಜಪತಪಗಳನ್ನು ಜರೆವುದು. ಜಪವೆಂದರೆ ಬಾಹ್ಯದ ಚಿಂತನವನುಳಿದು ಶಿವಧ್ಯಾನವನ್ನು ಮಾಡುತ್ತ ಶಿವಮಂತ್ರವನ್ನು ಅವ್ಯಕ್ತವಾಗಿ ನುಡಿವುದು. ತಪವೆಂದರೆ ಶಿವನಿಗಾಗಿ ದೇಹವನ್ನು ಶೋಷಿಪುದು. **ನಮಃ ಪೀಠಮಿತಿಪ್ರೋಕ್ತಂ ಶಿಕಾರಂ ಮ**

**ಧ್ಯವಿಭೂಷಿತಂ। ಮಾಕಾರಂ ಗೋಮುಖಂ ವೃತ್ತಂ ಯಕಾರಂ ಗೋಲಕಂ ಸ್ಮೃತಂ ಓಂಕಾರಂ ಲಿಂಗಮಾಖ್ಯಾತಂ"** ಎಂಬೀ ಪ್ರಮಾಣದಿಂದ ತಾನುಚ್ಚರಿಸುವ ಮಂತ್ರವೇ ಪೀಠಾದಿರೂಪವಾದಳೆದ ಲಿಂಗವೆಂದು ಕರಸ್ಥಲದಲ್ಲಿಯೂ, ಆ ಕರಸ್ಥಲದ ಲಿಂಗವೇ ನೇತ್ರದಲ್ಲಿ ತುಂಬಿ ದೃಷ್ಟಿಯಲ್ಲಿಯೂ, ಅಲ್ಲಿಂದ ಮನವನ್ನು ವ್ಯಾಪಿಸಿ ಮನದಲ್ಲಿಯೂ ತುಂಬುವ ಬಗೆಯನ್ನರಿಯದೆ ಮಾಡುವ ಬರಿಯ ಮಟಮಟ ಜಪವನ್ನು ಅಂದರೆ ಪರಿಪೂರ್ಣ ಲಿಂಗವನ್ನು ಹಿಡಿಯದೆ ನೋಡದೆ ಭಾವಿಸದೆ ಮಾಡುವ ಜಪವನ್ನು ಚೆನ್ನಬಸವನು ಚೆಲುವಲ್ಲೆಂಬನು.

ಬರಿಯ ಜಪವು ಶಿವನನ್ನು ತನ್ನಿಂದಗಲಿಸುವದು ಶಿವನನ್ನು ಸಾಕ್ಷಾತ್ಕರಿಸಲಾಗದು. ಶಿವನು ವಾಕ್ಕಿಗೆ ಒದುಗುನು ಮನಸ್ಸಿಗೆ ನಿಲುಕನು ಲಿಂಗವು

## ಲಿಂಗವು ಪರಿಪೂರ್ಣ ವಸ್ತುವು.

ಹಾಗಾದರೆ ನಿನ್ನ ಕರಕಮಲದಲ್ಲಿ ಎಂತು ಆ ಲಿಂಗವನ್ನು ಧರಿಸುವೆ? ಕರಕ್ಕೆ ಪರಿಪೂರ್ಣ ವಸ್ತುವು ಹೇಗೆ ಬಂದಿತು?

ತಾನು ಅಪರಿ ಪೂರ್ಣನು ಎಂಬುದೆ ಜೀವತ್ವವು. ಆತ್ಮನು ಪರಿಪೂರ್ಣತ್ವವನ್ನು ಮರೆತಿರುವನಾದರು ಅದರ ಮಂದವಾದ ತೋರಿಕೆಯು ಸಂಸಾರಸ್ಥಿತಿಯಲ್ಲಿ ಆಗದಿರದು. ಒಬ್ಬೊಬ್ಬ ಆತ್ಮನು ಪರಿಪೂರ್ಣತ್ವದ ಹಂಬಲದಿಂದಲೆ ಹಲವು ಕರ್ಮಗಳನ್ನು ಮಾಡುತ್ತಿರುವನು.

ಆ ಕರ್ಮಗಳು ಒಂದೊಂದು ವಸ್ತುವನ್ನು ಕುರಿತು ಇರುವವು. ಸ್ವರ್ಗಕ್ಕಾಗಿ. ಅಥವಾ ಇಹಲೋಕದ ಭೋಗಕ್ಕಾಗಿ ಒಂದೊಂದು ಕರ್ಮವಿಹುದು. ಆದರೆ ಇವೆಲ್ಲ ಖಂಡಿತ ಸ್ಥಿತಿಗಳಾಗಿವೆ.

ಇಂತಪ್ಪ ಖಂಡಿತ ಸ್ಥಿತಿಗಳಿಗೆ ಸಾಧನವಾದ ಭಿನ್ನ ಭಿನ್ನ ಕರ್ಮಗಳನ್ನು ಬಿಡದೆ ಪರಿಪೂರ್ಣತ್ವಾನುಭವವು ಬಾರದು. ಜೀವನ ಈ ಕ್ರಿಯೆಗಳನ್ನು ಒಂದು ಶಿವಪೂಜೆಯೆಂಬ ಕ್ರಿಯೆಯಲ್ಲಿ ಲಯಗೊಳಿಸುವದೆ ಖಂಡಿತ ಕ್ರಿಯೆಗಳನ್ನು ಬಿಡುವುದು.

ಅಖಂಡ ಕ್ರಿಯಾರೂಪವಾದ ಶಿವಪೂಜೆ ಗಾಸ್ಪದವಾದುದರಿಂದ ಇಷ್ಟ ಲಿಂಗವು ಅಖಂಡ ಪರಿಪೂರ್ಣ ವಸ್ತು.

ಅಖಂಡ ಪರಬ್ರಹ್ಮವು ಅಣಿಯಾದ ಮನಸ್ಸಿನಲ್ಲಿ ಹೊಳೆವುದೆಂದು

ವಾದಿಗಳೆಲ್ಲರು ಒಪ್ಪುವರು. ಆದರಂತೆಯೇ ಅಖಂಡ ಪರಿಪೂರ್ಣ ವಸ್ತು ವೆ ಕರದಲ್ಲಿ ಹಿಡಿಯಲು ಬಂದಿತು.

'ಓಂನಮಃಶಿವಾಯ' ಎಂಬೀ ಷಡಕ್ಷರವು ಲಿಂಗಾಂಗ ಸಾಮರಸ್ಯ ಮಂತ್ರವು. ನಮಃ ಎಂಬ ಶಬ್ದವು ಸಂಸಾರಹೇಯದಿಂದ ಶಿವನನ್ನು ಸರ್ವ ಭಾವದಿಂದಲೂ ಶರಣಾಗತನಾದ ಜೀವವನ್ನು ತಿಳುಹುತ್ತದೆ. ಶಿವಶಬ್ದವು ಸಂಸಾರದ ಮಲವು ಎಂದೆಂದಿಗೂ ಸೋಂಕದ ಶಿವನನ್ನು ಬೋಧಿಸುತ್ತದೆ. ಆಯ ಶಬ್ದವು ಇವರೀರ್ವರ ಯೋಗವನ್ನು ತೋರಿಸುತ್ತದೆ. ಓಂಕಾರವು ಅಂಗಲಿಂಗಗಳು ಬೇರಾಗದ ಎರಡಿಲ್ಲದ ಪರವಸ್ತುವಿನ ವಾಚಕವಾಗಿದೆ.

ಈ ಮಂತ್ರಾರ್ಥ ಚಿಂತನದೊಡನೆ ಅಂತಃಕರಣದಲ್ಲಿ ಹೊಳೆದ ಪರಮಾರ್ಥರೂಪವು. ಪ್ರಾಣದಲ್ಲಿ ತುಂಬಿ ಅಲ್ಲಿಂದ ನೇತ್ರಕ್ಕೆ ಸೂಸುವದು. ಆ ಪರಿಯು ಹೇಗೆಂದರೆ ಅಂತಃಕರಣದ ಒಂದು ಅಂಶವೆ ಅಹಂಕಾರವು. ಅಹಂಕಾರದ ಕಾರ್ಯವು ದೇಹಧಾರಣವು. ಈ ಶರೀರದಲ್ಲಿ "ನಾನು" ನಾನು" ಎಂಬ ಅಹಂಕಾರವಿರದೆ ಅದನ್ನು ನಾನು ಹೊರಲಾರೆನು. ನಡೆಯಿಸಲಾರೆನು. ಆದರಿಂದ ದೇಹವನ್ನು ಧರಿಸುವ ಪ್ರಾಣಾದಿ ಪಂಚವಾಯುಗಳು ಅಹಂಕಾರದ ಕಾರ್ಯಗಳೆನ್ನಬೇಕಾಯ್ತು. ಅವುಗಳಲ್ಲಿ ಪ್ರಾಣವಾಯು ಮುಖ್ಯವು. ಪ್ರಾಣವಾಯುವಿಂದ ನೇತ್ರದ ವ್ಯವಹಾರವು. "ಯಃ ಪ್ರಾಣಸ್ತಚ್ಚಕ್ಷುಃ" ಎಂದು ಉಪನಿಷತ್ತುಂಟು.

ಅಂತಃಕರಣದಲ್ಲಿ ಮಂತ್ರ ಚಿಂತನದಿಂದ ಮೂಡಿದ ಸಾಮರಸ್ಯವು ಅಹಂಕಾರದಲ್ಲಿಯೂ ಅಲ್ಲಿಂದ ಪ್ರಾಣದಲ್ಲಿಯೂ ಅಲ್ಲಿಂದ ನೇತ್ರದಲ್ಲಿಯೂ ಸ್ಫುರಿಸಿ ಇಷ್ಟ ಲಿಂಗವು ನೇತ್ರಕಲೆಗೆ ಹೊಳೆಯಿತು. ಹೀಗೆ ಹೊಳೆವ ಲಿಂಗದಲ್ಲಿ ಭಕ್ತನು ಪೂಜಾಕ್ರಿಯೆಯನ್ನು ಸಮರ್ಪಿಸುವನು. ಆ ಪೂಜೆಯನ್ನು ಸ್ವೀಕರಿಸಲು ಭಕ್ತನಿಂದ ಭಿನ್ನವಾಗಲಾರದೆ ಪರವಸ್ತು ಕರಸ್ಥಲದಲ್ಲಿಯೇ ಬಂದಿತು.

ಕರಸ್ಥಲದಿಂದ ನೇತ್ರಸ್ಥಲಕ್ಕೂ ನೇತ್ರಸ್ಥಲದಿಂದ ಮನಃಸ್ಥಲಕ್ಕೂ ತಿರುಗಿ ಹರಿವುದು. ಇದನ್ನೆಲ್ಲ ಸಿದ್ಧಾಂತವನ್ನು ಚನ್ನಬಸವಣ್ಣನುಃ–' ಕರ ಮನನೇತ್ರವೆಂಬ ತ್ರಿಸ್ಥಾನದಲ್ಲಿರಿಸಲರಿಯದೆ' ಎಂಬ ಶಬ್ದಗಳಿಂದ ಹೇಳಿಹನು.

ಆದುದರಿಂದ ಈ ವಚನಾರ್ಥವಿಂತಿಹುದು. ಕೇವಲ ಮನಸ್ಸಿನಲ್ಲಿ ಶಿವನ ಪರಿಪೂರ್ಣತ್ವವನ್ನು ತಿಳಿದು ಅವನ ಧ್ಯಾನದಿಂದ ಮುಕ್ತಿಯನ್ನು

ಹೊಂದಬೇಕೆಂದು ದೇಹಾದಿಗಳನ್ನು ತಪಸ್ಸಿಗೀಡು ಮಾಡಿ ಮಂತ್ರ ಜಪ ವನ್ನು ಮಾಡಿದರೂ ಆ ಮಂತ್ರಜಪತಪಗಳಿಂದ ಶಿವನು ದೊರೆಯಲಾ ರನು. ಏಕೆಂದರೆ ನಿನ್ನದೊಂದು ಅಂಗವಾದ ದೇಹದ ಕರದಲ್ಲಿ ಆ ಲಿಂಗ ವನ್ನು ಧರಿಸಲಾರೆಯಾದರೆ ಅಂತಃಕರಣಕ್ಕೆ ಬಂದ ವಸ್ತು ಕರಸ್ಥಲಕ್ಕೆ ಬಾರದರಿಂದ ಖಂಡಿತವಾಯ್ತು. ಅದರಿಂದ ಶಿವನು ನಿನ್ನ ವಾಕ್ಕಿಗೆ ಒದಗ ಲಿಲ್ಲ. ಮನಸಿಗೆ ಸಿಗಲಿಲ್ಲ. ಈ ಪರಿಯಿಂದೀವಚನಾರ್ಥವನ್ನು ಪರಿಶೀಲಿ ಸಲು **ಇಷ್ಟಲಿಂಗವೆಂಬುದು ಒಂದು ಕುರುಹು ಮಾತ್ರವಲ್ಲ. ಅದು ಮನದಲ್ಲಿ ತೋರಿದ ಲಿಂಗವೇ ಆಗಿದೆ.** ಚನ್ನಬಸವನು ಇದೇ ವಚ ನದಲ್ಲಿ "ಅಗಲಿಸಿ ದೂರಕಿಕ್ಕಿ ಎಂಬುವ ತೆರಹವ ಮಾಡಿ ಖಂಡಿಸಿ ಕಂಡಿ ಹೆನೆಂಬ ಧ್ಯಾನಮೌನವೇಕೊ?" ಎಂಬ ಶಬ್ದಗಳಿಂದ ಶೈವನು ತನ್ನಂಗ ದಿಂದಗಲಿಸಿ ದೂರಕಿಕ್ಕುವ ಪಾರ್ಥಿವಾದಿಲಿಂಗದ ಪೂಜೆಯಿಂದಲೂ ಪರ ವಸ್ತು ಸಾಧ್ಯವಲ್ಲವೆಂದು ತೋರಿಸಿಹನು. ಶರೀರದಲ್ಲಿ ಧರಿಸಲಾರದಿದ್ದರೆ ಪರವಸ್ತುವಿನ ಖಂಡಿತತ್ವವು ಪರಿಹರಿಸಲಾರದಾಗಿದೆ.

ಅದರಿಂದ ತಿಳಿಯದ ಲಿಂಗವು ಇದ್ದರೇನು ಬಿದ್ದರೇನು ಎಂಬರ್ಥ. ತಿಳಿದ ಲಿಂಗವು ಜಾರಿದರೇನು ತನುವಿನಲ್ಲಿದ್ದರೇನು ಎಂಬರ್ಥವಲ್ಲ.

---

# ಧ್ಯಾನದ ಅವಶ್ಯಕತೆ.

**(ಲೇಖಕಃ— ಶ್ರೀಯುತ ವಿರಕ್ತಪ್ಪಾ ವಿರುಪಾಕ್ಷಪ್ಪಾ ಮುಧೋಳಕರ ಬಿ, ಎ, ಎಲ್ ಎಲ್, ಬಿ. ವಕೀಲ ವಿಜಾಪುರ.)**

ಈ ಚರಾಚರ ಸೃಷ್ಟಿಯಲ್ಲಿ ಪಶ್ವಾದಿದೇಹಗಳ ಅನಂತರೂಪಗಳಿಗೆ ಮತ್ತು ಗಿಡಗಂಟಿಗಳ ಬೆಳವಣಿಗೆಗೆ ನೀರು, ಬಿಸಿಲುಗಳು ಹ್ಯಾಗೆ ಬೇ ಕಾಗುತ್ತವೆಯೋ, ಹಾಗೆಯೇ ಮನುಷ್ಯನ ಮನುಷ್ಯತ್ವದ ಬೆಳವಣಿಗೆಗೆ ಧ್ಯಾನದ ಅವಶ್ಯಕತೆಯು ಇರುತ್ತದೆ. ಒಂದು ಸುವಾಸನೆಯುಳ್ಳ ಹೂವಿ

ನ ಸುಶೋಭಿತವಾದ ಎಸಳುಗಳು ತಮ್ಮ ಆಲ್ಹಾದಕರವಾದ ಪರಿಮಳ ದಿಂದ ಸುತ್ತಲಿನ ಹವೆಯನ್ನು ಸುಗಂಧಿತ ಮಾಡಿ, ಯಾವನ ಇಚ್ಛಾ ಮಾತ್ರದಿಂದ ತಮ್ಮ ಜನನವಾಗಿತ್ತೋ ಆ ಪ್ರಭುವಿನ ಪಾದಾರವಿಂದ ದಲ್ಲಿ ಹ್ಯಾಗೆ ಕಡೆಗೆ ಬಾಡಿ ಬೀಳುತ್ತವೆಯೋ ಹಾಗೆಯೇ ಮನುಷ್ಯನು ಸೃಷ್ಟಿಯಲ್ಲಿ ತನ್ನ ಹೊಟ್ಟೆಯ ಕಾಯಕವನ್ನು ಸುಪಥದಿಂದ ಸಾಗಿಸಿ, ಕಡೆಗೆ ಆ ಸಿದ್ಧನಂಘ್ರಿಯಲ್ಲಿ ಲೀನನಾಗುತ್ತಾನೆ. ಇದೇ ಆತನ ನಿಜ ವಾದ ಅಂತಿಮಧ್ಯೇಯವು ಇರುತ್ತದೆ. ಈ ಧ್ಯೇಯದ ಸಿದ್ಧಿಯು ಧ್ಯಾನ ದಿಂದಲೇ ಲಭಿಸುತ್ತದೆ. ಈ ಧ್ಯಾನದ ಸಾಮಾನ್ಯ ಸ್ವರೂಪವನ್ನು ವಿವರಿ ಸುವದೇ ನನ್ನ ಈ ಲೇಖದ ಉದ್ದೇಶವಾಗಿದೆ.

ಈ ನಮ್ಮ ಶರೀರವು ಪಂಚಭೂತದಿಂದ ಸಿದ್ಧವಾಗಿರುವದರಿಂದ ಇ ದಕ್ಕೆ ಅನ್ನೋದಕದ ಆವಶ್ಯಕತೆಯು ಇರುತ್ತದೆ. ಆದರೆ ಈ ಭೌತಿಕ ಜಡಶರೀರಯಂತ್ರದಿಂದ ತೊಡಕಿಕೊಂಡವನಾಗಿ ಜೀವಾತ್ಮನು ಇರುತ್ತಾನೆ. ಆದರೆ ಇವನಿಗೆ ಜ್ಞಾನದ ತೃಷೆಯು ಇದ್ದರೂ ಅವನು ಈ ಮರವೆಯ ಭಯಾನಕ ಭೂಪ್ರದೇಶದಲ್ಲಿಯ ಮಾಯೆಯ ಪ್ರಖರ ವಾತಾವರಣದಲ್ಲಿ ಸಿಲ್ಕಿಕೊಂಡು ಕಾವ್ಯ, ಅಲಂಕಾರ, ಛಂದಸ್ಸು, ವ್ಯಾಕರಣ, ಜ್ಯೋತಿಷ್ಯ ನಾಟ್ಯ, ಕಾದಂಬರಿ, ಭೌತಿಕಶಾಸ್ತ್ರ ಇವುಗಳಿಂದ ತೃಪ್ತಿ ಹೊಂದುವ ಸಲು ವಾಗಿ ಯಾವಾಗಲೂ ಹೆಣಗಾಡುತ್ತಿರುತ್ತಾನೆ. ಆದರೆ ಈ ಶಾಸ್ತ್ರಗಳಲ್ಲಿ ಪೂರ್ಣತೆಯು ಇರುವದಿಲ್ಲ. ಆದ್ದರಿಂದ ಅವು ಮನಸ್ಸನ್ನು ಶಾಂತಗೊಳಿ ಸುವದಿಲ್ಲ. ಪಾಶ್ಚಿಮಾತ್ಯ ವೈದ್ಯಕೀಯ ಶಾಸ್ತ್ರವನ್ನು ತೆಗೆದುಕೊಂಡರೆ ಅದ ರಲ್ಲಿಯ ನಿಪುಣರು ಸಹ ಅದರ ಅಪೂರ್ಣತೆಯ ಬಗ್ಗೆ ಒಪ್ಪಿಕೊಳ್ಳಬೇ ಕಾಗುತ್ತದೆ. ಜ್ಯೋತಿಷ್ಯ ವಿಷಯದಲ್ಲಿಯ ಪಂಡಿತರಲ್ಲಿಯಾಹರೂ ಒಬ್ಬ ರೊಬ್ಬರಲ್ಲಿ ಏಕವಾಕ್ಯತೆಯು ಇಲ್ಲ. ಆದರೆ ಭಕ್ತಿಯಂಥ ಸುಲಭ ವಿಷ ಯದಿಂದ ಜೀವಾತ್ಮನಿಗೆ ಶಾಂತಿಯು ಸಿಗುತ್ತದೆ. ಇದರಿಂದಲೇ ಮನುಷ್ಯ ನಿಗೆ ನಿಜವಾದ ಮತ್ತು ಶಾಶ್ವತವಾದ ಸೌಖ್ಯವು ದೊರಕುತ್ತದೆ.

ಆದರೆ ಎಷ್ಟೋ ವೇದಾಂತಿಗಳು ತಮ್ಮ ಉದರಂಭರಣಾರ್ಥವಾಗಿ ಸಮಾಜದಲ್ಲಿ ವಾಕ್ಪಟುತ್ವದಿಂದ ಮೆರೆಯುತ್ತ ತಮ್ಮ ಪಥಕ ಒಂದನ್ನು ಬೇರೆ ಮಾಡಿಕೊಂಡಿರುತ್ತಾರೆ. ಇವರು ನಾನು ಮೇಲೆ ಹೇಳಿದ ಜ್ಞಾನಿಗಳ ವರ್ಗದಲ್ಲಿ ಬೀಳುವದಿಲ್ಲ.. ಆದರೆ ಇವರ ಪ್ರಸಾರವೇ ನಮ್ಮ ದೇಶದಲ್ಲಿ ಈಗ ಬಹಳೇ ಇರುತ್ತದೆ.

ಇವರು ಬಾಹ್ಯಾಡಂಬರವುಳ್ಳವರಾಗಿ ಯಥೇಚ್ಛವಾಗಿ ತಮ್ಮ ಅಜ್ಞಾನಿ ಮತಾನುಯಾಯಿಗಳ ಮೇಲೆ ಮೇಯುತ್ತಲಿದ್ದಾರೆ. ಸೃಷ್ಟಿಯು ಅಂತರ್ಯರಚನೆಯು ಅತರ್ಕ್ಯವಾಗಿರುವದರಿಂದ ಅದರ ವೇಷ್ಟನದೊಳಗೆ ಇರುವ ಈ ಮಾನವರಿಗೆ ನಿಜವಾದ ಸುಖದ ಸಾಧನವನ್ನು ನಿರ್ಣಯಿಸಲಿಕೆ ಬಾರದಂತೆಯಾಗಿರುತ್ತದೆ. ಆದರೆ ಧರ್ಮದ ಹೆಸರಿನ ಕೆಳಗೆ ಅಧರ್ಮವನ್ನು ಮಾತ್ರ ಇವರು ಹಬ್ಬಿಸಿ, ಮಾನವ ಮಾನವರಲ್ಲಿ ಅಧರ್ಮತನಕ್ಕೆ ಚಾಲನೆಯನ್ನು ಕೊಟ್ಟು ಜಗತೀತಲದಲ್ಲಿ ವ್ಯವಹರಿಸುತ್ತಾರೆ. ಇವರು ನಿಜವಾದ ವೇದಾಂತ ಮಾರ್ಗವನ್ನು ತೋರಿಸುವವರಲ್ಲ.

ಈ ಪರಿಸ್ಥಿತಿಯಲ್ಲಿ ಜೀವಾತ್ಮನು ಯುಗಯುಗಾಂತರಗಳಲ್ಲಿ ಪಡುತ್ತಲಿರುವ ಕಷ್ಟಗಳನ್ನು ನೋಡಿ ಆತನಿಗೆ ಕಡೆಗೆ ಮಧುರಾಮರ ಪಾನವನ್ನು ಮಾಡಿಸಿ ನಿಜಧಾಮಕ್ಕೆ ಕಳಿಸುವಕುರಿತು "ಸಂಭವಾಮಿ ಯುಗೆ ಯುಗೆ" ಎಂಬ ಅಭಯ ಆಶ್ವಾಸನದಂತೆ ನಮ್ಮ ಕೂಡಲೂರೇಶ್ವರ ಯೋಗಿಗಳು "ಬಂದ ಬಸವಲಿಂಗ ಭಕ್ತಕೃಪಾಂಗ" ಎಂದು ಸಾರಿರುತ್ತಾರೆ. ಇಂಥ ಮಹಾತ್ಮರು ಜಗದುದ್ಧಾರ ಮಾಡ.ವದಕ್ಕೋಸ್ಕರ ಇಲ್ಲಿಗೆ ಬಂದು ಜೀವಾತ್ಮನನ್ನು ದೇವರ ಧ್ಯಾನದಲ್ಲಿ ತೊಡಗಿಸುತ್ತಾರೆ. ಇವರೇ ನಿಜವಾದ ಗುರುಗಳು.

"ಆತ್ಮನಾ ಆತ್ಮಾನಂ ಉದ್ಧರೇತ್" ಎಂಬ ಭಗವಂತನ ಉಕ್ತಿಯು ಎಲ್ಲರ ಸ್ಮೃತಿಯಲ್ಲಿ ಇರಬಹುದು. ಇವರ ಮೇಲಿಂದ ಪಂಚಮಹಾಸೂತಕದಲ್ಲಿ ಹೊರಳಾಡುವ ಜನರನ್ನು ಇಂಥ ಶಿವಯೋಗೀಶ್ವರರ ಮಹಾಧ್ಯಾನಕ್ಕೆ ಒಲಿಸಿ ಜನರಿಗೆ ತಮ್ಮ ಕಡೆಯಿಂದಲೇ ತಮ್ಮನ್ನು ಉದ್ಧಾರ ಮಾಡಿಕೊಳ್ಳುವ ರೀತಿಯನ್ನು ತೋರಿಸುತ್ತಾರೆ. ಮತ್ತು ಹೀಗೆ ಧ್ಯಾನಹಚ್ಚುವವರು ಧ್ಯಾನಸ್ವರೂಪಿ ಇದ್ದದರಿಂದ ಆ ಪ್ರಭಾವದಿಂದ ಜನರ ಉದ್ಧಾರವಾದರೂ ಧ್ಯಾನಹಚ್ಚಿದಾಕ್ಷಣವೇ ಆಗುತ್ತದೆ. ಈ ತರಹದಿಂದ ಕೇವಲ ಧ್ಯಾನಮಾತ್ರದಿಂದ ಉದ್ಧಾರಮಾಡುವವರು ನಿಜವಾದ ಸದ್ಗುರುಗಳೇ ಹೌದು. ಇದೇ ಅಭಿಪ್ರಾಯವನ್ನು ಕುರಿತು ನಿಜಗುಣ ಶಿವಯೋಗಿಗಳ ವಾಕ್ಯವು ಕೈವಲ್ಯಾರಂಭವಲ್ಲಿ ಸಾರ್ಥವಾಗಿರುತ್ತದೆ.

ಆದರೆ ಅನೇಕರು ಇಂಥ ಧ್ಯಾನದಿಂದ ವ್ಯವಹಾರ ಶೂನ್ಯರಾಗುತ್ತಾರೆ. ಆದ್ದರಿಂದ ಮನುಷ್ಯನು ಪ್ರಪಂಚವನ್ನೇ ಮಾಡಬೇಕು. ಎಂದೆನ್ನುವದುಂಟು. ಆದರೆ ಇದು ಅಜ್ಞಾನ ಲಕ್ಷಣವು. ಇವರಿಗೆ ಕಪಟ

ವಾಕ್ಪಟುತ್ವ ಮತ್ತು ಲೌಕಿಕ ಸುಖೋಪಭೋಗ ಇದರಲ್ಲಿಯೇ ಪುರುಷಾರ್ಥವು ಇದೆ ಎಂದು ತಿಳಿದು ಹಾಗೆಯೇ ಆಚರಿಸುತ್ತಾರೆ. ಇದು ಮನುಷ್ಯನ ಬುದ್ಧಿ ಮತ್ತು ಜ್ಞಾನ ಇವುಗಳ ದುರುಪಯೋಗವಿರುತ್ತದೆ. ಆದರೆ ಎಲ್ಲ ಮಾನವೀ ಪ್ರಾಣಿಗಳು ಈ ಭವಾರಣ್ಯದಲ್ಲಿ ಇದ್ದರೂ ಶ್ರೀ ಗುರುಪಾದ ದಯದಿಂದ ನಿಜಧ್ಯಾನವನ್ನು ಅನುಗ್ರಹಿಸಿಕೊಂಡು, ಹೆಂಡರು ಮಕ್ಕಳು ಮುಂತಾದ ಐಶ್ವರ್ಯವನ್ನು ಉಪಯೋಗಿಸುತ್ತಲಿದ್ದರೂ ಕೂಡ ಜೀವನ್ಮುಕ್ತರಾಗುವ ಪ್ರಯತ್ನವನ್ನು ಮಾಡುತ್ತಿರಬೇಕು. ಹತ್ತರ ಸಂಗಡ ಹನ್ನೊಂದನೇ ಕೆಲಸವನ್ನು ಮಾಡಿಕೊಂಡು ಬಾ ಎಂದು ನಾವು ಹ್ಯಾಗೆ ಹೊರಗೆ ಹೋಗುವವರಿಗೆ ಹೇಳುತ್ತೇವೆಯೋ ಹಾಗೆಯೇ ಮನುಷ್ಯನು ದಶೇಂದ್ರಿಯದಿಂದ ಪ್ರಪಂಚವನ್ನು ಮಾಡುವಹಾಗೆ ಮಾಡಿ, ಹನ್ನೊಂದನೆಯ ನಿರಿಂದ್ರಿಯ ಸಾಧನದಿಂದ ಈ ಮಾಯಾ ಮಹೋದಧಿಯನ್ನು ದಾಟತಕ್ಕದ್ದು.

ಜೀವನಕಲಹಕ್ಕೂ ಈ ನಿರಿಂದ್ರಿಯ ಧ್ಯಾನಕ್ಕೂ ಏನೂ ಸಂಬಂಧವಿಲ್ಲ. ಆದ್ದರಿಂದ ಈ ಧ್ಯಾನವು ಪ್ರಪಂಚವಲ್ಲಿದ್ದರೂ, ಅದು ತಾನೇ ಸತತವಾಗಿ ನಡೆದಿರುತ್ತದೆ. ಇದಕ್ಕೆ ಸಹಜಧ್ಯಾನವೆನ್ನುತ್ತಾರೆ. ಮತ್ತು ಈ ಧ್ಯಾನವು ಉಳಿದ ಪೂಜಾ ಹವನಾದಿ, ಯೋಗ ಯಾಗಕ್ಕಿಂತಲೂ ಅತ್ಯಂತ ಶ್ರೇಷ್ಠವಾದದ್ದು ಇರುತ್ತದೆ. ಶಿವಯೋಗಿಗಳು "ಹರನಾಮವನ್ನು ಬಿಡದೆ ಜಪಿಸು" "ಆವಾಗ ನೋಡಿದರೂ ಲಿಂಗಪೂಜೆ ಆಗತದಣ್ಣಾ" ಎಂದು ನುಡಿದಿದ್ದಾರೆ. ಆದ್ದರಿಂದ ಲಿಂಗಪೂಜೆಯು ಮೂರುವೇಳೆ ಮಾತ್ರವಲ್ಲ, ಯಾವಾಗಲೂ, ಯಾವ ಪರಿಸ್ಥಿತಿಯಲ್ಲಿಯಾದರೂ ನಡೆದಿರುತ್ತದೆ. ಮನುಷ್ಯನು ಭಾರತೀಯ ಅರ್ಜುನನ ಹಾಗೆ ಸಮರ ಭೂಮಿಯಲ್ಲಿಯೂ ಶ್ರೀಕೃಷ್ಣನಹಾಗೆ ಶೃಂಗಾರದ ವಿಹಾರದಲ್ಲಿಯೂ, ಶ್ರೀ ಬಸವರಾಜನ ಹಾಗೆ ಓಲಗದ ವ್ಯವಸಾಯಗಳಲ್ಲಿಯೂ, ಪರ್ಣಕುಟಿರಗಳಲ್ಲಿಯ ಮುನಿಯೋಗಿಗಳ ಸಮರಸಭಾವದಲ್ಲಿಯೂ, "ಶ್ರೀಗುರುಕರುಣದಿಂದ ಬಿಜಯಂಗೈಸಿ ಕೊಟ್ಟ ಪರಮ ಲಿಂಗವನ್ನು" ಅವಿಶ್ರಾಂತವಾಗಿ ಧ್ಯಾನಮಾಡಬಹುದು. ಈ ನಿರ್ವಾಣ ಲಿಂಗವನ್ನು ಪೂಜಿಸುವ ಭಕ್ತರು ಮಾತ್ರ "ಗೇಣುದ್ದ ಒಡಲೊಳಗೆ ಬೆಟ್ಟದ್ದ ಮಾತು ಹುಟ್ಟಿದ್ದು,, ನೋಡಲಿಕ್ಕೆ ಸಮರ್ಥರಾಗುತ್ತಾರೆ. **ಪೂರ್ವದ ಶಿವಶರಣರು ತೋರಿದ ನಿಜವಾದ ಹಾದಿಯು ಇದೇ.** ಪೂರ್ಣ ಪ್ರಪಂಚದ ಗೊಂದಲವಲ್ಲಿ ಇದ್ದಾಗ್ಯೂ,

ಈ ತರದ ಮಹಾ ಧ್ಯಾನ ಬಲದಿಂದ ಅಹಿಂಸೆ, ಶಾಂತಿ, ದಾಂತಿ, ಸತ್ಯತೆ, ನಿರ್ಭಯುತೆ, ಏಕವಾಕ್ಯತೆ, ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿತೆ, ನಿಷ್ಪ್ರಪಂಚತೆ ಎಂಬ ಅಷ್ಟ ಪುಷ್ಪಗಳಿಂದ ನಮ್ಮ ನಿರ್ನಾಯ ಪ್ರಭುವಿನನ್ನು ಅಹೋರಾತ್ರಿ ಪೂಜಿಸಲಿಕ್ಕೆ ಶಕ್ಯವಾಗುತ್ತದೆ. ಇಷ್ಟು ಗೂಢ ಧ್ಯಾನಗರ್ಭದಲ್ಲಿ ಲೀನನಾದ ನಮ್ಮ ಜೀವನ್ಮುಕ್ತ ವೀರಶೈವನು ಮಹಾಧೀರನಾಗಿ ಆರಂಭದಲ್ಲಿಯೇ ತನುಮನಧನವನ್ನು ಗುರುಲಿಂಗಜಂಗಮಕ್ಕೆ ನೀಡಬೇಕಾಗುತ್ತದೆ. ಮನಕ್ಕೆ ದೀಕ್ಷೆಯನ್ನು ಕೊಟ್ಟು ರವಿಮಂಡಲಕ್ಕೆ ತೇಜವ ಕೊಟ್ಟು, ಮಹಾರ್ಣವಕ್ಕೆ ಅಪುರ್ಯಾದಿತ್ವವನ್ನು ಕೊಟ್ಟು ವ್ಯವಹರಿಸುವ ದಿವ್ಯಾಮರ ಪ್ರಚಂಡ ಪ್ರಬೋಧ ಸೂರ್ಯನನ್ನು ಒಳ್ಳೇ ಆದರದಿಂದ ಅಖಂಡವಾಗಿ ಈ ಸ್ವರದಲ್ಲಿಯೇ ಜಪಿಸಬೇಕು

ಇಂಥ ಧ್ಯಾನದ ಅವಶ್ಯಕತೆಯು ಯಾವಾಗಲೂ ಮರಣಾಂತ್ಯದವರೆಗೂ ಇರುತ್ತದೆ. ಶ್ರೀಗುರುರಾಯನ ಕಡೆಯಿಂದ ಆತ್ಮಧ್ಯಾನ ತತ್ವದಿಂದ ಭೂಷಿತನಾದಬಳಿಕ ಸಾಧನದಲ್ಲಿ ಹೆಚ್ಚುಕಡಿಮೆ ಏನಾದರೂ ಆಗಹತ್ತಿದರೆ "ಮಹಾದೇವಾ ಎನ್ನ ಮನವ ನೋಡಾ, ಎನ್ನ ಮನವು ಸಂತಸವಮಾಡಿ, ನಿಮ್ಮಲ್ಲಿ ಬೆರಿಸು, ಬೆರಿಸದಿದ್ದಡೆ ನಿಮಗೆ ಮಹಾ ಗಣಂಗಳ ಆಣೆ" ಎಂದು ನಿರ್ಧಾರವಾಗಿ ಭಗವಂತನ ಕೂಡ ಸಖ್ಯತ್ವಭಾವನಿಂದೊಡಗೂಡಿ ಮುಂದಿನ ಭಕ್ತಿ ಪ್ರಕಾರಗಳನ್ನು ಅವಲಂಬಿಸುತ್ತ ಮನುಜನು ತನ್ನ ಅಂತರಂಗದಲ್ಲಿ ತನ್ನ ದಿವ್ಯ ನಿಜಸ್ವರೂಪವನ್ನು ಹೊಂದಬೇಕು.

---

# ಲಿಂಗ ಮಹಾತ್ಮ್ಯ ಮತ್ತು ಜಾತಿಭೇದ.

**ಲೇಖಕ— ಗಂಗಾಧರಪ್ಪಾ ಸಂಗಪ್ಪಾ ಸಾಬೋಜಿ.**

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಅಥವಾ ಮತ್ತಾವ ಜಾತಿಯುವನೇ ಆಗಲಿ ಲಿಂಗ ಧಾರಣದಿಂದ ಆತನ ಪೂರ್ವಾಶ್ರಯುವು ಅಳಿದು ಹೋಗುತ್ತದೆ. ಮತ್ತು ಈತನು ಪ್ರವಿತ್ರ ಶರೀರಿಯಾಗುವದರಿಂದ ಆತ

ನನ್ನು ಶಿವನೆಂತಲೇ ಭಾವಿಸಬೇಕೆಂದು ವೀರಶೈವರಲ್ಲಿ ಮುಖ್ಯ ಸಿದ್ಧಾಂತವಿರುತ್ತದೆ. ಈ ಬಗ್ಗೆ ಪಾರಮೇಶ್ವರಾಗಮದ ಪಟಲ ೧ ಶ್ಲೋಕ ೫೮ ರಲ್ಲಿ ಸ್ಪಷ್ಟವಾಗಿ ಉಲ್ಲೇಖವಿರುತ್ತದೆ. ಹೀಗೆ ಇದ್ದರೂ ಲಿಂಗಾಂಗಿಗಳಲ್ಲಿ ಜಾತಿ ಭಾವವನ್ನು ಎಣಿಸಿ, ಅವರಲ್ಲಿ ಉಚ್ಚ ನೀಚತ್ವವನ್ನು ಭಾವಿಸಹತ್ತಿದಂದಿನಿಂದಲೂ ಕೆಲವು ಸ್ವಾರ್ಥಿಗಳು ಅಜ್ಞಾನ ಜನರಿಗೆ ನಿಜವನ್ನು ತಿಳಿಸದ್ದರಿಂದಲೂ ಸಮಾಜದಲ್ಲಿ ಅನೇಕ ತರದ ಒಡಕುಗಳು ಈಗ ಉತ್ಪನ್ನವಾದದ್ದನ್ನು ನೋಡುತ್ತೇವೆ. ಆದರೆ ಲಿಂಗಾಂಗಿಗಳಲ್ಲಿ ಯಾವ ಭೇದವೂ ಇಲ್ಲ. ಅವರೆಲ್ಲರೂ ಸಮಾನರು. ಇದು ಅವರು ಧರಿಸುವ ಲಿಂಗದ ಮಹಾತ್ಮೆಯಾಗಿರುವದು. ಪಾರಮೇಶ್ವರಾಗಮದ ಪಟಲ ೧. ಶ್ಲೋಕ ೬೧ ರಲ್ಲಿ ಹೇಳುವದೇನಂದರೆಃ—

**ನಬಾಲ ವೃದ್ಧ ಭೇದೋಸ್ತಿ ನಮಸ್ಕಾರಾದಿ ಪೂಜನೆ ।**
**ಸರ್ವೇಪಿಮಂದನೀಯಾಹಿ ವಿಧವಾಃ ಪುಷ್ಪಿಣೀ ಮುಖಾ॥**

ಈ ಪ್ರಕಾರ ಎಲ್ಲ ಲಿಂಗಾಂಗಿಗಳೂ ಪೂಜ್ಯರಾಗುವ ಕಾರಣವೇನಂದರೆ

**ಯಸ್ಯಾಸ್ತಿ ಭಕ್ತಿ ರೀಶಾನಿ ವೀರಶೈವ ಮತಾಶ್ರಯಾ ।**
**ಭಕ್ತಿಮಾತ್ರ ಪವಿತ್ರಾಹಿ ಸರ್ವ ಏವಾಧಿ ಕಾರಿಣಃ ॥ ಪಟಲ ೧ ಶ್ಲೋ । ೬೨**

ವೀರಶೈವ ಮತದ ವಿಷಯವಾಗಿ ಯಾರಿಗೆ ಭಕ್ತಿ ಇದೆಯೋ ಅವರು ಆ ಭಕ್ತಿಯಿಂದಲೇ ಪವಿತ್ರರಾಗುತ್ತಾರೆ. ಈ ಭಕ್ತಿ ಮಾರ್ಗವನ್ನು ಅನುಸರಿಸಲು ಎಲ್ಲರಿಗೂ ಸರಿಯಾದ ಅಧಿಕಾರವಿದೆ. ಶ್ರೀ ಗುರು ಕೃಪೆಯಿಂದ ಯಾರಿಗೆ ದೀಕ್ಷೆಯು ಆಗಿ ಲಿಂಗಧಾರಣವಾಗುತ್ತದೋ ಅವರ ಪೂರ್ವದ ಜಾತ್ಯಾದಿಗಳನ್ನು ಎಣಿಸಬಾರದೆಂಬ ಬಗ್ಗೆ ಸೂಕ್ಷ್ಮಾಗಮದ ಪಟಲ ೫ ಶ್ಲೋಕ ೬೩ ರಲ್ಲಿ ಹೇಳಲ್ಪಟ್ಟಿದೆ.

**ಯಸ್ಯೈವಂ ಶಾಂಭವೀದೀಕ್ಷಾ ಜಾತಾಗುರು ಕೃಪಾವಶಾತ್ ।**
**ಪೂರ್ವಜಾತ್ಯಾದಿಕಂತಸ್ಯ ನಸ್ಮರೇತ್ತಾಕೃತಂಹಿತತ್ ॥**

ಈ ಬಗೆಯಾಗಿ ಹೇಳಿದ್ದರೂ ಇತ್ತೀಚೆಗೆ ಲಿಂಗಜ್ಞಾನವಿಲ್ಲದಂಥವರು ಅವನು ಅಂಥ ಜಾತಿಯವನು ಇವನು ಇಂಥ ಜಾತಿಯವನು ಎಂದು ಕರೆದು ಲಿಂಗಮಹಾತ್ಮ್ಯವನ್ನೇ ಕಡಿಮೆ ಮಾಡಿ ಜಾತ್ಯಾದಿಗಳ ಬಲೆಯಲ್ಲಿ ಶಿಲ್ಕಿ ಬಳಲುತ್ತಾರೆ. ಭಕ್ತನು ಗುರುಕರಕಮಲದಿಂದ ಉತ್ಪನ್ನವಾಗುತ್ತಿರುವದರಿಂದ ಆತನ ಪೂರ್ವದ ಜನ್ಮ ಮತ್ತು ಜಾತ್ಯಾದಿಗಳ ಕಲ್ಪನೆಯೇ ಉಳಿಯುವದಿಲ್ಲ. ಈ ಬಗ್ಗೆ ಸೂಕ್ಷ್ಮಾಗಮದ ಪಟಲ ೫ ಶ್ಲೋಕ ೬೪ ರಲ್ಲಿ ಹೇಳಿದುದೇನಂದರೆ,

**ಅಪ್ರಾಕೃತಸ್ಯ ಭಕ್ತಸ್ಯ ಗುರುಹಸ್ತಾಮುಲಾಂಬುಜಾತ್ ।**
**ಪುನರ್ಜಾತಸ್ಯಾತ್ಮಜನ್ಮಜಾತ್ಯಾಡಿನಚಕಲ್ಪಯೇತ್ ॥**

ಹೀಗೆ ತಾವು ಗುರುಕರಜಾತರೆಂದು ಸ್ಪಷ್ಟವಾಗಿ ಹೇಳಿದ್ದರೂ ಇವನ್ನು ಯಾಕೆ ಜನರು ಮರೆಯುತ್ತಾರೋ ತಿಳಿಯದಾಗಿದೆ. ಇದರಿಂದ ಸಮಾಜದಲ್ಲಿಯ ನಿಜವಾದ ಭಕ್ತಿಯು ಕೆಟ್ಟು ನಾನಾವಿಧಭೇದಗಳು ಉಂಟಾಗಲಿಕ್ಕೆ ಕಾರಣವಾಗಿದೆ.

ಸಮಾಜದ ಗುರುಗಳೆನ್ನುವವರೂ, ಹಿರಿಯರೆನ್ನುವವರೂ, ಕಿರಿಯರೆನ್ನುವವರೂ ಲಿಂಗದ ಈ ಭಾವವನ್ನು ಮನಸ್ಸಿನಲ್ಲಿ ತಂದು, ಸಮಾಜದಲ್ಲಿ ಐಕ್ಯ ಭಾವವನ್ನು ಹಬ್ಬಿಸತಕ್ಕದ್ದು. ವೀರಶೈವನು ವಿಶ್ವಕುಟುಂಬಿಯಾಗಿ ವರ್ತಿಸತಕ್ಕದ್ದೆಂಬದನ್ನು ಅವನು ಮರೆಯುಕೂಡದು. ಈಗಿನ ಉದರನಿರ್ವಾಹದ ಕಠಿಣವಾದ ಕಾಲದಲ್ಲಿ ನಾವು ಹೀನವೃತ್ತಿಯುಳ್ಳವರಾಗಿ ಸ್ವಾರ್ಥಿಗಳಾಗಿ ನಮ್ಮದೊಂದು ಹಿತವಾದರೆ ಆಯಿತು, ಎಂದು ಭಾವಿಸಿದರೆ ಸಮಾಜವು ಎಂದಾದರೂ ಉಳಿಯಬಹುದೋ? ಇದು ನಿಜವಾದ ಲಿಂಗಭಕ್ತಿಯೋ?

ನಮ್ಮ ಸಮಾಜದಲ್ಲಿ ನಿಜವಾದ ಲಿಂಗಭಕ್ತಿಯು ಹೋಟು ಹೋದ್ದರಿಂದಲೇ ನಾವು ಅವನತ ಸ್ಥಿತಿಯನ್ನು ಹೊಂದುತ್ತ ನಡೆದಿದ್ದೇವೆ.

ಆದುದರಿಂದ ಲಿಂಗದ ಮಹಿಮೆಯನ್ನು ಲಿಂಗಾಂಗಿಗಳು ಮನನ ಮಾಡಿಕೊಂಡು ಅದರಂತೆ, ಆಚರಿಸಬೇಕಾಗಿರುತ್ತದೆ.

ಈ ಲಿಂಗಾಚರಣೆಯು ವೀರಶೈವರಲ್ಲಿ ಬಹು ಉದಾತ್ತವಾಗಿರುತ್ತದೆ. ಇದರಿಂದಲೇ ನಾವು ಆತ್ಮಸಾಕ್ಷಾತ್ಕಾರವನ್ನು ಹೊಂದಬೇಕು. ವೀರಶೈವರು ತಮ್ಮ ತ್ರಿದೇಹಗಳಾದ ಸ್ಥೂಲ, ಸೂಕ್ಷ್ಮ, ಕಾರಣ ಗಳಿಗೆ ಇಷ್ಟ, ಪ್ರಾಣ, ಭಾವ ಲಿಂಗಗಳ ರೂಪವನ್ನು ತಾಳಿದ ಆ ಮಹಾಲಿಂಗದ ಸಂಬಂಧವನ್ನು ಮಾಡಿಕೊಳ್ಳತಕ್ಕದ್ದು. ಯಜುರ್ವೇದದ ೪೦. ೪೦ ರಲ್ಲಿ ಮಂತ್ರ ೧ ರಲ್ಲಿ ಹೇಳಿರುವದೇನಂದರೆ:--

**ಈಶಾವಾಸ್ಯಮಿದಂ ಸರ್ವಮ್ ॥ ತೇನತ್ಯಕ್ತೇನ ಭುಂಜಿಥಾ: ಮಾಗೃಧಃ ಕಸ್ಯಸ್ವಿದ್ಧನಮ್**

ಈಶ್ವರನಿಂದಲೇ ಈ ಜಗತ್ತೆಲ್ಲ ವ್ಯಾಪಿಸಲ್ಪಟ್ಟಿದೆ. ಆದುದರಿಂದ ಅದನ್ನು ತ್ಯಾಗಭಾವದಿಂದ ಲಿಂಗಾಂಗಿಯು ಉಪಭೋಗ ಮಾಡತಕ್ಕದ್ದು. ಹ್ಯಾಗೆಂದರೆ ತನ್ನ ಪಂಚೇಂದ್ರಿಗಳಲ್ಲಿರುವ, ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗವೆಂಬ ಪಂಚಲಿಂಗಗಳಿಗೂ

ಪಂಚವಿಷಯಗಳನ್ನು ಅರ್ಪಣೆಯಿಂದ ಸಂಬಂಧಿಸಿ, ಆಯಾಯ ಆಯಾ ಯಲಿಂಗಗಳ ಪ್ರಸಾದವನ್ನು ಸ್ವೀಕರಿಸಿ, ಅದರ ಪರಿಣಾಮವನ್ನು ಮಹಾಲಿಂಗವೆಂಬ ತೃಪ್ತಿಲಿಂಗಕ್ಕರ್ಪಿಸಿ ವಾಸನೆ ಎಂಬ ಭವದ ಬೀಜವನ್ನು ನಷ್ಟಪಡಿಸಿ ಲಿಂಗಭೋಗೋಪಭೋಗಿಯಾಗಿ ವರ್ತಿಸತಕ್ಕದ್ದು. ಆದುದರಿಂದ ಯಾವ ಲಿಂಗಾಂಗಿಯನ್ನೂ ಯಾವ ಲಿಂಗಾಂಗಿಯೂ ಹೀನ ದೃಷ್ಟಿಯಿಂದ ನೋಡಕೂಡದು. ನೋಡಿದರೆ, ಆತನಿಗೆ ಲಿಂಗ ನಿಂದೆಯ ದೋಷವು ಪ್ರಾಪ್ತವಾಗುತ್ತದೆ. ಲಿಂಗವು ಎಲ್ಲರಿಗೂ ಒಂದೇ ಇದೆ. ಒಂದು ಲಿಂಗವು ಜಗತ್ತನ್ನೆಲ್ಲ ವ್ಯಾಪಿಸಿದೆ. ಈ ಸಂಗತಿಯನ್ನು ಎಲ್ಲರೂ ಪೂರ್ಣ ಲಕ್ಷದಲ್ಲಿಟ್ಟುಕೊಂಡು ಯಾವಾತನಿಗೆ ಲಿಂಗಧಾರಣವಾಗಿದೆಯೋ ಆತನನ್ನು ಲಿಂಗವೆಂತಲೇ ಕಾಣಬೇಕಲ್ಲವೆ? ಅಂದಮೇಲೆ ಅವರಲ್ಲಿ ಜಾತಿ ವಿಶಿಷ್ಟ ಭೇದ ಭಾವಗಳು ಹ್ಯಾಗೆ ಉಳಿಯುವವು?

---

# ಮಹಾನುಭಾವರಾದ
# ಶ್ರೀ ಬಸವಣ್ಣನವರ ಜನ್ಮ ಸಂವತ್ಸರ

**ಲೇಖಕಃ— ಮಂಜಪ್ಪ ಹರ್ಡೇಕರ. ಹರಿಹರ**

ಕರ್ನಾಟಕವಲ್ಲಿ ಜನ್ಮವೆತ್ತಿದ ಅದ್ವಿತೀಯ ಪುರುಷರಲ್ಲಿ ಅಗ್ರಗಣ್ಯರಾದ ಶ್ರೀ ಬಸವಣ್ಣನವರ ಜನ್ಮ ಸಂವತ್ಸರದ ವಿಷಯವಾಗಿ ಶಿವಾನುಭವ ಸಂಪಾದಕರಾದ ಶ್ರೀಯುತ ಹಳಕಟ್ಟಿಯವರು ಕಳೆದ ೨ ನೆಯ ಸಂಚಿಕೆಯಲ್ಲಿ ಒಂದು ವಿಚಾರಣೀಯವಾದ ಲೇಖವನ್ನು ಬರೆದಿದ್ದಾರಷ್ಟೇ. ಸಂಪಾದಕರು ಪ್ರತಿಪಾದಿಸಿರುವಂತೆ ಲಕ್ಕಣ್ಣ ದಂಡೇಶನು ಬರೆದ ಸಿದ್ಧಾರ್ಥಿ ಸಂವತ್ಸರವು ಎಂದರೆ, ಕ್ರಿ. ಶ. ೧೧೩೯ ನೆಯ ಇಸವಿಯೇ ಬಸವಣ್ಣನವರ ಜನ್ಮ ಸಂವತ್ಸರವೆಂದು ತಿಳಿಯುವುದಾದರೆ ಉಂಟಾಗ ತಕ್ಕ ಸಂದೇಹ ಮತ್ತು

ಬಾಧಕಗಳನ್ನು ಯೋಚಿಸೋಣ.

ಶ್ರೀ ಬಸವಣ್ಣನವರು ಜನ್ಮವೆತ್ತಿದ ಸಂವತ್ಸರವಾಗಲಿ ಅಥವಾ ಜೀವಿಸಿದ ಕಾಲಮಾನವಾಗಲಿ ಇಲ್ಲವೆ ಲಿಂಗೈಕ್ಯವಾದ ಇಸವಿಯಾಗಲಿ ಶಿಲಾಲಿಪಿ ಮೊದಲಾದ ಐತಿಹಾಸಿಕ ಯಾವ ಆಧಾರಗಳಲ್ಲಿಯೂ ಈ ವರೆಗೆ ದೊರೆತಿಲ್ಲ. ಆದಕಾರಣ ಈಗ ಪುರಾಣ ಗ್ರಂಥಗಳಲ್ಲಿರುವ ಸಂಗತಿಗಳ ಮೇಲಿಂದಲೇ ಈ ವಿಷಯವನ್ನು ಗೊತ್ತು ಪಡಿಸಬೇಕಾಗಿದೆ.

ಶ್ರೀ ಬಸವಣ್ಣನವರು ಮೂರು ಪಟ್ಟ ಎಂದರೆ ೩೬ ವರುಷ ಜೀವಿಸಿದ್ದರೆಂದು ವೀರಶೈವ ಪುರಾಣ ಗ್ರಂಥಗಳಲ್ಲಿ ಹೇಳಿರುವ ಸಂಗತಿಯ ಮೇಲೆಯೇ ಇವರ ಜನ್ಮ ಸಂವತ್ಸರವನ್ನು ನಿಶ್ಚಯಿಸುವ ಪ್ರಯತ್ನವು ನಡೆದಿದೆ. ಆದ ಕಾರಣ ಶ್ರೀಯುತ ಹಳಕಟ್ಟಿಯವರು ಕ್ರಿ. ಶ. ೧೧೩೧ ನೆಯ ಇಸವಿಯೇ ಬಸವಣ್ಣನವರ ಜನ್ಮಸಂವತ್ಸರವೆಂದು ತಿಳಿದು ಅಲ್ಲಿಂದ ೩೬ ವರ್ಷಗಳೆಂದರೆ ಕ್ರಿ. ಶ. ೧೧೬೭ ನೆಯ ಇಸವಿಯು ಬಸವಣ್ಣನವರ ಐಕ್ಯ ಸಂವತ್ಸರವೆಂದು ಪ್ರತಿಪಾದಿಸಿದ್ದಾರೆ. ನಾನಾದರೋ ಬಸವಣ್ಣನವರು ಕ್ರಿ. ಶ. ೧೧೬೮ ರಲ್ಲಿ ಐಕ್ಯರಾದರೆಂದು ತಿಳಿದು ಅಲ್ಲಿಂದ ೩೬ ವರುಷದ ಹಿಂದೆ ಎಂದರೆ ಕ್ರಿ. ಶ. ೧೧೩೨ ರಲ್ಲಿ ಬಸವಣ್ಣನವರು ಜನ್ಮವೆತ್ತಿದರೆಂದು ಬಸವಚರಿತ್ರೆಯಲ್ಲಿ ಬರೆದಿದ್ದೇನೆ. ಈ ಪ್ರಕಾರ ನಮ್ಮಿಬ್ಬರ ಪ್ರತಿಪಾದನೆಗೂ ಮುಖ್ಯವಾಗಿ ಪರಿಣಮಿಸಿರುವ "ಬಸವಣ್ಣನವರ ಜೀವಿತ ಕಾಲವು ೩೬ ವರುಷಗಳೆಂಬ" ಸಂಗತಿಯು ಐತಿಹಾಸಿಕ ಆಧಾರಗಳಿಂದ ಸುಳ್ಳಾದ ಪಕ್ಷದಲ್ಲಿ ನಾವೀರ್ವರು ಪ್ರತಿಪಾದಿಸಿರುವ ಜನ್ಮಸಂವತ್ಸರಗಳೂ ತಪ್ಪಾಗಿಯೇ ಪರಿಣಮಿಸುವವು. ಆದರೆ ಅಂಥ ಆಧಾರಗಳು ದೊರೆಯುವವರೆಗೂ ಬಸವಣ್ಣನವರು ೩೬ ವರುಷವೇ ಜೀವಿಸಿದ್ದಾರೆಂಬುದನ್ನು ನಂಬಬೇಕಾಗುವ ಪ್ರಯುಕ್ತ ಇದರ ಮೇಲಿಂದ ಅವರು ಯಾವ ಸಂವತ್ಸರದಲ್ಲಿ ಜನ್ಮವೆತ್ತಿರಬಹುದೆಂಬುದನ್ನು ನೋಡೋಣ.

ಶ್ರೀ ಬಸವಣ್ಣನವರ ಕಾಲಮಾನವನ್ನು ಕಂಡು ಹಿಡಿಯಲು ಬಿಜ್ಜಳರಾಜನ ಪ್ರಭುತ್ವವು ಎಷ್ಟೋ ಮಟ್ಟಿಗೆ ಸಹಾಯವಾಗಿದೆ. ಬಸವಣ್ಣನವರು ಬಿಜ್ಜಳರಾಜನಲ್ಲಿ ಮಂತ್ರಿಗಳಾಗಿದ್ದರೆಂಬ ವಿಷಯದಲ್ಲಿ ಈ ವರೆಗೂ ಶಿಲಾಲಿಪಿಗಳ ಆಧಾರ ದೊರೆಯದಿದ್ದರೂ ಈ ಸಂಗತಿಯು ಸುಳ್ಳೆಂದು ಹೇಳಲಿಕ್ಕೆ ಬರುವಂತಿಲ್ಲ. ಏಕೆಂದರೆ, ವೀರಶೈವರ ಮತ್ತು ಜೈನರ ಪುರಾಣಗ್ರಂಥಗಳಲ್ಲಿ ಬಸವಣ್ಣನವರು ಬಿಜ್ಜಳರಾಜನ ಮಂತ್ರಿಗಳಾಗಿದ್ದರೆಂಬ

ವಿಷಯದಲ್ಲಿ ಮತೈಕ್ಯವೇ ಉಂಟು. ಇಷ್ಟೇ ಅಲ್ಲ, ಈ ಉಭಯ ಪುರಾಣ ಗ್ರಂಥಗಳಿಗಿಂತಲೂ ಐತಿಹಾಸಿಕ ದೃಷ್ಟಿಯಿಂದ ನೋಡುವವರಿಗೆ ಹೆಚ್ಚಿಗೆ ಮಾನ್ಯವಾಗಿರುವ ಶ್ರೀ ಬಸವಣ್ಣನವರ "ಹೊತ್ತಾರೆಯೆದ್ದು ಕಣ್ಣ ಹೊಸೆವುತ್ತ" ಎಂಬ ಮಹೇಶ್ವರ ಸ್ಥಳದ ೧೮೪ ನೆಯ ವಚನದಲ್ಲಿ "ಅಶನ ಶಯನೆಯಾನೆ . ಎಂಬ ಶ್ರುತಿಯು ಬಸವಣ್ಣನೋದುವನೆಂಬರು। ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನೆಂದು ನುಡಿವರಯ್ಯಾ ಪ್ರಮಥರು" ಎಂದು ಬಸವಣ್ಣನವರೇ ಹೇಳಿರುವ ಸಂಗತಿಯಿಂದ ಇವರು ಬಿಜ್ಜಳರಾಜನಲ್ಲಿ ಮಂತ್ರಿಗಳಾಗಿದ್ದರೆಂಬುದು ಸ್ಪಷ್ಟವಾಗುತ್ತದೆ. ಆದ ಕಾರಣ ಬಿಜ್ಜಳರಾಜನ ಪ್ರಭುತ್ವದ ಮೇಲಿಂದ ಬಸವಣ್ಣನವರ ಕಾಲವನ್ನು ನಿಶ್ಚಯಿಸಬಹುದಾಗಿದೆ.

ಬಿಜ್ಜಳರಾಜನು ಕ್ರಿ. ಶ. ೧೧೫೬ ರಿಂದ ೧೧೬೮ ರವರೆಗೆ ಆಳಿದನೆಂದೇ ಈ ವರೆಗಿನ ಚರಿತ್ರೆಗಳಲ್ಲಿ ಬರೆದಿದೆ. ಆದರೆ ಈತನು ಕ್ರಿ. ಶ. ೧೧೬೦ ರಿಂದ ೧೧೬೭ ರ ವರೆಗೆ ಕಲ್ಯಾಣದಲ್ಲಾಳಿದನೆಂತಲೂ ಕ್ರಿ. ಶ. ೧೧೬೭ ರಲ್ಲಿ ಬರೆಯಲ್ಪಟ್ಟ ಒಂದು ಶಿಲಾಲಿಪಿಯಲ್ಲಿ ಈ ರಾಜನು ರಾಜ್ಯತ್ಯಾಗಮಾಡಿ ಹೋದ ಸಂಗತಿಯಿದೆಯೆಂತಲೂ ಶ್ರೀಯುತ ಹಳಕಟ್ಟಿಯವರು ತಮ್ಮ ಲೇಖನದಲ್ಲಿ ಬರೆದಿದ್ದಾರಷ್ಟೆ. ಇದರ ಮೇಲಿಂದ ಕ್ರಿ. ಶ. ೧೧೬೦ ರಿಂದ ಆರು ವರುಷ ಮಾತ್ರ ಬಿಜ್ಜಳನು ಕಲ್ಯಾಣದಲ್ಲಿ ರಾಜ್ಯವಾಳಿದನೆಂದು ಸಿದ್ಧವಾಗುತ್ತದೆ. ಬಿಜ್ಜಳರಾಜನ ಈ ಕಲ್ಯಾಣದ ಪ್ರಭುತ್ವದಲ್ಲಿ ಪುರಾಣಗಳಲ್ಲಿ ಹೇಳಿರುವಂತೆ ಬಲದೇವನು ಸ್ವಲ್ಪ ಕಾಲ ಮಂತ್ರಿಯಾಗಿದ್ದನೆಂದು ತಿಳಿಯುವದಾದರೆ ಬಸವಣ್ಣನವರು ೪-೫ ವರುಷ ಮಾತ್ರ ಬಿಜ್ಜಳನ ಮಂತ್ರಿಗಳಾಗಿದ್ದರೆಂದು ತಿಳಿಯಬೇಕಾಗುತ್ತದೆ.

ಈ ಪ್ರಕಾರ ಬಸವಣ್ಣನವರು ಬಿಜ್ಜಳನ ಮಂತ್ರಿಗಳಾಗಿದ್ದು ೪-೫ ವರುಷ ಮಾತ್ರ ಧರ್ಮ ಪ್ರಸಾರದ ಕಾರ್ಯವನ್ನು ಮಾಡಿ ಬಿಜ್ಜಳನ ಕೊಲೆಯಾದನಂತರ ಅಥವಾ ಆತನು ರಾಜ್ಯ ಪರಿತ್ಯಾಗ ಮಾಡಿದನಂತರ ಇವರೂ ಅದೇ ಕಾಲದಲ್ಲಿ ಲಿಂಗೈಕ್ಯವಾದರೋ ಅಥವಾ ಬಿಜ್ಜಳನ ತರುವಾಯ ಕಲ್ಯಾಣದಲ್ಲಿ ಮಂತ್ರಿಗಳಾಗಿದ್ದು ಧರ್ಮ ಪ್ರಸಾರದ ಕಾರ್ಯವನ್ನು ಮಾಡಿದರೋ ಎಂಬುದು ಅತ್ಯಂತ ಮಹತ್ವದ ಸಂಗತಿಯಾಗಿದೆ. ಇದರ ಮೇಲಿಂದಲೇ ಬಸಣ್ಣನವರ ಜನ್ಮ ಸಂವತ್ಸರವು ನಿಶ್ಚಿತವಾಗತಕ್ಕದ್ದಿದೆ. ಬಿಜ್ಜಳರಾಜನ ತರುವಾಯ ಬಸವಣ್ಣನವರಿದ್ದಾರೆಂಬುದಕ್ಕಾಗಲಿ

ಅಥವಾ ಇರಲಿಲ್ಲವೆಂಬುದಕ್ಕಾಗಲಿ ಶಿಲಾಲಿಪಿ ಮೊದಲಾದ ಐತಿಹಾಸಿಕ ಆಧಾರಗಳೇನೂ ಈ ವರೆಗೂ ದೊರೆತಿಲ್ಲ. ಆದ ಕಾರಣ ಈ ವಿಷಯದಲ್ಲಿ ಈಗ ಪುರಾಣ ಗ್ರಂಥಗಳನ್ನೇ ಆಶ್ರಯಿಸಿ ಯೋಚಿಸಬೇಕಾಗಿದೆ.

ಬಿಜ್ಜಳನ ತರುವಾಯ ಬಸವಣ್ಣನವರು ೮-೯ ವರುಷ ಕಲ್ಯಾಣದಲ್ಲಿ ಮಂತ್ರಿಗಳಾಗಿದ್ದು ಮತ ಪ್ರಸಾರ ಮಾಡಿದರೆಂದು ಶ್ರೀಯುತ ಹಳಕಟ್ಟಿಯವರು ತಮ್ಮ ಲೇಖನದಲ್ಲಿ ಬರೆದಿದ್ದಾರಷ್ಟೇ. ಇದಕ್ಕೆ ಬಿಜ್ಜಳರಾಜನ ಪುರಾಣವನ್ನು ಆಧಾರವಾಗಿ ತೋರಿಸಿದ್ದಾರೆ. ವೀರಶೈವರ ಬಸವಪುರಾಣಾದಿ ಗ್ರಂಥಗಳಲ್ಲಾದರೋ ಬಸವಣ್ಣನವರು ಐಕ್ಯರಾದ ತರುವಾಯ ಬಿಜ್ಜಳನ ಕೊಲೆಯಾಯಿತೆಂದು ಬರೆದಿದೆ. ಬಿಜ್ಜಳನ ಕೊಲೆಯಾಯಿತೋ ಅಥವಾ ಆತನು ರಾಜ್ಯತ್ಯಾಗ ಮಾಡಿದನೋ ಈ ಭಿನ್ನಾಭಿಪ್ರಾಯಗಳ ನಿಜತ್ವವು ಪ್ರಕೃತದ ವಿಷಯಕ್ಕೇನೂ ಅವಶ್ಯಕವಾದುದಲ್ಲವಷ್ಟೆ. ಬಿಜ್ಜಳರಾಜನ ತರುವಾಯ ಬಸವಣ್ಣನವರು ಇದ್ದರೋ ಇಲ್ಲವೋ ಎಂಬುದೇ ಮುಖ್ಯ ಪ್ರಶ್ನೆಯಾಗಿದೆ. ವೀರಶೈವ ಗ್ರಂಥಗಳು ಬಿಜ್ಜಳರಾಜನ ತರುವಾಯ ಬಸವಣ್ಣನವರಿರಲಿಲ್ಲವೆಂದು ಹೇಳುತ್ತವೆ. ಜೈನರ ಗ್ರಂಥಗಳಾದರೋ ಬಸವಣ್ಣನವರು ಬಿಜ್ಜಳನ ತರುವಾಯ ಇದ್ದಾರೆಂದು ಹೇಳುತ್ತವೆ. ಇವುಗಳಲ್ಲಿ ವೀರಶೈವರ ಬಸವ ಪುರಾಣಾದಿ ಗ್ರಂಥಗಳು ಬಸವಣ್ಣನವರ ಸಮಕಾಲೀನರಿಂದ ಬರೆಯಲ್ಪಟ್ಟ ಪ್ರಯುಕ್ತ ಇವೇ ಹೆಚ್ಚು ವಿಶ್ವಸನೀಯವಾದವುಗಳಿದ್ದರೂ ಸ್ವಮತೀಯರಿಂದ ಬರೆಯಲ್ಪಟ್ಟ ಕಾರಣ ಅವುಗಳಲ್ಲಿ ಪಕ್ಷಾಭಿಮಾನದ ದೋಷವಿರುವ ಸಂಭವವಿದೆಯೆಂದು ಗ್ರಹಿಸಿ ಭಿನ್ನಾಭಿಪ್ರಾಯಗಳ ಈ ಉಭಯ ಮತೀಯರ ಪುರಾಣ ಗ್ರಂಥಗಳ ಪ್ರತಿಪಾದನೆಯನ್ನೂ ಬಿಟ್ಟು ಸ್ವತಂತ್ರವಾಗಿಯೇ ಈ ಸಂಗತಿಯನ್ನು ಯೋಚಿಸುವುದು ವಿಹಿತವಾಗಿದೆ.

ಬಿಜ್ಜಳ ರಾಜನ ತರುವಾಯ ಬಸವಣ್ಣನವರು ಕಲ್ಯಾಣದಲ್ಲಿ ಮಂತ್ರಿಗಳಾಗಿದ್ದರೆಂದು ಯೋಚಿಸಿದರೆ ಬಸವಣ್ಣನವರ ಚರಿತ್ರೆಯಲ್ಲಿ ಎಷ್ಟು ವ್ಯತ್ಯಾಸವಾಗಬಹುದೆಂಬುದನ್ನು ಸ್ವಲ್ಪ ಯೋಚಿಸೋಣ. ಕಪ್ಪಡಿಕ್ಷೇತ್ರದಲ್ಲಿಯೇ ಬಸವಣ್ಣನವರು ಐಕ್ಯರಾದರೆಂದು ಈವರೆಗೂ ಜನರು ತಿಳಿದುಕೊಂಡಿದ್ದಾರಷ್ಟೆ. ಇದು ನಿಜವಾಗಿರುವ ಪಕ್ಷದಲ್ಲಿ ಬಸವಣ್ಣನವರು ಕಲ್ಯಾಣದಲ್ಲಿ ಮತ ಪ್ರಸಾರ ಮಾಡುವದನ್ನು ಬಿಟ್ಟು ಕಪ್ಪಡಿಗೇಕೆ ಹೋದರು? ಬಿಜ್ಜಳರಾಜನೇ ಹೋದನಂತರ ಮತ ಪ್ರಸಾರದ ಕಾರ್ಯವನ್ನು ಇವರು

ಮತ್ತು ಚನ್ನಬಸವಣ್ಣನವರೇ ಮೊದಲಾದ ಶಿವಶರಣರು ಕಲ್ಯಾಣದಲ್ಲಿ ಅವಿಚ್ಛಿನ್ನವಾಗಿ ಮತ ಪ್ರಸಾರ ಮಾಡುತ್ತಾ ಇರಬಹುದಾಗಿರಲಿಲ್ಲವೇ? ಶ್ರೀ ಚೆನ್ನಬಸವಣ್ಣನವರು ಕಲ್ಯಾಣವನ್ನು ಬಿಟ್ಟು ಉಳುವಿಗೇಕೆ ಹೋದರು? ತಮ್ಮ ಮತ ಪ್ರಸಾರದ ಕಾರ್ಯಕ್ಕೆ ಭಯಂಕರವಾದ ಯಾವುದೋ ಒಂದು ವಿಘ್ನವುಂಟಾದವಿನಾ ಈ ಪ್ರಕಾರ ಪ್ರಮುಖ ಶರಣರು ಕಲ್ಯಾಣವನ್ನು ಬಿಟ್ಟು ಬೇರೆ ಬೇರೆ ಸ್ಥಳಗಳಿಗೆ ಹೋಗಲು ಕಾರಣವೇ ಇಲ್ಲವಷ್ಟೆ. ಅಂಥ ಪ್ರಸಂಗವು ಬಿಜ್ಜಳರಾಜನ ಮಗನ ಕಾಲದಲ್ಲಿ ಸಂಭವಿಸಿತೆಂಬ ಬಗ್ಗೆ ಯಾವ ಗ್ರಂಥವಲ್ಲಿಯೂ ಯಾವ ಉಲ್ಲೇಖವೂ ಇಲ್ಲ. ಆದರೆ ಬಿಜ್ಜಳರಾಜನ ಕಾಲದಲ್ಲಿಯೇ ಬಸವಣ್ಣನವರು ಕಲ್ಯಾಣವನ್ನು ಬಿಟ್ಟು ಕಪ್ಪಡಿಕ್ಷೇತ್ರಕ್ಕೆ ಹೋಗಲು ಹರಳಯ್ಯ ಮಧುವಯ್ಯರೆಂಬ ಶರಣ ಶಿರೋಮಣಿಗಳಿಗೆ ಬಿಜ್ಜಳರಾಜನಿಂದುಂಟಾದ ಭಯಂಕರ ಹಿಂಸೆಯೇ ಕಾರಣವಾಯಿತೆಂದು ವೀರಶೈವರ ಪುರಾಣ ಗ್ರಂಥಗಳಲ್ಲಿ ಬರೆದಿವೆ. ಇದು ನಂಬಲರ್ಹವಾದ ಸಂಗತಿಯೂ ಆಗಿದೆ.

ಆ ಪ್ರಕಾರ ಬಿಜ್ಜಳರಾಜನಿಂದ ಭಯಂಕರವಾದ ವಿಘ್ನವುಂಟಾಗದೆ ಬಸವಣ್ಣನವರಿಗೆ ಆತನ ತರುವಾಯ ೮-೧೦ ವರುಷ ಮತ ಪ್ರಸಾರ ಮಾಡಲು ಅನುಕೂಲ ದೊರೆತಿದ್ದರೆ ವೀರಶೈವ ಸಮಾಜವು ಈಗ ಬೇರೆ ಸ್ಥಿತಿಯಲ್ಲಿಯೇ ಇರುತ್ತಿದ್ದಿತು. ಆದಕಾರಣ ಬಿಜ್ಜಳನ ತರುವಾಯ ಬಸವಣ್ಣನವರು ಮಂತ್ರಿಗಳಾಗಿದ್ದರೆಂದು ಊಹಿಸುವುದು ಶಕ್ಯವೇ ಅಲ್ಲ. ಬಿಜ್ಜಳರಾಜನ ಪೂರ್ವದಲ್ಲಿಯೇ ಇವರು ಅವತಾರ ಕೃತ್ಯಸೂರೈಸಿತೆಂದು ತಿಳಿದರೆ ಬಿಜ್ಜಳರಾಜನಲ್ಲಿ ಮಂತ್ರಿಗಳಾಗಿದ್ದಾಗ ೪-೫ ವರ್ಷಗಳಲ್ಲಿಯೇ ಮತ ಪ್ರಸಾರದ ಇಷ್ಟು ಕಾರ್ಯಗಳನ್ನು ಮಾಡಿರಬಹುದೇ? ಎಂಬ ಶಂಕೆಯುಂಟಾಗಬಹುದು. ವೀರಶೈವ ಸಮಾಜಕ್ಕೆ ಈಗಿರುವ ಸಂಖ್ಯಾವಿಸ್ತಾರತ್ವವು ಬಸವಣ್ಣನವರ ಕಾಲದಲ್ಲಿಯೇ ಉಂಟಾಯಿತೆಂದು ತಿಳಿವುದೇ ಮೊದಲು ತಪ್ಪು. ಕಳೆದ ಏಳುನೂರು ವರುಷಗಳಿಂದಲೂ ಈ ಸಮಾಜವು ಅನೇಕ ವಿಭೂತಿಗಳಿಂದ ಬೆಳೆಯುತ್ತಲೇ ಬಂದಿದೆಯೆಂಬ ವಿಷಯದಲ್ಲಿ ಆಧಾರಗಳೂ ದೃಷ್ಟಾಂತಗಳೂ ಹೇರಳವಾಗಿವೆ. ನಮ್ಮ ದೃಷ್ಟಿಯಲ್ಲಿ ೪-೫ ವರುಷಗಳು ಬಹು ಕಡಿಮೆಯೆಂದು ತೋರಿದರೂ ಆತ್ಮತೇಜವುಳ್ಳ ಅಂಥ ಮಹಾ ವಿಭೂತಿಗಳು ಅಷ್ಟೇ ಕಾಲದಲ್ಲಿ ಆ ಕಲ್ಯಾಣ ಪ್ರಾಂತದಲ್ಲಿ ಅಭೂತ ಪೂರ್ವವಾದ ಧಾರ್ಮಿಕ ಕ್ರಾಂತಿಯನ್ನುಂಟುಮಾಡಿರಬ

ಹುಪೇಟುದನ್ನು ಮಹಾತ್ಮಾಗಾಂಧಿಯವರು ೨--೩ ವರ್ಷಗಳಲ್ಲಿ ಒಂದು ಸ್ಥಾನವಲ್ಲೆಲ್ಲಾ ಮಾಡಿದ ಅದ್ಭುತ ಕ್ರಾಂತಿಯ ಮೇಲಿಂದ ಚನ್ನಾಗಿ ಊಹಿಸಬಹುದಾಗಿದೆ. ಆದಕಾರಣ ಬಸವಣ್ಣನವರ ಮತ ಪ್ರಸಾರದ ಕಾರ್ಯಕ್ಕೆ ೪-೫ ವರುಷಗಳು ಸಾಲುವುದಿಲ್ಲವೆಂದು ತಿಳಿದು ಬಿಜ್ಜಳರಾಜನ ತರುವಾಯದಲ್ಲಿಯೂ ಇವರು ಇದ್ದರೆಂದು ಗ್ರಹಿಸಬೇಕಾದುದಿಲ್ಲ.

ಬಿಜ್ಜಳರಾಜನ ತರುವಾಯ ಬಸವಣ್ಣನವರು ಆತನ ಮಗನಲ್ಲಿ ಮಂತ್ರಿಗಳಾಗಿದ್ದಿದ್ದರೆ ಬಸವಣ್ಣನವರ ಕೆಲವು ವಚನಗಳಲ್ಲಿ ಹೇಗೆ ಬಿಜ್ಜಳರಾಜನ ಹೆಸರು ಬಂದಿವೆಯೋ ಹಾಗೆಯೇ ಆತನ ಮಗನ ಹೆಸರಾದರೂ ಬರಬೇಕಾಗಿದ್ದಿತು. ಆದರೆ ಒಂದೂ ವಚನವಲ್ಲಾದರೂ ಬಿಜ್ಜಳರಾಜನ ಮಗನ ಹೆಸರು ದೊರೆಯುವುದಿಲ್ಲ. ಆದಕಾರಣ ಬಿಜ್ಜಳರಾಜನ ತರುವಾಯ ಬಸವಣ್ಣನವರು ಇರಲಿಲ್ಲವೆಂದೇ ತಿಳಿಯಬೇಕಾಗುತ್ತದೆ.

ಶ್ರೀ ಬಸವಣ್ಣನವರು ಮಾಡುತ್ತಿದ್ದ ಸ್ವಮತ ಪ್ರಸಾರದ ಕಾರ್ಯವು ಬಿಜ್ಜಳರಾಜನ ಮನಸ್ಸಿಗೆ ಬರುತ್ತಿರಲಿಲ್ಲವೆಂತಲೂ ಇದಕ್ಕೋಸ್ಕರ ಬಿಜ್ಜಳರಾಜನು ಬಸವಣ್ಣನವರಿಗೆ ವಿರೋಧಿಸುತ್ತಿದ್ದನೆಂತಲೂ 'ಬಿಜ್ಜಳನ ಭಂಡಾರವೆನಗೇಕಯ್ಯ? ಆನೀ ಬಿಜ್ಜಳಂಗಂಜುವೇನೇ ಅಯ್ಯ?" ಎಂಬುದಾಗಿ ಬಸವಣ್ಣನವರು ತಮ್ಮ ವಚನಗಳಲ್ಲಿ ಹೇಳಿರುವ ಸಂಗತಿಗಳ ಮೇಲಿಂದ ಸ್ಪಷ್ಟವಾಗುತ್ತದೆ. ಬಿಜ್ಜಳರಾಜನ ಈ ವಿರೋಧವು ಅತಿರೇಕವಾದುದೇ ಹರಳಯ್ಯ ಮಧುವಯ್ಯಗಳಕೊಲೆಗೂ, ಬಿಜ್ಜಳರಾಜನ ರಾಜ್ಯನಾಶಕ್ಕೂ, ಬಸವಣ್ಣನವರ ಅವತಾರ ಕೃತ್ಯ ಸಮಾಪ್ತಿಗೂ ಕಾರಣವಾಯಿತು. ಬಸವಣ್ಣನವರ ಈ ಕೆಳಗಿನ ವಚನದಿಂದ ಈ ಸಂಗತಿಯು ನಿಜವೆಂದು ನಂಬಬಹುದಾಗಿದೆ.

> **ಅರಸು ವಿಚಾರ ಶಿರಿಯು ಶೃಂಗಾರ ಸ್ಥಿರವಲ್ಲ ಮಾನವ। ಕೆಟ್ಟಿತ್ತು ಕಲ್ಯಾಣ ಹಾಳಾಯಿತ್ತು ನೋಡಾ। ಒಬ್ಬ ಜಂಗಮದಭಿಮಾನದಿಂದ ಚಾಳೋಕ್ಯರಾಯನ ಆಳಿಕೆ ತೆಗೆಯಿತ್ತು। ಸಂದಿತ್ತು ಕೂಡಲಸಂಗಮದೇವ ನಿಮ್ಮ ಕವಳಿಗೆಗೆ॥ ಮಹೇಶ್ವರಸ್ಥಳ ೯೯॥**

ಈ ವಚನದ ಮೇಲಿಂದಲೂ ಬಸವಣ್ಣನವರು ಬಿಜ್ಜಳನ ತರುವಾಯ ಕಲ್ಯಾಣದಲ್ಲಿ ಮಂತ್ರಿಗಳಾಗಿರಲಿಲ್ಲವೆಂಬಂಶವೇ ಸಿದ್ಧವಾಗುತ್ತದೆ. ಇಷ್ಟೇ ಅಲ್ಲ; ಕಲ್ಯಾಣ ಹಾಳಾದುದೂ ಬಸವಣ್ಣನವರ ಅವತಾರ ಕೃತ್ಯ ಸಮಾಪ್ತವಾದುದೂ ಒಂದೇ ಕಾಲದಲ್ಲೆಂಬುದು ಸ್ಪಷ್ಟವಾಗುತ್ತದೆ. ಆದಕಾರಣ ಬಿಜ್ಜಳರಾಜನು ಹತವಾದುದು ಅಥವಾ ರಾಜ್ಯತ್ಯಾಗ ಮಾಡಿದುದು

ಕ್ರಿ. ಶ. ೧೧೬೬ ರಲ್ಲಿ ಸಂಭವಿಸಿತೆಂಬುದು ಗೊತ್ತಾಗುವ ಪಕ್ಷದಲ್ಲಿ ಬಸವಣ್ಣನವರೂ ಅದೇ ಸಂವತ್ಸರದಲ್ಲಿಯೇ ಐಕ್ಯರಾದರೆಂದು ಹೇಳಬೇಕಾಗುತ್ತದೆ. ಬಸವಪುರಾಣಾದಿ ವೀರಶೈವರ ಗ್ರಂಥಗಳಲ್ಲಿರುವ ಸಂಗತಿಗೂ ಮೇಲಣ ವಚನಾಭಿಪ್ರಾಯಕ್ಕೂ ಸರಿಬರುವುದರಿಂದ ಈಗ ದೊರೆತಿರುವ ಆಧಾರಗಳಲ್ಲಿ ಈ ಸಂಗತಿಯೇ ಹೆಚ್ಚು ವಿಶ್ವಸನೀಯವಾದುದೆಂದು ತಿಳಿಯಬೇಕಾಗುತ್ತದೆ.

ಶ್ರೀ ಬಸವಣ್ಣನವರ ಐಕ್ಯಕಾಲವು ಕ್ರಿ. ಶ. ೧೧೬೬ನೇಯ ಇಸವಿಯೆಂದು ಗೊತ್ತಾಗುವುದರಿಂದ ಅಲ್ಲಿಂದ ೩೬ ವರುಷಗಳ ಹಿಂದಣ ಇಸವಿಯಾದ ಕ್ರಿ. ಶ. ೧೧೩೦ ರಲ್ಲಿ ಬಸವಣ್ಣನವರು ಜನ್ಮವೆತ್ತಿದರೆಂದು ತಿಳಿಯುವುದೇ ವಿಹಿತವಾಗಿದೆಯೇವಿನಾ ಲಕ್ಕಣ್ಣ ದಂಡೇಶನು ಹೇಳಿದ ಕ್ರಿ. ಶ. ೧೧೩೯ ನೆಯ ಇಸವಿಯನ್ನು ನಂಬಲಿಕ್ಕಾಗುವುದಿಲ್ಲ ಅದನ್ನು ನಂಬುವುದಾದರೆ ಬಸವಣ್ಣನವರು ೩೬ ವರುಷ ಜೀವಿಸಿದ್ದುದು ಸುಳ್ಳೆಂದು ತಿಳಿದು ಅವರು ಕ್ರಿ. ಶ. ೧೧೩೯ ರಿಂದ ೧೧೬೬ ರವರೆಗೆ ೨೭ ವರುಷ ಮಾತ್ರ ಜೀವಿಸಿದ್ದರೆಂದು ತಿಳಿಯಬೇಕಾಗುತ್ತದೆ. ಬಸವಣ್ಣನವರು ೨೭ ವರುಷವೇ ಜೀವಿಸಿದ್ದರೆಂದು ತಿಳಿದರೆ ಇವರು ಮಂತ್ರಿ ಪಟ್ಟಕ್ಕೆ ಬರುವಾಗ ೨೧-೨೨ ವರುಷದವರಾಗಿರಬೇಕಾಯಿತು. ಇಷ್ಟು ಚಿಕ್ಕಪ್ರಾಯದಲ್ಲಿ ಇಂಥ ಮಹತ್ವದ ಸ್ಥಾನವನ್ನು ಸೇರುವಂಥ ಅದ್ವಿತೀಯ ಸಾಮರ್ಥ್ಯವಿದ್ದಿತೆಂದು ತಿಳಿದರೂ ಇವರಿಗೆ ಮತ ಪ್ರಸಾರದ ಕಾರ್ಯದಲ್ಲಿ ಬಹು ಸಹಾಯಕರಾಗಿದ್ದ ಶ್ರೀ ಚೆನ್ನಬಸವಣ್ಣನವರು ಇವರಿಗಿಂತಲೂ ಒಂದುಪಟ್ಟು ಎಂದರೆ ೧೨ ವರುಷ ಚಿಕ್ಕವರಾಗಿದ್ದರೆಂಬ ಸಂಗತಿಯ ಮೇಲಿಂದ ಚೆನ್ನಬಸವಣ್ಣನವರು ಆಗ ೯-೧೦ ವರುಷದವರಾಗಿರಬೇಕಾಗುವುದು. ಇದು ಅಸಂಭವನೀಯವಾದ ಸಂಗತಿಯೇ ಸರಿ. ಆದಕಾರಣ ಬಸವಣ್ಣನವರು ೩೬ ವರುಷ ಜೀವಿಸಿದ್ದರೆಂದು ನಂಬುವುದೇ ವಿಹಿತವಾಗಿದೆ.

ಶ್ರೀ ಬಸವಣ್ಣನವರ ಜನ್ಮ ಸಂವತ್ಸರಕ್ಕಿಂತ ಐಕ್ಯ ಸಂವತ್ಸರದ ವಿಷಯವು ಬಿಜ್ಜಳರಾಜನ ಮೂಲಕ ಐತಿಹಾಸಿಕ ಸಂಗತಿಗಳಿಗೆ ಹೆಚ್ಚು ಸಂಬಂಧಪಟ್ಟಿರುವುದರಿಂದ ಐಕ್ಯ ಸಂವತ್ಸರದಿಂದಲೇ ಹಿಂದಕ್ಕೆ ಹೋಗಿ ಇವರ ಜನ್ಮಸಂವತ್ಸರವನ್ನು ಗೊತ್ತುಪಡಿಸುವುದು ಈಗ ವಿಹಿತವಾಗಿದೆ. ಆದ ಪ್ರಯುಕ್ತ ಮಹಾನುಭಾವರಾದ ಬಸವಣ್ಣನವರು ಕ್ರಿ. ಶ. ೧೧೩೦ ರಲ್ಲಿ ಜನ್ಮವೆತ್ತಿದರೆಂದು ತಿಳಿಯುವುದು ವಿಹಿತವೇ ವಿನಾ ಲಕ್ಕಣ್ಣ ದಂಡೇ

ದನು ಹೇಳಿದ ಕ್ರಿ. ಶ. ೧೧೩೯ ನೆಯ ಸಂವತ್ಸರವನ್ನು ನಂಬಲಿಕ್ಕಾಗು ವುದಿಲ್ಲ. ಈ ಮಹತ್ವದ ವಿಷಯವು ಜಿಜ್ಞಾಸುಗಳಿಂದ ಚೆನ್ನಾಗಿ ಚರ್ಚಿಸಲ್ಪಟ್ಟ ನಿಜಾಂಶವು ವ್ಯಕ್ತವಾಗಲೆಂದು ಈ ನನ್ನ ವಿಚಾರಗಳನ್ನು ವಾಚಕರ ಮುಂದಿಟ್ಟಿದ್ದೇನೆ.

# ಮಲ್ಲವ್ವಾ ಬಾಯಿ ದೇಸಾಯಣಿ - ಬೆಳವಡಿ.

ಲೇಖಕ:— ರಾವಸಾಹೇಬ. ಫ. ಗು. ಹಳಕಟ್ಟಿ ಬಿ. ಎ. ಎಲ್ ಎಲ್, ಬಿ

ಶಿವಾಜಿಮಹಾರಾಜನೊಡನೆ ಬಹು ಶೂರತನದಿಂದ ಯುದ್ಧಮಾಡಿದ ಮಲ್ಲವ್ವಾ ಬಾಯಿಯ ಹೆಸರು ನಮ್ಮ ಕರ್ನಾಟಕಸ್ಥರಲ್ಲಿ ಬಹು ಜನರಿಗೆ ಗೊತ್ತಿದ್ದಂತೆ ಕಂಡು ಬರುವದಿಲ್ಲ. ಇದಕ್ಕೆ ನಮ್ಮ ಕರ್ನಾಟಕ ದೇಶದ ಇತಿಹಾಸದ ಅಜ್ಞಾನವೇ ಕಾರಣವಾಗಿದೆ. ಈ ವೀರಸ್ತ್ರೀಯಳ ಚರಿತ್ರೆಯನ್ನು ಈಗ ಉಪಲಬ್ಧವಿದ್ದಷ್ಟರ ಮಟ್ಟಿಗೆ ನಾನು ಈಲ್ಲಿ ವಿವರಿಸಲಿಕ್ಕೆ ಯತ್ನಿಸಿದ್ದೇನೆ.

ಮಲ್ಲವ್ವಾ ಬಾಯಿಯ ವೃತ್ತಾಂತವು. (೧) ಶಿವಛತ್ರಪತೀಚೆ ಚರಿತ್ರ-ಸಭಾಸದ (೨) ಶಿವಾಜೀ ಬಖರ - ಚಿತ್ರಗುಪ್ತ (೩) ಶಿವದಿಗ್ವಿಜಯ (೪) ಮರಾಠೀ ದಪ್ತರ (೫) ತಾರೀಖ - ಈ - ಶಿವಾಜಿ, ಈ ಹಳೇಕಾಲದ ಗ್ರಂಥಗಳಲ್ಲಿಯೂ, (೧) ಪ್ರಭುರತ್ನ ಮಾಲಾ (೨) ರಿಯಾಸತ - ಸರದೇಸಾಯಿ (೩) ಶಿವ ಚರಿತ್ರ - ಕೇಳೂಸಕರ, ಈ ಆಧುನಿಕ ಇತಿಹಾಸಜ್ಞರ ಗ್ರಂಥಗಳಲ್ಲಿಯೂ, ಮತ್ತು (೧) ಗ್ರ್ಯಾಂಟ್ ಡಫ್ (೨) ಕಿಂಕೇಡ (೩) ಜದುನಾಥ ಸರಕಾರ ಈ ಪ್ರಸಿದ್ಧ ಇತಿಹಾಸ ಸಂಶೋಧಕರ ಇಂಗ್ಲಿಷ ಗ್ರಂಥಗಳಲ್ಲಿಯೂ ಖಂಡಶಃ ಸಿಗುತ್ತದೆ.

ಮೇಲ್ಕಂಡ ಈ ಎಲ್ಲ ಗ್ರಂಥಕಾರರು ಶಿವಾಜಿ ಮಹಾರಾಜನೊಡನೆ ೨೭ ದಿವಸಗಳ ವರೆಗೆ ಅತಿ ಶೂರತನದಿಂದ ಕಾಳಗಮಾಡಿದ ಈ ವೀರಸ್ತ್ರೀಯಳ ಪರಾಕ್ರಮವನ್ನು ಬಹಳವಾಗಿ ಹೊಗಳಿದ್ದಾರೆ. ಆಕೆಯು ಈ ವೇಳೆ

ಯಲ್ಲಿ ತೋರಿಸಿದ ಶೌರ್ಯವು ಯಾರನ್ನಾದರೂ ಆಶ್ಚರ್ಯಗೊಳಿಸುವಂಥಾದ್ದಾಗಿದೆ. ಆದ್ದರಿಂದ ಈ ಸ್ತ್ರೀಯಳು ಯಾರೆಂಬುದನ್ನು ಗೊತ್ತು ಹಚ್ಚುವ ಕುತೂಹಲವು ಈಗ ಮಹಾರಾಷ್ಟ್ರದೇಶದಲ್ಲಿ ಉತ್ಪನ್ನವಾಗಿ, ಅಲ್ಲಿಯ ಜನರು ಈಕೆಯು ಒಬ್ಬ ಮಹಾರಾಷ್ಟ್ರೀಯಳೆಂದು ತೋರಿಸಲು ಯತ್ನಿಸುತ್ತಿರುವರು. ಪ್ರಭುರತ್ನ ಮಾಲಾಕಾರರು ಈಕೆಯು ಬೆಳವಡಿಯಲ್ಲಿಯ ಒಬ್ಬ ಕಾಯಸ್ಥ ಸ್ತ್ರೀಯಳೆಂದು ಬರೆದಿದ್ದಾರೆ. ಮತ್ತೊಬ್ಬ ಲೇಖಕರು ಜ್ಞಾನ ಪ್ರಕಾಶದ ೮-೧೨-೧೯೧೮ ನೇ ಇಸ್ವಿಯ ಸಂಚಿಕೆಯಲ್ಲಿ ಈಕೆಯು ಒಬ್ಬ ಚಿತ್‌ಪಾವನ ಬ್ರಾಹ್ಮಣ ವೀರಾಂಗನೆ ಎಂದು ಕಾಣಿಸಿದ್ದಾರೆ. ಈ ಮಲ್ಲವ್ವಾಬಾಯಿಯು ಮಹಾರಾಷ್ಟ್ರ ಸ್ತ್ರೀಯಳಾಗಿರದೆ ಒಬ್ಬ ಕರ್ನಾಟಕಸ್ಥಳೇ ಆಗಿದ್ದಾಳೆ. ಈಕೆಯು ಬೆಳಗಾವ ಜಿಲ್ಹೆಯ ಪೈಕಿ ಸಂಪಗಾವ ತಾಲುಕಿನಲ್ಲಿರುವ ಬೆಳವಡಿ ದೇಸಗತಿಯ ಮನೆತನದವಳು ಮತ್ತು ಒಬ್ಬ ವೀರಶೈವಳು. ಈ ಸಂಗತಿಯನ್ನು ಭಾರತ ಸಂಶೋಧಕ ಮಂಡಳಿಯ ಸೆಕ್ರೆಟರಿಗಳಾದ ಕೈ.ವಾ.ಪಟವರ್ಧನ ಇವರು ಕೇಸರೀ ಪತ್ರದ ೩ನೇ ಡಿಸೆಂಬರ ೧೯೧೮ನೇ ಇಸ್ವಿಯ ಸಂಚಿಕೆಯಲ್ಲಿ ಪ್ರಸಿದ್ಧಿಸಿರುವ ತಮ್ಮ ಲೇಖನದಲ್ಲಿ ಒಪ್ಪಿಕೊಂಡಿದ್ದಾರೆ.

ಈ ಸ್ತ್ರೀಯಳ ಪರಾಕ್ರಮದ ವರ್ಣನೆಯು ಶಿವದಿಗ್ವಿಜಯ, ಪ್ರಭುರತ್ನಮಾಲಾ, ರಿಯಾಸತ ಮತ್ತು ಜದುನಾಥ ಸರಕಾರ ಇವರ ಲೇಖಗಳಲ್ಲಿ ವಿಶೇಷವಾಗಿ ಕಂಡು ಬರುತ್ತದೆ. ಇವುಗಳ ಆಧಾರದಿಂದ ಕೆಳಗಿನ ಸಂಗತಿಗಳನ್ನು ವಿವರಿಸಿದ್ದೇನೆ.

ಶಿವಾಜಿಮಹಾರಾಜನು ರಾಯಗಡದಲ್ಲಿ ರಾಜ್ಯಾಭಿಷಿಕ್ತನಾದ ಬಳಿಕ ಸನ್ ೧೬೭೬ನೇ ಇಸ್ವಿಯ ಅಂತ್ಯಭಾಗದಲ್ಲಿ ತಂಜಾವರ ಪ್ರಾಂತದ ಕಡೆಗೆ ದಿಗ್ವಿಜಯಕ್ಕಾಗಿ ಹೊರಟಿದ್ದು ಇತಿಹಾಸ ಪ್ರಸಿದ್ಧವೇ ಇರುತ್ತದೆ. ಈ ವೇಳೆಯಲ್ಲಿ ಅವನು ೩೦ ಸಹಸ್ರ ರಾವುತರನ್ನೂ ೪೦ ಸಹಸ್ರ ಕಾಲ್ದಳವನ್ನೂ ಸಿದ್ಧ ಪಡಿಸಿಕೊಂಡು ಮೊದಲಿಗೆ ಗೋವಳಕೊಂಡ ಸೀಮೆಯನ್ನು ನುಗ್ಗಿದನು. ಆ ಮೇಲೆ ಸನ್ ೧೬೭೭ನೇ ಮಾರ್ಚ ತಿಂಗಳಿನಲ್ಲಿ ಕಡಪಾ, ಕರ್ನೂಲಗಳ ನೆರೆಯಲ್ಲಿಹಾಯ್ದು ಶ್ರೀಶೈಲ ಮಲ್ಲಿಕಾರ್ಜುನನ ದರ್ಶನವನ್ನು ತೆಗೆದುಕೊಂಡು, ಪಯಣ ಗಟ್ಟದ ಮಾರ್ಗವಾಗಿ ದ್ರಾವಿಡ ದೇಶವನ್ನು ಸೇರಿ ಜಿಂಜೀ, ವೆಲ್ಲೂರ, ಅರಣೀ ಕೋಟೆಗಳನ್ನು ಹಿಡಿದುಕೊಂಡನು. ಆ ಮೇಲೆ ತನ್ನ ತಮ್ಮನಾದ ವೆಂಕೋಜಿಯನ್ನು ಹಣ್ಣಿಗೆ ತಂದು, ನೊವ್ಹೆಂಬರ

ತಿಂಗಳಿನ ಸುಮಾರಕ್ಕೆ ತನ್ನ ತಂದೆಯ ಜಹಾಗೀರುಗಳಾದ ಕೋಲಾರ, ಬೆಂಗಳೂರ, ಹೊಸಪೇಟೆ, ಬಳ್ಳಾಪೂರ, ಸೀರ್‍ಯ ಪ್ರಾಂತಗಳನ್ನು ಕೈವಶ ಮಾಡಿಕೊಂಡು, ಡಿಶಂಬರ ತಿಂಗಳಿನಲ್ಲಿ ಉತ್ತರ ದಿಕ್ಕಿನಕಡೆಗೆ ಅಂದರೆ ಸ್ವದೇಶದ ಕಡೆಗೆ ಹೊರಳಿದನು. ತರುವಾಯ ಅವನು ಬಲು ಭದ್ರವಾದ ಕೊಪ್ಪಳ, ಬಹದೂರ ಬೆಂಡಾ ಕೋಟೆಗಳನ್ನು ಹಿಡಿದುಕೊಂಡು, ಪಶ್ಚಿಮಕ್ಕೆ ಒಲಿದು ಧಾರವಾಡ ಜಿಲ್ಹೆಯೊಳಗಿನ ಗದಗ, ಮುಳಗುಂದ, ಲಕ್ಷ್ಮೇಶ್ವರ, ಅಲ್ಲಿಂದ ಬೆಳಗಾವ ಜಿಲ್ಹೆಯಲ್ಲಿಯ ಬೆಳವಡಿ, ತೊರಗಲ್ಲ ಮೇಲಿಂದ ಹಾಯ್ದು, ಪನಹಾಳಾ ಮಾರ್ಗವಾಗಿ ತನ್ನ ರಾಜಧಾನಿಯಾದ ರಾಯಗಡಕ್ಕೆ ಹೋದನು. ಅವನ ಈ ದಕ್ಷಿಣ ದಿಗ್ವಿಜಯವು ಶಿವಾಜಿಯ ಇತಿಹಾಸದಲ್ಲಿ ಅತಿಶಯ ಮಹತ್ವದ್ದೆಂದು ಇತಿಹಾಸಕಾರರು ಎಣಿಸಿದ್ದಾರೆ. ಈ ದಿಗ್ವಿಜಯಕ್ಕೆ ಶಿವಾಜಿಗೆ ೧೮ ತಿಂಗಳುಗಳು ಹಿಡಿದವು. ಈ ದೌಡಿನಲ್ಲಿ ಶಿವಾಜಿಯು ಸಂಪಗಾವದಿಂದ ೧೪ ಮೈಲುಗಳ ಮೇಲಿರುವ ಬೆಳವಡಿಯ ಕೋಟೆಯ ಸಮೀಪಕ್ಕೆ ಬಂದಾಗ್ಗೆ ಆತನು ಮಲ್ಲವ್ವಾ ಬಾಯಿಯ ಕೂಡ ಯುದ್ಧಮಾಡುವ ಪ್ರಸಂಗವು ಒದಗಿತು.

ಶಿವಾಜಿಯ ದಂಡು ಬೆಳವಡಿಯ ಸಮೀಪಕ್ಕೆ ಬಂದ ಕೂಡಲೆ, ಅವನ ಸಾಮಾನ ಪುರವಠೆಗಾರರು ಸುತ್ತಲಿನ ಪ್ರದೇಶವನ್ನು ಸುಲಿಯಲಾರಂಭಿಸಲು, ಅವರಿಗೂ ಕೋಟೆಯವರಿಗೂ ಜಗಳ ಹತ್ತಿತು. ಇದರಲ್ಲಿ ಬೆಳವಡಿಯವರು ಶಿವಾಜಿಯ ಉಗ್ರಾಣದ ಎತ್ತುಗಳನ್ನು ಕಸೆದು ಕೊಂಡರೆಂದು ಕೆಲವು ಗ್ರಂಥಕಾರರು ಬರೆದಿದ್ದಾರೆ. ಮತ್ತೆ ಕೆಲವು ಗ್ರಂಥಕಾರರು ಶಿವಾಜಿಯ ದಂಡಿನವರು ಧಾನ್ಯವನ್ನು ಎತ್ತಲಿಕ್ಕೆ ಹೋದಾಗ್ಗೆ, ಅವರಲ್ಲಿ ಕೆಲವರು ಬೆಳವಡಿಯವರಿಂದ ಕೊಲ್ಲಲ್ಪಟ್ಟರೆಂದು ಉಲ್ಲೇಖಿಸಿದ್ದಾರೆ. ಅವರೆ ಇವರಲ್ಲಿ ನಿಜವಾದ ಅಂಶವು ಏನೇ ಇರಲಿ, ಇಂಥಾದ್ದೊಂದು ನೆವವು ಬೆಳವಡಿಯವರೊಂದಿಗೆ ಕಾಳಗ ಹೂಡಲಿಕ್ಕೆ ಶಿವಾಜಿಗೆ ಸಾಕಾಯಿತೆಂದು ಹೇಳಲಿಕ್ಕೆ ಅಡ್ಡಿ ಇಲ್ಲ. ಕೂಡಲೇ ಅವನು ಬೆಳವಡಿಯ ಕೋಟೆಯನ್ನು ಮುತ್ತಿದನು. ಆ ಕಾಲದಲ್ಲಿ ಈಶಪ್ರಭು ಎಂಬುವವನು ಬೆಳವಡಿಯ ದೇಸಾಯಿಯಾಗಿದ್ದನು. ಅವನು ಶಿವಾಜಿ ಮಹಾರಾಜನ ಅಪರಿಮಿತ ಸೈನ್ಯವು ತನ್ನ ಕೋಟೆಗೆ ಮುತ್ತಿಗೆ ಹಾಕಿದ್ದನ್ನು ಕಂಡು ಹೆದರಲಿಲ್ಲ. ಅವನು ಒಮ್ಮೆಲೇ ಕೋಟೆಯ ಬಾಗಿಲುಗಳನ್ನು ಇಕ್ಕಿ ಯುದ್ಧಕ್ಕೆ ಅಣಿಯಾದನು. ಕೆಲವು ದಿವಸಗಳ ವರೆಗೆ ಮುತ್ತಿಗೆಯು ಹಾ

ಗೆ ಯೋ ಸಾಗಿತು. ಈ ಕಾಲದಲ್ಲಿ ದಾದಾಜಿರಘುನಾಥ ಪ್ರಭು ಮಹಾಡ ಕರ ಎಂಬುವವನು ಶಿವಾಜಿಯ ದಳಪತಿಯಾಗಿದ್ದನು. ಅವನು ಒಂದು ಕಪಟೋಪಾಯದಿಂದ ಕೋಟೆಯೊಳಗಿನ ಮನೆಗಳಿಗೆ ಒಮ್ಮಿಂದೊಮ್ಮೆಲೇ ಬೆಂಕಿಯನ್ನು ಹಚ್ಚಿಸಿದನು. ಆಗ ಕೋಟೆಯೊಳಗಿನ ದಂಡಾಳುಗಳು ಆ ಬೆಂಕಿಯನ್ನು ನಂದಿಸುವದರಲ್ಲಿ ತೊಡಗಿರುವ ಸಂಧಿಯನ್ನು ಸಾಧಿಸಿ ಶಿವಾಜಿಯ ದಂಡಾಳುಗಳು ಕೋಟೆಗೆ ಲಗ್ಗೆ ಏರಿ, ಒಳಗೆ ನುಗ್ಗಿದರು. ಕೂಡಲೇ ಶಿವಾಜಿಯ ದಂಡಾಳುಗಳಿಗೂ ಈಶಪ್ರಭುವಿನ ದಂಡಿಗೂ ಕೈ ಗೈ ಹತ್ತಿ ಕಾಳಗವೆಸಗಿತು. ಆಗ ಈಶಪ್ರಭುವು ಪೂರಾ ಘಾಯಪಟ್ಟು ಪ್ರಾಣ ಬಿಟ್ಟನು. ಈ ಮೇರೆಗೆ ತಮ್ಮ ಒಡೆಯನು ಮಡಿವದ್ದನ್ನು ಅವನ ದಂಡಾಳುಗಳು ನೋಡಿ, ಧೈರ್ಯಗುಂದಿ ಓಡಿ ಹೋಗುವ ಯೋಚನೆಯಲ್ಲಿದ್ದರು. ಮತ್ತು ಕೋಟೆಯು ಶಿವಾಜಿಯ ಕೈಯಲ್ಲಿ ಎಲ್ಲಿ ಬೀಳುವದೋ ಎಂಬ ಭೀತಿಯು ಉತ್ಪನ್ನವಾಯಿತು. ಇಂಥ ಬಿಕ್ಕಟ್ಟಿನ ಸಮಯದಲಿ ಈಶಪ್ರಭುವಿನ ಹೆಂಡತಿಯಾದ ಮಲ್ಲವ್ವಾ ಬಾಯಿಯು ಅತಿ ಶೀಘ್ರವಾಗಿ ರಣಭೂಮಿಗೆ ಬಂದು, ತನ್ನ ಮಡಿದ ಪತಿಯ ಮಗ್ಗಲಲ್ಲಿ ಬಿದ್ದಿದ್ದ ಖಡ್ಗ ವನ್ನು ಕೈಯಲ್ಲಿ ತೆಗೆದುಕೊಂಡು ಕುದುರೆಯನ್ನೇರಿ, ಎದೆಯೊಡೆದುಕೊಂಡು ಓಡಿ ಹೋಗುವ ಯೋಚನೆಯಲ್ಲಿದ್ದ ತನ್ನ ದಂಡಾಳುಗಳನ್ನು ಯುದ್ಧಕ್ಕೆ ಹುರಿದುಂಬಿಸ ಹತ್ತಿದಳು. ಆಗ ಆಕೆಯ ಸೈನಿಕರು ಆಕೆಯ ಈ ಉಬ್ಬಾ ಳುತನವನ್ನು ನೋಡಿ, ಹುರಿಗೊಂಡು ಶಿವಾಜಿಯೊಡನೆ ಯುದ್ಧಕ್ಕೆ ಸಿದ್ಧ ರಾದರು. ಆ ಮೇಲೆ ಕೋಟೆಯಲ್ಲಿ ಎರಡು ಪ್ರಹರುಗಳ ವರೆಗೆ ಕಾಳಗವು ನಡೆಯಿತೆಂದು ಬಖರುಗಳಲ್ಲಿ ಬರೆಯಲ್ಪಟ್ಟಿದೆ. ಈ ವೇಳೆಯಲ್ಲಿ ಮಲ್ಲವಾ ಬಾಯಿಯು ಶತ್ರುಗಳೊಡನೆ ಕಾದಾಡಿ ಕಟ್ಟಕಡೆಗೆ ಅವರನ್ನು ಕೋಟೆಯ ಹೊರಗೆ ಅಟ್ಟಿ ಬಿಟ್ಟಳು!!

ಈ ಮೇರೆಗೆ ಒಬ್ಬ ಸ್ತ್ರೀಯಳಿಂದ ಸೋಲಿಸಲ್ಪಟ್ಟಿದ್ದಕ್ಕೆ ಶಿವಾಜಿಯ ಮನಸ್ಸಿಗೆ ಬಹಳ ಹತ್ತಿತು. ಈ ದಕ್ಷಿಣ ದಿಗ್ವಿಜಯದಲ್ಲಿ ವಿಶೇಷ ಕೀರ್ತಿ ಗೊಂಡಿದ್ದ ಆತನು ಈ ಕೋಟೆಯನ್ನು ಹಾಗೆಯೇ ಬಿಟ್ಟುಹೋಗುವದು ಅವನ ಜೀವದ ಸುತ್ತು ಬಂದಿತು. ಆದ್ದರಿಂದ ಆತನು ಈ ಮುತ್ತಿಗೆಯನ್ನು ಮತ್ತಿಷ್ಟು ಬಿಗಿಯಾಗಿ ಸಾಗಿಸಿದನು. ಕೋಟೆಯ ಸುತ್ತಲೂ ತನ್ನ ದಂಡಾ ಳುಗಳ ಆಶ್ರಯಕ್ಕೆ ಅಲ್ಲಲ್ಲಿ ಕಂದಕಗಳನ್ನು ಅಗಿಸಿದನು. ಮತ್ತು ಅವು ಗಳ ಮರೆಯಿಂದ ಮೇಲಿಂದ ಮೇಲೆ ಕೋಟೆಯನ್ನು ಲಗ್ಗೆ ಏರಲು ಯ

ತ್ನಿಸಿದನು. ಆದರೆ ಅವೆಲ್ಲವುಗಳೂ ನಿಷ್ಫಲವಾದವು.

ಶಿವಾಜಿಯು ದಕ್ಷಿಣ ದೇಶದ ದಿಗ್ವಿಜಯದಲ್ಲಿ ಜಿಂಜೀ, ವೆಲ್ಲೂರು ಇವುಗಳಂಥ ಅನೇಕ ಭದ್ರವಾದ ಕೋಟೆಗಳನ್ನು ಸಾಧಿಸಿಕೊಂಡಿದ್ದರೂ ಇಷ್ಟು ತೊಂದರೆಯನ್ನು ಆತನಿಗೆ ಯಾರೂ ಕೊಟ್ಟಿದ್ದಿಲ್ಲ. ಒಂದು ಸಣ್ಣ ಕೋಟೆಯ ಮುಂದೆ ಅವನು ತನ್ನ ಅಸಂಖ್ಯ ಸೇನೆಯೊಡನೆ ಒಬ್ಬ ಸ್ತ್ರೀಯಳೊಂದಿಗೆ ಇಷ್ಟು ದಿವಸಗಳ ವರೆಗೆ ನಿಷ್ಫಲವಾಗಿ ಹೋರಾಡುತ್ತಿರುವದನ್ನು ನೋಡಿ ಇಡೀ ದೇಶವೆಲ್ಲ ಬೆರಗಾಯಿತು. ಮತ್ತು ಜನರು ಅವನ ಅವಹೇಲನೆ ಮಾಡ ತೊಡಗಿದರು. ಈ ಸಂಗತಿಯು, ರಾಜಾಪುರದಲ್ಲಿಯ ಒಬ್ಬ ಇಂಗ್ಲಿಷ ವರ್ತಕನು ತಾ ೨೮-೨-೧೬೭೮ ನೇ ಇಸ್ವಿಯ ದಿವಸ ಬರೆದ ಒಂದು ಪತ್ರದಿಂದ ಸ್ಪಷ್ಟವಾಗಿ ತಿಳಿದು ಬರುತ್ತದೆ. ಅವನು ಅದರಲ್ಲಿ ಬರೆದಿರುವದೇನಂದರೆ:—

" He is at present besieging a fort, where by relation of their own people come from him, has suffered more disgrace than ever he did from all the powers of the Moghal or the Deccanies (Bijapuries) and he who hath conquered so many kingdoms is not able to reduce this woman Desai." (**ಮಾಡರ್ನರಿವ್ಯೂ ೧೯೧೮ ನೊವ್ಹೆಂಬರ ಸಂಚಿಕೆ.**)

" ಈಗ ಆತನು (ಶಿವಾಜಿಯು) ಒಂದು ಕೋಟೆಯನ್ನು ಮುತ್ತುತ್ತಲಿದ್ದಾನೆ. ಮೊಗಲ ಅಥವಾ ವಿಜಾಪುರ ಬಾದಶಹರ ದಂಡಾಳುಗಳ ಕೈಯಲ್ಲಿ ಆತನು ಎಷ್ಟು ಅವಮಾನವನ್ನು ಹೊಂದಿದ್ದನೋ ಅದಕ್ಕೂ ಹೆಚ್ಚಿನ ಅವಮಾನವನ್ನು ತನಗೆ ಸಂಬಂಧ ಪಟ್ಟ ಜನರಲ್ಲಿಯೇ ಈಗ ಹೊಂದಿರುವನು. ಮತ್ತು ಯಾವ ಮನುಷ್ಯನು ಅನೇಕ ರಾಜ್ಯಗಳನ್ನು ಗೆದ್ದನೋ ಅಂಥವನು ಈ ಒಬ್ಬ ಸ್ತ್ರೀಯಳಾದ ದೇಸಾಯಣಿಯನ್ನು ಗೆಲ್ಲಲಿಕ್ಕೆ ಅಸಮರ್ಥನಾಗಿದ್ದಾನೆ. "

ಈ ಮುತ್ತಿಗೆಯು ಬಿಟ್ಟೂ ಬಿಡದೆ ೨೭ ದಿವಸಗಳ ವರೆಗೆ ನಡೆಯಿತು. ಆದರೆ ೨೭ ದಿವಸಗಳ ತರುವಾಯ ಕೋಟೆಯಲ್ಲಿಯ ಸಾಮಗ್ರಿಗಳು ತೀರಿಹೋದವು. ಮಲ್ಲವ್ವಾ ಬಾಯಿಯ ದಂಡಾಳುಗಳು ಉಪವಾಸ ಬೀಳುವ ಹೊತ್ತು ಬಂದೊದಗಿತು. ಆಕೆಯ ಮದ್ದು ಗುಂಡುಗಳಾದರೂ ತೀರಿದವು. ಆದ್ದರಿಂದ ಮಲ್ಲವ್ವಾ ಬಾಯಿಗೆ ತನ್ನ ಕೋಟೆಯನ್ನು ಇನ್ನು ಮುಂದೆ ಕಾಪಾಡಿಕೊಳ್ಳುವದು ಅಸಾಧ್ಯವೆಂದು ಅನಿಸಹತ್ತಿತು. ಆದರೂ

ಆಕೆಯು ಎದೆಗುಂದಲಿಲ್ಲ. ಇಂಥ ಸಮಯದಲ್ಲಿ ಮತ್ತೊಬ್ಬ ಅಳ್ಳೆದೆಯ ಸೇನಾ ನಾಯಕನು ಆಕೆಯ ಸ್ಥಳದಲ್ಲಿದ್ದರೆ, ಅವನು ಕೋಟೆಯನ್ನು ಶಿವಾಜಿಗೆ ಒಪ್ಪಿಸಿ ಶರಣು ಹೋಗುತ್ತಿದ್ದನು. ಇಲ್ಲವೆ ತನ್ನ ಜೀವವನ್ನು ಉಳಿಸಿಕೊಳ್ಳುವದಕ್ಕಾಗಿ ಪಲಾಯನ ಮಾಡುತ್ತಿದ್ದನು. ಆದರೆ ಮಲ್ಲವ್ವಾ ಬಾಯಿಯು ಹಾಗೆ ಮಾಡಲಿಲ್ಲ ಆ ಶೂರ ಸ್ತ್ರೀಯಳು ಆಗ ಮಾಡಿದ ಪರಾಕ್ರಮದ ಸಂಗತಿಯು ತಾರೀಖ-ಈ-ಶಿವಾಜಿ ಎಂಬ ಗ್ರಂಥದಲ್ಲಿ ಕೆಳಗೆ ಬರೆದ ಮೇರೆಗೆ ವಿವರಿಸಲ್ಪಟ್ಟಿದೆ. ಏನಂದರೆ:-- "ಅವಳು ತನ್ನ ದಂಡಾಳುಗಳನ್ನು ಕೂಡಿಕೊಂಡು ಕೋಟೆಯ ಬಾಗಿಲಗಳನ್ನು ತೆರೆದು ಅತಿ ಧೈರ್ಯದಿಂದ ಹೊರಬಿದ್ದು ಹೋಗಿ, ಶಿವಾಜಿಯ ಸೇನಾಸಮುದ್ರದ ಮೇಲೆ ಫಕ್ಕನೆ ಎರಗಿದಳು. ಆಗ ಆಕೆಯು ಮುತ್ತಿಗೆಗೋಸ್ಕರ ಶಿವಾಜಿಯು ಏರ್ಪಡಿಸಿದ್ದ ಕಟ್ಟಡಗಳನ್ನೆಲ್ಲ ಕೆಡವಿ, ತನ್ನನ್ನು ಎದುರಿಸಿದವರನ್ನು ಹಿಮ್ಮೆಟ್ಟಿಸಿದಳು. ಮತ್ತು ಮುತ್ತಿಗೆ ಹಾಕಿದವರಲ್ಲಿ ಬಹು ಜನರನ್ನು ಕೊಂದಳು. ಹೀಗೆ ಇಡೀ ದಿವಸ ಆಕೆಯು ಅತ್ಯಂತ ಶೌರ್ಯದಿಂದ ರಣಭೂಮಿಯಲ್ಲಿ ಯುದ್ಧ ಮಾಡಿದಳು." ಆದರೂ ಶಿವಾಜಿಯು ಆಕೆಯನ್ನು ಸೋಲಿಸಲು ಸಮರ್ಥನಾಗಲಿಲ್ಲ. ಆದರೆ ಶಿವಾಜಿಯ ಅಪರಿಮಿತ ಸೈನ್ಯದ ಮುಂದೆ ಆ ವೀರ ಅಬಲೆಯ ಆಟವು ಎಷ್ಟು ಹೊತ್ತು ಸಾಗಬಹುದು? ಆಕೆಯ ಸೈನ್ಯವು ಯುದ್ಧದಲ್ಲಿ ಮಡಿದು ಬರ ಬರುತ್ತ ಕಡಿಮೆ ಕಡಿಮೆಯಾಗಹತ್ತಿತು. ಈ ಮೇರೆಗೆ ಮಲ್ಲವ್ವಾ ಬಾಯಿಯು ತನ್ನ ಶಕ್ತಿ ಇರುವವರೆಗೆ ವೈರಿಗಳ ಕೂಡ ಕಾದಾಡಿ ಕಟ್ಟಕಡೆಗೆ ನಿರುಪಾಯಸ್ಥಳಾಗಿ ತನ್ನ ಬೆಂಗಾವಲಿನ ಕೆಲ ದಂಡಾಳುಗಳೊಡನೆ ತನ್ನ ಕುದುರೆಯನ್ನು ಅತಿ ತ್ವರೆಯಾಗಿ ಓಡಿಸುತ್ತ ರಣಾಂಗಣವನ್ನು ಬಿಟ್ಟು ಹೊರಟಳು ಆಗ ಶಿವಾಜಿಯ ದಂಡನಾಯಕನಾದ ದಾದಾಜಿಯು ಆಕೆಯ ಬೆನ್ನು ಹತ್ತಿದನು. ಅವನು ಆಕೆಯನ್ನು ಹಿಡಿದ ಸಂಗತಿಯು ಶಿವದಿಗ್ವಿಜಯದಲ್ಲಿ ಹೀಗೆ ವರ್ಣಿಸಲ್ಪಟ್ಟಿದೆ:-- ದಾದಾಜಿಯು ಆಕೆಯನ್ನು ಸಮೀಪಿಸಿ, ಆಕೆಯ ಕುದುರೆಯ ಹಿಂಗಾಲನ್ನು ಕಡಿದನು. ಕೂಡಲೇ ಕುದುರೆಯು ನೆಲಕ್ಕುರುಳಿತು. ಆಗ ಮರಾಠಾ ಸೇನಿಕರು ಆಕೆಯನ್ನೂ ಆಕೆಯ ಪರಿವಾರವನ್ನೂ ಸುತ್ತುಗಟ್ಟಿದರು. ಆದರೂ ಆ ಸ್ತ್ರೀಯಳು ಅವರಿಗೆ ಶರಣು ಹೋಗಲಿಲ್ಲ. ಪಾದಚಾರಿಯಾಗಿಯೇ ಅವರೊಂದಿಗೆ ಕಾದಾಡ ಹತ್ತಿದಳು. ಆ ಸಮಯದಲ್ಲಿ ಅವಳ ಕೈಗೆ ಒಂದು ದೊಡ್ಡ ಘಾಯವಾಗಿ ಅದರಿಂದ ರಕ್ತವು ಚಿಮ್ಮ ಹತ್ತಿತು.

ಹೀಗಾಗಿ ಅವಳು ಹೋರಾಡಲು ಅಸಮರ್ಥಳಾದಳು. ಆಗ ದಾದಾಜಿಯು ಆಕೆಯನ್ನು ಹಿಡಿದೊಯ್ದು ಶಿವಾಜಿಗೆ ಒಪ್ಪಿಸಿದನು.

ಹುಡಿಯಲ್ಲಿ ಮುಳುಗಿದ ಮತ್ತು ರಕ್ತದಿಂದ ನೆನೆದ ಆ ವೀರಾಂಗನೆಯನ್ನು ನೋಡಿದ ಕೂಡಲೆ ಶಿವಾಜಿಯ ಮನಸ್ಸು ಕರಗಿತು. ಅವನು ಆಕೆಯ ವಿಷಯದಲ್ಲಿ ಅತ್ಯಂತ ಪೂಜ್ಯ ಭಾವವನ್ನು ತಾಳಿ, ಅವಳನ್ನು ಬಹಳವಾಗಿ ಹೊಗಳಿ, ಅವಳ ದೇಸಗತಿಯ ಗ್ರಾಮುಗಳೊಳಗಿನ ಎರಡು ಗ್ರಾಮುಗಳನ್ನು ಮಾತ್ರ ಆಕೆಗೆ ಉಂಬಳಿಯಾಗಿ ಬಿಟ್ಟು, ಉಡುಗರೆಗಳನ್ನು ಕೊಟ್ಟು, ಯೋಗ್ಯ ಮರ್ಯಾದೆಗಳೊಡನೆ ಆಕೆಯನ್ನು ಬೆಳವಡಿಗೆ ಕಳುಹಿಸಿ ಕೊಟ್ಟನು.

ಈ ಮೇರೆಗೆ ಮಲ್ಲಮ್ಮಾ ಬಾಯಿಯ ಸಂಕ್ಷಿಪ್ತ ವೃತ್ತಾಂತವದೆ. ಇದರಲ್ಲಿ ನಾವು ಲಕ್ಷವಲ್ಲಿಡತಕ್ಕ ಸಂಗತಿ ಏನಂದರೆ:-- ಒಂದು ಕಡೆಗೆ ದಕ್ಷಿಣ ದೇಶವನ್ನೆಲ್ಲ ತಲ್ಲಣಿಸಿ ಬಿಟ್ಟದ್ದ ಮತ್ತು ಯುದ್ಧ ಕಲೆಯಲ್ಲಿ ನಿಷ್ಣಾತನೆಂದೆನ್ನಿಸಿಕೊಂಡಿದ್ದ ಶಿವಾಜಿ ಮಹಾರಾಜನಂಥ ಬಲಿಷ್ಠ ವೀರನು, ಮತ್ತೊಂದು ಕಡೆಗೆ ಒಂದು ಸಣ್ಣ ದೇಸಗತಿಯ ಮತ್ತು ಒಂದು ಪುಟ್ಟ ಸೈನ್ಯದ ನಾಯಕಳಾಗಿ ಕಾಳಗಕ್ಕೆ ಸನ್ನದ್ಧಳಾಗಿ ನಿಂತ ಓರ್ವ ಅಬಲೆಯು, ಇವರಿಬ್ಬರ ನಿಕರದ ಹೋರಾಟವು ಸುಮಾರು ಒಂದು ತಿಂಗಳಿನ ವರೆಗೆ ನಡೆದರೂ ಶಿವಾಜಿ ಮಹಾರಾಜನಂಥ ಗಟ್ಟಿಗನು ಆಕೆಯ ಕೋಟೆಯನ್ನು ಸಾಧಿಸಿಕೊಳ್ಳಲಾರದೇ ಹೋದನು. ಕೋಟೆಯೊಳಗಿನ ಅನ್ನ ಮತ್ತು ಯುದ್ಧ ಸಾಮುಗ್ರಿಗಳು ತೀರಿ ಹೋದರೂ ಆಕೆಯು ತನ್ನ ಎದುರಾಳಿಗೆ ಮೊರೆ ಹೊಗದೆ, ತನ್ನ ಕೋಟೆಯ ಆಶ್ರಯವನ್ನು ಸಹ ಬಯಸದೆ, ತನ್ನ ಸಣ್ಣ ದಂಡಿನೊಡನೆ ಸಮರಾಂಗಣದಲ್ಲಿ ನಿಂತು, ಶಿವಾಜಿಯ ಅಸಂಖ್ಯ ದಂಡಾಳುಗಳ ಕೂಡ ಇಡೀ ಒಂದುದಿವಸ ಕಾಳಗ ಮಾಡಿದಳು. ಆದರೂ ಶಿವಾಜಿಯು ಆಕೆಯನ್ನು ಸೋಲಿಸಲು ಸಮರ್ಥನಾಗಲಿಲ್ಲ. ಕಟ್ಟಕಡೆಗೆ ಆಕೆಯ ದಂಡಾಳುಗಳೆಲ್ಲ ಯುದ್ಧದಲ್ಲಿ ಮಡಿದು, ಸ್ವತಃ ಘಾಯಪಟ್ಟು ಸಮರಭೂಮಿಯಲ್ಲಿ ಏಕಾಂಗಿನಿಯಾಗಿ ಉಳಿದಮೇಲೆ ಮಾತ್ರ ಮರಾಟರು ಆಕೆಯನ್ನು ಹಿಡಿಯಲು ಸಮರ್ಥರಾದರು. ಇವೆಲ್ಲ ಸಂಗತಿಗಳು ಆ ಕಾಲದ ಜನರನ್ನು ಬಹಳೇ ವಿಸ್ಮಯಗೊಳಿಸಿದವು. ಇದೇ ಕಾರಣದಿಂದ ಯಾವತ್ತು ಇತಿಹಾಸಕಾರರೂ ಬಖರಕಾರರೂ ಮಲ್ಲಮ್ಮಾ ಬಾಯಿಯನ್ನು ಬಹಳವಾಗಿ ಹೊಗಳಿದ್ದಾರೆ. ಇದರಂತೆ ಆಕೆಯ ಸೈನಿಕರ ಸ್ವಾಮಿಭಕ್ತಿಯೂ, ಶೌರ್ಯ

ವೂ ಅಸವೃಶವಾಗಿರುತ್ತವೆ. ಕಾಳಗ ನಡೆದಾಗ್ಗೆ, ಅವರಲ್ಲಿ ಒಬ್ಬರಾದರೂ ರಣಾಂಗಣದಲ್ಲಿ ಆಕೆಯನ್ನು ಬಿಟ್ಟು ಅತ್ತಿತ್ತ ಅಗಲಲಿಲ್ಲ, ಅವರೆಲ್ಲರೂ ತಮ್ಮ ಜೀವದ ಹಂಗುದೊರೆದು, ತಮ್ಮ ಸ್ವಾಮಿನಿಗಾಗಿ ಕಾದಾಡಿ, ರಣದೇವತೆಗೆ ತಮ್ಮ ಪ್ರಾಣಗಳನ್ನು ಅರ್ಪಿಸಿದರು. ಇವೆಲ್ಲ ಸಂಗತಿಗಳು ಆಗಿನ ಕಾಲದ ವೀರಶೈವರಲ್ಲಿದ್ದ ಸ್ವಾಭಿಮಾನ, ಶೌರ್ಯ, ಧೈರ್ಯ, ಸ್ವಾಮಿ ಭಕ್ತಿ ಇವೇ ಮುಂತಾದ ಮೇಲಾದ ಗುಣಗಳನ್ನು ತೋರಿಸುತ್ತವೆ.

ಶಿವಾಜಿಮಹಾರಾಜನು ಮಹಾರಾಷ್ಟ್ರದಲ್ಲಿ ಅತ್ಯಂತ ಪೂಜ್ಯನಾಗಿದ್ದು ಅವನ ಸಲುವಾಗಿ ಅನೇಕ ದಂತಕಥೆಗಳೂ ಐತಿಹ್ಯಗಳೂ ಉಂಟಾಗಿವೆ. ಇವುಗಳಲ್ಲಿ ಶಿವಾಜಿಯು ಅನೇಕ ಸಾರ್ವಭೌಮರನ್ನು ಗೆದ್ದು, ಅನೇಕ ರಾಜ್ಯಗಳನ್ನು ಸಂಪಾದಿಸಿ, ಕಟ್ಟಕಡೆಗೆ ಒಬ್ಬ ಹೆಂಗಸಿನಿಂದ ಸೋಲಿಸಲ್ಪಟ್ಟನೆಂಬ ಒಂದು ಐತಿಹ್ಯವು ಇದೆ. ಆದರೆ ಈ ಹೆಂಗಸು ಯಾರೆಂಬುದು ಮಾತ್ರ ಮಹಾರಾಷ್ಟ್ರೀಯರಿಗೆ ಅಷ್ಟು ಗೊತ್ತಿಲ್ಲ. ಈ ಹೆಂಗಸು ಕರ್ನಾಟಕಸ್ಥಳೂ ವೀರಶೈವಳೂ ಆದ ವೀರಮಣಿ ಮಲ್ಲವ್ವಾಬಾಯಿಯೇ ಇದ್ದಾಳೆ.

ಮಲ್ಲವ್ವಾ ಬಾಯಿಯ ವೃತ್ತಾಂತದ ಬಗ್ಗೆ ಬೇರೆಬೇರೆ ಗ್ರಂಥಗಳಲ್ಲಿ ಹಲಕೆಲವು ವ್ಯತ್ಯಾಸಗಳಿದ್ದುದರಿಂದ ಅವುಗಳನ್ನು ಇಲ್ಲಿ ಉಲ್ಲೇಖಿಸುವದು ಅವಶ್ಯವದೆ.

(೧) ಗ್ರಾಂಟ್ ಡಫ್, ಕಿಂಕೇಡ ಮತ್ತು ಸರ್ ದೇಸಾಯಿ ಇವರು ಬೆಳವಡಿ ಎಂದರೆ ಈಗಿನ ಬಳ್ಳಾರಿ ಎಂದು ತಮ್ಮ ಗ್ರಂಥಗಳಲ್ಲಿ ಕಾಣಿಸಿದ್ದಾರೆ. ಆದರೆ ಇದು ತಪ್ಪು ಇರುತ್ತದೆ. ಗ್ರಾಂಟ್‌ಡಫರು ಮೊದಲಿಗೆ ಮಾಡಿದ ಈ ತಪ್ಪನ್ನು ಉಳಿದ ಇಬ್ಬರು ಗ್ರಂಥಕಾರರು ಅಂಧಶೆಯಿಂದ ಅನುಕರಣ ಮಾಡಿದ್ದಾರೆ. ಆದರೆ ಬೇರೆ ಎಲ್ಲ ಗ್ರಂಥಕಾರರು ತಮ್ಮ ಗ್ರಂಥಗಳಲ್ಲಿ ಬೆಳವಡಿ ಎಂತಲೇ ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ. ಶಿವಾಜಿಯು ತೀರಿಕೊಂಡ ಬಳಿಕ ೧೭ ವರ್ಷಗಳ ತರುವಾಯ ಅವನ ಚರಿತ್ರೆಯನ್ನು ಬರೆದ ಕೃಷ್ಣಾಜಿ ಅನಂತ ಸಭಾಸದ ಇವನು ಸಂಪಗಾವ ಪ್ರಾಂತದಲ್ಲಿಯ ಬೆಳವಡಿ ಎಂದು ಸ್ಪಷ್ಟವಾಗಿ ತನ್ನ ಬಖರದಲ್ಲಿ ಬರೆದಿರುವನು. ಆದ್ದರಿಂದ ಸಂಪಗಾವದಿಂದ ೧೪ ಮೈಲುಗಳ ಮೇಲಿರುವ ಬೆಳವಡಿಯೇ ಮಲ್ಲವ್ವಾಬಾಯಿಯ ಸ್ಥಾನವಿರುತ್ತದೆ.

(೨) ಶಿವದಿಗ್ವಿಜಯಕಾರನು ಈಕೆಯ ಹೆಸರು ಸಾವಿತ್ರಿಬಾಯಿ

ಎಂದು ಉಲ್ಲೇಖಿಸಿದ್ದಾನೆ. ಆದರೆ ಇದು ತಪ್ಪು ಇರುತ್ತದೆ. ಒಬ್ಬಿಬ್ಬ ಗ್ರಂಥಕಾರರನ್ನು ಬಿಟ್ಟು ಉಳಿದವರೆಲ್ಲರೂ ಮಲವಾಯಿ, ಮಲ್ಲಬಾಯಿ ಎಂತಲೇ ಉಲ್ಲೇಖಿಸಿದ್ದಾರೆ. ತಾರೀಖ-- ಈ-- ಶಿವಾಜಿ ಎಂಬ ಗ್ರಂಥವನ್ನು ಬರೆದ ಮುಸಲ್ಮಾನ ಗೃಹಸ್ಥನು ಈಕೆಯನ್ನು ಲಾಲಬೀ ಎಂದು ಕರೆದಿದ್ದಾನೆ. ಇವೆಲ್ಲ ಮಲ್ಲವ್ವಾಬಾಯಿ ಎಂಬವರ ಅಪಭ್ರಂಶಗಳಿರುತ್ತವೆ.

ಮಲ್ಲವ್ವಾಬಾಯಿ ಎಂಬ ಹೆಸರಿನ ದೇಸಾಯಿಣಿಯು ಬೆಳವಡಿಯಲ್ಲಿ ಇದ್ದಳೋ ಹೇಗೆ ಎಂಬದರ ವಿಷಯವಾಗಿ ನಾನು ಸಂಪಗಾವ ತಾಲೂಕಿನಲ್ಲಿ ಶೋಧಮಾಡಲಾಗಿ, ಅಲ್ಲಿಯ ಒಬ್ಬ ಜೋಯಿಸರಿಗೆ ಒಂದು ಜಮೀನವನ್ನು ಆಕೆಯು ದಾನಕೊಟ್ಟಿರುವ ಸಂಗತಿಯು ನನ್ನ ನಿದರ್ಶನಕ್ಕೆ ಬಂದಿತು. ಆದಾನ ಪತ್ರದ ನಕಲನ್ನು ರಾವಬಹಾದ್ದೂರ ಮಲ್ಲನಾಯಕ ಪಾಟೀಲ ಹೊಂಗಲ ಇವರು ನನ್ನ ಕಡೆಗೆ ಕಳಿಸಿದ್ದಾರೆ. ಅದರಲ್ಲಿ ವೇದಮೂರ್ತಿ ರಾಜೇಶ್ರೀ ಶ್ರೀಪಾದಭಟ್ಟ ಬಿನ್ ಕೃಷ್ಣಭಟ್ಟ ಜೋಶಿ ಮಾಮಲೇ ಹುಬ್ಬಳ್ಳಿ ಇವರಿಗೆ ಬೆಳವಡಿ ಮಾಮಲೇ ಪರಗಣೆಯ ಮಲ್ಲಿನಾಯಕಿಣಿಯು ಶ್ರೀ ವೀರಭದ್ರ ದೇವರ ಆರಾಧನೆಗೋಸ್ಕರ ಗುಡಿ ಕಟ್ಟಿ ಎಂಬ ಹೆಸರಿನ ಗ್ರಾಮದಲ್ಲಿಯ ಒಂದು ನೂರು ಜಮೀನವನ್ನು ಕೃಷ್ಣಾರ್ಪಣವಾಗಿ ವಂಶ ಪರಂಪರ ಕೊಟ್ಟ ಸಂಗತಿಯು ಉಲ್ಲೇಖಿಸಲ್ಪಟ್ಟಿದೆ. ಈ ಸನದು ಸನ್ ೧೭೧೩ ನೇ ಇಸ್ವಿಯದು ಇರುತ್ತದೆ. ಅಂದರೆ ಶಿವಾಜಿಯ ಕೂಡ ಯುದ್ಧವಾದಬಳಿಕ ೩೫ ವರ್ಷಗಳ ತರುವಾಯ ಕೊಟ್ಟದ್ದು ಇರುತ್ತದೆ. ಇದರ ಮೇಲಿಂದ ಮಲ್ಲವ್ವಾಬಾಯಿಯು ಶಿವಾಜಿಯ ಕೂಡ ಯುದ್ಧಮಾಡಿದಾಗ ತಾರುಣ್ಯಾವಸ್ಥೆಯಲ್ಲಿದ್ದಳೆಂತಲೂ ಮುಂದೆ ಬಹಳ ದಿವಸಗಳ ವರೆಗೆ ಜೀವಿಸಿದ್ದಳೆಂತಲೂ ತೋರುತ್ತದೆ. ಈ ಸನದಿನಲ್ಲಿ ಮಲ್ಲನಾಯಕಿಣಿಯ ಕೂಡ ನಾಗಪ್ಪನಾಯಕ ದೇಸಾಯಿ ಮತ್ತು ಮೋನಾಜಿ ವೆಂಕಟಾದ್ರಿ ದೇಶ ಕುಲಕರ್ಣಿ ಇವರ ಹೆಸರುಗಳೂ ಕಾಣಿಸಲ್ಪಟ್ಟಿವೆ; ಅಂದರೆ ಆಕೆಯು ತನ್ನ ಮಗ ಮತ್ತು ದೇಶ ಕುಲಕರ್ಣಿ ಇವರನ್ನು ಸಹ ಸಾಕ್ಷಿಯಾಗಿಟ್ಟುಕೊಂಡು, ಈ ಸನದನ್ನು ಮಾಡಿಕೊಟ್ಟಿರಬಹುದೆಂದು ತೋರುತ್ತದೆ.

(೩) ಮಲ್ಲವ್ವಾ ಬಾಯಿಯು ಪ್ರಭು ಅಥವಾ ಚಿತ್‌ಪಾವನ ಬ್ರಾಹ್ಮಣಳಿರಬೇಕೆಂದು ಮಹಾರಾಷ್ಟ್ರದಲ್ಲಿಯ ಅನೇಕರು ಅಭಿಪ್ರಾಯ ಪಟ್ಟಿರುವರು. ಆದರೆ ಇದು ತಪ್ಪು ಇರುತ್ತದೆ. ಯಾಕಂದರೆ ಸಂಪಗಾವ ತಾಲೂ

ಕಿನಲ್ಲಿ ಪ್ರಭು ಅಥವಾ ಚಿತ್ ಪಾವನ ಬ್ರಾಹ್ಮಣರ ದೇಸಗತಿಗಳು ಯಾವವೂ ಇರುವದಿಲ್ಲ. ಇದಲ್ಲದೆ ಸಂಪಗಾವ ಪ್ರಾಂತದಲ್ಲಿ ಈಕೆಯು ಯಾವ ದೇಸಗತಿಗೆ ಸಂಬಂಧ ಪಟ್ಟವಳೆಂಬದನ್ನು ಶೋಧಮಾಡಲಾಗಿ ನನಗೆ ವಿಶ್ವಸನೀಯವಾಗಿ ತಿಳಿದು ಬಂದದ್ದೇನಂದರೆ:- ಮೊದಲು ವೀರಪ್ಪನೆಂಬವನು ಮೂಲ ಪುರುಷನಾಗಿದ್ದನು. ಅವನಿಂದ ೪ ನೆಯವನಾದ ರಾಯಪ್ಪನೆಂಬವನಿಗೆ ಚಂದ್ರಭೂಷಣನೆಂಬ ಮಗನಿದ್ದನು. ಆತನೇ ಬೆಳವಡಿ ದೇಸಗತಿಯ ಮಾಲಿಕನಾದನೆಂತಲೂ, ಇದೇ ರಾಯಪ್ಪನ ಇನ್ನೊಬ್ಬ ಮಗನಿಂದ ಈಗಿನ ತಲ್ಲೂರ--ದೇಸಗತಿಯೂ, ಇನ್ನೊಬ್ಬ ಮಗನಿಂದ ಈಗಿನ ಚಚಡಿ--ದೇಸಗತಿಯೂ, ಮತ್ತೊಬ್ಬ ಮಗನಿಂದ ರುದ್ರಾಪುರ, ಇಂಗಳಗಿ, ಮುತವಾಡ, ಈ ದೇಸಗತಿಗಳು ಉಂಟಾದವೆಂತಲೂ ನನ್ನ ತಿಳುವಳಿಕೆಗೆ ಬಂದಿದೆ. ಇವುಗಳಲ್ಲಿ ತಲ್ಲೂರ, ಚಚಡಿ, ರುದ್ರಾಪುರ ದೇಸಗತಿಗಳು ಸಂಪಗಾವ ತಾಲೂಕಿನಲ್ಲಿ ಈಗ್ಗೂ ಇರುತ್ತವೆ. ಆದರೆ ಉಳಿದವುಗಳು ಮಾತ್ರ ನಾಶವಾಗಿರುತ್ತವೆ. ಈ ದೇಸಗತಿಗಳು ವೀರಶೈವರವೇ ಇರುತ್ತವೆ. ಇವೆಲ್ಲ ಕಾರಣಗಳಿಂದ ಮಲ್ಲವ್ವಾಬಾಯಿ ದೇಸಾಯಿಣಿಯು ಒಬ್ಬ ವೀರಶೈವಳೇ ಆಗಿದ್ದಳೆಂದು ಹೇಳಲಿಕ್ಕೆ ಏನೂ ಅಡ್ಡಿ ಇಲ್ಲ.

ಶಿವಾಜಿ ಮಹಾರಾಜನು ಮಲ್ಲವ್ವಾಬಾಯಿಯ ಪ್ರಾಂತವನ್ನು ಅವಳಿಂದ ಕಸಕೊಂಡು ಹೋದಬಳಿಕ, ತುಸು ದಿವಸಗಳಲ್ಲಿಯೇ ಅಂದರೆ ಅವನು ತೀರಿಕೊಂಡ ತರುವಾಯ ದೇಶದಲ್ಲಿ ಅವ್ಯವಸ್ಥೆಯುಂಟಾಗಲು, ಆಕೆಯು ತನ್ನ ಸೀಮೆಯನ್ನು ತಿರುಗಿ ದೊರಕಿಸಿಕೊಂಡು ಪೂರ್ಣ ಸ್ವತಂತ್ರಳಾದಳು. ಈ ದೇಸಗತಿಯು ಮುಂದೆ ಕೆಲವು ವರ್ಷಗಳವರೆಗೆ ಬಾಳಿತು. ಆದರೆ ತರುವಾಯ ಕಿತ್ತೂರ ಸಂಸ್ಥಾನದವರು ಅದಕ್ಕಿದ್ದ ೬೩ ಗ್ರಾಮಗಳನ್ನು ಖಾಲಸಾತು ಮಾಡಿ, ಆ ದೇಸಗತಿಯನ್ನೇ ಮುರಿದು ಬಿಟ್ಟರೆಂದು ತಿಳಿದುಬರುತ್ತದೆ.

# ವೃಷಭಲಿಂಗ (ಬಸವಲಿಂಗ) ಸ್ವಾಮಿ ಶಿವಾಚಾ ರ್ಯರ ಚರಿತ್ರವು.

[ಲೇಖಕ:— ಶ್ರೀ॥ ರೇವಯ್ಯಸ್ವಾಮಿ ವಿರೂಪಾಕ್ಷಸ್ವಾಮಿ ಸ್ಥಾವರದ, ಗಲಗಲಿ]

ವಿಜಾಪುರ ಜಿಲ್ಹೆಯಲ್ಲಿ ಕೃಷ್ಣಾನದಿಯ ದಂಡೆಯ ಮೇಲಿರುವ ಗಲ ಗಲಿ ಎಂಬ ಗ್ರಾಮದಲ್ಲಿ ಬಹು ಪುರಾತನ ಕಾಲದಿಂದ ಹೆಸರು ಪಡೆದ **ಸ್ವಾಮಿಮಠ** ಎಂಬದೊಂದು ವಿರಕ್ತಮಠವುಂಟು. ಅದಕ್ಕೆ ಕಾಶಿಯ ಮ ಠವೆಂತಲೂ ಮತ್ತು ಪುಣೆಯ ಮಠವೆಂತಲೂ ಸಹ ಅನ್ನುವರು. ವೀರ ಶೈವರ ಪುರಾತನ ಮಠಗಳಿಗೆ ವೃತ್ತಿಗಳು ದೊರೆಯಬೇಕಾದರೆ ಆ ಆ ಮಠಗಳ ಮೂಲಪುರುಷರ ತಪೋಬಲವೂ ಕ್ರಿಯಾಸಿದ್ಧಿಯೂ ವಿಶೇಷ ಕಾರಣವಾಗಿರುತ್ತವೆ.

ಗಲಗಲಿಯಲ್ಲಿಯ ಈ ಮಠದ ಮೂಲಪುರುಷರು ಶ್ರೀ ವೃಷಭಲಿಂಗ (ಬಸವಲಿಂಗ) ಶಿವಾಚಾರ್ಯರು. ಇವರ ಜನ್ಮಸೀಮೆಯು ಕಾಶೀಪ್ರಾಂ ತವಾಗಿರಬಹುದೆಂದು ತೋರುತ್ತದೆ. ಇವರು ಕಾಶಿಯಲ್ಲಿಯೇ ಅಧ್ಯಯನ ಮಾಡಿ ಶಿವಾನುಭವ ಶಾಸ್ತ್ರದಲ್ಲಿ ಅತ್ಯಂತ ಪ್ರಾವೀಣ್ಯತೆಯನ್ನು ಪಡೆದರು. ಶ್ರೀಗಳವರು ಮುಂದೆ ಕೆಲವು ದಿವಸಗಳ ತರುವಾಯ ಶ್ರೀ ಕಾಶೀ ಕ್ಷೇ ತ್ರದಿಂದ ಹೊರಟು, ಮಾರ್ಗದಲ್ಲಿ ಯೋಗ್ಯ ವಿದ್ವಾಂಸರಿರುವ ಗ್ರಾಮಗ ಳಿಗೆ ಹೋಗಿ, ಅವರನ್ನು ವಾದದಲ್ಲಿ ಜಯಿಸುತ್ತ ಜಯಿಸುತ್ತ ಕಡೆಗೆ ಪುಣೇ ಪಟ್ಟಣಕ್ಕೆ ಬಂದು ಮುಟ್ಟಿದರು. ಆಗ್ಗೆ ಅಲ್ಲಿ ಶ್ರೀಮಂತ ಬಾಳಾಜಿ ವಿಶ್ವನಾಥ ಪೇಶ್ವೆ ಎಂಬುವವರು ರಾಜ್ಯವಾಳುತ್ತಿದ್ದರು. ಅವರ ದರಬಾರದ ಲ್ಲಿದ್ದ ಆಸ್ಥಾನ ಪಂಡಿತರನ್ನು ಶ್ರೀಗಳವರು ಸೋಲಿಸಿ, ಶ್ರೀಮಂತರಿಂದ ವಿಶೇಷ ಮರ್ಯಾದೆಯನ್ನು ಪಡೆದರು. ಮತ್ತು ಶ್ರೀಮಂತರು ಅವರ ವಿದ್ವ ತ್ತಿಗೆ ಮೆಚ್ಚಿ "ನಾಲಸೇಠದಲ್ಲಿ" ಒಂದು ವಿಶಾಲದಾದ ಮಠವನ್ನು ಕಟ್ಟಿ ಸಿ ಅವರಿಗೆ ಕೊಟ್ಟರು. ಆ ಮೇಲೆ ಶ್ರೀಗಳವರು ಈ ಮಠದಲ್ಲಿ ವಾಸಿ ಸುತ್ತ ಶ್ರೀಮಂತರು ಮುಂತಾದ ಸದ್ಭಕ್ತಮಂಡಳಿಗೆ ಸದುಪದೇಶಮಾಡು

ತ್ರ ಕಾಲಕಳೆಯಲಾರಂಭಿಸಿದರು. ಅವರ ಕೀರ್ತಿಯು ಮಹಾರಾಷ್ಟ್ರದಲ್ಲಿ ಬಹಳವಾಗಿ ಹಬ್ಬಿತು.

ಹೀಗೆ ಇರುತ್ತಿರಲು, ಒಂದಾನೊಂದು ದಿವಸ ಶ್ರೀಗಳವರು ಮುಂಜಾವಿನಲ್ಲಿ ನಿತ್ಯದಂತೆ ಬಹಿರ್ದೇಶಕ್ಕೆ ಹೋಗುತ್ತಿರುವಾಗ, ಯಾವದೋ ಒಂದು ಕಾರಣದಿಂದ ಆ ವೇಳೆಗೆ ಪುಣೆ ಪಟ್ಟಣದಲ್ಲಿ ಬಂಧನದಲ್ಲಿದ್ದ ಗಲಗಲಿ ಪರಗಣೆಯ ದೇಸಾಯರು ರಾಚಪ್ಪ ತಿಮ್ಮದೇಸಾಯಿ ಎಂಬುವರು ಜವಾನರಿಂದ ಕಾಯಲ್ಪಟ್ಟು ಬಹಿರ್ದೇಶಕ್ಕೆ ಹೋಗುತ್ತಿರುವ ಸಮಯದಲ್ಲಿ, ದೇಸಾಯರು ದಾರಿಯಲ್ಲಿ ಅಕಸ್ಮಾತ್ ಶ್ರೀ ಮಹಾಸ್ವಾಮಿಗಳವರನ್ನು ಕಂಡು, ಅವರ ಪಾದಾರವಿಂದಗಳಿಗೆ ಸಾಷ್ಟಾಂಗವೆರಗಹೋದರು. ಆಗ ಕಾವಲಿನ ಜವಾನರು ಅವರನ್ನು ತಡೆದು ದೇಸಾಯರಿಗೆ ಸಾಷ್ಟಾಂಗವೆರಗಗೊಡಲಿಲ್ಲ ಇದನ್ನು ಶ್ರೀಗಳವರು ನೋಡಿ, ಮನಸ್ಸಿನಲ್ಲಿ ಕಳವಳಗೊಂಡು, ಅಲ್ಲಿಯೇ ಸ್ತಬ್ಧವಾಗಿ ನಿಂತುಬಿಟ್ಟರು. ದೇಸಾಯರು ಸುಮ್ಮನೆ ಸಿಪಾಯಿಗಳೊಡನೆ ಬಂಧನಗ್ರಹಕ್ಕೆ ಹೋಗಬೇಕಾಯಿತು. ಆಗ ಸ್ವಾಮಿಗಳು ತಾವು ನಿಂತ ಸ್ಥಳವನ್ನು ಬಿಟ್ಟು ಕದಲಲಿಲ್ಲ. ಮುಂದೆ ಶ್ರೀಮಂತ ಪೇಶ್ವೆಯವರು ತಮ್ಮ ನಿತ್ಯ ನಿಯಮದಂತೆ ಶ್ರೀಗಳವರ ದರ್ಶನಾರ್ಥವಾಗಿ ಮಠಕ್ಕೆ ಹೋದರು. ಆದರೆ ಅಲ್ಲಿ ಅವರನ್ನು ಕಾಣದೆ, ಹಾಗೆಯೇ ಅವರನ್ನು ಹುಡುಕುತ್ತ ಅವರು ನಿಂತುಕೊಂಡಿದ್ದ ಸ್ಥಳಕ್ಕೆ ಹೋಗಿ ಮಠಕ್ಕೆ ದಯಮಾಡಿಸಬೇಕೆಂದು ಬೇಡಿಕೊಂಡರು. ಅದಕ್ಕೆ ಶ್ರೀಗಳವರು ಕೆಲಹೊತ್ತಿನ ಹಿಂದೆ ತಮಗೆ ಸಾಷ್ಟಾಂಗವೆರಗಬಂದ ಗಲಗಲೀ ದೇಸಾಯರನ್ನು ಬಂಧಮುಕ್ತರನ್ನಾಗಿ ಮಾಡಿದರೆ ಮಾತ್ರ ಮಠಕ್ಕೆ ದಯ ಮಾಡಿಸುವೆವು, ಇಲ್ಲವಿದ್ದರೆ ನಾವು ಈ ಪುಣೇಪಟ್ಟಣವನ್ನು ಬಿಟ್ಟು ಬೇರೆ ಸ್ಥಳಕ್ಕೆ ಹೊರಟು ಹೋಗುವೆವು, ಎಂದು ನುಡಿದರು. ಆಗ ಶ್ರೀಮಂತರು ವರ್ತಿಸಿದ ಸಂಗತಿಗಳನ್ನೆಲ್ಲ ಕೇಳಿಕೊಂಡು ತಪ್ಪುಮಾಡಿದ ಜವಾನರಿಗೆ ತಕ್ಕ ಶಿಕ್ಷೆಯನ್ನು ವಿಧಿಸಿ, ದೇಸಾಯರನ್ನು ಬಂಧವಿಮೋಚನೆ ಮಾಡಲು ಆಜ್ಞಾಪಿಸಿ, ಸ್ವಾಮಿಗಳನ್ನು ಸಮಾಧಾನಪಡಿಸಿ, ಮಠಕ್ಕೆ ಕರಕೊಂಡು ಹೋದರು.

ಈ ಮೇರೆಗೆ ಬಂಧವಿಮೋಚನೆ ಹೊಂದಿದ ದೇಸಾಯರು ಶ್ರೀಗಳವರಿಂದ ತಮ್ಮ ಪುನರ್ಜನ್ಮವಾಯಿತೆಂದು ತಿಳಿದುಕೊಂಡು, ಗಲಗಲಿಗೆ ಹೋಗದೆ, ಬಹು ಭಕ್ತಿಯಿಂದ ಸ್ವಾಮಿಗಳವರ ಸೇವೆ ಮಾಡುತ್ತ ಪುಣೆ

ಯಲ್ಲಿಯೇ ಉಳಿದರು. ಕೆಲವು ದಿವಸಗಳ ತರುವಾಯ ಶ್ರೀಗಳವರು ದೇ
ಸಾಯಿ ರಾಚಪ್ಪನವರಿಗೆ ಸ್ವಗ್ರಾಮಕ್ಕೆ ಹೋಗಲು ಆಜ್ಞಾಪಿಸಿದರು. ಅವಕ್ಕೆ
ರಾಚಪ್ಪನವರು ಶ್ರೀಗಳವರು ಗಲಗಲಿಗೆ ದಯಮಾಡಿಸದ ಹೊರತು
ಹೋಗಲಾರೆನೆಂದು ವಿಜ್ಞಾಪಿಸಿಕೊಂಡರು. ಆಗ ಶ್ರೀಗಳವರು ಅವರ ಭ
ಕ್ತಿಗೆ ಮೆಚ್ಚಿ, ಗಲಗಲಿಗೆ ಬರುವೆವೆಂದು ವಚನಕೊಟ್ಟು, ಅವರನ್ನು ಕಳುಹಿ
ಸಿದರು. ಮುಂದೆ ಕೆಲವು ದಿವಸಗಳ ತರುವಾಯ ಸ್ವಾಮಿಗಳವರು ತಮ್ಮ
ಅಭಿಪ್ರಾಯವನ್ನು ಶ್ರೀಮಂತರಿಗೆ ತಿಳಿಸಲು, ಅವರು ಶ್ರೀಗಳವರ ಅಭಿ
ಪ್ರಾಯವನ್ನು ಸಿರಸಾವಹಿಸಿ, ಅವರಿಗೆ ಗಲಗಲಿಗೆ ಹೋಗಲು ತಮ್ಮ ಅ
ನುಮತಿಯನ್ನು ಕೊಟ್ಟರು. ಆಗ ಪುಣೆಯಿಂದ ಗಲಗಲಿಯ ವರೆಗೆ ಮಾ
ರ್ಗದಲ್ಲಿ ಯಾವ ರೀತಿಯಿಂದಲೂ ಅವರಿಗೆ ಅಡ್ಡಿಯಾಗದಂತೆ ವ್ಯವಸ್ಥೆ
ಯನ್ನಿಟ್ಟರು. ಸ್ವಾಮಿಗಳು ಇಳಿದು ಲಿಂಗಾರ್ಚನೆ ಮಾಡಿದ ಪ್ರತಿಒಂದು
ಗ್ರಾಮದಲ್ಲಿ ಒಂದೊಂದು ಮಠವೂ ಅವಕ್ಕೆ ತಕ್ಕ ವತನಗಳೂ ಅವರಿಗೆ
ಹಾಕಿಕೊಡಲ್ಪಟ್ಟವು. ಅವರ ಪ್ರವಾಸದಲ್ಲಿ ಹತ್ತಿದ ಸ್ಥಳಗಳು ಯಾವ
ವೆಂದರೆ:-- ಪುಣೆ ಜಿಲ್ಹೆಯಲ್ಲಿ ಶಿವಪುರ, ಕೊಯಿಲಿಂಗ; ಸೊಲ್ಲಾಪುರ
ಜಿಲ್ಹೆಯಲ್ಲಿ ಕೊಂಡಿಜ, ಕರಮಾಳೆ, ಬಾರ್ಶಿ, ಕರಕಂಬ, ಪಂಢರಪುರ,
ಸಾಂಗೋಲಾ, ನಾಯಕಬಾಲೋಣಿ, ಕಾಶೇಗಾವ; ಆ ಮೇಲೆ ವಿಜಾ
ಪುರಜಿಲ್ಹೆಯಲ್ಲಿ ಜೇಡರಬಬಲಾದ; ತರುವಾಯ ಬೆಳಗಾವಿ ಜಿಲ್ಹೆಯಲ್ಲಿ
ಕೊಟ್ಟಲಗಿ, ತೆಲಸಂಗ; ಮತ್ತೆ ವಿಜಾಪುರ ಜಿಲ್ಹೆಯಲ್ಲಿ ಹೊನವಾಡ, ಕೋ
ಲೂರ, ಗುಳಬಾಳ, ಮತ್ತು ಕಡೆಗೆ ಗಲಗಲಿ. ಈ ಗ್ರಾಮಗಳು ಒಂದ
ರಿಂದೊಂದು ೧೮ ರಿಂದ ೩೦ ಮೈಲುಗಳ ಒಳಗೆ ಇರುತ್ತವೆ. ಈ ಮಠ
ಗಳಲ್ಲಿ ಕೋಲೂರು, ಗುಳಬಾಳ, ಗಲಗಲೀಮಠಗಳು ಗಲಗಲಿ ದೇಸಾ
ಯರಿಂದ ಕಟ್ಟಿಸಲ್ಪಟ್ಟವು. ಉಳಿದವುಗಳು ಆಯಾಗ್ರಾಮಗಳ ಭಕ್ತಜನ
ರಿಂದ ಕಟ್ಟಿಸಲ್ಪಟ್ಟವು. ಇದರ ಮೇಲಿಂದ ಶ್ರೀ ಸ್ವಾಮಿಗಳವರ ಬಗ್ಗೆ ಮ
ಹಾರಾಷ್ಟ್ರದಲ್ಲಿ ಸಹ ಪೂಜ್ಯಭಾವವು ಎಷ್ಟಿತ್ತೆಂಬದು ಸ್ಪಷ್ಟವಾಗಿ ತಿಳಿದು
ಬರುತ್ತದೆ. ಅವರು ಗಲಗಲಿಗೆ ದಯಮಾಡಿಸಿದ ಬಳಿಕ ಅಲ್ಲಿಯ ದೇಸಾ
ಯರು ಒಂದು ವಿಶಾಲವಾದ ಮಠವನ್ನು ಕಟ್ಟಿಸಿಕೊಟ್ಟದ್ದಲ್ಲದೆ ಅದರ ಮ
ಧ್ಯದಲ್ಲಿ ಕಾಶಿ ವಿಶ್ವೇಶ್ವರನ ಸಣ್ಣದೊಂದು ದೇವಾಲಯವನ್ನೂ, ಹಿಂಭಾ
ಗದಲ್ಲಿ ಶ್ರೀ ವೀರಭದ್ರದೇವರ ಗುಡಿಯನ್ನೂ, ಊರಹೊರಗೆ ಕೃಷ್ಣಾನ
ದಿಯ ದಂಡೆಯ ಮೇಲೆ ಹನ್ನೊಂದು ಲಿಂಗಗಳನ್ನೂ ಸ್ಥಾಪಿಸಿ, ಮೊದಲಿ

ಸಿಂದ ಶ್ರೀಗಳವರ ಸೇವೆಯಲ್ಲಿದ್ದ ಜನರಿಗೆ ದೇವರ ಅರ್ಚನೆಯನ್ನೂ ವೃತ್ತಿಗಳನ್ನೂ ಸಹ ಹಾಕಿಕೊಟ್ಟರು. ಅನಂತರ ಸ್ವಾಮಿಗಳವರು ಸ್ವಲ್ಪ ದಿವಸಗಳಲ್ಲಿಯೇ ಸೊಲ್ಲಾಪುರ ಜಿಲ್ಹೆಯಲ್ಲಿರುವ ಕರವಾಳಾಕ್ಕೆ ದಯಮಾಡಿಸಿ, ಅಲ್ಲಿ ಮಹಿಮೆಗಳನ್ನು ತೋರಿಸಿ, ವೈಶಾಖ ಬಹುಳ ತೃತೀಯಾ ದಿವಸ ಅದೇ ಗ್ರಾಮದಲ್ಲಿ ಬಯಲಾದರು. ಮೂಲ ಸ್ವಾಮಿಗಳ ಮೊದಲ್ಗೊಂಡು ಈ ಮಠಾಧಿಕಾರಿಗಳ ವಂಶಾವಳಿಯು ಕೆಳಗೆ ಕೊಡಲ್ಪಟ್ಟಿದೆ.

೧. ವೃಷಭಲಿಂಗ (ಬಸವಲಿಂಗ) ಸ್ವಾಮಿ ಶಿವಾಚಾರ್ಯ; ೨. ಮಹಾಂತದೇವರು; ೩. ಚಂದ್ರಶೇಖರದೇವರು; ೪. ಮರಿದೇವರು; ೫. ಸಂಗನಬಸವ ದೇವರು; ೬. ಸಂಗನಬಸವದೇವರು; ೭. ಶಿವಲಿಂಗದೇವರು; ೮. ರುದ್ರಸ್ವಾಮಿಗಳು; ೯. ಗುರುಲಿಂಗದೇವರು; ೧೦. ಶಿವಲಿಂಗದೇವರು ೧೧. ಸಂಗನಬಸವದೇವರು; ೧೨. ವೀರಭದ್ರದೇವರು. ಈ ಮಠದ ವಾರ್ಷಿಕ ಉತ್ಪನ್ನವು ಸದ್ಯಕ್ಕೆ ಸುಮಾರು ಎರಡು ಸಾವಿರ ರೂಪಾಯಿಗಳು ಇರುವದು; ಮತ್ತು ವಿಜಾಪುರ ಜಿಲ್ಹೆಯೊಳಗಿನ ಪ್ರಸಿದ್ಧ ಮಠಗಳಲ್ಲಿ ಇದೊಂದಾಗಿ ಎಣಿಸಲ್ಪಡುತ್ತದೆ.

ಈಗಿನ ಮಠದ ಸ್ವಾಮಿಗಳ ಹತ್ತರ ಗಲಗಲಿ ದೇಸಾಯರು ೧೭೪೬ ನೇ ವರ್ಷದಲ್ಲಿ ಈ ಮಠಕ್ಕೆ ಕೊಟ್ಟ ವೃತ್ತಿಯ ಬಗ್ಗೆ ಒಂದು ಸನದು ಇರುತ್ತದೆ ಗಲಗಲಿ ದೇಸಾಯರ ಈಗಿನ ವಾಸಸ್ಥಳವು ಅದರ ಸಮೀಪದಲ್ಲಿರುವ ಎಡೆಹಳ್ಳಿಯೇ ಇರುತ್ತದೆ.

ಮೇಲ್ಕಂಡ ಚರಿತ್ರೆಯಿಂದ ಶ್ರೀ ಬಸಲಿಂಗ ಸ್ವಾಮಿಗಳು ಉಜ್ವಲ ವರ್ತನೆಯುಳ್ಳವರೂ ಸ್ವಾಭಿಮಾನ ಶೀಲರೂ ನಿಸ್ಪೃಹಿಗಳೂ ಆಗಿದ್ದರೆಂಬುದು ಸ್ಪಷ್ಟವಾಗುತ್ತದೆ. ಇದಕ್ಕೆ ಅವರಲ್ಲಿದ್ದ ವಿದ್ವತ್ತೆ ಮತ್ತು ಸದಾಚಾರವೇ ಕಾರಣಗಳಾಗಿವೆ. ಇದರಿಂದ ಅವರು ತಮ್ಮ ಸಮಾಜ ಇಲ್ಲದಂಥ ಮಹಾಪ್ರದಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದಲ್ಲದೆ ಒಬ್ಬ ಬ್ರಾಹ್ಮಣ ರಾಜನಿಂದ ಸಹ ಮನ್ನಣೆಯನ್ನು ಹೊಂದಿದರು. ಇಂಥ ಮಹಾತ್ಮರ ಬಲದಿಂದಲೇ ಸಮಾಜದ ಏಳ್ಗೆಯು ಅವಲಂಬಿಸಿರುವದು. ಇಂಥ ಮಹಾನುಭಾವರು ವೀರಶೈವ ಸಮಾಜದಲ್ಲಿ ಹಿಂದಿನ ಕಾಲಕ್ಕೆ ಅನೇಕರು ಆಗಿಹೋಗಿರುವರು. ಇಂಥವರಲ್ಲಿ ಗಲಗಲಿಯ ಬಸವಲಿಂಗ ಸ್ವಾಮಿಗಳು ಒಬ್ಬರಾಗಿರುವರು.

# ಶ್ರೀ ಕಡಕೋಳ ಮಡಿವಾಳಪ್ಪನವರು.

ಲೇಖಕಃ— ಗುಂಡಪ್ಪಾ ಶಿದ್ಧರಾಮಪ್ಪಾ ಶಾಬಾದಿ. ಮೊರಟಗಿ ತಾಲೂಕ ಸಿಂದಿಗಿ.

ನಮ್ಮೀ ಸುರಪುರದ ಬೈಲು ಸೀಮೆಯಲ್ಲಿ ಸಮಾರು ೧೦೦ ವರುಷ ಗಳ ಹಿಂದೆ ವೀರಶೈವ ಧರ್ಮದಲ್ಲಿ ಅನೇಕ ಜನ ಶಿವಾನುಭವಿಗಳಾದ ಶರ ಣರು ಆಗಿ ಹೋಗಿರುವರು. ಅವರು ಆಗಿನ ಕಾಲವಲ್ಲಿ ಜನರಿಗೆ ಸುಲಿದ ಬಾಳೆಯ ಹಣ್ಣಿನಂದದ ಕನ್ನಡ ಭಾಷೆಯಲ್ಲಿ ಜನರ ಬಳಿಕೆಯಲ್ಲಿರುವ ಸುಲ ಭವಾದ ಶಬ್ದಗಳಿಂದ, ಮಾಡಿದ ಜ್ಞಾನ ಬೋಧವು ಪದ್ಯಗಳ ರೂಪದಿಂದ ಈಗಲೂ ಈ ಪ್ರಾಂತದ ಎಲ್ಲ ಜಾತಿಯ ಜನಗಳ ಮುಖದಲ್ಲಿ ಪ್ರಕಟ ಸ್ಥಿತಿಯಲ್ಲಿರುತ್ತದೆ.

ಸುರಪುರದ ನಾಡಿನಲ್ಲಿ ಶ್ರೀ ಶರಣಬಸಪ್ಪನವರು, ಆರಳಗುಂಡಿಗಿ (ಕಲಬುರ್ಗಿಯ) ಶರಣ ಬಸವೇಶ್ವರ, ಶ್ರೀ ಕೊಡಲೂರ ಬಸವಲಿಂಗಪ್ಪನ ವರು, ಶ್ರೀ ಕಡಕೋಳ (ಕಡೆಗೋಲ) ಮಡಿವಾಳಪ್ಪನವರು, ಶ್ರೀ ಸೀರಲ ಕೇರಿ ಪಂಚಾಕ್ಷರಿ ಸ್ವಾಮಿಗಳು, ಶ್ರೀ ಘನಮಠೇಶರು. ಶ್ರೀ ಖೈನೂರ ಕೃಷ್ಣಪ್ಪನವರು ಮೊದಲಾದ ಶಿವಶರಣರು ಸುಪ್ರಸಿದ್ಧರಾಗಿ ಹೋಗಿದ್ದಾರೆ.

ಇಂಥ ಮಹಾನುಭಾವರ ಚರಿತ್ರಗಳೂ ಬೋಧ ಸಂಗ್ರಹವೂ ಇಡೀ ಕರ್ನಾಟಕದ ಜನತೆಗಾಗಿ ಮುದ್ರಿಸಿ ಪ್ರಸಿದ್ಧ ಪಡಿಸುವದು ಅತ್ಯಾಗತ್ಯ ವಾದದ್ದಿರುತ್ತದೆ. ಈ ಕಾರ್ಯವನ್ನು ರಾವಸಾಹೇಬ ಹಳಕಟ್ಟಿಯವರು ಶಿವಾನುಭವ ತ್ರೈಮಾಸಿಕದ ದ್ವಾರದಿಂದ ಮಾಡಲಿಕ್ಕೆ ಬದ್ಧಕಂಕಣರಾಗಿ ರುವದು ಬಹು ಶ್ಲಾಘನೀಯವಾಗಿದೆ

ಈಗ ಕಡಕೋಳ ಶ್ರೀ ಮಡಿವಾಳ ಯೋಗಿಗಳ ಚರಿತ್ರವನ್ನೂ ಪದ್ಯ ಗಳನ್ನೂ ಸಂಪೂರ್ಣವಾಗಿ ಸಂಗ್ರಹಿಸುವ ಕೆಲಸವನ್ನು ನಡೆಸಿರುತ್ತೇವೆ. ಕಡಕೋಳ ಗ್ರಾಮವು ನಿಜಾಮ ರಾಜ್ಯದ ಸರಹದ್ದಿಯ ಮೇಲೆ (ವಿಜಾ ಪುರ ಜಿಲ್ಹೆ ಸಿಂದಗಿ ತಾಲೂಕ ಪೈಕಿ ಮೋರಟಗಿ ಸಮೀಪದಲ್ಲಿ) ಇರುತ್ತದೆ. ಗ್ರಾಮಕ್ಕೆ ಹೊಂದಿಯೇ ಜಲ ಪ್ರವಾಹ (ಹಳ್ಳ) ವೂ ಗುಡ್ಡವೂ ಇರುತ್ತವೆ. ಗುಡ್ಡದಲ್ಲಿ ಶ್ರೀಮಡಿವಾಳ ಯೋಗಿಗಳ ವಿಶಾಲವಾದ ಮಂದಿರವು ಈಗಲೂ ಇರುತ್ತದೆ.

ಇವರ ಚರಿತ್ರವು ಬಹು ಬೋಧ ಪ್ರದವೂ, ವಿಚಿತ್ರವೂ, ಇದೆ.

ಇವರ ಪದ್ಯಗಳು ಬಹಳ ಇರುತ್ತವೆ. ಇವರ ಶಿಷ್ಯ ಮಂಡಳಿ ಬಹು ಸಂಖ್ಯೆರಿದ್ದಾರೆ ಬಹು ಜಾತಿಯ ಶಿಷ್ಯರಾಗಿರುತ್ತಾರೆ. ಬ್ರಾಹ್ಮಣರ ಶಿಷ್ಯರ ಲ್ಲಿ ಖೈನೂರ ಕೃಷ್ಣಪ್ಪನವರು ಪ್ರಸಿದ್ಧರು. ಇವರೂ, ಇನ್ನಿತರೇ ಶಿಷ್ಯರೂ ಸಹ ಅನೇಕ ಪದ್ಯಗಳನ್ನು ರಚಿಸಿರುತ್ತಾರೆ.

ಸಂಪೂರ್ಣ ಚರಿತ್ರವೂ ಪದ್ಯಸಂಗ್ರಹವೂ ಬೇಗನೇ ಪ್ರಸಿದ್ಧವಾಗತಕ್ಕದ್ದಿರುವದರಿಂದ ಸದ್ಯಕ್ಕೆ ಇವರ ಪದ್ಯಗಳಲ್ಲಿ ಕೆಲವು ಮಾತ್ರ ವಾದರಿಗಾಗಿ ಇದರಡಿಯಲ್ಲಿ ಕೊಟ್ಟಿರುತ್ತೇವೆ.

೧

ಶಿವ, ಶಿವ ಶಿವ ಶಂಭೋ । ಶ್ರೀ । ಮಹಾದೇವ ಶಂಭೋ ॥ ಪಲ್ಲವಿ॥
ಹಲವು ಜನ್ಮ ತಿರುಗಿದೆ । ನಾ । ಕುಲಛಲಕೆ ಮರುಗಿದೆ ॥
ನಾ । ನಿಮ್ಮ ನೆಲೆಯನರಿಯದೆ ಸೊರಗಿದೆ । ನಿಮ್ಮ ಹೊಲಬನರಿಯದೆ
ಕೊರಗಿದೆ, ಕೊರಗಿದೆ, ನಾ, ಕೊರಗಿದೆ ॥೧॥
ಮನ್ಮಥಗೊಡಲು ಗೊಟ್ಟೆ । ನಾ । ಸನ್ಮತ ಮಾರ್ಗವ ಬಿಟ್ಟೆ ॥
ನಾ । ದುರ್ಮತ ನೀತಿಯ ತೊಟ್ಟೆ ನಾ । ಉನ್ಮತ್ತ ಗುಣದಲಿ ಕೆಟ್ಟೆ ।
ನಾಕೆಟ್ಟೆ, ನಾಕೆಟ್ಟೆ ॥೨॥
ಕಷ್ಟ ಜನ ಗೆಳೆತನವಮಾಡಿ । ನಾ । ಹಳಿದೆನು ಹಳಬರ ನೋಡಿ ॥
ನಾಬಳಲಿದೆ ಸಲೆ ಭೋರಾಡಿ । ನಾ । ಬಲು ದಿನಗಳೆದೆನು ಖೋಡಿ ।
ನಾ ಖೋಡಿ । ಬಲು ಖೋಡಿ ॥೪॥
ಪೊಡವಿಯೊಳಗೆ ಚಿಣಮಗೇರಿ । ಆ । ಶಡಗರ ಮೊರಡಿಯ ನೇರಿ ॥
ಆ । ವೃಡ ಮಹಾಂತೇಶಗೆ ದೂರಿ । ನಾ । ಬಿಡಿಸಿಕೊಂಡೆ ಭವದಾರಿ ।
ಭವದಾರಿ । ಭವದಾರಿ ॥೫॥

೨

ಹ್ಯಾಗೆ ಭ್ರಾಂತಿ ನೀಗುತೀ? । ನೀ । ಹ್ಯಾಗೆ ಮಹಾಂತನಾಗುತೀ? ॥
ಹಾಗೆ ಹೀಗೆ ಹೊತ್ತುಗಳೆದು । ನೀ । ಹೀಗೆ ಸತ್ತ್ಹೋಗುತೀ? ॥ ಪಲ್ಲವಿ ॥
ವೇದ ಶಾಸ್ತ್ರ ಪುರಾಣ ಓದುತೀ । ಓದಿಹೇಳಿದರಾಯಿತೆ ಮುಕುತಿ ॥
ವೇದ ಶಾಸ್ತ್ರ ಪುರಾಣಾಗಮಾ । ಆದರಾಯಿತು ಹೋದರ್ಹೋಯಿತು ॥ ೧ ॥
ಭಕುತಿಯಿಂದ ಮುಕುತಿ ಎಂದು । ಯುಕುತಿ ನೀತಿ ಹೇಳುವದು ॥
ಭಕುತಿ ಆತ್ಮಾ ಸ್ವಾತ್ಮವಾದರೆ । ಭಕುತಿಯಾರದು? ಮುಕುತಿಯಾರದು?
॥ ೨ ॥

ಶಿವ ಶಿವ ಎಂಬೋ ನಾಮಸ್ಮರಣೆ । ಭವಭವಾಬ್ಧಿ ದಾಟೋತರಣಿ ||
ಶಿವನ ನೆನೆಯದವನೆ ಕಲ್ಲಾ । ಅವನಿಗೇನೂ ಮಹಾಂತಸಲ್ಲಾ ॥ ೩ ॥

೩

ರೂಪು ನಿರೂಪದೊಳಿರ್ದ ಮಹಾಂತನ ರೂಪು ತಿಳಿಯಲಿಲ್ಲ ।
ಆ ಪರಬ್ರಹ್ಮನು ತಾನಾದಾತ್ಮಗೆ ತಾಪವು ಇನಿತಿಲ್ಲ ॥ ಪಲ್ಲವಿ ॥
ಯೋಗವ ಮಾಡನು ಭೋಗವ ಬೇಡನು । ಯೋಗಭೋಗವ ಬಿಡನು ॥
ಸಾಗಿಸುವನು ಸಕ । ಲಾಗಮ ಶಾಸ್ತ್ರವ । ಮೂಕನಾಗಿರುತಿಹನು ॥ ೧ ॥
ಅಂದವ ಮಾಡನು । ಚಂದವ ಬೇಡನು । ಅಂದ ಚಂಧವ ಬಿಡನು ॥
ಮುಂದಿಬಳಗತಾ । ಹೊಂದಿಹೊಂದದೆ ನಿಜಾ । ನಂದದೊಳಿರುತಿಹನು ॥ ೨ ॥
ಕಾನನಕೋಡನು । ಮಾನವರ ಕೂಡನು । ಕಾನನ ಮಾನವರ ಬಿಡನು ॥
ಏನೇನು ಅರಿಯನು । ಖೂನವ ಮರೆಯನು । ಜಾಣನೆನಿಸುತಿಹನು ॥ ೩ ॥
ಕಾಮುವ ಹಿಡಿಯನು । ನೇಮದಿ ನಡಿಯನು । ಕಾಮನೇಮವ ಬಿಡನು ॥
ತಾಮಸ ಗುಣಗಳು । ಪ್ರೇಮಿಯಾಗಿರುತಿರೆ ನಿ । ಸ್ಸೀಮನಾಗಿರುತಿಹನು ॥ ೪ ॥
ನಾನೆಂದು ಏನು । ನೀನೆಂದು ಏನು । ನಾನು ನೀನೆಂಬುದ ಬಿಡನು ॥
ತಾನೇ ತಾನಾದನು । ಮೌನಮಹಾಂತೇಶನು । ತಾನೆ ತಾನೆನಿಸುತಿಹನು ॥ ೫ ॥

೪

ತನ್ನತಾ ತಿಳಿದ ಮೇಲೆ । ಇನ್ನೇನಿನ್ನೇನೋ ||
ತನ್ನಂತೆ ತಾ ಸರ್ವರಜೀವ । ಮನ್ನಿಸಿ ಮೂಕಾದಮೇಲೆ । ಇನ್ನೇನಿನ್ನೇನು ॥ ಪ ॥
ತಾನೆ ಪೃಥ್ವಿ ಅಪ್ಪು ತೇಜಾ । ತಾನೆ ವಾಯು ಆಕಾಶಾತ್ಮಾ ॥
ತಾನೆ ಸೂರ್ಯ ಚಂದ್ರ ತಾರಾ । ತಾನೆ ಬ್ರಮ್ಹಾಂಡಾದ ಮೇಲೆ ॥ ೧ ॥
ತಾನೆ ಜಿಹ್ವೆ ಘ್ರಾಣ ನೇತ್ರ । ತಾನೆ ಶ್ರೋತೃ- ತ್ವಕ್ಕು- ಹೃದಯ ॥
ತಾನೆ ಕಾಯಾ ಕರಣ ಹರಣ । ತಾನೆ ಪಿಂಡಾಂಡಾದ ಮೇಲೆ ॥ ೨ ॥
ತಾನೆ ಸತ್ತಾ ಅತ್ತಾ ಹೊತ್ತಾ । ತಾನೆ ನಿತ್ಯ ಮರ್ತ್ಯ ಸತ್ಯ ॥
ತಾನೆ ಅರಿತಾ ಬೆರೆತಾ ಮರೆತಾ । ತಾನೆ ಸರ್ವೆಲ್ಲಾದ ಮೇಲೆ ॥ ೩ ॥
ತಾನೆ ಲಕ್ಷ ಸಾವಿರ ನೂರು । ತಾನೆ ಹತ್ತೊಂಭತ್ತೆಂಟು ಏಳು ॥
ತಾನೆ ಆರೈದು ನಾಲ್ಕು ಮೂರು । ತಾನೆ ಎರಡೊಂದಾದ ಮೇಲೆ ॥ ೪ ॥

೫ ನೇ ನುಡಿ ದೊರೆತಿಲ್ಲ.

# ರಗಳೆಗಳು.

ವೀರಶೈವ ಧರ್ಮವು ಹಿಂದುಸ್ಥಾನದಲ್ಲಿ ಒಂದು ರಾಷ್ಟ್ರೀಯ ಧರ್ಮವೆಂದು ಭಾವಿಸಬಹುದು. ಬಹು ಜನ ಸಮಾಜದಲ್ಲಿ ಯಾವತರದ ಭೇದಭಾವವನ್ನು ಎಣಿಸದೆ, ಅದನ್ನು ಮುಂದಕ್ಕೆ ಒಯ್ಯಲು ಪ್ರಯತ್ನಿಸುವದೇ ರಾಷ್ಟ್ರೀಯ ಧರ್ಮದ ಮುಖ್ಯ ಲಕ್ಷಣ ವಿರುತ್ತದೆ. ಇದಕ್ಕೆ ಅನುಸರಿಸಿಯೇ ಪುರಾತನ ಕಾಲದ ವೀರಶೈವ ಮಹಾತ್ಮರು ಪ್ರಯತ್ನಿಸಿದರು. ಆದ್ದರಿಂದಲೇ ವೀರಶೈವ ಜನಾಂಗದ ಸಂಖ್ಯೆಯು ಅತಿ ನಿಬಿಡವಾಗಿ ಮಧ್ಯ ದಕ್ಷಿಣ ಹಿಂದುಸ್ಥಾನದಲೆಲ್ಲ ಆಗ ಪಸರಿಸಿತು. ಈ ವೀರಶೈವ ಧರ್ಮ ಪ್ರವರ್ತಕರು ಜನರಿಗೆ ತಿಳಿಯುವಂತೆ ಧರ್ಮದ ಮಹತ್ವದ ತತ್ವಗಳನ್ನು ಬಹು ಸುಲಭ ಭಾಷೆಯಲ್ಲಿ ವಿವರಿಸಿದರು. ಇದೇ ಅವರ ಧರ್ಮ ಪ್ರಸಾರದ ಕಾರ್ಯಕ್ಕೆ ವಿಶೇಷ ಸಹಾಯಕವಾಯಿತು. ಅವರು ವಚನಗಳೆಂಬ ಗದ್ಯ ಗ್ರಂಥಗಳನ್ನು ಪ್ರಚಾರಕ್ಕೆ ತಂದರು. ಅದರಂತೆಯೇ ಪದ್ಯ ಗ್ರಂಥಗಳಲ್ಲಿ ಸುಲಭ ಶೈಲಿಯುಳ್ಳ ನಾನಾತರದ ಷಟ್ಪದಿಗಳನ್ನೂ ತ್ರಿವಿಧಿಗಳನ್ನೂ ರಗಳೆಗಳನ್ನೂ ಪ್ರಚಾರದಲ್ಲಿ ತಂದರು. ಇವುಗಳಲ್ಲಿ ರಗಳೆಯ ಗ್ರಂಥಗಳು ಬಹು ಮಹತ್ವದವಿರುತ್ತವೆ. ರಗಳೆಗಳು ಕನ್ನಡ ವಾಙ್ಮಯದಲ್ಲಿ ಮೊದಲಿನಿಂದಲೂ ಪ್ರಚಲಿತವಿದ್ದಹಾಗೆ ತೋರುತ್ತದೆ. ಅವುಗಳನ್ನು ಪುರಾತನ ಜೈನ ಗ್ರಂಥಗಳಲ್ಲಿ ಕಾಣಬಹುದು. ಮಹಾಕವಿಗಳೆಂದೆನಿಸಿಕೊಂಡ ಪಂಪ,ರನ್ನ, ಅಗ್ಗಳ, ಅಂಡಯ್ಯ ಮೊದಲಾದವರ ಗ್ರಂಥಗಳಲ್ಲಿ ಅವು ಉಪಲಬ್ಧವಿರುತ್ತವೆ. ಆದರೆ ಈ ಪ್ರಬಂಧಗಳಿಗೆ ಅವರು ತಮ್ಮ ಸಂಗ್ರಹಗಳಲ್ಲಿ ಮಹತ್ವದ ಸ್ಥಾನವನ್ನು ಕೊಟ್ಟಿಲ್ಲ. ಜೈನರ ಸ್ವತಂತ್ರ ರಗಳೆಯ ಗ್ರಂಥಗಳಂತೂ ಈ ವರೆಗೂ ಶಿಕ್ಕಿಲ್ಲ. ಆದರೆ ಈ ರಗಳೆಗಳಿಗೆ ಮಹತ್ವದ ಸ್ಥಾನವನ್ನು ಮೊದಲಿಗೆ ಕೊಟ್ಟಂಥವರು ವೀರಶೈವರಿರುತ್ತಾರೆ. ಅವರ ಗ್ರಂಥಕಾರರು ರಗಳೆಗಳಿಂದ ಶಿವಶರಣರ ಚರಿತ್ರೆಗಳನ್ನೂ ಮತ ಸಿದ್ಧಾಂತಗಳನ್ನೂ ನಿರೂಪಿಸಿರುವರು. ಗದ್ಯ ಗ್ರಂಥಗಳಲ್ಲಿ ವಚನ ಗ್ರಂಥಗಳು ಹ್ಯಾಗೆ ಮಹತ್ವವಾದವುಗಳೋ ಹಾಗೆಯೇ ಈ ರಗಳೆಯ ಗ್ರಂಥಗಳಾದರೂ ವೀರಶೈವ ಕಾವ್ಯಗಳಲ್ಲಿ ಮಹತ್ವದ ಸ್ಥಾನವನ್ನು ಅಲಂಕರಿಸಿರುತ್ತವೆ.

ವೀರಶೈವ ಗ್ರಂಥಕಾರರಲ್ಲಿ ರಗಳೆಯ ಕಾವ್ಯ ರಚನೆಯನ್ನು ಮೊದ

ಲಿಗೆ ಪ್ರಚಾರಕ್ಕೆ ತಂದವರು ಹಂಪೆಯ ಹರಿಹರಾಚಾರ್ಯರು ಇರು ತ್ತಾರೆಂದು ತೋರುತ್ತದೆ. ಇವರು ಶಿವಶರಣರ ವೃತ್ತಾಂತಗಳನ್ನು ಈ ರಗ ಳೆಗಳಿಂದಲೇ ನಿರೂಪಿಸಿದರು. ಇವರ ಈ ಕಾವ್ಯಗಳು ಬಹು ಲಲಿತವಾ ಗಿಯೂ ಮನೋಹರವಾಗಿಯೂ ಇರುತ್ತವೆ. ಆದರೆ ಈ ಪ್ರಕಾರದ ಹೊಸ ಪದ್ಧತಿಯನ್ನು ಹರಿಹರಾಚಾರ್ಯರು ಸ್ವೀಕರಿಸಿದ್ದು ಆಗಿನ ಕಾಲದ ವಿದ್ವಾಂಸರಿಗೆ ಸರಿ ಬಂದಂತೆ ತೋರುವದಿಲ್ಲ. ಹ್ಯಾಗೆ ಈಗ ಲಾವಣಿ ಗಳು ಸಾಮಾನ್ಯ ತರದವೆಂದು ಎಣಿಸಲ್ಪಡುತ್ತವೋ ಹಾಗೆಯೇ ಆ ಕಾಲಕ್ಕೆ ರಗಳೆಗಳನ್ನು ಅವರು ತಿಳಿಯುತ್ತಿದ್ದ ಹಾಗೆ ತೋರುತ್ತದೆ. ಆದ್ದರಿಂದ ಹರಿಹರಾಚಾರ್ಯರು ಮಾಡಿದ ಈ ಪ್ರಯತ್ನಕ್ಕೆ ಅವರಿಗೆ ಆಗಿನ ವಿದ್ವಾಂಸರು ಚೇಷ್ಟೆಯಿಂದ ರಗಳೇಕವಿ ಎಂಬ ಹೆಸರನ್ನಿಟ್ಟರು. ಹೀಗೆ ತಮ್ಮ ವಿದ್ವತ್ತಿಗೆ ಬಾಧೆ ಬರುವಂಥ ಸ್ಥಿತಿಯು ಉಂಟಾಗಲು, ಆಗ ಹರಿಹರಾಚಾರ್ಯರು ತಮ್ಮ ಯೋಗ್ಯತೆಯನ್ನು ಪ್ರಕಟಿಸುವ ಉದ್ದೇಶದಿಂದ ಕನ್ನಡದಲ್ಲಿ ಅತ್ಯಂತ ಪ್ರಸಿದ್ಧಿ ಹೊಂದಿದ ಗಿರಿಜಾ ಕಲ್ಯಾಣವೆಂಬ ಉದ್ಗ್ರಂಥವನ್ನು ಅವರು ರಚಿಸಿದರೆಂದು ಐತಿಹ್ಯವದೆ. ನಿಜಾಂಶವು ಹ್ಯಾಗೆ ಇದ್ದರೂ, ಈ ರಗ ಳೆಯ ಕಾವ್ಯಗಳು ಹರಿಹರಾಚಾರ್ಯರ ಕಾಲದಿಂದಲೇ ವಿಪುಲವಾಗಿ ಹೊರಬೀಳಹತ್ತಿದ ವೆಂಬದರಲ್ಲಿ ಏನೂ ಸಂದೇಹವಿಲ್ಲ. ಈ ರಗಳೆಗಳಲ್ಲಿ ಅನೇಕ ವೀರಶೈವ ಪಂಡಿತರು ವಿದ್ವತ್ ಪರಿಪೂರ್ಣವಾದ ವೇದಾಂತ ವಿಷ ಯಗಳನ್ನೂ ವಿವರಿಸಿರುವರು. ಇವುಗಳಿಗೆ ಟೀಕೆಗಳೂ ಸಹ ಇವೆ. ಆದರೆ ನಮ್ಮ ಕನ್ನಡಿಗರದುರ್ದೈವದಿಂದ ಹ್ಯಾಗೆ ವಚನ ಗ್ರಂಥಗಳು ಅಪರಿಚಿ ತವಾಗಿ ಇನ್ನೂ ಉಳಿದಿರುತ್ತವೆಯೋ, ಹಾಗೆಯೇ ಈ ರಗಳೆಯ ಗ್ರಂಥ ಗಳಾದರೂ ಅಪರಿಚಿತವಾಗಿ ಉಳಿದಿರುತ್ತವೆ.

ಕನ್ನಡ ವಾಙ್ಮಯದಲ್ಲಿ ವೀರಶೈವರ ಕಾಲದ ತರುವಾಯ ಬ್ರಾಹ್ಮಣ ಗ್ರಂಥಕಾರರ ಕಾಲವು ಪ್ರಾರಂಭವಾಯಿತು. ಈ ಗ್ರಂಥಕಾರರಲ್ಲಿ ದಾಸರು ರಚಿಸಿದ ಪದ್ಯ ಗ್ರಂಥಗಳು ಬಹು ಮಹತ್ವವಾದವುಗಳು. ಈ ದಾಸರ ಗ್ರಂಥಗಳಲ್ಲಿ ಅನೇಕ ಕಡೆಗೆ ರಗಳೆಯ ನಾನಾವಿಧ ರಚನೆಗಳನ್ನು ಕಾಣ ಬಹುದು.

ರಗಳೆಗಳನ್ನು ರಘಟಾ ಎಂಬ ಹೆಸರಿನಿಂದ ನಾಗವರ್ಮನು ತನ್ನ ಛಂದೋಂಬುಧಿಯಲ್ಲಿ ವಿವರಿಸಿದ್ದಾನೆ. ಇದರ ಲಕ್ಷಣವನ್ನು ಅವನು ಈ ಪ್ರಕಾರ ಹೇಳಿರುವನು. ಏನೆಂದರೆ—

**ಗಣನಿಯಮ ವಿಪರ್ಯಾಸದೊ।**
**ಳೆಣೆವಡೆದೊಲ್ಪಿಸೆಯೆ ಮಾತ್ರೆ ಸಮನಾಗಿ ಗುಣಾ॥**
**ಗ್ರಣೆಯ ಮತದಿಂದೆ ತಾಳದ।**
**ಗಣನೆ ಗೊಡಂಬಟ್ಟೊಡದುವೆ ರಘುಟಾ ಬಂಧಂ॥**

ಎಂದರೆಃ —ಗಣನಿಯಮ ವಿಲ್ಲದೆ ಮಾತ್ರೆಗಳ ನಿಯಮಕ್ಕೂ ತಾಳಕ್ಕೂ ಅನುಸರಿಸಿರುವದೇ ರಗಳೆ ಎನಿಸುವದು. ಕವಿಗಳು ರಗಳೆಗಳಲ್ಲಿ ನಾನಾವಿಧ ಪ್ರಾಸಗಳನ್ನಿಡುವದುಂಟು. ಆದಿಪ್ರಾಸವಲ್ಲದೆ ಮಧ್ಯ ಮತ್ತು ಅಂತ್ಯ ಪ್ರಾಸಗಳನ್ನಿಡುವರು. ಅನೇಕ ಕವಿಗಳು ಇದರಲ್ಲಿ ಮಿತಿಮೀರಿ ತಮ್ಮ ಕೌಶಲ್ಯವನ್ನು ತೋರಿಸಿದ್ದಾರೆ. ಇದರಿಂದ ಅವು ಅತ್ಯಂತ ರಮಣೀಯವೂ ಮನೋಹರವೂ ಆಗಿರುತ್ತವೆ.

ರಗಳೆಗಳು ಅನೇಕ ವಿಧವಾಗಿರುವವು. ತಮಿಳ ವಾಙ್ಮಯದಲ್ಲಿ ಅನೇಕ ತರದ ರಗಳೆಗಳು ಇವೆ. ಆದರೆ ಕನ್ನಡದಲ್ಲಿ ಮುಖ್ಯವಾಗಿ ಮೂರು ತರದ ರಗಳೆಗಳು ಇರುತ್ತವೆ. ಅವು ಯಾವವೆಂದರೆಃ—ಮಂದಾನಿಲ, ಲಲಿತ, ಉತ್ಸಾಹ. ಇವುಗಳ ರಚನೆಯ ವಿಷಯವಾಗಿ ಒಬ್ಬ ಕವಿಯು ಕೆಳಗೆ ಬರೆದ ಪ್ರಕಾರ ಹೇಳಿದ್ದಾನೆ.

**ಕಂದ॥ ಮಂದಾನಿಲ ಲಲಿತೋತ್ಸಹ।**
**ವೆಂದುರ ರಗಳೆಗಳ ನಾಮ ಮಕ್ಕುಂಕ್ರಮದಿಂ॥**
**ಒಂದಕ್ಕೆ ಪದಿನಾರಿರ್ಪ।**
**ತ್ತೊಂದಕ್ಕಿಪ್ಪತ್ತು ನಾಲ್ಕು ಮಾತ್ರೆಗಳು ಬರೇ॥**

ಇನ್ನೊಬ್ಬ ಗ್ರಂಥಕಾರನು ಹೇಳುವದೇನಂದರೆ —

**ಕಂದ॥ ಇರ್ಪತ್ತು ಮಾತ್ರೆಲಲಿತೆಗೆ।**
**ತಪ್ಪದೆ ಪದಿನಾರು ಮಾತ್ರೆ ಮಂದಾನಿಲಕಂ॥**
**ತಪ್ಪದು ಮುತ್ಸಾಹಕ್ಕುರೆ।**
**ಒಪ್ಪುವದಿರ್ಪತ್ತು ನಾಲ್ಕು ಮಾತ್ರೆಗಳ ಬಲೆ॥**

ಇದರ ಮೇಲಿಂದ ಮಂದಾಲನಿಕ್ಕೆ ಹದಿನಾರು, ಲಲಿತೆಗೆ ಇಪ್ಪತ್ತು ಉತ್ಸಾಹಕ್ಕೆ ಇಪ್ಪತ್ತನಾಲ್ಕು ಮಾತ್ರೆಗಳಿದ್ದ ಹಾಗೆ ತೋರಿಬರುತ್ತದೆ.

ಸಾಂಪ್ರತ ಕಾಲದಲ್ಲಿ ಇಂಗ್ಲೀಷ ಕವಿಗಳ ಪದ್ಧತಿಯನ್ನು ಮುಂದಿಟ್ಟುಕೊಂಡು ಅನೇಕ ಕನ್ನಡಿಗರು ಸುಲಭ ಮತ್ತು ಲಲಿತ ಕನ್ನಡ ಪದ್ಯಗಳನ್ನು ರಚಿಸಲಿಕ್ಕೆ ಪ್ರಯತ್ನಿಸುವದುಂಟು. ಅವರ ಈ ಪ್ರಯ

ತ್ನವು ಅತ್ಯಂತ ಸ್ತುತ್ಯವಾಗಿದ್ದರೂ ಅವರು ಹೀಗೆಮಾಡಿದ ಕೃತಿಗಳಲ್ಲಿ ಯಾವತರದಮಾಧುರ್ಯವೂ ಲಾಲಿತ್ಯವೂ ಕಂಡುಬರದೆ, ದೊರಗುತನ ವುಳ್ಳವಾಗಿರುವದೇ ಹೆಚ್ಚೆಂದು ತೋರಿಬರುತ್ತದೆ. ಈ ತರದ ಉದಾಹರಣೆ ಗಳನ್ನು ನಮ್ಮ ಮುಂಬಯಿ ಇಲಾಖೆಯ ಕ್ರಮಿಕ ಪುಸ್ತಕಗಳಲ್ಲಿ ಹೇರಳ ವಾಗಿ ಕಾಣಬಹುದು. ಹೀಗೆ ಸುಲಭ ಮತ್ತು ಮನೋವೇಧಕವಾದ ಪದ್ಯಗಳನ್ನು ರಚಿಸಲಿಚ್ಛಿಸುವವರು ವೀರಶೈವ ರಗಳೆಯ ಗ್ರಂಥಗಳನ್ನು ಅವಶ್ಯವಾಗಿ ಅಭ್ಯಾಸ ಮಾಡತಕ್ಕದ್ದು. ಈ ಗ್ರಂಥಗಳನ್ನು ಬರೆದವರು ವಿದ್ವಾಂಸರು. ಆದರೆ ಅವರ ಧ್ಯೇಯವು ಜನ ಸಾಮಾನ್ಯವನ್ನು ಉದ್ಧಾರ ಗೊಳಿಸುವದಿದ್ದದರಿಂದ, ಅವರು ಕೇವಲ ತಮ್ಮ ವಿದ್ವತ್ತೆಯನ್ನು ಪ್ರಕಟಿ ಸಲಿಕ್ಕೆ ಅಪೇಕ್ಷಿಸದೆ, ಜನರಿಗೆಲ್ಲ ತಿಳಿಯಬೇಕೆಂದು ಈ ಸುಲಭ ರಚನೆಗಳನ್ನು ಅನುಸರಿಸಿದ್ದಾರೆ. ಹೀಗೆ ರಗಳೆಗಳುಸುಲಭವಾಗಿದ್ದರೂ ಅವುಗಳಲ್ಲಿಯಾವ ತರದ ದೊರಗುತನವು ತೋರಿಬರುವದಿಲ್ಲ. ಅವೆಲ್ಲವು ಬಹು ಸುಂದರ ವೃದು ಮತ್ತು ಪ್ರತಿಭಾಮಯವಾಗಿ ಇರುತ್ತವೆ. ಇವೆಲ್ಲವುಗಳ ಉದಾಹರ ಣೆಗಳನ್ನು ಈ ಲೇಖದಲ್ಲಿ ಕೊಟ್ಟರೆ. ಈ ಲೇಖದ ವಿಸ್ತಾರವು ಹೆಚ್ಚಾಗು ವದು. ಆದರೆ ಈ ರಗಳೆಗಳ ಬೇರೆ ಬೇರೆ ರಚನೆಗಳು ಎಂಥವಿರುತ್ತ ವೆಂಬದನ್ನು ಮಾತ್ರ ತೋರಿಸುವ ಉದ್ದಿಶ್ಯವಾಗಿ ಕೆಲವು ಉದಾಹರ ಣೆಗಳನ್ನು ಇಲ್ಲಿ ಕೊಡುತ್ತೇವೆ.

## ಮಂದಾನಿಲ ರಗಳೆ.

ಮಹಾಕವಿ ಪಂಪನು ತನ್ನ ಆದಿ ಪುರಾಣದ ೪ ನೇ ಆಶ್ವಾಸದಲ್ಲಿ ಲಗ್ನದ ಮನೆಯನ್ನು ವಿವರಿಸುವ ಕಾಲಕ್ಕೆ ಈ ಮೇಲಿನ ರಗಳೆಯ ವಿಧ ವನ್ನು ಅನುಸರಿಸಿದ್ದಾನೆ.

**ಸ್ಫುರಿತೇಂದ್ರ ನೀಲಮಣಿ ಖಚಿತ ಭೂಮಿ**
**ಚಲುವಿಂಗದು ನೆಟ್ಟನೆ ಜನ್ಮ ಭೂಮಿ ॥**
**ಮರಕತ ಮಣಿವಿರಚಿತ ವಿಮಳ ಭಿತ್ತಿ ।**
**ಪೊಗಳಲ್ಕರ ಮರಿದದು ಬೇರೆ ಭಿತ್ತಿ ॥**
**ಪಳುಕಿನ ಕಂಭಂಗಳ ಪೊಳೆವ ಪೊಳಪು ॥**
**ನವ ವಿದ್ಯುದ್ದಾಮದ ಪೊಳೆವ ಪೊಳಪು ॥**

* * *

ವಿಭವದ ಮೂಲಸ್ಥಾನ ಮೆನಿಸಲಿದು
ಕಾಮದೇವ ನಾಸ್ಥಾನ ಮೆನಿಸಲಿದು ॥
ಓರಂತೆ ನೆರೆದುದೆನೆ ಜನ ಸಮೂಹ
ಮಾಗಳೆ ಸಮೆದತ್ತು ವಿವಾಹಗೇಹ ।

## ಲಲಿತ ರಗಳೆ.

ಮಹಾ ಕವಿರನ್ನನು ತನ್ನ ಅಜಿತ ತೀರ್ಥಕರ ಪುರಾಣದ ಳ ನೇ ಆಶ್ವಾಸದಲ್ಲಿ ಜನ್ಮೋತ್ಸವ ದಿನವನ್ನು ವಿವರಿಸುವ ಕಾಲಕ್ಕೆ ಈ ಲಲಿತ ರಗಳೆಯನ್ನು ಸ್ವೀಕರಿಸಿದ್ದಾನೆ.

ಆ ಕುಮಾರೋದಯದೊಳಾಗಳಾನಂದದಿಂ
ಲೋಕ ಮೋದಿದು ನಾನಾವಿಧ ಛಂದದಿಂ ॥
ರಾಜಭವನ ದೊಳೆಸೆವ ಮಣಿ ತೋರಣಂಗಳಿಂ
ರಾಜಿಸುವು ಮೆತ್ತಿದಾ ತಪವಾರಣಂಗಳಿಂ ॥
ವಾರನಾರೀ ಜನದ ಸೊಗಯಿಸುವ ನೃತ್ಯದಿಂ ।
ಚಾರಣ ಗಣಂಗಳೋದುವ ಕಂದ ವೃತ್ತದಿಂ ॥
ರಂಗ ವಲ್ಲಿಗಳೆ ಬಿಡು ಮುತ್ತುಗಳಿ ನಿಂಬಾಗೆ ।
ಮಂಗಳರವಂ ಪರೆದು ದಿಗ್ವಳಯಮುಂ ತಾಗೆ ॥

* * *

ಕವಿಶ್ರೇಷ್ಠನಾದ ಷಡಕ್ಷರಿಯೂ ತನ್ನ ಕಾವ್ಯಗಳಲ್ಲಿ ಈ ರಗಳೆಗಳ ರಚನೆಯನ್ನು ಸ್ವೀಕರಿಸಿದ್ದಾನೆ. ಇವುಗಳಲ್ಲಿ ಇವನು ಅನೇಕ ತರದ ಭಾವ ಗಳನ್ನು ಬಹು ಸುಂದರವಾಗಿ ವಿವರಿಸಿದ್ದಾನೆ. ಕೆಳಗೆ ಕಾಣಿಸಿದ ಉದಾ ಹರಣೆಯು ಎಷ್ಟು ಮನೋಹರವಾಗಿದೆ ಎಂಬದು ವಾಚಕರಿಗೆ ತಿಳಿಯದಿ ರಲಾರದು. ಅದರಲ್ಲಿಯ ಸೃಷ್ಟಿಯ ವರ್ಣನೆಯು ಬಹು ಮೃದುವಾದ ಕನ್ನಡ ಶಬ್ದಗಳಲ್ಲಿ ಬಹು ಲಲಿತವಾಗಿ ಹೇಳಲ್ಪಟ್ಟಿದೆ. ಇಲ್ಲಿ ಕವಿಯು ಲಲಿತರಗಳೆಯನ್ನು ಉಪಯೋಗಿಸಿದ್ದಾನೆ.

ಅಲ್ಲಿ ಮಾಮರದಲ್ಲಿ ಮಲ್ಲಿಕಾಲತೆಯಲ್ಲಿ ।
ಎಳೆಯಸುಗೆ ಮರದಲ್ಲಿ ಜಳರುಹಾಕರದಲ್ಲಿ ॥

**ಸಂಪಗೆಯ ತರುಗಳೊಳ್ ಸೊಂಪಿಡಿದ ಸುರಯಿಯೊಳ್ ।**
**ಪಾದರಿಯ ಮರದಲ್ಲಿ ಮಾಧವಿಯಲತೆಯಲ್ಲಿ ॥**

**ತಿಳಕ ಬಕುಳಾದಿ ತರುನಿವಹದಾರವೆ ಗಳೊಳ್ ।**
**ದಳಫಳ ಕುಸುಮ ವಿಸರ ವಿದಿತವಿಟಪಂಗಳೊಳ್ ॥**
**ಪೂಗೊಯ್ಯಲೆಂದಬಲೆಯರ್ ನೆರೆದು ಬಗೆದಂದು ।**
**ಬೇಗದಿಂ ಪರಿ ತಂದು ಪರಿ ತೋಷದಿಂ ನಿಂದು ॥**

## ಉತ್ಸಾಹ ರಗಳೆ .

ಈ ಸಂಚಿಕೆಯಲ್ಲಿ ವೀರಶೈವ ರಗಳೆ ಎಂಬ ಹೆಸರಿನ ರಗಳೆಯನ್ನು ನಾವು ಕೊಟ್ಟಿದ್ದು ಅದು ಉತ್ಸಾಹ ರಗಳೆಯ ಉದಾಹರಣೆ ಯಾಗಿರುತ್ತದೆ .

ಮೇಲ್ಕಂಡ ರಗಳೆಗಳ ವೃತ್ತಾಂತದಿಂದ ಇವು ತ್ಯಾಜ್ಯವಾದ ಕೃತಿಗಳೆಂಬ ಭಾವನೆಯು ಯಾರಿಗೂ ಉತ್ಪನ್ನವಾಗಲಿಕ್ಕಿಲ್ಲ. ಆದರೆ ನಿಜಸ್ಥಿತಿಯು ಹಿಂದಿನ ಕಾಲಕ್ಕೆ ಇದಕ್ಕೆ ವಿಪರೀತವಾಗಿತ್ತೆಂದು ವಾಚಕರಿಗೆ ಹೇಳಿದರೆ, ಅವರಿಗೆ ಸೋಜಿಗವಾಗದೆ ಇರದು. ರಗಳೆ ಎಂದರೆ ಅರ್ಥವಿಲ್ಲದ ಬೇಸರಿಡುವ ಮಾತು ಎಂದು ಈಗ ನಮ್ಮ ಮಾತನಾಡುವ ಭಾಷೆಯಲ್ಲಿ ಈ ಶಬ್ದಕ್ಕೆ ಅರ್ಥವಿದೆ. ರಗಡ ಎಂಬ ಶಬ್ದವು ರಘಟಾ ಎಂಬದರಿಂದ ಬಂದಿದೆ. ರಗಡ ಎಂದರೆ ಮಿತಿಮೀರಿದ ಸಂಖ್ಯೆಯುಳ್ಳ ಎಂಬ ಅರ್ಥವು ಈಗ ಇದೆ. ರಗಳೆಯ ಕಾವ್ಯಗಳು ಮೊದಲಿಗೆ ಹ್ಯಾಗೆ ಎಣಿಸಲ್ಪಡುತ್ತಿದ್ದವೆಂಬುದು ಈ ಶಬ್ದಗಳ ಮೇಲ್ಕಂಡ ಅರ್ಥದಿಂದ ವಾಚಕರು ಊಹಿಸಬಹುದು. ಮುಂಚಿನ ಕಾಲಕ್ಕೆ ರಗಳೆ ಹೇಳು, ಎಂದರೆ ಶಿವಶರಣರ ಚರಿತ್ರೆಯನ್ನು ಹೇಳು ಎಂಬ ಅರ್ಥವು ಆಗುತ್ತಿತ್ತು. ಆದರೆ ಈ ಶಬ್ದಗಳಿಗೆ ಈಗ ವಿಪರೀತ ಅರ್ಥಗಳಾಗಿವೆ. ರಗಡ ಮತ್ತು ರಗಳೆ ಈ ಶಬ್ದಗಳು ಈಗ ಮಹಾರಾಷ್ಟ್ರ ಭಾಷೆಯಲ್ಲಿ ಇದೇ ಅರ್ಥದಿಂದ ಹೋಗಿವೆ. ಆದರೆ ರಗಳೆಗಳು ಹೀಗೆ ತ್ಯಾಜ್ಯವಾದ ಕೃತಿಗಳಿರುವದಿಲ್ಲ. ಷಟ್ಪದಿ ಕಾವ್ಯಗಳಂತೆಯೇ ಅವು ಸುಂದರವಾದವುಗಳು ಇರುತ್ತವೆ. ಆದರೆ ಅತಿ ಸುಲಭ ರಚನೆಯುಳ್ಳವು ಇರುತ್ತವೆ. ನಮ್ಮ ಹಿಂದುಸ್ಥಾನ ದೇಶದ ವಿದ್ವಜ್ಜನರಲ್ಲಿ ಗ್ರಂಥಗಳು ಎಷ್ಟು ಕ್ಲಿಷ್ಟ ಮತ್ತು ಕಠಿಣವಾಗಿರುವವೋ ಅಷ್ಟು

ಅವುಗಳ ಮಹತ್ವವು ಹೆಚ್ಚು ಎಂಬ ತಿಳುವಳಿಕೆಯು ಯಾವಾಗ
ಲೂ ಶೇರಿದ್ದಿರುತ್ತವೆ. ಒಂದು ವಾಕ್ಯದಲ್ಲಿ ಸಂಸ್ಕೃತ ಶಬ್ದಗಳು ತುಂ
ಬಿರಬೇಕು, ಉದ್ದುದ್ದ ವಾಕ್ಯಗಳು ಇದ್ದು, ಕ್ಲಿಷ್ಟ ಶೈಲಿಯುಳ್ಳವು ಇ
ರಬೇಕು, ಇವು ಪ್ರೌಢ ರಚನೆಯ ಲಕ್ಷಣಗಳಾಗಿವೆ. ಆದರೆ ಈ
ಸ್ಥಿತಿಯು ನಮ್ಮ ಮೊದಲಿನ ವೀರಶೈವ ಪಂಡಿತರಲ್ಲಿ ಇರಲಿಲ್ಲ. ಆದ್ದ
ರಿಂದಲೇ ಅವರು ರಗಳೆಗಳಂಥ ಕಾವ್ಯಗಳನ್ನು ಬರೆದರು. ಷಟ್
ಪದಿಗಳನ್ನೂ ಸಾಂಗತ್ಯಗಳನ್ನೂ, ತ್ರಿಪದಿಗಳನ್ನೂ ಪ್ರಚಾರಕ್ಕೆ ತಂದರು
ಮತ್ತು ವಚನಗಳಂಥ ಗದ್ಯ ಗ್ರಂಥಗಳನ್ನು ಬರೆದರು. ಇದರಲ್ಲಿ ಅವರ ಮು
ಖ್ಯ ಉದ್ದೇಶವು ಕೇವಲ ತಮ್ಮ ವಿದ್ವತ್ತೆಯನ್ನು ಪ್ರಕಟಿಸುವದಿರದೆ, ಜನ
ಸಮುದಾಯವನ್ನು ಎಚ್ಚರಿಸುವದೇ ಇತ್ತು. ಆದ್ದರಿಂದ ಅವರಿಗೆ ತಿಳಿ
ಯುವಂಥ ರಚನೆಗಳನ್ನು ಅವರು ಕೈಕೊಂಡರು. ಇದರಿಂದ ಆಗಿನ
ಕಾಲಕ್ಕೆ ಜನ ಸಮುದಾಯದಲ್ಲಿ ಒಂದು ವಿಲಕ್ಷಣ ಚಳವಳಿಯು ಪ್ರಾಪ್ತ
ವಾಗಿ ವೀರಶೈವ ಧರ್ಮವುದೇಶದಲ್ಲೆಲ್ಲ ಪಸರಿಸಲಿಕ್ಕೆ ಕಾರಣವಾಯಿತು.

## ವೀರಶೈವ ರಗಳೆ.
### (ಉತ್ಸಾಹ.)

ಶ್ರೀಮದಮಲಕಮಲ ಮಿತ್ರ ಕೋಟಿ ತೇಜ ರಾಜ ಚೂಡ।
ಕಾಮಕಾಲ ರಹಿತ ಶಿವನ ಸಿರಿಯ ಸಿದ್ಧಿ ವೀರಶೈವ ||೧||
ಹೈಮವತಿ ಮನಃಸರೋಜ ರಾಜಭೃಂಗ ಶರಣ ಸಂಗ।
ವಾಮದೇವ ವದನ ವಖಿಳ ಸುಖ ಸಮೃದ್ಧ ವೀರಶೈವ ||೨||
ಬೇಡಿದರ್ಗೆ ಬೇಡಿದಿಷ್ಟ ಸಿದ್ಧಿಯಂ ಪ್ರಸನ್ನವಾಗಿ।
ನೀಡುತಿರ್ಪ ನಿಧಿ ನಿಧಾನ ವಧಿಕ ವಪ್ಪ ವೀರಶೈವ ||೩||
ರೂಢಿಯೊಳಗೆ ಶಿವನ ಭಕ್ತ ನಿಳೆಗೆ ಶರಣ ಸುಖದ ಬೆಳಸು।
ಕೋಡೆ ಸತ್ಯ ನಿತ್ಯ ನಿಜ ನಿರಾಳ ವಪ್ಪ ವೀರಶೈವ ||೪||
ತನ್ನ ನೆನೆವರ್ಗೆ ತನ್ನ ನಿತ್ತು ಪರಮ ಭಕ್ತಿ ಸುಖದ।

ರನ್ನದೊಡಿಗೆಯಂ ಸಮಂತು ತೊಡಿಸುತಿರ್ಪ ವೀರಶೈವ ॥೫॥

ಮುನ್ನ ಭವಭವಂಗಳೊಳಗೆ ತೊಳಲಿ ಬಳಲಿ ನೊಂದು ಬೆಂದು ।
ಬನ್ನಬಟ್ಟು ಕೆಡುವ ಕಾಯ ಬಿಡುತಲಿರ್ಪ ವೀರಶೈವ ॥೬॥

ಇನ್ನು ತನ್ನ ನಂಬಿದರ್ಗೆ ಬಂದು ಪೊರ್ದಿದವರ ಜನ್ಮ ದುಃಖ ।
ಮುನ್ನ ಮೂರ್ಚೆ ತೀರ್ಚೆ ಪರಮ ಪದವ ಕೊಡುವ ವೀರಶೈವ ॥೭॥

ಬೆನ್ನ ಬಿಡದೆ ಕಾಡುತಿರ್ಪ ಕೋಪತಾಪ ಲೇಪವೆಲ್ಲ ।
ಮುನ್ನ ಮೂರ್ದು ಪೀರ್ದು ಮನದ ಮದಡ ಸುಡುವ ವೀರಶೈವ ॥೮॥

ಪಂಚ ವಿಷಯವೆಂಬ ಮದ ಗಜಂಗಳ ಕುಲವ ನಟ್ಟಿ ಮೆಟ್ಟಿ ।
ಪಂಚ ವದನನಂತೆ ಸೀಳ್ದು ಪೋಳ್ದು ಕಳೆವ ವೀರಶೈವ ॥೯॥

ಲಂಚ ವಂಚನೆಯೊಳು ತನುವ ಹೊರೆವುತಿಹ ಮನಃ ಪ್ರಪಂಚ ।
ಸಂಚವೆಂಬ ಡಂಭತನದ ಕೆಸರ ತೊಳೆವ ವೀರಶೈವ ॥೧೦॥

ಅಷ್ಟ ಮದಗಳೆಂಬ ವೆಂಟನಟ್ಟಿ ಮೆಟ್ಟಿ ಮನದ ಮದಡ ।
ತಾಮ ಸಾಂಧ ಕಾರಲತೆಯ ಬೇರನಗಿವ ವೀರಶೈವ ॥೧೧॥

ಶುದ್ಧ ಶೈವ ಮಾರ್ಗ ಶೈವ ಪೂರ್ವ ಶೈವವೆಂಬ ಸಟೆಯ ।
ಸುದ್ದಿಗಳಿಗೆ ಕಿವಿಯಗೊಡದ ಲಿಂಗ ನಿಷ್ಠ ವೀರಶೈವ ॥೧೨॥
ಆರು ಶೈವದಲ್ಲಿ ನಡೆವುತಿಹರವರ್ಗೆ ಮುಕ್ತಿ ಮುಂದೆ ।
ಮೂರು ಬಾರಿ ಭವಕೆ ಬಂದೊಡಿಲ್ಲವೆಂಬ ವೀರಶೈವ ॥೧೩॥
ವೀರಶೈವ ಕೊಂದು ಜನ್ಮದಲ್ಲಿ ಮುಕ್ತಿಯೆಂದು ಶಿವನು ।
ಗೌರಿ ಗೊರೆದ ನಾಗಿ ಶೈವ ಹೊಲ್ಲವೆಂಬ ಪೀರಶೈವ ॥೧೪॥
ಕೋಟಿ ಕೋಟಿ ಜನ್ಮದಲ್ಲಿ ಕ್ಷುಲ್ಲತನದಿ ಬಂಪು ಬಂದು ।
ಕೋಟಿ ನರಕ ಗತಿಗೆ ಹೋಗಲೊಲ್ಲೆನೆಂಬ ವೀರಶೈವ ॥೧೫॥

ಚಾಟು, ಸೂನೆಗಾರ, ಚಕ್ರಿ, ದ್ವಿಜನು, ವೇಶಿ, ನೃಪತಿಯಂತೆ ।
ಕೋಟಲೆಯಲಿ ಬೆಂದ ತನುವ ಪೊರೆವುದಲ್ಲ ವೀರಶೈವ ॥೧೬॥
ಹಿಂದ ಬಿಟ್ಟು ಮುಂದ ಹಿಡಿದು ಮುಂದ ಬಿಟ್ಟು ಹಿಂದ ಹಿಡಿದು ।
ಸಂದಿ ಗೊಂದಿ ಯೊಳಗೆ ನುಸುಳಿ ಕೆಡೆವುದಲ್ಲ ವೀರಶೈವ ॥೧೭॥
ಭೂತಜೀವಿಯೆನಿಸಿ ತನ್ನ ಭವ ಭವಂಗಳೊಳಗೆ ಬರಿಸಿ ।
ಪ್ರೇತಲಿಂಗಧಾರಣಕ್ಕೆ ನಲಿವುದಲ್ಲ ವೀರಶೈವ ॥೧೮॥

ಈತಮಂಥ ಕೊಳಗು ಮಾಡುತಿಹ ಕನಿಷ್ಠ ಶೈವ ಕರ್ಮ ।
ಜಾತನಾಗಿ ಕೆಡುವ ಮತಕೆ ಒಲಿವನಲ್ಲ ವೀರಶೈವ ॥೧೯॥
ಶೈವ ಮಾರ್ಗದಲ್ಲಿ ನಡೆವ ಗುರುವಿಗೆರಗಲೊಲ್ಲೆನೆಂಬ ।
ಭಾವ ಭರಿತ ಚಾರು ಚರಿತಸುಪ್ರಸಿದ್ಧ ವೀರಶೈವ ॥೨೦॥
ಅರಿಯುದಂದು ಶೈವ ಗುರುವಿನಲ್ಲಿ ದೀಕ್ಷೆ ವಡೆದ ಭಕ್ತ ।
ನರಿದು ಪುನರಪಿ ತ್ರ್ಯಕ್ಷ ದೀಕ್ಷೆಯಹುದು ವೀರಶೈವ ॥೨೧॥
ತನುವ ನಿಜಸಮಾಧಿಗೀವ ಗುರುವಿನಲ್ಲಿ ದೀಕ್ಷೆ ವಡೆದು ।
ಮನುಜವಾಸದನ್ನಮಂ ವಿವರ್ಜಿಸುವುದು ವೀರಶೈವ ॥೨೨॥
ತನ್ನ ಕುಲವ ಮರೆದು ಭಕ್ತ ಕುಲವ ಜರಿದು ಶರಣವಾಸ ।
ದಪ್ಪವ ನಿರರ್ಥ ತೊರೆದು ಕೆಡವುದಲ್ಲ ವೀರಶೈವ ॥೨೩॥
ಜಾಡ ಬಡಿಗ ಭಕ್ತರವರ ಸದನದಲ್ಲಿ ಹೊಕ್ಕು ಉಣ್ಣ ।
ಬೇಡವೆಂಬ ಶೈವ ಮತವ ಜರಿದು ತೊರೆವ ವೀರಶೈವ ॥೨೪॥
ರೂಢಿಯೊಳಗೆ ಶಿವನ ಭಕ್ತ ಮಹಾ ಕುಲಜನೆಂದು ಹೊಗಳಿ ।
ಹಾಡಿ ಹರಿಸುವರ್ಗೆ ಸುಖವ ಕರೆದು ಮೆರೆವ ವೀರಶೈವ ॥೨೫॥
ಹರನ ಶರಣರಲ್ಲಿ ಕುಲದ ಸೀಮೆಯಂ ವಿಚಾರಿಸುವರ ।
ನೆರೆಯೊಳಿರದ ಹೊತೆಯೊಳಿರದ ನಿತ್ಯ ನಿಹಿತ ವೀರಶೈವ ॥೨೬॥
ಮನೆಯ ಮೇಲೆ ಕಾಗೆಗಳಿಗೆ ಕೂಳನಿಕ್ಕಿಸತ್ತ ಜನನಿ ।
ಜನಕ ರುಂಬರೆಂದು ಬಸಿರ ಬಡಿವುದಲ್ಲ ವೀರಶೈವ ॥೨೭॥
ಜನನ ಸೂತಕಕ್ಕೆ ಹೆದರಿ ಮರಣ ಸೂತಕಕ್ಕೆ ಬೆದರಿ ।
ಜಿನುಗಿ ಹಲವುಗಳಹಿ ಕೆಟ್ಟು ನಡೆವುದಲ್ಲ ವೀರಶೈವ ॥೨೮॥
ಇಂದು ವದನೆ ಹೊಲೆಯು ಗಂಡಳೆಂದು ದೂರವಿರ್ದು ಮರಳಿ !
ಮಿಂದ ಬಳಿಕ ಮನೆಗೆ ಕರೆದುಕೊಂಬುದಲ್ಲ ವೀರಶೈವ ॥೨೯॥
ಬಂಧುಗಳ ನಗಲ್ದು ಭಕ್ತಿಯುಂಟುಯೆಂಮ ಭವಿಯು ಕರೆದು ।
ತಂದು ಮನಿಯೊಳೊಂದು ಗೂಡಿ ಉಂಬುದಲ್ಲ ವೀರಶೈವ ॥೩೦॥
ವಾರಲಗ್ನ ಶುಭ ಮುಹೂರ್ತದಾರಿ ಶಕುನವೆಂಬ ಸಟೆಯು ।
ಬೇರುವೆರಸಿಕಿತ್ತು ಹಾಕುದಿಪ್ಪುದಲ್ಲ ವೀರಶೈವ ॥೩೧॥
ಹಾರುವರ್ಗೆ ನಮಿಸಿ ಚಂದ್ರ ತಾರಕೆಗಳ ಬಲವ ಕೇಳ್ದು ।

ಬೀರ ನರರ ಮನದ ಮದಡ ಸುಡುವುದಲ್ಲ ವೀರಶೈವ ॥೩೨॥

ಏಕ ಭುಕ್ತ ಪಾರಣೆಗಳ ಮಾಡಿ ಪುಣ್ಯಗತಿಯ ಹಡೆಯ ।
ಬೇಕೆನುತ್ತ ಹಲುಬಿ ಹಸಿದು ಸಾವುದಲ್ಲ ವೀರಶೈವ ॥೩೩॥

ಶೋಕ ರಸದೊಳದ್ದಿ ಬಿದ್ದು ಒರಲಿ ಸತ್ತ ನರರ ನೆನೆದು ।
ಕಾಕು ಬಳಸಿ ಪೇಳೆಗಳೆದು ಸಾವುದಲ್ಲ ವೀರಶೈವ ॥೩೪॥

ಪಂಚ ಪರ್ವ ಪುಣ್ಯ ತಿಥಿಗಳೆಂದು ನೆರಹಿ ಬಹಳ ಕಿಕ್ಕಿ ।
ಹಂಚ ಹಿಡಿದು ಮಸಿಯ ಮಾಡಿಕೊಂಬುದಲ್ಲ ವೀರಶೈವ ॥೩೫॥

ಕಾಂಚನಾದ್ರಿಯರಸನವರು ಬರಲು ಕಂಡು ಕಾಣದಂತೆ ।
ಸಂಚ ವಂಚನೆಗಳ ಮಾಡಿ ಉಂಬುದಲ್ಲ ವೀರಶೈವ ॥೩೬॥

ರುಣ ರುಜೆ ಗ್ರಹಂಗಳಟ್ಟಿಯ ಲೆದು ಕಾಡಿದಪುವೆನುತ್ತ ।
ಕಣಿಯ ಕೇಳಿ ಹರಸಿ ಹಣವ ನೀವುದಲ್ಲ ವೀರಶೈವ ॥೩೭॥

ಬಣತೆಗೆಡಿಸಿ ಕಾಡಿದಪುದು ಶನಿ ಎನುತ್ತ ಲಾಸ್ಪದಕ್ಕೆ ।
ಮಣಿದು ನೂಲಸುತ್ತಿಸುತ್ತಿ ಪೋಪುದಲ್ಲ ವೀರಶೈವ ॥೩೮॥

ಸ್ಥಾವರಕ್ಕೆ ಹರಸಿಕೊಂಡು, ಅಕ್ಕಿ ಬೇಳೆ ಸಹಿತ ಹೋಗಿ ।
ಸಾವಿರೊಡೆಯರುಗಳಿಗಿಕ್ಕಿ ನಲಿವುದಲ್ಲ ವೀರಶೈವ ॥೩೯॥

ದೇವ ಗುರು ನಿರೂಪಿಸಿದ ಷಡಕ್ಷರಿಯ ಯನಗಲ್ದು ತುಟ್ಟಿ ।
ಸಾವ ಮಂತ್ರ ತಂತ್ರಗಳನು ಕಲಿವುದಲ್ಲ ವೀರಶೈವ ॥೪೦॥

ಲಿಂಗ ಲಿಂಗವೆಂಬುದೆಲ್ಲ ಒಂದೆ ಎಂದು ಮನವ ಹಲವು ।
ಲಿಂಗಗಳಿಗೆ ಹಸಿಗೆ ಮಾಡಿ ಕೊಡುವುದಲ್ಲ ವೀರಶೈವ ॥೪೧॥

ಮಂಗಳ ಪ್ರಸನ್ನ ಇಷ್ಟ ಲಿಂಗದಂಘ್ರಿ ತಳವ ಹೊದ್ದಿ ।
ಲಿಂಗಪೂಜೆ ಮಾಡದ ಲಸಿ ಬಿಡುವುದಲ್ಲ ವೀರಶೈವ ॥೪೨॥

ನೆನೆದು ನೆನೆದು ನಿಷ್ಠೆಗಟ್ಟಿಗೊಂಡು, ಇಷ್ಟ ಲಿಂಗವೆಂಬ ।
ಇನೆಯುಗೊಲಿದು ತನುವ ಮನವನರ್ಪಿಸುವುದು ವೀರಶೈವ ॥೪೩॥

ಅನಲ ಕರ್ಪುರ ಪ್ರಯೋಗದಂತೆ ಇಷ್ಟ ಲಿಂಗಪೂಜೆ ।
ಯನುದಿನದೊಳು ಗೈದು ತನ್ನನೊಪ್ಪಿಸುವದು ವೀರಶೈವ ॥೪೪॥

ಲಿಂಗಕೊಂದು ಮಂಚತನಗೆ ಒಂದು ಮಂಚವಿಲ್ಲವಾಗಿ ।

ಲಿಂಗ ಉಂಡ ತಳಿಗೆಯಲ್ಲಿ ಭುಂಜಿಸುವದು ವೀರಶೈವ ॥೪೫॥

ಲಿಂಗ ನಡಿಸಿದಂತೆ ನಡೆದು ಲಿಂಗ ನುಡಿಸಿದಂತೆ ನುಡಿದು ।
ಲಿಂಗ ವಿರಿಸಿದಂತೆ ಇದರ್ು ರಂಜಿಸುವದು ವೀರಶೈವ ॥೪೬॥

ನುಡಿದ ಪರಿಯು ನಡೆದು ತೋರಿ, ನಡೆದ ಪರಿಯು ನುಡಿದು ತೋರಿ ।
ಎಡಬಲಕ್ಕೆ ಹರಿದು ನಿಷ್ಠೆಗೆಡುವುದಲ್ಲ ವೀರಶೈವ ॥೪೭॥

ಉಡುವ ತೊಡುವ ಹಿಡಿವ ಬಿಡುವಕೊಂಬ ಕೊಡುವ ವೇಳೆಯಲ್ಲಿ ।
ಕಡಲ ಮುಡಿದ ಶಿವನ ನೆನಹು ಬಿಡುವುದಲ್ಲ ವೀರಶೈವ ॥೪೮॥

ಸುತ್ತಿ ಸುತ್ತಿ ಭವಕೆ ಬಂದು ಧರ್ಮ ಕರ್ಮವೆಂಬ ಬೆಳಸ ।
ಬಿತ್ತಿ ಪುಣ್ಯ ಪಾಪ ಫಲವನುಂಬುದಲ್ಲ ವೀರಶೈವ ॥೪೯॥

ಯುಕ್ತಿ ಬುದ್ಧಿಯಿಂದ ನವೆಯದೊಡಲ ಹೊರೆವೆನೆಂದು ನಿಜವಿ
ರಕ್ತಿ ಭಾವನೆಯೊಳು ನಡೆಯದಿಪ್ಪುದಲ್ಲ ವೀರಶೈವ ॥೫೦॥

ಕೋಪ ಶಿಖಿಯು ಸಿಡಿಲು ಹೊಡೆದು ಪರರ ಜರಿದು ಬಹಳ ಪಾಪ ।
ಲೇಪದೊಳಗೆ ಸಿಕ್ಕಿ ಮರೆಯದಿಪ್ಪುದಲ್ಲ ವೀರಶೈವ ॥೫೧॥

ಇಷ್ಟ ಲಿಂಗದಲ್ಲಿ ಮನವನರ್ಪಿಸೆಂದು ಗುರುವಿನಾಜ್ಞೆ ।
ಗೆಟ್ಟು ಅನ್ಯದೈವಕೆರಗಿ ಭ್ರಷ್ಟನಪ್ಪುದಲ್ಲ ವೀರಶೈವ ॥೫೨॥

ನಿಷ್ಠೆಗೆಟ್ಟು ತೀರ್ಥ ಯಾತ್ರೆಗೈದು ಹಲವು ದೈವಕೆರಗಿ ।
ಭ್ರಷ್ಟನಾಗಿ ಕಷ್ಟ ಯೋನಿಗಿಳಿವುದಲ್ಲ ವೀರಶೈವ ॥೫೩॥

ಗುರುವಿನಲ್ಲಿ ತನುವ ಸವಿಸಿ ಮನವ ಲಿಂಗದಲ್ಲಿ ನಿಲಿಸಿ ।
ಹರುಷದಿಂದ ಧನವ ಜಂಗಮಕ್ಕೆ ಈವ ವೀರಶೈವ ॥೫೪॥

ಧರ್ಮ ಕರ್ಮ ಕಾಮಿತಾರ್ಥ ಪೇರ್ಮೆಗಳಿಗೆಯ ಲಸಿ ಸಹಜ ।
ಮರ್ಮ ವರಿದ ಭಕ್ತಿಯಿಂದೆ ತಾನೆಯಾದ ವೀರಶೈವ ॥೫೫॥

ಬಹ್ಮ ವಿಷ್ಣು ರುದ್ರಪದವನೊಮ್ಮೆ ಮನದಿ ನೆನೆಯದಿರ್ಪ ।
ನಿರ್ಮಳ ಸ್ವತಂತ್ರ ಲಿಂಗ ತಾನೆಯಾದ ವೀರಶೈವ ॥೫೬॥

ತಾನೆ ಹಿರಿಯು ತಾನೆ ಗುರುವ ತಾನೆ ಕುಲಜ ತಾನೆ ಸುಲಭ ।
ತಾನೆ ಸುಕೃತಿಯೆಂದು ಗರ್ವಿಸುವರೊಳಿರದ ವೀರಶೈವ ॥೫೭॥

ಸ್ವಾನುಭಾವದೊಳು ಶಿವಾನು ಭಾವಿಯಾಗಿ ಶರಣ ಕಾಮ ।

ಧೇನುವಾಗಿ ನಡೆವ ನುಡಿವ ನತಿ ವಿಚಾರಿ ವೀರಶೈವ ||೫೮||
ಘೋರತರ ವಿಕಾರ ವಾರ್ಧಿಯೊಳಗೆ ಬಿದ್ದು ಅರಿವ ತೊರೆದು ।
ಜಾರ ಜೋರನೆಂದು ನುಡಿಸಿಕೊಂಬುದಲ್ಲ ವೀರಶೈವ ||೫೯||
ಪರರ ಕಟ್ಟಿ ಕುಟ್ಟಿ ಧನವ ಕೊಂಡು ಬಂದು ದಾನಧರ್ಮ ।
ಪರಹಿತಾರ್ಥಗಳನು ಮಾಳ್ಪೆನೆಂಬುದಲ್ಲ ವೀರಶೈವ ||೬೦||
ಕರದೊಳಿಷ್ಟ ಲಿಂಗವಿರ್ದು ಹಲವು ತೀರ್ಥ ಯಾತ್ರೆಗಳಿಗೆ ।
ನೆರವಿಗೂಡಿ ಹೋಗಿ ಮಾಳ್ಪೆನೆಂಬುದಲ್ಲ ವೀರಶೈವ ||೬೧||
ಕುಣಿದು ಹಾಡಿ ಹೊಗಳುತಿರ್ಪ ಭಟ್ಟ ಮಾಗಧರ್ಗೆ ಧನವ ।
ದಣಿಯಲಿತ್ತು ನರಕ ಗತಿಯು ನೆರೆವುದಲ್ಲ ವೀರಶೈವ ||೬೨||
ಸುರೆಯ ಸೇವಿಸುವನರರ್ಗೆ ಹೀನ ಮಾಂಸ ಭಕ್ಷಿಪರ್ಗೆ ।
ಕರೆದು ಮನೆಯೊಳನ್ನ ಹೊನ್ನ ನೀವುದಲ್ಲ ವೀರಶೈವ ||೬೩||
ಹರನ ಸಮಯವನ್ನು ಜರಿದು ಪರಸಮಯವನೊಳ್ಳಿತೆಂದು ।
ನಿರಯದುರಿಯೊಳು ನಿರರ್ಥ ಬೇವುದಲ್ಲ ವೀರಶೈವ ||೬೪||
ಗಂಡ ಭಕ್ತನಾಗಿ ಭವಿಲತಾಂಗಿಯಾದ ಮನೆಯ ಹೊಕ್ಕು ।
ಉಂಡು ಯಮನ ಕಾಲಹತಿಗೆ ಕೆಡುವುದಲ್ಲ ವೀರಶೈವ ||೬೫||
ಹಿಂಡಿ ಹಿಳಿದು ಪುರುಷರೊಡನೆ ಸಾವುದೊಂದು ಮುದ್ದನಿಕ್ಕಿ ।
ಅಂಡಲೆದುಮತಳೋದರಿಯು ಕೊಲುವುದಲ್ಲ ವೀರಶೈವ ||೬೬||
ಜಂಗಮ ಪ್ರಸಾದ ಪಾದ ತೀರ್ಥದಲ್ಲಿ ಮೋಹವಿಲ್ಲ ।
ದಂಗಭವಿ ಮನುಷ್ಯರುಗಳ ನೆನೆವುದಲ್ಲ ವೀರಶೈವ ||೬೭||
ಲಿಂಗಪೂಜೆಗಧಿಕ ಧನವವೆಚ್ಚಿಸಿ ನಿರರ್ಥ ಕೆಟ್ಟು ।
ಪೊಂಗಲುಗಳನಿಕ್ಕಿ ಬರಿದೆ ತೊನೆವು ದಲ್ಲ ವೀರಶೈವ ||೬೮||
ನೆತ್ತಜೂಜು ಪಗಡೆ ಪೊಗಳಿಗಳ ನಾಡಿ ಕಷ್ಟ ವ್ಯಸನ ।
ದತ್ತ ಹಣ್ಣೆ ಹೊಕ್ಕು ಹೊತ್ತುಗಳೆವುದಲ್ಲ ವೀರಶೈವ ||೬೯||
ಸುತ್ತಿ ಸುಳಿದು ಗಳಿಸಿ ತಂದು ಲಿಂಗಜಂಗಮಕ್ಕೆ ಕೊಡದೆ ।
ಮತ್ತನಾಗಿ ಸಟಿಯತನುವ ಹೊರೆವುದಲ್ಲ ವೀರಶೈವ ||೭೦||
ಸತ್ತ ಮಾತೆ ಪಿತರ ಹೆಸರನಿಟ್ಟು ಮಕ್ಕಳುಗಳ ಕರೆವ ।
ವ್ಯರ್ಥ ನರರ ನೋಡಿ ನೋಡಿ ನಗುವುದಲ್ಲ ವೀರಶೈವ ||೭೧||

ಒತ್ತೆ ಗೊಂಬವೇಶಿಯಂತೆ ಫಲ ಪದಕ್ಕೆ ತನ್ನ ಮಾರಿ ।
ತೊತ್ತುಗೊಂಬುದಲ್ಲ ನಿತ್ಯ ನಿಜ ವಿಚಾರಿ ವೀರಶೈವ ॥೭೨॥
ಮಾರಿ ಮಸಣಿಯಾದಿಯಾದಹೀನ ದೈವಗಳಿಗೆ ಮೆಚ್ಚಿ ।
ಸಿರಿಯನಿಕ್ಕಿ ಹೊಲಬುಗೆಡುವನರರ ನಗುವ ವೀರಶೈವ ॥೭೩॥
ಹೊನ್ನು ಬಿಟ್ಟೆ ಹೆಣ್ಣು ಬಿಟ್ಟೆ ಮಣ್ಣು ಬಿಟ್ಟೆನೆಂದು ಜನದ ।
ಕಣ್ಣ ಕಟ್ಟಿ ಹಿರಿಯತನವ ಮೆರೆವುದಲ್ಲ ವೀರಶೈವ ॥೭೪॥
ಕಣ್ಣು ನಾಲಿಗೆಗಳ ನಿತ್ತು ತನುವನಿರಿದು ತರಿದುಕೊಂಡು ।
ಅಣ್ಣ ವಿಸ್ಮಯವನು ತೋರಿ ಮೆರೆವುದಲ್ಲ ವೀರಶೈವ ॥೭೫॥
ಒಲ್ಲೆನೆಂದು ಬಿಡುವುದಲ್ಲ ಒಲಿವೆನೆಂದು ಹಿಡಿವುದಲ್ಲ ।
ಎಲ್ಲವಂ ಶಿವಂಗೆ ಕೊಟ್ಟು ಕೊಂಬುದಚಲ ವೀರಶೈವ ॥೭೬॥
ಒಲ್ಲೆನೆಂದು ಬಿಡುವುದಲ್ಲ ಅರಿಯೆನೆಂದು ಮರೆವುದಲ್ಲ ।
ಎಲ್ಲಿಯು ನಿಗರ್ವಿಯಾದ ನಿಜದ ನಿವಾಸ ವೀರಶೈವ ॥೭೭॥
ಹಿಡಿದ ಬಳಿಕ ಬಿಡುವುದಲ್ಲ ಬಿಟ್ಟಬಳಿಕ ಹಿಡಿವುದಲ್ಲ ।
ಹಿಡಿದು ಬಿಟ್ಟು ಬಿಟ್ಟು ಹಿಡಿದು ಕೆಡುವುದಲ್ಲ ವೀರಶೈವ ॥೭೮॥
ಒಡಲು ಗಿಡಲು ಮೋಹಗೇಹ ತೊಡಕು ಗಿಡಕಿನೊಳಗೆ ಬಿದ್ದು ।
ಗೊಡವೆಗುಟ್ಟಿ ಹಲವು ತೆರದಿ ದುಃಖಬಡುವದಲ್ಲ ವೀರಶೈವ ॥೭೯॥
ಹಿಂದೆ ಬಾಳಿಬದುಕಿದವನ ತೆರದಿ ಹಣವ ಗಳಿಸಿ ಬಾಳ್ವೆ ।
ನೆಂದು ಹಲವು ಕಡೆಗೆ ಹರಿದು ಸಾವುದಲ್ಲ ವೀರಶೈವ ॥೮೦॥
ಹಿಂದನೆಣಿಸಿ ಮುಂಡೆಯಂತೆ ಚಿಂತಿಸುತ್ತ ಇರುಳು ಹಗಲು ।
ನೊಂದು ಬೆಂದು ಕಂದಿ ಕುಂದಿ ಕುದಿವುದಲ್ಲ ವೀರಶೈವ ॥೮೧॥
ಕನಕ ಗಿರಿಯು ಹೊಂದಿದಂತೆ ಕಲ್ಪತರುವ ಸಾರಿದಂತೆ ।
ಅನುದಿನಂ ಕೃತಾರ್ಥನಾಗಿ ನೆನೆವುತಿಹುದು ವೀರಶೈವ ॥೮೨॥
ಧನದ ಒಲುಮೆ ದೊರಕಿದಂತೆ ಮರುಜೀವಣಿಯ ನೆಮ್ಮಿದಂತೆ ।
ಇನಿತು ಸುಖದ ಸೊನೆಯೊಳಗೆ ನಲಿವುತಿಹುದು ವೀರಶೈವ ॥೮೩॥
ಪರುಷರಸವ ಸುರಿಸಿದಂತೆ ನಿಧಿ ನಿಧಾನ ವಿರಿಸಿದಂತೆ ।
ಹರುಷ ವಾರ್ಧಿಯೊಳಗೆ ಮುಳಿಗಿಯಾಡುತಿಹುದು ವೀರಶೈವ॥೮೪॥
ಸುರಭಿಯಂ ನಿವಾಸದಲ್ಲಿ ಕಟ್ಟಿ ಕರೆದು ಕೊಂಬ ತೆರದಿ ।

ಇರುಳು ಹಗಲು ಜ್ಞಾನದೊಳಗೆ ತೊಳಲುತಿಹುದು ವೀರಶೈವ ॥೮೫॥

ಸಿರಿ ದರಿದ್ರವೆಂಬ ವೆರಡುವಂ ಸಮಾನವಾಗಿ ಕಂಡು ।
ಪರಮ ಭಕ್ತಿ ನಿಷ್ಠೆಯೊಳಗೆ ಬೆಳಗುತಿಹುದು ವೀರಶೈವ ॥೮೬॥

ಬಾಲವೃದ್ಧ ಯವ್ವನ ಪ್ರೌಢರೆನ್ನದೆಲ್ಲ ಜೀವ ।
ಜಾಳರೊಳು ಕೃಪಾಳುವಾಗಿ ನೋಡುತಿಹುದು ವೀರಶೈವ ॥೮೭॥

ಕಾಲ ನೇಮಶೀಲವೆಂಬ ಸೆರೆ ಮನೆಗೆ ಸಿಕ್ಕಿ ತಕ್ಕಿ ।
ಗೋಳುಗುಟ್ಟಿವಭವಸುಖದೊಳಾಡುತಿಹುದು ವೀರಶೈವ ॥೮೮॥

ನಿಚ್ಚ ನಿಚ್ಚ ಭಾವಿಸುವುದು ನಿಚ್ಚ ನಿಚ್ಚ ಬಣ್ಣಿಸುವುದು ।
ನಿಚ್ಚ ನಿಚ್ಚ ಶಿವನ ನೆನೆದು ನೆಮ್ಮುತಿಹುದು ವೀರಶೈವ ॥೮೯॥

ನಿಚ್ಚ ನಿಚ್ಚ ಹೋರುತಿಹುದು, ನಿಚ್ಚ ನಿಚ್ಚ ಹಾರುತಿಹುದು ।
ನಿಚ್ಚ ನಿಚ್ಚ ಶಿವನ ಹೊಗಳಿ ಹೊಮ್ಮುತಿಹುದು ವೀರಶೈವ ॥೬೦॥

ಆದಿಯೊಳು ಪುರಾತ ಪುಂಗ ಪುರುಷ ಧರ್ಮ ವಿಡಿದು ನೆಡೆದ ।
ಹಾದಿಯೊಳು ವಿಹಾರಿಸುತ್ತ ತನ್ನನರಿವ ವೀರಶೈವ ॥೯೧॥

ವೇದಶಾಸ್ತ್ರಗಳಿಗಭೇದ್ಯವಾದ ನಾದ ಮೂರ್ತಿ ಶಿವನ ।
ಪಾದಮಂಸಮರ್ಚಿಸುತ್ತ ಭವವಕಳೆವ ವೀರಶೈವ ॥೯೨॥

ಆವಪರಿಯೊಳ ಭವಸಿರಿಸಿದಂತೆ ಇರ್ದು ಹಲವು ಕಡೆಗೆ ।
ಹಾಯ್ವ ಮನವ ನಿಲಿಸಿ, ತಾನು ತಾನೆಯಾದ ವೀರಶೈವ ॥೯೩॥

ಜೀವನೆಂದು ಪರಮನೆಂದು ಉಭಯ ಗತಿಯು ನಿಟ್ಟು ।
ನುಡಿವ ಭಾವವಳಿದು ತನ್ನ ನೆನೆದು ತಾನೆಯಾದ ವೀರಶೈವ ॥೯೪॥

ನೀರು ನೀರನುಂಡು ಹಾಲು ಹಾಲ ಕೂಡಿ ಸುಖಿಸುವಂತೆ ।
ದಾರಿ ಮೇರೆಯುಳಿದು ನಿಜವ ನೆನೆವುತಿಹುದು ವೀರಶೈವ ॥೯೫॥

ಆರ ಮನವಿದಾರ ತನುವಿದೆಂದು ನೋಡಿ ಕೆರೆಗೆ ಕೆರೆಯು ।
ನೀರ ಚಲ್ಲಿ ಶಿವಗೆ ಲಲ್ಲೆಗರೆವುತಿಹುದು ವೀರಶೈವ ॥೯೬॥

ಪತಿಯು ಸೇವೆಯತಿಶಯಾನುಭವವೆಂದು ನೋಡಿ ಭಜಿಸಿ ।
ರತಿಯೊಳಿರುಳು ಹಗಲು ಶಿವನ ಪೂಜಿಸುವುದು ವೀರಶೈವ ॥೯೭॥

ಭಿನ್ನವಾಗಿ ನಡೆವುದಲ್ಲ ಭಿನ್ನವಾಗಿ ನುಡಿವುದಲ್ಲ ।

ತನ್ನನಳಿದು ಶಿವನ ತಿಳಿದು ನಡೆವ ನುಡಿವ ವೀರಶೈವ ||೯೮||

ಕನ್ನೆ ತನ್ನವಲ್ಲ ಭನೊಳು ಭಿನ್ನವಾದನೇಕವಾದೆ ।
ನೆನ್ನದಂತೆ ಉಭಯ ವಳಿದು ಅಡಿಯ ಹಿಡಿವ ವೀರಶೈವ ||೯೯||

ನೆನೆದು ನೆನೆದು ನೆನಹು ಬಲಿದು ತಾನೆಯಾಗಿ ತಾನೆ ಬಲಿದು ।
ನೆನೆದು ನೆನೆದು ವಿಷ್ಣುನಯನ ಚರಣನಾದ ವೀರಶೈವ ||೧೦೦||

ಇದು ನಿಮಿತ್ಯ ಭಕ್ತನನು ಶಶಾಂಕ ಜೂಟನೆಂದು ಕಂಡು ।
ಪಾದ ತಳಕೆ ನಮಿಸಿ ನಮಿಸಿ ಒಲಿಸುತಿಹುದು ವೀರಶೈವ ||೧೦೧||

ಇದುವೆ ಸತ್ಯಜ್ಞಾನ ಮನಂತ ಬ್ರಹ್ಮ ನೋಡು ವೀರಶೈವ ||೧೦೨||
ಇದುವೆ ಷಟ್ ಸ್ಥಲ ಪ್ರಕಾಶ ಯೋಗ ನಿಚಯ ವೀರಶೈವ ||೧೦೩||
ಇದುವೆ ಪರಮತತ್ವ ಸಾರ ನಿತ್ಯ ನಿಜವು ವೀರಶೈವ ||೧೦೪||
ಶಿವನ ಸುಖದ ಮುಖದ ಸೋನೆ ಎನಿಸಿ ಮೆರೆವ ವೀರಶೈವ ||೧೦೫||
ಶಿವನ ತೊಡವು ಶಿವನ ಮೂಲ ಶಿವನು ತಾನೆ ವೀರಶೈವ ||೧೦೬||
ಶಿವನ ದೀಪ್ತಿ ಶಿವನ ಭಕ್ತಿ, ಶಿವನ ಯುಕ್ತಿ ವೀರಶೈವ ||೧೦೭||
ಶಿವನ ನಿತ್ಯ ಶಿವನ ಸತ್ಯವ ಮಲವಚಲ ವೀರಶೈವ. ||೧೦೮||
ಭಕ್ತ ಜನವರೇಣ್ಯ ಶಿವನ ಪುಣ್ಯತೀರ್ಥ ವೀರಶೈವ ||೧೦೯||

ಗತಿಗಸಾಧ್ಯ ವೀರಶೈವ ||೧೧೦||
ಜಿತವಿನೋದಿ ವೀರಶೈವ ||೧೧೧||
ಈವಕಾವ ವೀರಶೈವ ||೧೧೨||
ದೇವಭಾವ ವೀರಶೈವ ||೧೧೩||
ಮಾತೃ ಪಿತೃ ವೀರಶೈವ ||೧೧೪||
ಧಾತೃ ಭ್ರಾತೃ ವೀರಶೈವ ||೧೧೫||

ಕಂದ|| ವೀರಶೈವಾನು ಭಾವದ।
ಸಾರಯುದ ಸುಧೆಯ ಸುಗ್ಗಿಯೊಳು ಸುಖಿಸುತ್ತಂ।
ಆರಿದ ಪರಿಪರ ವರೆನ।
ಗಾರಾಧ್ಯರಲಾಪ್ರಸನ್ನ ಶಂಕರಲಿಂಗಾ ||

# ವರದಾನಿ ಗುಡ್ಡಮ್ಮ.

ವಿಜಾಪುರ ಪಟ್ಟಣದ ವಾಯುವ್ಯ ದಿಕ್ಕಿಗೆ ೩೦ ಮೈಲುಗಳ ಮೇಲೆ ದಕ್ಷಿಣೋತ್ತರ ಒಂದು ಗುಡ್ಡದ ಸಾಲು ಹಬ್ಬಿರುವದು. ಈ ಸಾಲಿನ ದಕ್ಷಿಣ ಕೊನೆಯಲ್ಲಿ ಗುಡ್ಡಾಪುರವೆಂಬ ಗ್ರಾಮವಿದ್ದು, ಅಲ್ಲಿ ಒಂದು ಕ್ಷೇತ್ರ ಸ್ಥಾನವು ನೆಲಸಿರುವದು. ಇದು ಈಗ ಜತ್ತ ಸಂಸ್ಥಾನಕ್ಕೆ ಒಳ ಪಟ್ಟಿರುತ್ತದೆ. ಈ ಸ್ಥಾನಕ್ಕೆ ಮಹಾರಾಷ್ಟ್ರ ಮತ್ತು ಕರ್ನಾಟಕ ಪ್ರಾಂತ ಗಳಿಂದ ಎಲ್ಲಜಾತಿಯ ಅಸಂಖ್ಯ ಯಾತ್ರಿಕರು ಇಡೀ ವರುಷ ಬರುವ ದುಂಟು. ಈ ಕ್ಷೇತ್ರವು ವರದಾನಿ ಗುಡ್ಡಮ್ಮೆಯ ಸ್ಥಾನವಾಗಿರುತ್ತದೆ. ಇದಕ್ಕೆ ಜನರು ವಾಡಿಕೆಯಾಗಿ ಗುಡ್ಡಾಪುರದ ದಾನಮ್ಮನೆಂತಲೂ ಕರೆಯುವ ದುಂಟು. ಈಕೆಯು ಒಬ್ಬ ಶೂರ ಸ್ತ್ರೀಯಳು ಮತ್ತು ವೀರಶೈವ ಶಿವ ಶರಣೆಯು. ಈಕೆಯ ಚರಿತ್ರೆಯನ್ನು ವೀರಶೈವರಲ್ಲಿ ಪ್ರಸಿದ್ಧ ಕವಿಯಾದ ಲಕ್ಕಣ್ಣ ದಂಡೇಶನು ತನ್ನ ಶಿವತತ್ವ ಚಿಂತಾಮಣಿ ಎಂಬ ಗ್ರಂಥದಲ್ಲಿ ವಿವರಿಸಿದ್ದಾನೆ. ಈ ಭಾಗವನ್ನೇ ನಾವು ಈ ಸಂಚಿಕೆಯಲ್ಲಿ ಪ್ರಕಟಿಸಿ ದ್ದೇವೆ.

ಈ ವರದಾನಿ ಗುಡ್ಡಮ್ಮೆಯು ಶ್ರೀ ಬಸವೇಶ್ವರನ ಕಾಲದಲ್ಲಿ ಇದ್ದ ಹಾಗೆ ತೋರುತ್ತದೆ. ಈ ಕಾಲವೆಂದರೆ ಕರ್ನಾಟಕದಲ್ಲೆಲ್ಲ ಒಂದು ಪ್ರಚಂ ಡವಾದ ಧಾರ್ಮಿಕ ಜಾಗ್ರತೆಯನ್ನು ಹಬ್ಬಿಸಿದ ಕಾಲವು. ಈ ಜಾಗ್ರ ತೆಯ ಮೂಲಕ ಆಗ ಅಬಲೆಯರು ಸಹ ಮುಂದಾಗಿ ಧರ್ಮ ಪ್ರಸಾ ರದ ಕಾರ್ಯಗಳಲ್ಲಿ ಅಗ್ರಸ್ಥಾನವನ್ನು ವಹಿಸಿದರು. ಆ ಕಾಲಕ್ಕೆ ಅವ ರಲ್ಲಿ ಅನೇಕರು ಮಹಾದೇವಿಯಕ್ಕನಂತೆ ಜ್ಞಾನಿಗಳಾದರು ಮತ್ತು ಧಾರ್ಮಿ ಕ ಗ್ರಂಥಗಳನ್ನು ಬರೆದರು. ಅನೇಕರು ಸತ್ಯಕ್ಕ ಮುಕ್ತಾಯಕ್ಕಗ ಳಂತೆ ದೇವಭಕ್ತಿಯುತರಾಗಿ ಪರಮಾರ್ಥವನ್ನು ಗಳಿಸಿದರು- ಮತ್ತೆ ಕೆಲ ವರು ವೀರಭಕ್ತಿಯುತರಾಗಿ ವೀರಶೈವ ಧರ್ಮವನ್ನು ಪ್ರಸಾರಗೊಳಿಸಿ ದರು. ಹೀಗೆ ವೀರಭಕ್ತಿಯನ್ನು ತಾಳಿ ಪ್ರಸಿದ್ಧಿ ಹೊಂದಿದವರಲ್ಲಿ ವರ ದಾನಿ ಗುಡ್ಡಮ್ಮೆಯು ಒಬ್ಬಳಾಗಿದ್ದಾಳೆ. ಹೀಗೆ ಯಾವ ಧರ್ಮದಲ್ಲಿ ಧಾರ್ಮಿಕ ವಿಚಾರಗಳು ಬಹುಜನ ಸಮಾಜದಲ್ಲಿ ರೂಢವಾಗಿ, ಪ್ರತಿ ಯೊಂದು ಮನೆಯನ್ನು ಪ್ರವೇಶಿಸಿ ಬಾಲಕರನ್ನೂ ಸ್ತ್ರೀಯರನ್ನೂ ಪ್ರೇರ

ಣೆಗೊಳಿಸುತ್ತವೋ, ಅದೇ ಆಧರ್ಮದ ಜೀವಂತ ಕಾಲವು. ಇಂಥ ಸ್ಥಿತಿ ಯನ್ನು ವೀರಶೈವ ಧರ್ಮವು ಬಸವೇಶ್ವರನ ಕಾಲದಲ್ಲಿ ಹೊಂದಿತ್ತು- ಆದ್ದರಿಂದಲೇ ಆ ಕಾಲಕ್ಕೆ ಸ್ತ್ರೀಯರಲ್ಲಿಯೂ, ಬಾಲಕರಲ್ಲಿಯೂ ಬೇರೆ ಬೇರೆ ಜಾತಿಗಳಲ್ಲಿಯೂ ಅಸಂಖ್ಯ ಮಹಾ ಪುರುಷರು ಉದಯವಾದರು.

ಒಂದು ಧರ್ಮದ ಉಜ್ವಲ ಕಾಲದಲ್ಲಿ ಅದರ ಒಂದು ತತ್ವಕ್ಕಾಗಿ ಜನರು ತಮ್ಮ ಪ್ರಾಣವನ್ನು ಕೊಟ್ಟವರುಂಟು. ಇಂಥವರ ಪ್ರಭಾವದಿಂ ದಲೇ ಧರ್ಮವು ಪ್ರಸಾರ ಹೊಂದುತ್ತದೆ. ವೀರಶೈವ ಧರ್ಮದ ಪ್ರಸಾರ ಕಾಲದಲ್ಲಿ ಸ್ತ್ರೀ ಪುರುಷರಲ್ಲಿ ಇಂಥ ಅನೇಕರು ಹುಟ್ಟಿದರು. ವೀರಶೈವ ಧರ್ಮದಲ್ಲಿ ಒಬ್ಬನೇ ದೇವರೆಂಬ ತತ್ವವು ಮಹತ್ತರವಾದದ್ದು. ಶಿವ ಸರ್ವೋತ್ತಮನೆಂದು ಅವರು ಭಾವಿಸುತ್ತಿದ್ದು, ಇದರಲ್ಲಿ ಈ ತತ್ವವು ಅಡ ಕವಾಗಿದೆ. ಈ ತತ್ವದ ಸಮರ್ಥನಾರ್ಥವಾಗಿ ಅವರಲ್ಲಿ- ಅನೇಕ ಗ್ರಂಥ ಗಳು ಬರೆಯಲ್ಪಟ್ಟಿವೆ. ಆದರೆ ಅವರು ಹೀಗೆ ಕೇವಲ ಗ್ರಂಥಗಳನ್ನು ಮಾತ್ರ ಬರೆದು ಸುಮ್ಮನೆ ಕೂಡ್ರಲಿಲ್ಲ. ಅವರು ಅದನ್ನು ಪ್ರಚಾರದಲ್ಲಿ ತರಲು ಪ್ರಯತ್ನಿಸಿದರು ಅವರ ಈ ಪ್ರಯತ್ನದಲ್ಲಿ ಅವರಿಗೆ ಬೇರೆ- ಸಮ ಯದವರು ವಿರೋಧಿಗಳಾದರು. ಆಗ ಅವರಿಗೆ ಶಸ್ತ್ರವನ್ನು ಸಹ ಹಿಡಿ ಯುವ ಪ್ರಸಂಗಗಳು ಒದಗಿ ಬಂದವು. ಇಂಥವರಲ್ಲಿ ವರದಾನಿ ಗುಡ್ಡ ವ್ವೆಯು ಒಬ್ಬಳಾಗಿರುವಳು.

ಬಸವೇಶ್ವರನ ಕಾಲದಲ್ಲಿ ದೇಶದಲ್ಲಿ ನಾನಾವಿಧ ಪಂಥಗಳು ತುಂಬಿ ಹೋದಹಾಗೆ ತೋರುತ್ತದೆ- ಶೈವ, ವೈಷ್ಣವ, ಬೌದ್ಧ, ಜೈನವೆಂಬ ನಾನಾವಿಧ ಮತಗಳು ದೇಶದಲ್ಲಿ ತುಂಬಿ ಹೋಗಿದ್ದವು. ಮತ್ತು ಈ ಪ್ರತಿ ಯೊಂದು ಮತದಲ್ಲಿಯೂ ಭೇದವಿಭೇದಗಳು ಉಂಟಾಗಿದ್ದವು. ಇವರೆಲ್ಲ ರಲ್ಲಿಯೂ ಪರಸ್ಪರ ಹೊಡೆದಾಟಗಳು ಎಡೆಬಿಡದೆ ನಡೆದಿದ್ದವು. ಪಾರ ಮೇಶ್ವರಾಗಮದಲ್ಲಿ ಈ ಮತಗಳ ಭೇದ ವಿಭೇದಗಳ ವರ್ಣನೆಯು ಕೆಲ ವುಮಟ್ಟಿಗೆ ಬಂದಿರುತ್ತದೆ. ಅದರ ಮೇಲಿಂದ ತಿಳಿಯುವದೇನಂದರೆ, ಆ ಕಾಲಕ್ಕೆ ಬೌದ್ಧ, ಸೌಗತ, ಚಾರ್ವಾಕ, ಜೈನ, ಅರ್ಹತವೆಂಬ ಭೇದ ಗಳಲ್ಲದೆ, ಶೈವ ವೈಷ್ಣವ, ಶಾಕ್ತ, ಸೌರ, ವಿನಾಯಕ, ಕಾಪಾಲಿಕ ಮೊದಲಾದ ಮತ ಮತಾಂತರಗಳೂ ರೂಢವಾಗಿದ್ದವು. ಶೈವರಲ್ಲಿ ವೀರ ಶೈವ, ಮಹಾಶೈವ, ಮಿಶ್ರಶೈವ ಎಂಬ ಐದಾರು ಭೇದಗಳಿದ್ದವು. ಅಲ್ಲದೆ ಅವರಲ್ಲಿಯ ಉಪಾಸನೆಯ ದೇವತೆಗಳ ಪ್ರಕಾರ ಗಾಣ ಪತ್ಯ, ವೈರ

ಭದ್ರ್ಯ, ಭೈರವ, ಶಾರಭ, ಕೌಮಾರ, ನಾಂದಿಕೇಶ, ಎಂಬ ಭೇದ ಗಳೂ ಉಂಟಾಗಿದ್ದವು. ಮತ್ತು ಈ ಪ್ರತಿಯೊಂದು ಭೇದದಲ್ಲಿ ಪುನಃ ೭೩ ಭೇದಗಳು ಹುಟ್ಟಿದ್ದವು. ವೈಷ್ಣವರಲ್ಲಿ ಸಹ ಹೀಗೆಯೇ ಅವಸ್ಥೆ ಯಾಗಿತ್ತು. ಅವರಲ್ಲಿ ನಾರಸಿಂಹ, ಪಾಂಚರಾತ್ರ ಗೋಪಾಲ, ಮೊದ ಲಾದ ಆರು ಭೇದಗಳೂ, ಅಲ್ಲದೆ ಸೌರದಲ್ಲಿ ಆರು ಭೇದಗಳು, ಶಾಕ್ತ ರಲ್ಲಿ ನಾಲ್ಕುಭೇದಗಳು, ಕಾಪಾಲಿಕರಲ್ಲಿ ನಾಲ್ಕು ಭೇದಗಳು, ಹೀಗೆ ಅನೇ ಕ ಭೇದಾಭೇದಗಳು ಆಗಿದ್ದವು. ಇದರ ಮೇಲಿಂದ ಆಗಿನ ಕಾಲಕ್ಕಿನ ಸಮಾಜದ ಸ್ಥಿತಿಯನ್ನು ವಾಚಕರು ಊಹಿಸಬಹುದು. ಪೂರ್ವ ಕಾಲದ ವೇದೋಪ ನಿಷತ್ತುಗಳಲ್ಲಿ ಕಂಡುಬರುವ ಧರ್ಮದ ಶುದ್ಧ ಸ್ವರೂಪವು ಆಗ ಪೂರ್ಣವಾಗಿ ಹೊರಟು ಹೋಗಿತ್ತು. ಇದು ಆಕಾಲದ ಹಿಂದೂ ಧರ್ಮದ ಅವನತ ಸ್ಥಿತಿಯನ್ನು ತೋರಿಸುತ್ತದೆ. ಈ ಅವ್ಯವಸ್ಥೆಯನ್ನು ಮೊದಲು ದೂರ ಮಾಡಲಿಕ್ಕೆ ಪ್ರಯತ್ನಿಸಿದವರು ಶಂಕರಾಚಾರ್ಯರು. ಅವರು ತಮ್ಮ ಬೋಧಾಶಕ್ತಿಯಿಂದ ಜನರನ್ನು ನಿಜವಾದ ವೇದಾಂತ ಮತಕ್ಕೆ ಹೊರ ಳಿಸಿದರು. ಆದರೆ ಅವರ ಪ್ರಯತ್ನಗಳ ಪರಿಣಾಮವು ಬಹು ಜನ ಸಮಾ ಜದ ಮೇಲೆ ವಿಶೇಷ ಆಗಲಿಲ್ಲೆಂದು ಕಂಡುಬರುತ್ತದೆ. ಯಾಕಂದರೆ ಅವರ ತತ್ವ ವಿಚಾರಗಳು ಬಹುಜನ ಸಮಾಜದ ತಿಳುವಳಿಕೆಗೆ ನಿಲುಕದಂಥವು ಇರುತ್ತವೆ. ಆದರೆ ಬಹುಜನ ಸಮಾಜದಲ್ಲಿ ಒಬ್ಬನೇ ದೇವರು ಮತ್ತು ಆತನು ಪರಬ್ರಹ್ಮ ವಸ್ತುವು ಎಂಬ ತಿಳುವಳಿಕೆಯನ್ನು ಹರಿವಿ, ಸಮಾ ಜದಲ್ಲಿ ಐಕ್ಯತೆಯನ್ನು ಹುಟ್ಟಿಸಿ, ನಿಜವಾದ ದೇವಭಕ್ತಿಯನ್ನು ಸಮಾ ಜದಲ್ಲಿ ಹಬ್ಬಿಸಿದವರು ವೀರಶೈವರೇ ಇರುತ್ತಾರೆ. ಅವರ ಗ್ರಂಥಗಳಲ್ಲಿ ಒಬ್ಬನೇ ದೇವರೆಂಬ ವಿಚಾರಗಳು ಯಾವಾಗಲೂ ಪ್ರಸ್ಥಾಪಿಸಲ್ಪಟ್ಟಿರು ತ್ತವೆ. ಹೀಗೆ ವೀರಶೈವ ಧರ್ಮದ ಪೂರ್ವದ ಪ್ರವರ್ತಕರು ನಿಜವಾದ ವೇದಾಂತ ಮಾರ್ಗವನ್ನು ಸಮಾಜದಲ್ಲಿ ಪಸರಿಸಲು ಪ್ರಯತ್ನ ಬಟ್ಟವ ರಾಗಿರುತ್ತಾರೆ. ಇಂಥವರ ವರ್ಗದಲ್ಲಿ ವರದಾನಿ ಗುಡ್ಡಮ್ಮೆಯು ಒಬ್ಬ ಳಾಗಿದ್ದಾಳೆ.

ಈ ಸಂಚಿಕೆಯಲ್ಲಿ ಕೊಟ್ಟ ಗುಡ್ಡಮ್ಮೆಯ ಚರಿತ್ರೆಯಿಂದ ತಿಳಿಯುವ ದೇನಂದರೆ, ಆಕೆಯು ಗುಡ್ಡಾಪುರದಲ್ಲಿದ್ದು, ಅಲ್ಲಿಂದ ಮೂವತ್ತು ಗಾವು ದದಮೇಲೆ ಮಲಪ್ರಭಾನದಿಯ ದಂಡೆಯಲ್ಲಿ ಅಲಂಪುರವೆಂಬ ಗ್ರಾಮವು ಇರಲಾಗಿ, ಅಲ್ಲಿದ್ದ ಬ್ರಹ್ಮೇಶ್ವರ ಲಿಂಗವು ತನ್ನ ಸ್ಥಾನದಿಂದ ನದಿಯಲ್ಲಿ

ಕಿತ್ತುಹಾಕಲ್ಪಡಲಾಗಿ, ಅಲ್ಲಿಯ ಭಕ್ತ ಶಿರೋಮಣಿಯಾದ ವೀರನಾಚ
ಯ್ಯನು ವರದಾನಿ ಗುಡ್ಡಮ್ಮೆಯ ಸಹಾಯವನ್ನು ಕೋರಲಾಗಿ ಆಕೆಯು
ಒಂದು ಸೈನ್ಯವನ್ನು ಕೂಡಿಸಿ, ಅಲಂಪುರವನ್ನು ಮುತ್ತಿ, ಪರವಾದಿಗ
ಳನ್ನು ಜಯಿಸಿ, ಬ್ರಹ್ಮೇಶ್ವರ ಲಿಂಗವನ್ನು ಹೊಳೆಯಿಂದ ತೆಗೆದುಕೊಂಡು
ಬಂದು, ಪುನಃ ಅದನ್ನು ಸ್ವಸ್ಥಾನದಲ್ಲಿ ನೆಲೆಗೊಳಿಸಿದಳೆಂದು ಈ ವರ
ದಾನಿ ಗುಡ್ಡಮ್ಮೆಯ ಚರಿತ್ರೆಯಿಂದ ತಿಳಿದು ಬರುತ್ತದೆ.

ಗುಡ್ಡಮ್ಮೆಯು ಪಾರ್ವತಿಯ ಅವತಾರಳೆಂದು ತಿಳಿಯಲ್ಪಟ್ಟಿರುತ್ತಾಳೆ. ಆಕೆಯ ಗುಡಿಯು ಗುಡ್ಡಾಪುರ ಗ್ರಾಮಕ್ಕೆ ಹೊಂದಿ ಇದ್ದು, ಅದು ಸುಂದರವಾದ ಗೋಪುರಗಳಿಂದ ಅಲಂಕೃತವಾಗಿದೆ. ಆಕೆಯ ಗುಡಿಯ ಹತ್ತಿರವೇ ಆಕೆಯ ಗುರುವಿನ ಪಾದುಕೆಗಳೂ, ಆವಾರದ ಪಶ್ಚಿಮ ದಿಕ್ಕಿನ ದೇವಾಲಯದಲ್ಲಿ ಶ್ರೀಸೋಮೇಶ್ವರ ಲಿಂಗದ ಮೂರ್ತಿಯೂ, ಅದರಂತೆಯೇ ವೀರಭದ್ರನ ಗುಡಿಯೂ, ಮಲ್ಲಿಕಾರ್ಜುನನ ಗುಡಿಯೂ ಇರುತ್ತವೆ. ಆವಾರವು ೨೪೦ ಫೂಟು ಉದ್ದವಾಗಿಯೂ ೧೬೫ ಫೂಟು ಅಗಲಾಗಿಯೂ ಇರುತ್ತದೆ. ಈ ದೇವಾಲಯದ ಮುಂದಿನ ಭಾಗದಲ್ಲಿ ಒಂದು ದೊಡ್ಡ ಕನ್ನಡ ಶಿಲಾಲೇಖವು ಇದೆ. ಗುಡಿಯ ಸುತ್ತಲೂ ಯಾತ್ರಿಕರು ಇಳಿಯಲಿಕ್ಕೆ ಅನಕೂಲವಾದ ಪೌಳಿಗಳಿವೆ. ದೇವಾಲಯದ ಯಾವತ್ತು ವ್ಯವಸ್ಥೆಯು ಜತ್ತ ಸಂಸ್ಥಾನವ ಕಡೆಗೆ ಇರುತ್ತದೆ.

ವರದಾನಿಗುಡ್ಡಮ್ಮೆಯ ಚರಿತ್ರೆಯನ್ನು ಕವಿತೆಯಿಂದ ವರ್ಣಿಸಿದ ಗ್ರಂಥಕಾರನು ಲಕ್ಕಣ್ಣ ದಂಡೇಶನಾಗಿರುವನು. ಇವನು ೧೪೨೯ ರಿಂದ ೧೪೪೬ ರ ವರೆಗೆ ವಿಜಯನಗರದಲ್ಲಿ ಆಳಿದ ದೇವರಾಜನ ಸೇನಾನಾಯಕನಾಗಿದ್ದನು. ಆತನು ಶಿವತತ್ವ ಚಿಂತಾಮಣಿ ಒಂಬ ಗ್ರಂಥವನ್ನು ರಚಿಸಿದ್ದು, ಅದರಲ್ಲಿಯೇ ವರದಾನಿ ಗುಡ್ಡಮ್ಮನ ಈ ಚರಿತ್ರೆಯು ಅಡಕವಾಗಿದೆ.

ಮೇಲ್ಕಂಡ ದೇವಾಲಯಗಳೆಲ್ಲ ಹಳೇತರದವು ಇರುತ್ತವೆ. ಮತ್ತು ಗುಡ್ಡಮ್ಮೆಯು ಮೊದಲಿಗೆ ಸೊಲ್ಲಾಪುರದವಳು ಇದ್ದು, ಅಲ್ಲಿ ಆಕೆಗೂ ಸಿದ್ಧರಾಮೇಶ್ವರನಿಗೂ ಕೆಲಒಂದು ಮಾತಿನ ಸಲುವಾಗಿ ಭೇದವು ಉತ್ಪನ್ನವಾಗಲಾಗಿ, ಆಕೆಯು ಗುಡ್ಡಾಪುರಕ್ಕೆ ಬಂದು ನಿಂತಳೆಂದು ಒಂದು ಸ್ಥಳಿಕ ಐತಿಹ್ಯವವೆ.

ವರದಾನಿ ಗುಡ್ಡಮ್ಮೆಯ ಚರಿತ್ರದ ಈ ಭಾಗವನ್ನು ಮಿ॥ ವೀರ

ಭದ್ರಪ್ಪ ಬಸಪ್ಪ ಹಾಲಭಾವಿ ಬಿ, ಏ, ಎಲ್, ಎಲ್, ಬಿ ಸಬಜಜ್ಜ ಚಿಕ್ಕೋಡಿ ಇವರು ದೊರಕಿಸಿ ನಮ್ಮ ಕಡೆಗೆ ಕಳಿಸಿದ್ದರ್ಕಾಗಿ ನಾವು ಅವರ ಆಭಾರಿಯಾಗಿದ್ದೇವೆ.

## ವರದಾನಿ ಗುಡ್ಡಮ್ಮನ ಚರಿತ್ರೆ.

ವರದಾನಿ ಗುಡ್ಡಮ್ಮ ಮೊದಲಾದ ಷೋಡಶರ ।
ಚರಿತಮಂ ಕೇಳ್ವು ಲಾಲಿಸಿ ಸಕಲ ಲೋಕದೊಳು ಕೃತ ಕೃತ್ಯರಾಗಿರ್ಪುದು

ಭೃಂಗಿನಾಥನೆನಿಪ್ಪ ಗಣನಾಯಕಂ ನವರ ।
ಸಂಗಳಂ ಬಿಡುತಲಾ ಶಿವಪೂಜೆ ಗೈತಂದು ।
ಮಂಗಳಾಳಾಪದಿಂ ಪಾಡಿ ಪೊಗಳುತ ಶಿವನ ವಾಮ ಭಾಗವನೆ ಬಿಟ್ಟು ॥
ಹಿಂಗದೆ ಬಲವರಲು ಗಿರಿಜೆ ಮುಳಿದೆದ್ದಳೆಲೆ ।
ಭೃಂಗಿಪತಿ ಹಾಸಕವೆ ಎನ್ನೊಡನೆ ನೀನೆಮ್ಮ ।
ಹಂಗಿಗನಲಾ ಎನಲು ನಗುವ ಭೃಂಗೀಶ್ವರನ ಚರಣಾಂಬುಜಕ್ಕೆ ಶರಣೂ ॥೧॥

ರಸ ರುಧಿರ ಮಾಂಸಗಳೆಂಬ ಕೊಗ್ಗೆಸರಿನೊಳು ।
ಪಶುವಾಗಿ ಬಿದ್ದು ಹೊರಳುತ ಮನೋಜನ ಬಾಣ ।
ದೆಸು ಗೆಯೊಳಗಾಗಿ ಮಾಯೆಯ ಕಾಲ ತೊಡರಪ್ಪ ಜೀವರಂತೆಂದು ಬಗೆದಾ ॥
ಕೊಸರ್ವಡೆದುಕೋ ಎನುತ ಲೊಂದೇ ತಿರುಪಿನೊಳು ಬಿದ್ದು ।
ಶಿಸು ಸುಮ್ಮನೆ ನಿಂದು ನಿರುಪಾಧಿಕ ಜ್ಯೋತಿಯೆಂ ।
ತೆಸೆವಧಿಕಪದವಡೆದು ಮೆರೆದಭೃಂಗೀಶ್ವರನ ಚರಣಾಂಬುಜಕ್ಕೆ ಶರಣೂ ॥೨॥

ಏನೆನೆಲೆ ಗಿರಿಜೆ ನಿನ್ನಿಂದಧಿಕರೊಳು ನಿನ್ನ ।
ನೀನರಿಯದಂತು ನುಡಿವರೆ ನೀನು ದೇವಾಭಿ ।
ಮಾನಿಯವರಂತರಂಗವನೋಡೆನಿರ್ದೇಹಿಗಳುಯವರುಭವರಹಿತರೂ ॥
ನೀನೆ ಪೇಳೆಮಗೆ ಮುನ್ನಿನ ನಿನ್ನ ಭವಮಾಲೆ ।
ಗಾನು ನೀನೇ ಸಾಕ್ಷಿ ನೀನವರೊಲಿವಿನಿಂ ।
ಮಾನವರೊಳುದಿಸಿ ಬಾ ಎಂದ ಗಿರಿಜಾ ವರನ ಚರಣಾಂಬುಜಕ್ಕೆಶರಣು ॥೩॥

ಉನ್ನತಿಕೆ ಬಡೆದು ಕಿರಿದರ ಪಂಗ ಹಂಗಿಸುವು ।
ಮನ್ನತಿಕೆ ಗೆಡಿಸದಿಹುದೇ ನಿನ್ನ ನನ್ನಿಯು ।
ಮನ್ನತಿಕೆಗೆಟ್ಟು ಕಿರಿದನಾಡಿದೆ ನೀನಿನ್ನು ಗುಡ್ಡಾಯಿ ಎಂಬಳಾಗಿ
ನಿನ್ನ ಜವ್ವನ ಬಲ್ಪಿ ನಿಮ್ಮಾನ ವಿರುತವೆನ ।
ಗನ್ನವಂ ಬಗೆದ ಸಮಯ ದ್ರೋಹಿಗಳನರಸು ।
ಎನ್ನ ನೆಲೆಗೊಳಿಸು ಹೋಗೆಂಬ ಗಿರಿಜಾವರನಚರಣಾಂಬುಜಕ್ಕೆಶರಣು

ಎನ್ನ ನೆಲೆಗೆಟ್ಟು ಮಾನವ ಲೋಕದೊಳ್ಪುಟ್ಟಿ ।
ನಿನ್ನನಗಲುವ ಬನ್ನ ವೆನಗಾದುದದ ನರಿದು ।
ನನಗೆ ನಾಮೂದಲಿಸಿ ಕೊಳಬೇಕೆನುತ್ತ ನುಡಿದಪರಾಡಿಮದು ತಥ್ಯವೇ
ಚನ್ನೆಯಂತೆನ್ನದಿರು ನೀನಲ್ಲ ದಿರ್ದಲ್ಲಿ ।
ಎನ್ನ ನಾರ್ಬಲ್ಲರೆಲೆ ಶರ್ವಾಣಿ ತಿಳಿ ನಿನ್ನ ।
ಬನ್ನವೆನ್ನದು ನಂಬಿರೆಂದ ಗಿರಿಜಾವರನ ಚರಣಾಂಬುಜಕ್ಕೆ ಶರಣು ॥೫॥

ವಾಮಲೋಚನೆ ಹೋಗು ಗುಡ್ಡಾಪುರದೆ ನಿನ್ನ ।
ಸೋಮ ಸಾಮ್ಯಹರಹು ರಚಿಸಿ ಮರ್ತ್ಯದೊಳಗೆಮ ।
ನೋಮುದದೊಳೀಕ್ಷಿಸಲ್ ಜನಿಸುಹೋಗಲ್ಲಿ ಸೋಮೇಶಲಿಂಗಾಲಯವದ
ಸೋಮ ಕಳೆಗಳು ಬೆಳೆವ ತೆರದೆ ಗಳಗಳನೆ ಬೆಳ ।
ದಾಮಹಾಲಿಂಗ ಸೇವೆಯೊಳೆ ನೀನಲ್ಲಿರು ।
ಪ್ರೇಮದಿಂದಪ್ಪಿ ಹೋಗೆಂದ ಗಿರಿಜಾವರನ ಚರಣಾಂಬುಕ್ಕೆ ಶರಣು ॥೬॥

ಇತ್ತಲಾ ಗಿರಿಜೆ ಭೃಂಗಿಗೆ ಮುಳಿದ ದೋಷದಿಂ ।
ಚಿತ್ತ ಜಾರಿಯ ಶಾಪಮುಂ ಪಡೆದು ಮರ್ತ್ಯಕ್ಕೆ ।
ಇತ್ತು ಗುಡ್ಡಾಪುರದ ಸೋಮೇಶ ಲಿಂಗ ಭಕ್ತರ ಗರ್ಭದಲ್ಲಿ ಜನಿಸೀ ॥
ಉತ್ತಮದ ಯವ್ವನಂ ಬಪ್ಪನ್ನೆಗಂ ಶಿವನ ।
ತ್ಯರ್ಥದಿಂದಾವಗಂ ಪೂಜಿಸುತ್ತಿರುತ ಕೋ ।
ಳುತ್ತರಂ ಗುಡ್ಡ ವರದಾನಿ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೭॥

ಅತ್ತ ಗುಡ್ಡಾಪುರಕೆ ಮೂಡುಗಡೆಯನೂ ।
ವ್ವತ್ತು ಗಾವುದ ವಲಂಪುರ ವದರೊಳಿಪ್ಪು ದೊಂ ।
ದುತ್ತಮಂ ಬ್ರಮ್ಹೇಶ ಲಿಂಗ ವದನೆ ಧೂರ್ತರೆತ್ತಿ ಹೊಳೆಯಲ್ಲಿ ಇಟ್ಟು ॥
ಮತ್ತಿರದೆಯಾ ಪೀಠದಲ್ಲಿ ನಾರಾಯಣನ ।

ನೆತ್ತಿಸಲು ಕಂಡು ಮರುಗುತ್ತ ಲನ್ನವ ತೊರೆವ ।
ಸತ್ಯ ಸದ್ವ್ರತ ನಿರತ ವೀರನಾಚಯ್ಯಗಳ ಚರಣಾಂಬುಜಕ್ಕೆ ಶರಣು ॥೮॥

ಗೋಚರಿಸಿ ಕರುಣದಿಂ ಬ್ರಹ್ಮೇಶ್ವರಂ ವೀರ ।
ನಾಚಯ್ಯಗಳ ಕನಸಿನೊಳ್ಬಂದು ಈ ನೆರೆದ ।
ನೀಚರಂ ಪರಿಹರಿಪ ಬುದ್ಧಿಯಂ ಪೇಳ್ವೆನೇಳೆಂದೆತ್ತಿ ಭಸಿತ ವಿಟ್ಟೊ ॥
ವಾಚಿಸದೆ ಗುಡ್ಡಾಪುರಕೆ ಹೋಗಿ ನಮ್ಮರಸಿ ।
ಯಾಚಂದ್ರವದನೆ ವರದಾನಿಗೊಂದೇ ಮಾತ ।
ಸೂಚಿಸೆನೆ ನಮಿಸುತೆಚ್ಚತ್ತ ನಾಚಯ್ಯಗಳ ಚರಣಾಂಬುಜಕ್ಕೆ ಶರಣು ॥೯॥

ಆಕ್ಷಣದಿ ಬದುಕಿದೆನೆನುತ್ತೆ ಭುಜ ವೈದು ಭಾ ।
ಳಾಕ್ಷನರುಪಿದ ಕರುಣಮಂ ಮನದೊಳ ಳವಡಿಸಿ ।
ಪಕ್ಷಿವೇಗದೊಳು ಗುಡ್ಡಾಪುರಕ್ಕೈದಿ ಗುಡ್ಡಮ್ಮಗಳ ಪದದಿ ಪೊರಳೀ ॥
ಈಕ್ಷಿಸುತ ಬಂದ ಕಾರ್ಯವನಾತ ನಿಂಗಿತದ ।
ಲೀಕ್ಷಿಸುತಲ ಭಯ ವೀರುತ್ತ ಲಾತನ ವ್ರತವ ।
ಪೇಕ್ಷಿತವರಸಿಕೊಂಡುನುಡಿದಗುಡ್ಡಮ್ಮಗಳಚರಣಾಂಬುಜಕ್ಕೆಶರಣು ॥೧೦॥

ಏನು ಬಿಜಯಂಗೈದಿರಯ್ಯ ನಾಚಯ್ಯಗಳೆ ।
ಏನು ಸೇವೆಯನೆನಗೆ ಕರುಣಿಸಲ್ಬಂದಿರೆನು ।
ತಾನಂದರಸದ ತೆರೆ ಮಸಗೆ ಕರುಣಾರಸದಿಕಂಗಳುಂ ಕೋಡಿವರಿಯೇ ॥
ಮಾನನಿಧಿ ಗುಡ್ಡಮ್ಮೆ ಬೆಸಗೊಳಲು ಕೈಮುಗಿವು ।
ತಾನ ತಾನನೆ ನಗುತೆ ಜಗನ್ಮಾತೆ ಸುಜ್ಞಾನ ।
ಮಾನಸಿ ಯೆಂದು ಪೊಗಳ್ವ ನಾಚಯ್ಯಗಳ ಚರುಣಾಂಬುಜಕ್ಕೆ ಶರಣು ॥೧೧॥

ಜಗವೆಲ್ಲವಂ ಪುಟ್ಟಿಸಲು ಜನನಿಯಾಗಿ ಯಾ ।
ಜಗದ ಜೀವರ ಯಂತ್ರ ಸೂತ್ರವುಂ ನೀನಾಗಿ ।
ಜಗದ ಸಂಹಾರ ತಾಂಡವ ಮೂರ್ತಿಯಾಗಿರ್ಪ ನಿನ್ನ ನಿಜವರಿವುದಳವೇ ॥
ಜಗದಿಂದಲತ್ತ ಲಾರುವರಿಯದಾ ಶಿವನ ।
ಮೊಗದ ಕನ್ನಡಿಯೆ ಯಾತನೆ ನಿನ್ನ ಬಲ್ಲನೆನೆ ।
ನಗುವ ಮಹಾದೇವನರ್ಧಾಂಗಿಗುಡ್ಡಮ್ಮಗಳಚರಣಾಂಬುಜಕ್ಕೆಶರಣು ॥೧೨॥

ಆಡಿಸುವ ಸೂತ್ರಧಾರಿಯನರಿದು ಎನ್ನ ಕೊಂ ।
ಡಾಡುವರೆ ತಂದೆ ಜಗವಾರ ಜಠರದೊಳಿಪ್ಪ ।

ದಾಡುಪರು ದಾರುವಾಡಿಪರಾರು ಉಭಯಮುಂನೋಡಿಮೆಚ್ಚಿಪರುದಾರೂ
ಬೀಡು ಬಿಟ್ಟಿವೆ ಎಂದು ದೆಸೆಯೊಳೆಂಟಂಗವಿವ ।
ಮಾಡಿದವರಾರೆಂಬುದನು ಶರಣರೇ ಬಲ್ಲ ।
ರಾಡಲೇಂ ನಿಮ್ಮೊಡನೆ ಎಂವಗುಡ್ಡಮ್ಮಗಳಚರಣಾಂಬುಜಕ್ಕೆ ಶರಣು ॥೧೩॥

ಹರನ ಕರುಣವೆ ಮೂರ್ತಿಯಾಗಿ ಬಂದಿರೋ ಎನ್ನ ।
ನರಜನ್ಮವಂ ಹಿಂಗಿಸಲ್ಬಂದಿರೋ ಜನ್ಮ ।
ಪುರುಷಾರ್ಥ ಸಿದ್ಧಿಗೊದಗಿಮ ದೆನಿಸಬಂದಿರೋ ಎನ್ನಜವ್ವನವನದೊಳು ॥
ಚರಿಸುವ ವಸಂತ ನಲ್ಲನ ತೋರ ಬಂದಿರೋ ।
ವರಗುಚಿತವಾದ ಕರ್ನಿಕೆ ಯೆನಿಸ ಬಂದಿರೊ ।
ಕರುಣಿಸುವ್ರನೆಂದ ಗುಡ್ಡಮ್ಮೆಗಳ ಚರಣಾಂಬುಜಕ್ಕೆ ಶರಣು ॥೧೪॥

ಹೇಳಿದುದ ನರಿವುತಿಹುದೆಲ್ಲ ಜೀವರಿಗುಂಟು ।
ಹೇಳಿದುದ ನರಿವರಿವ ನಿಲವೆವುಂ ನೀನಾದ ।
ಭಾಳಲೋಚನನ ಚಿಧ್ಭಕ್ತಿ ನಿನಗಿನ್ನದಂ ಪೇಳಲೇನಾ ಕಥನವಾ ॥
ಆಳಿದಳೆ ಬಿನ್ನಪಂ ಬಾಲ ಬ್ರಮ್ಹೇಶ್ವರನ ।
ಊಳಿಗವನೆಲ್ಲವಂ ತಿಳುಪೆ ಭುಗಿಲಿಡುತಿದ್ದು ।
ಮೇಳದ ಗಣಂಗಳಂ ಕರೆದ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೧೫॥

ಎನ್ನ ಜವ್ವನ ನಿರರ್ಥಕವೆನಿಸ ದಾಯ್ತೆಂದು ।
ಹೊನ್ನಯ್ಯ ಬಾ ಪಾಂಡ್ಯ ನಾಯಕಂ ಕರೆ ಬನ್ನಿ ।
ಕಿನ್ನರ ಬ್ರಹ್ಮಯ್ಯ ಬಾ ಬಿರಿದೇವ ಬಿಜ್ಜಯ್ಯಗಳು ಕೂಡಿ ಬನ್ನೀ ॥
ಸನ್ನದ್ಧನಾಗಿ ನಿಜ ಶರಣ ಸೋಮಯ್ಯ ಬಾ ।
ಮನ್ನಣೆಯ ಕಾಳಮ್ಮ ಕೇಳ್ ತಮ್ಮಗಳೆ ನೀವು ।
ಬನ್ನಿ ಎಂದೆನುತ ವಂದಿಸಿದ ಗುಡ್ಡಮ್ಮೆಗಳ ಚರಣಾಂಬುಜಕ್ಕೆ ಶರಣು ॥೧೬॥

ನಂದಿಮುಖ ಬಂದು ಕೃಪೆಯಿಂದ ಹಂದಯ್ಯ ಬಾ ।
ಕಂವರ್ಪನಜಯು ಕಲ್ಯಾಣ ಬಾಚಮ್ಮ ಬಾ ।
ಒಂದೆ ಮಾನಸನಾಗಿ ರೇವಯ್ಯ ಬಾ ಮುಂದೆ ನೀನು ನಡೆ ಸೈನ್ಯನಾಥಾ ॥
ಹಿಂದೆ ಸಿಕ್ಕದಿರು ಚಿಕ್ಕಲಿಗೆಯ ನಾಗಯ್ಯ ।
ಚಂದಾಗಿ ಬನ್ನಿ ಪೀವರ ಬಾಚಿ ತಂದೆಗಳೆ ।
ಎಂದು ದೇವರಬಾಚಿಗುಸುರ್ದಗುಡ್ಡಮ್ಮಗಳಚರಣಾಂಬುಜಕ್ಕೆಶರಣು ॥೧೭॥

ವಾಚಾಮ ಗೋಚರನೆನಿಸಿಪ್ಪ ಶಿವಾನುಭವ ।
ನಾಚಿ ದೇವಯ್ಯನಂ ಕರೆದು ತನ್ನಯ ಶಿರವ ।
ಚಾಚುತ ಲಲಂಪುರದ ಭಕ್ತ ಜನಕೆಲ್ಲ ವಿಭೂತಿ ಇತ್ತವರು ಸಹಿತ ॥
ಆ ಚತುರ್ಗ್ರಾಮದೊಳಗಣ ಶಿವಭಕ್ತರ್ಗೆ ।
ಸೂಚಿಸುತಲಂಪುರದ ಹೊರವಳೆಯ ಬಿಟ್ಟು ।
ಗೋಚರಿಸಿರೆಂದು ವಂದಿಸಿದ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೧೮॥

ಅತ್ತಲಾತನ ಕಳುಹಿ ಗಣಮೇಳದೊಳಗೆ ನಲಿ ।
ವುತ್ತ ಮೂದಲಿಸಿ ಮುದ್ದಿಸುತ ಮೋಹಿಸುತ ನಮಿ ।
ಸುತ್ತ ಪುಳುಕಿಸುತಲಾಡುತ್ತ ಹಿರಿ ಹಿಗ್ಗುತ್ತ ಹದಿನಾರು ರಥವ ತರಿಸೀ ॥
ಎತ್ತಿಸುತ ಬಿರುದ ಪತಾಕೆಗಳ ಶರಣರಸು ।
ಕೀರ್ತಿಗಳ ಬಿರುದ ನುಡಿಸುತಿರೆ ರಥವನೇ ।
ರುತ್ತಲಂಪುರಕೆ ದಾಳಿಟ್ಟ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೧೯॥

ಮೃಡನ ನಡುಗಣ್ಣ ಕೋಪದ ಕಿಡಿಯ ಬೆಳಗವೋ ।
ಕಡೆಗಾಲದಂದು ಸಂಹರಿಪ ರುದ್ರನ ಸರ್ವ ।
ಪಡೆಯೋ ದಕ್ಷಾಧ್ವರ ಧ್ವಂಸ ವೀರೇಶ್ವರನ ವೀರಗಣ ಪರಿವಾರವೋ ॥
ಖಡುಗ ತೋಮರ ಪರಶು ಚಕ್ರ ಧನುಶರ ಮುಸಲ ।
ಜಡಿವ ಪತ್ರದ ಪಟಾಹದ ವೀರ ಭಟಕೋಟಿ ।
ನಡೆದುದಾಳಿಡಲು ನಗುನಗುವಗುಡ್ಡಮ್ಮಗಳ ಚರಣಾಂಬುಜಕ್ಕೆಶರಣು ॥೨೦॥

ಶಿವನಲ್ಲದನ್ಯ ಉಂಟೆಂಬರ್ಗೆ ಎದೆಶೂಲಿ ।
ಶಿವನಿಂದಕರನೊತ್ತಿ ಕೊರೆವ ಮೂಗಿನ ಕತ್ತಿ ।
ಶಿವಮಾರ್ಗ ಕಂಟಕರ ಪರ್ವತಕ್ಕೆ ಕುಲಿಶ ಶಿವ ಸಮಯ ಕಮಲಮಿತ್ರಾ ॥
ಶಿವಲಾಂಛನದ ವಿರೋಧಿಯ ವಂಶದಾವಾಗ್ನಿ ।
ಶಿವ ಸುಪ್ರಸಾದ ವಿರಹಿತ ಶರಧಿ ಬಡಬಾಗ್ನಿ ।
ಯವತರಿಸಿಬಂದುದೋಎನಿಪಗುಡ್ಡಮ್ಮಗಳಚರಣಾಂಬುಜಕ್ಕೆಶರಣು ॥೨೧॥

ಕುಮತಂಗಳೆಂಬ ಕುಮುದಾಕರಂ ಮುದ್ರಿಸಲು ।
ಸ್ವಮತಂಗಳೆಂಬ ಕಮಲಾಕರಂ ನಲಿವುತಿರೆ ।
ಸುಮನಸ್ಕರತುಳ ಚಿಂತಾ ತಮಂ ಪಿಂಗೆ ಶಿವಯೋಗಿ ಚಕ್ರಂಕುಣಿಯಲು ॥
ವಿಮಳ ಶಿವಧರ್ಮ ಪೂರ್ವಾಚಲದ ಶಿಖರದೊಳು ।

ರಮಣೀಯಶ್ಶೈವ ತೇಜೋಭಾನು ಮಂಡಲದ ।
ಸಮುದಯವಿದೆನಿಪಮಣಿರಥದಗುಡ್ಡಮ್ಮಗಳಚರಣಾಂಬುಜಕ್ಕೆಶರಣು॥೨೨॥

ಮೇರೆದಪ್ಪಿದ ಸುಧಾ ಜಲಧಿ ತೆರೆಮಸಗಿ ತೆನೆ ।
ವೀರನಾಚಯ್ಯ ಮೊದಲಾದ ಶಿವಗಣಮುಂ ।
ಪುರಪೊರಗಣದವನದಪುಷ್ಪವಾಟಿಯೊಳುಬೀಡಂಬಿಟ್ಟುಸುಖದೊಳಿರುತಾ॥
ಭೋರೆಂಬ ವೀರಗಹಳೆಗಳ ರಣ ಮೋಹರೆಯ ।
ಭೇರಿ ನಿಸ್ಸಾಳ ಧ್ವನಿ ಮೊಳಗುತಂ ಬರುತಿರಲು ।
ವೀರ ಗುಡ್ಡಮ್ಮ ಬಿನದರಿವ ನಾಚಯ್ಯಗಳ ಚರಣಾಂಬುಜಕ್ಕೆ ಶರಣು ॥೨೩॥

ಬರುತ್ತೈದಳೆಮ್ಮ ನಿಜಪತಿಯು ।
ಹರಿಬಮಂ ತೆಗೆಯಬೇಕೆನುತ ನೀವೆಲ್ಲರುಂ ।
ಪರಮಾನುರಾಗದಿಂ ಗುಡಿಗಟ್ಟಿ ಕಳಶ ಕನ್ನಡಿ ಮಂಗಳಾರುತಿಗಳಾ ॥
ತರತರದಿ ಪಿಡಿದು ಪಾಡುತ ನೃತ್ಯವಾದ್ಯದಿಂ ।
ವರಕುಸುಮ ವರುಷದಿಂದಿರ್ಗೆಂಬ ವೇಳೆ ಶಿವ ।
ಶರಣರೆಲ್ಲರು ನಡೆದರೆಂಬ ನಾಚಯ್ಯಗಳ ಚರಣಾಂಬುಜಕ್ಕೆ ಶರಣು ॥೨೪॥

ವರ ಮಂಗಳೋಪ ಕರಣಂಗಳಂ ತತ್ ಕ್ಷಣದಿ ।
ತರಿಸಿ ಪರಮೋತ್ಸವಂಗಳನೆಲ್ಲ ದೆಸೆದೆಸೆಗೆ ।
ನೆರಪಿ ನಡೆ ಕೈಲಾಸವಾಗಿ ಪೊಡಮಡುತಿರಲು ಮುಂದೆ ನಾನಾವಿಭವದಿ ॥
ಬರುತಿರ್ಪಳ ಮಮ ರವಿ ಬಿಂಬ ಫಲವಾದಂತೆ ।
ಧರೆಗತಿ ವಿಚಿತ್ರ ರನ್ನರಥ ಪದಿನಾರು ।
ತರಿಸಿಪರಿತಂದುಮುಂದಿರ್ದಗುಡ್ಡಮ್ಮಗಳಚರಣಾಂಬುಜಕ್ಕೆ ಶರಣು ॥೨೫॥

ಕುರುಡಂಗೆ ಕಂಗಳೈತಪ್ಪಂತೆ ನಿರ್ಭಾಗ್ಯ ।
ನರರ್ಗೆ ಪರಮೈಶ್ವರ್ಯ ಬಂದಂತೆ ಪಸಿದರ್ಗೆ ।
ಪರಮಾನ್ನ ದೊರಕಿದಂತಾಯ್ತು ನಿಮ್ಮಯ ಬರವಿದೆಮ್ಮ ಸದ್ಭಕ್ತತತಿಗೆ ॥
ನಿರವದ್ಯ ನಿರುಪಾಯ ನಿಶ್ಚಿಂತ ವರದೇವ ।
ಪರಿವಾದಿಗಳಿಗಂಜೆವಂಜೆವೆನುತೆಲ್ಲರು ।
ಶರಣೆನುತ್ತಿರಲ ಭಯವಿತ್ತ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೨೬॥

ರವಿ ಮಂಡಲವ ನೋಡುತಂಜಿ ಯಡಗುವ ಘೂಕ ।
ನಿವಹದಂತಲ್ಲಲ್ಲಿ ಯಡಗುತಂ ಪ್ರಾಣಗಳು ।

ತವೆ ಸಂಚಲಿಸೆ ಕಂಗೆಟ್ಟು ಕಾತರಿಸಿ ಕಳವಳಿಸುತಂ ಶಿವದ್ರೋಹರು ||
ಇವರು ಎಲ್ಲಿಂದೆಲ್ಲಿ ಗೈತಂದ ರಿವರಪರಿ ।
ಭುವನ ಕಚ್ಚರಿಯೆನುತ ನಡೆನೋಡಿ ಬೆರಗಾಗಿ ।
ಜವಗುಂದಿಸೈಗೆಡೆಯೆನಗುವಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೨೭||

ಶರಭಂಗೆ ಹರಿಕಟಕ ವೋಡುವಂದದಿ ಮಹಾ ।
ಗರುಡಂಗೆ ಯುರಗನಿಕರಂ ತೆರಳುವಂತೆ ಕೇ ॥
ಸರಿಗೆ ಕರಿಘಟೆಗಳ ಳಿವಂತೆ ತಮ್ಮ ತಾವೇ ಜರ್ಜರಿತರಾಗುತಾ ॥
ಧರೆಯು ಬಾಯ್ದೆರೆಯದೆಯೆನುತ್ತ ಪರವಾದಿಗಳು ।
ನೆರೆದು ನಾರಾಯಣನ ಕೂಡೋಡೆ ಮರಣವೆನು ।
ತ್ತಿರುತಿರಲುಕೇಳ್ದುನಸುನಗುವಗುಡ್ಡಮ್ಮಗಳಚರಣಾಂಬುಜಕ್ಕೆಶರಣು ॥೨೮॥

ಏನಯ್ಯ ನಾಚಯ್ಯ ನಿಮ್ಮ ಮನದ ಭಿಮಃತವ ।
ದೇನು ಮೊದಲಲೆ ಲಿಂಗಮಂ ಪ್ರತಿಷ್ಠಿಪಿರೊ ಪೇ ।
ಳಾ ನೀಚರಂ ಪರಿಹರಿಸಿದ ಬಳಿಕದೋ ಎನಲು ಲಿಂಗವೇಮುಖ್ಯವು ॥
ಆ ನಿತ್ಯ ಲಿಂಗವೇ ಸುಪ್ರತಿಷ್ಠಿತವಾಗೆ ।
ತಾನೆ ತೊಲಗುಗುವೃಜಿನವೆಂದೆನಲು ಮೆಚ್ಚಿ ಸು ।
ಮ್ಮಾನದೆಮಹಾನದಿಗೆನಡೆದ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೨೯॥

ಶಿವಶರಣರೆಲ್ಲರ್ಗೆ ಶರಣಾರ್ಥಿ ನೀವೆಲ್ಲ ।
ತವಕದಿಂ ಪೋಗಿ ನಿಜಭವನ ಭವನಂಗಳಲಿ ।
ಭುವನವೆಲ್ಲರಿವಂತೆ ಗುಡಿ ತೋರಣಂಗಟ್ಟಿ ವಾದ್ಯಂಗಳಂ ಮೊಳಗಿಸೀ ||
ಧವಳಮಂ ಪಿಡಿಸುತ ಕಳಸ ಕನ್ನಡಿಗಳಿಂ ।
ನವರತ್ನದಾರತಿಗಳಿಂದ ಮುತ್ತೈದೆಯರ ।
ನಿವಹ ಸಹಿತಿದಿರ್ವನ್ನಿಎಂದ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೩೦॥

ನೆನೆವ ಮಂತ್ರದಿ ತನ್ನ ಗಣಮೇಳಸಹಿತ ನಡೆ ।
ದನುಪಮ ಬ್ರಹ್ಮೇಶ್ವರ ನಿಂಬುಗೊಂಡು ಪಾ ।
ವನ ಚರಿತೆಯೆನಿಸುವ ಮಲಪ್ರಹಾರಿಯ ತೀರದಲ್ಲಿ ರಥದಿಂದಿಳಿವುತಾ ॥
ಅನುಮಿಷಾಧೀಶನಂ ನೆನದಖಿಳ ಭಾವಮಂ ।
ಮನವಾರೆ ತರಿಸಿ ಸುರದುಂದುಭಿಗಳ್ಮೊಳಗೆ ಸುರ ।
ವನಿತೆಯರುಸಹಿತ ನಿಂದಿರ್ದಗುಡ್ಡಮ್ಮಗ ಳಚರಣಾಂಬುಜಕ್ಕೆ ಶರಣು ॥೩೧॥

ಪರಮ ಸೌಭಾಗ್ಯ ನಿಧಿ ಸರ್ವಮಂಗಳೆಯೆನಿಪ ।
ವರದಾನಿ ಗುಡ್ಡಮ್ಮನಂ ಕಾಣುತಂ ಗಂಗೆ ।
ಪರಿತಂದುಚರಣಾಬ್ಜವಮಂ ತೊಳೆದು ರತ್ನಸ್ಫುರಿತ ಪಾವುಗೆಗಳನಿರಿಸೀ ||
ಇರದೆ ಕೈಗೊಟ್ಟು ತಪ್ಪ್ರಿಮ್ಹೇಶ್ವರನ ತೋರೆ ।
ಹರಿಣಾಂಕನಂ ಕಂಡ ಚಂದ್ರಕಾಂತದ ತೆರದಿ ।
ಕರಗಿಕಂಗಳ ಧಾರೆವರಿವಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೩೨॥

ಪರಿವಸನವಂಕಂಡವನದೇವಿಯಂತೆ ಯಂ ।
ಕುರಿಸಿತನು ಪುಳಕಾಳಿಗಳು ಸುಧಾ ಜಲಧಿಯೊಳು ।
ಶರಿರವಂ ಮುಳುಗಿ ಎದ್ದಂತೆ ಗದಗದಿಸಿ ಮಲಯಾನಿಲಗೆ ಚಂದನಲತೆ ॥
ಹರುಷದಿಂ ಕಂಪಿಸುವ ತೆರದಿ ಕಂಪನದಿ ಚೀ ।
ತ್ಕರದಿಂದ ಪೆಣ್ದುಂಬಿ ಜಿನಗುವಂದದಿ ಪಾಡಿ ।
ಪರತರ ಬ್ರಹ್ಮಜಯ ಎಂದ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೩೩॥

ಭರದಿಂದ ಸಾಷ್ಟಾಂಗ ದಂಡ ಪ್ರಣಾಮವುಂ ।
ಪರಮಾನುರಾಗದಿಂ ಮಾಡಿ ಕೈಮುಗಿದೆದ್ದು ।
ಸುರಧೇನು ಸುರತರುಗಳಂ ತರಿಸುತಂ ಫಲರಸದೊಳಭಿಷೇಕಮಾಡೀ ॥
ವರಸುಗಂಧಾನು ಲೇಪನದೊಡನೆ ಪರಿಮಳಿಪ ।
ಬಿರಿ ಮುಗುಳ ಮಂದಾರ ಮಾಲೆಯಂ ಪಿಡಿದೆತ್ತಿ ।
ಪರಸುತಂಬ್ರಹ್ಮೇಶಗಿತ್ತ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೩೪॥

ವರ ಗುಗ್ಗುಳದ ದಿವ್ಯಧೂಪ ಗಂಧಂ ಜಗ ।
ದ್ಭರಿತವಾಗೆಸೆಯೆ ರತ್ನಜ್ಯೋತಿಗಳ ಸುತ್ತಿ ।
ಪರಿವೇಷ್ಟಿಸಲು ಭಕ್ತಿರಸಗಳೊದವಿದ ಪರಾನಂದ ನೈವೇದ್ಯವಿತ್ತೂ ॥
ಸರಸ ಕರ್ಪುರ ತಾಂಬೂಲವನಿತ್ತುಪಚರಿಸಿ ।
ಪರಮ ಸಾಮ್ರಾಜ್ಯ ಸುಖದಿಂ ನಿತ್ಯನಾಗೆಂದು ।
ಪರಿಸಿಶೇಷಾಕ್ಷತೆಯನಿತ್ತ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೩೫॥

ದೇವ ಸರ್ವಜ್ಞ ಸರ್ವೇಶ ಸರ್ವಾಧಾರ ।
ನೀವಿಲ್ಲಿ ನಿಃಕಾರಣಂ ಪ್ರವಾಸದೊಳಿರ್ಪ ।
ದಾವುದು ನಿಜಸ್ಥಾನಕೊಲಿದು ಬಿಜಯಂಗೈದು ಭಕ್ತರ ಮನೋರಥವನು ॥
ಈವುದೇಕಾರ್ಯ ಚಿತ್ತೈಸಬೇಕೆಂದು ಪಿಡಿ ।

ದೋಲಿ ಪುಷ್ಪಕಕೆ ಬಿಜಯಂಗೈಸುತತಿ ಸುಖವ ।
ನೀವಲಂಪುರಿಗೆ ಬರುತಿರ್ದ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೩೬॥

ಬರುತಿರಲು ಸಕಲ ದೇವೋತ್ತಮನ ಮಹಿಮೆಗಳ ।
ಬಿರಿದನುಗ್ಗಡಿಸೆ ಧ್ವನಿಗೇಳುತ ದೂಷಕರು ।
ಶರದಭ್ರನಿನದಮಂ ಕೇಳ್ದ ಹಂಸಿಗಳಂತೆ ಧರೆಗಿಳಿದ ಧೈರ್ಯವಾಗೀ ॥
ಶರಣು ವೊಕ್ಕಲ್ಲದಸು ನಿಲಬಾರದೆಂದು ಮ ।
ಚ್ಚರವಳಿದು ಚರಣಮಂ ಸಾರ್ದರಂ ಸಲಹಿ ಮುನಿ ।
ವರ ಶಿರವ ಚಂಡಾಡಿ ಬಂದ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೩೭॥

ಒಂದೆ ಭಾವದೊಳು ಗುಡ್ಡಮ್ಮಗಳ ಚರಣಾರ ।
ವಿಂದವಂ ನೆನೆವುತ್ತ ಬರುವ ಹಾರುವ ಭಕ್ತಿ ।
ಯಿಂದಲತಿ ವೈಭವಂಗಳು ವೆರಸಿ ತತ್ಪುರದ ಪಶ್ಚಿಮದ ಗೋಪುರದೊಳು ॥
ಸಂದಣಿಸಿ ಸಕಲ ಭಕ್ತರುಗಳು ಘೇಯೆನುತ ।
ನಿಂದಿರಲು ಮುನ್ನ ಶಿವಲೋಕವೆಯಿ ತಂದಂತೆ ।
ಬಂದುಮುದದಿಂದಮುಂದಿರ್ದಗುಡ್ಡಮ್ಮಗಳಚರಣಾಂಬುಜಕ್ಕೆಶರಣು ॥೩೮॥

ವೀರಸಾಮ್ರಾಜ್ಯ ಸಂಪದ ಸಿದ್ಧಿರಸ್ತು ಸ ।
ರ್ವಾರೋಗ್ಯ ಮಸ್ತು ಶಿವಮಸ್ತು ಶೈವವ್ರತಾ ।
ಚಾರ ನಿಃಕಂಟಕ ವ್ಯಾಪ್ತಿರಸ್ತು ಶಿವಾತ್ಮಯೋಗೋಸ್ತುಯೆಂದೆನಿಸುತಲಿ ॥
ಆರುತಿಯನೆತ್ತಿ ಮುತ್ತೈದೇರು ಪರಸುತಿರೆ ।
ವೀರ ಮಾಹೇಶ್ವರರೆನಿಪ್ಪ ಷೋಡಶರ್ತಮ್ಮ ।
ವೀರಗಂಕಣಕೆ ಕೈಯಿತ್ತ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೩೯॥

ಷೋಡಶಕಳಾ ಭರಿತೆ ಗಿರಿಜೆಯಾಗಿರ್ದೆಂದು ।
ಷೋಡಶ ವಿಶೇಷ ಕಳೆಗಳಿಗನುಜ್ಞೆಯನಿತ್ತು ।
ಷೋಡಶ ಗಣಂಗಳಾಗಿರಿ ಎಂದು ಅಂದುಕಳು ಪಿದಡಿಂದು ಮರ್ತ್ಯದಲ್ಲಿ ॥
ಷೋಡಶ ವಿಭೇದ ನಾಮದಿ ಜನಿಸಿದವರ್ಶೈಸೆ ।
ಷೋಡಶರು ಬೇರೊಬ್ಬರಲ್ಲ ನಾಚಯ್ಯಯೆನೆ ।
ಕೂಡೆ ಶರಣಾರ್ಥಿಯೆನೆ ನಲಿವಗುಡ್ಡಮ್ಮಗಳಚರಣಾಂಬುಜಕ್ಕೆಶರಣು ॥೪೦॥

ದೇವಿಯೆ ಜಗನ್ಮಾತೆ ನಿನ್ನ ಕಳೆಗಳು ಬಲ್ಲ ।
ಭಾವಜ್ಞರಾರು ನಿನ್ನೀರೂಪು ಯವ್ವನದ ।
ಹಾವಭಾವ ವಿಳಾಸ ವಿಭ್ರಮುವನೋಳ್ಪೊಡೆರಡು ಕಣ್ಣವರಿಗಳವೇ ॥

ಆವಗಂ ಕಣ್ತೆರೆವಿ ನೋಡೆ ಹೆರೆಹಿಂಗದಳ ।
ಣಾವಿಧನ ವಿಶ್ವತಃಚಕ್ಷು ತದ್ಬ್ರಹ್ಮೇಶ ।
ನೇವರಂಯೆನುತ ವಂದಿಸಿದನಾಚಯ್ಯಗಳ ಚರಣಾಂಬುಜಕ್ಕೆ ಶರಣು ||೪೧||
ಲೌಕಿಕನರರು ನೋಡಿ ಬೆರಗಾಗುತಿರಲೊಂದು ।
ಆಕಸ್ಮಿಕದ ಚಂದ್ರಕಾಂತ ಭವನವ ತರಿಸಿ ।
ನಾಕ ಲೋಕದ ಸಕಲ ವೈಭವಂಗಳ ಸುತ್ತನಿಲಿಸುತ್ತ ದಿಗಧೀಶ್ವರಾ ॥
ಆ ಕಳಾವಮೌಳಿ ಬ್ರಹ್ಮೇಶಲಿಂಗನ ಸದಾ ।
ಯಾ ಕಾಲವು ಪಹರಿಯಾಗಿ ಕಾದಿರೆಯೆನುತ ।
ಲಾ ಕುಟಿಲರಿದ್ದೆಡೆಗೆ ನಡೆದ ಗುಡ್ಡಮ್ಮಗಳ ಚರಣಾಂಬುಜಕ್ಕೆಶರಣು ॥೪೨॥
ಸಿಡಿಲ ಬೆಳಗವೋಕಾಳ ಕೂಟ ನಡೆತಪ್ಪೊಂದು ।
ಸಡಗರವೋ ಕಾಲಕಾಮ ತ್ರಿಪುರಮಂ ನೋಡಿ ।
ಘುಡುಘುಡಿಸಿ ಭಸ್ಮಾವಶೇಷಮಂ ಮಾಳ್ಪ ಭಾಳಾಕ್ಷದ ನಲನ ವೇಗವೋ ॥
ಪಡಿಯಿಡುವ ಡಳವಲ್ಲ ನಿನ್ನ ವಿದ್ಭೂತವು ।
ಪೊಡವಿಗಚ್ಚರಿಯಾದುದಮ್ಮಮ್ಮಯೆಂದೆನುತ ।
ಪಡೆಮೆಚ್ಚೆನಾಚಯ್ಯಪೊಗಳ್ವಗುಡ್ಡಮ್ಮಗಳ ಚರಣಾಂಬುಜಕ್ಕೆಶರಣು ॥೪೩||
ಹದಿನಾರು ದಿಕ್ಕಿನೊಳು ಹದಿನಾರು ರಥಿಕರುಂ ।
ಚದುರಂಗ ಬಲವಾಗಿ ನಿಲಿಸಿ ತಾನೋರ್ವಳೆ ।
ಮದನ ವಿಜಯ ಬ್ರಹ್ಮಲಿಂಗ ಪೀಠವ ನೋಳ್ಪ ಭರದಿ ಪೋಗುತಿಪ್ಪಾಗಳೆ ॥
ಹೃದಯವಿಬ್ಬಗೆಯಾಗಿ ನಾರಾಯಣನ ಪ್ರತುಮೆ ।
ಯೈದಿ ಸಿಡಿದೆದ್ದು ಹಾರಲು ಕಂಡು ದೂಷಕರು ।
ಮುದವಡಗಿನಡುನಡುಗೆನಗುವಗುಡ್ಡಮ್ಮಗಳಚರಣಾಂಬುಜಕ್ಕೆಶರಣು॥೪೪॥
ಕರ್ಮ ಸಾಕ್ಷಿಯು ಬಿಂಬಮಂ ಕಾಣುತಂ ಬಾಹ್ಯ ।
ಕರ್ಮಚಕ್ಷು ವ್ಯಾಪಕತನಮಂ ಪರೆವಂತೆ ।
ಕರ್ಮಕಾಂಡ ಭ್ರಮಿತರಾಂತರಿಯ ದೃಷ್ಟಿಗಳ ಮಾಯಮಂ ಪಿಂಗುತಾ ॥
ನಿರ್ಮಲ ಜ್ಞಾನ ಉದಿಸುತ ಜಗಜ್ಜನನಿಯಂ ।
ಕೂರ್ಮೆಯಿಂ ಕಂಡು ಪಾದಕ್ಕೆರಗೆ ಕರುಣಿ ಶಿವ ।
ಧರ್ಮೋಪದೇಶವಿತ್ತೊಲಿದ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೪೫॥
ವರದೊರಗಿ ದುಃಸ್ವಪ್ನ ಕಾಣುತೆಚ್ಚತ್ತು ತಾಂ ।
ವೆರಗಾಗಿ ದೋಷ ಹರಣಾರ್ಥವಾಗಿ ಪಲ ।

ತೆರದ ಜಪಹೋಮ ಪೂಜಾಧ್ಯಾನ ವಿಧಿಗಳಿಂ ಶಾಂತಿಯಂ ಮಾಡುವಂತೆ ||
ಮರಹಿನಿಂ ಬಂದ ದುಷ್ಕರ್ಮವಮಂ ತೀರ್ಚಿಸಲು ।
ಉರಿವ ಜಪ ಹೋಮಾದಿಗಳನಿಲ್ಲಿ ಮಾಳ್ಪೆವೆಂ ।
ದರುಪಿದಭಿನವಶಿಷ್ಯವರದೆಗುಡ್ಡಮ್ಮಗಳಚರಣಾಂಬುಜಕ್ಕೆಶರಣು ||೪೬||

ನೀವೆಲ್ಲರುಂ ನಿಮ್ಮ ಬಂಧುವರ್ಗಂ ಸಹಿತ ।
ಈ ವಿಶ್ವತಃಚಕ್ಷುವೆನಿಸುವ ಬ್ರಮ್ಹೇಶ ।
ದೇವಂಗೆ ಸರ್ವ ಮಂಗಳ ಕಾರ್ಯ ತೀರ್ಚಿ ಗುಡಿ ತೋರಣಂಗಳ ಕಟ್ಟಿಸಿ ||
ತೀವಿ ಧೂಪಾರತಿಗಳಂ ಕಳಸ ಮುಕುರ ಪು ।
ಷ್ಪಾವಳಿಗಳಿಂ ಶಿವನ ಭವನವಂ ಸಿಂಗರಿಸಿ ।
ದಾ ವಡನೆಬಪ್ಪೆವರಿ ಎಂದಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ||೪೭||

ವಿಷವಮೃತವಾಗದಿಹುದೆ ಶಿವನ ಭಕ್ತರಿಗೆ ।
ಭಿಷಕನಂ ಕರೆತಂದುವೇದ ವ್ಪೋದಿಸರೆನಿ ।
ಸ್ತುಷವಾರಿ ಹುರಿದು ಬೀಜವ ಬಿತ್ತಿ ಬೆಳೆಯದೆ ವ್ರತರನೆಬ್ಬಿಸಿ ನುಡಿಸವೆ ||
ವೃಷೆಯು ವೇಷವನು ಸಹಜದ ವೇಷವೆನಿಸದೆ ।
ವೃಷಭವಾಹನ ನೊಲುಮೆಯುಳ್ಳವರ್ಗಿದನರಿದು ।
ಹುಸಿಎಂದಗುಡ್ಡಮ್ಮಎಂದನಾಚಾರ್ಯಗಳಚರಣಾಂಬುಜಕ್ಕೆಶರಣು||೪೮|

ಕರುಣದೆ ಗುಡ್ಡಮ್ಮ ನಿತ್ಯ ವರದಿಂ ತಮ್ಮ ।
ಕರುಣಂಗಳರ್ಥ ರೌದ್ರಂ ಪಿಂಗಿ ಕಾಂತರಸ ।
ದೊರೆಕೊಂಡವರ್ಗೆ ದುಷ್ಕೃತಕರ್ಮ ದೋಷಮಂಪರಿಹರಿಪೆವೆಂದುನೆನೆದು ||
ಹಿರಿಯರಂ ವೇದಾಗಮಾರ್ಥ ತತ್ವಜ್ಞರಂ ।
ವರಮಂತ್ರ ತಂತ್ರ ಹೋಮಾರ್ಚನಾ ನಿರತರಂ ।
ಕರಿಸಿದಭಿನವ ಶಿಷ್ಯ ವರದೆ ಗುಡ್ಡಮ್ಮಗಳ ಚರಣಾಂಭುಜಕ್ಕೆ ಶರಣು ||೪೯||

ಕರಿಸಿ ಕುಳ್ಳಿರಿಸಿ ಸರ್ವಜ್ಞ ಸಭೆಗಿದಿರಾಗಿ ।
ಕರ ಕಮಲವಂ ಮುಗಿದು ಪೂರ್ವ ವೃತ್ತಾಂತವಂ ।
ಪರಿಯಾಯದಿಂದೆ ಬಿನ್ನವಿಸೆ ತದ್ದೋಷ ಹರಣಾರ್ಥದ ವಿಧಾನಂಗಳಾ ||
ಹಿರಿಯರೆಲ್ಲರು ಪೇಳೆ ಕೈಕೊಂಡ ಹತ್ತು ಸಾ ।
ವಿರ ಹೊನ್ನ ನಾನಾ ವಿಧಾನಂಗಳೋಚಿತವ ।
ಪರುಠವಿಸುವತಿಹಶಿಷ್ಯ ವರದೆ ಗುಡ್ಡಮ್ಮಗಳ ಚರಣಾಂಭುಜಕ್ಕೆ ಶರಣು||೫೦||

ಪರಮಾನುರಾಗದಿಂ ಸಕಲ ಮಂಗಲ ಕಾರ್ಯ ।
ಪರಿಯಾಯುವೆಲ್ಲವುಂ ಪೂರವಿಸೆ ಪುರವೆಯಿಡೆ ।
ಹರುಷದಿಂ ಗುಡಿಗಟ್ಟಿ ವೀಧಿವೀಧಿಯಲಿವಳೆಯದೆ ರಂಗ ವೋಲೆಯಿಂದಾ ||
ವಿರಚಿಸಲು ನಾನಾ ವಿಚಿತ್ರ ಶೃಂಗಾರದಿಂ ।
ಹರ ಭವನಮಂ ಶೃಂಗರಿಸಿ ನೋಡಿ ಹೆಚ್ಚುತಂ ।
ಬರುವ ಹಾರುವ ಶಿಷ್ಯ ವರದೆ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ||೫೧||

ಕಾರಮುಂಬನಿಗಳುಂ ಚಾತಕಂಗಳು ಕುಸುಮ ।
ಸಾರವಮಂ ಭ್ರಮರಾಳಿಯಿಂದು ಕಿರಣಂಗಳು ।
ಕೈರವಂ ಫಲಭರಿತವಾದ ನಂದನವನಂ ಶುಕಪಿಕಂ ಪಾರುವಂತೆ ॥
ಓರಂತೆ ಮನವಾರೆ ಪುರಜನಂ ಪರಿಜನಂ ।
ಕಾರುಣ್ಯಪಡೆದ ಶಿಷ್ಯಾವಳಿಗಳುಂ ಸಹಿತ ।
ವೀರನಾಚಯ್ಯ ಬರಲರಿದ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ||೫೨||

ವೀರನಾಚಯ್ಯಗಳ ಸಹಿತ ಹರುಷದೊಳಲಂ ।
ಪೂರ ಪಶ್ಚಿಮದ ಗೋಪುರದಲ್ಲಿ ಮೆರೆವ ಧವ ।
ಳಾರದೊಳು ತೊಲಗುವ ಬ್ರಹ್ಮೇಶ್ವರಂಗೆ ನಮಿಸುತ್ತ ಷೋಡಶರು ಸಹಿತಾ ॥
ಕಾರುಣ್ಯಸಿಂಧು ಜಯ ಜಯ ಜೀಯ್ಯ ಭವನೋ ।
ದ್ಧರಣನೇ ನಿನ್ನ ನಿಜ ಭುವನವನು ಹೋದುದವ ।
ಧಾರೆನುತ ಪುಷ್ಪಕಕೆ ತಂದ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೫೩॥

ಪೊಡೆವ ನಿಸ್ಸಾಳ ಕೋಟಿಯ ಭೇರಿ ಶಂಖಗಳ ।
ಜಡಿವ ಬಿರುದಿನ ಕಹಳೆಗಳ ನಡುವೆ ಸಂಭ್ರಮಿಸಿ ।
ನಡುವೆ ಮಂಗಳ ಪಾಠಕರ ಗೀತ ನೃತ್ಯಂಗಳಾರುತಿಯು ಸುರ ಸತಿಯರಾ ||
ಕಡುಗಂಪಿ ನೆಸೆವ ಧೂಪದ ಕುಸುಮ ವರುಷದಿಂ ।
ಪೊಡವಿ ಪುಳುಕಿತೆಯಾಗಿ ಸಕಲಗಣ ಸಂಕುಳದ ।
ನಡುವೆ ಬರುತಿರ್ಪ ವರದಾನಿ ಗುಡ್ಡಮ್ಮಗಳ ಚರಣಾಂಬುಜಕ್ಕೆ ಶರಣು ॥೫೪॥

ಬರುತಿರ್ಪ ಗುಡ್ಡಮ್ಮಗಳ ನಿದಿರುಗೊಂಡು ದಾ ।
ಪುರಜನಂ ಕಳಸ ಕನ್ನಡಿ ಛತ್ರ ಚಾಮರದಿ ।
ಪರಿಪರಿಯ ತೋರಣದಿ ನಂದಿಯ ಪತಾಕೆಯಿಂ ವಿವಿಧ ಮಂಗಳ ವಾದ್ಯದಿಂ||
ಹರ ಭವನಮಂ ಪೊಕ್ಕು ನಾನಾ ಮಹೋತ್ಸವಂ ।

ಬೆರಸಿ ಪಂಚಾಮೃತದೊಳಭಿಷೇಕಮಂ ಮಾಡಿ ।
ಹರನನಾಹರಿ ಪೀಠದೊಳು ನಿಲಿಸಿದಂಬಿಕೆಯ ಚರಣಾಂಬುಜಕ್ಕೆಶರಣು॥೫೫॥

ಓರಂತೆ ಮನವಾರೆ ಷೋಡಶರ ಗೂಢತರ ।
ವೀರರಸಮಂ ಧರೆಗೆ ತೋರಿ ಮೆರೆದಪೆನೆಂದು ।
ದಾರ ಧೀರೋತ್ತಮ ಧರ್ಮೇಶ್ವರಂ ಪೀಠದೊಳು ನಿಲ್ಲಲಾರದೊಡನೆ ॥
ಓರಣಿಸಿ ನಿಂದು ಶಸ್ತ್ರಂಗಳಂ ಪಡೆವುತವ ।
ಧಾರೆನುತ ಷೋಡಶ ಶಿರಃ ಕಮಲಮಂ ಶಿವನಿ ।
ಗಾರಾಧಿಸಲು ಮೆಚ್ಚಿ ವರವಿತ್ತ ಶಂಕರನ ಚರಣಾಂಬುಜಕ್ಕೆ ಶರಣು ॥ ೫೬ ॥

ಹರುಷದಿಂ ವೀರ ಗುಡ್ಡಮ್ಮಗಳು ಮೊದಲಾದ ।
ಪರಮ ವೀರ ವ್ರತಾಚಾರ ನಿಷ್ಠಾ ಭಕ್ತಿ ।
ಪರಿಪೂರ್ಣರೆನಿಪ ಷೋಡಶರ ಚರಿತಮನೊಲಿದು ಕೇಳ್ದು ಲಾಲಿಸುವವರಿಗೆ॥
ನಿರುಪಮೈಶ್ವರ್ಯ ಮಾಯುಷ್ಯ ಮಾರೋಗ್ಯ ಮುಮ ।
ವರಶಿವ ಜ್ಞಾನಯುತ ಸದ್ಭಕ್ತಿ ದೊರೆಕೊಂಡು ।
ಪರಶಿವನೊಳೈಕ್ಯವಾಗಿರ್ಪರಂದೊರೆವ ಶಿವ ಚರಣಾಂಬುಜಕ್ಕೆ ಶರಣು॥೫೭॥

ಶಿವಾನುಭವ ಗ್ರಂಥಮಾಲಾ ಸಂ|| ೪

# ಲಿಂಗಪೂಜೆಯ ತತ್ವಗಳು.

ಸಂಪಾದಕರು.

**ರಾ|| ಸಾ|| ಫ. ಗು. ಹಳಕಟ್ಟಿ.**

**ಬಿ. ಏ. ಎಲ್. ಎಲ್. ಬಿ. ವಕೀಲ**

**ವಿಜಾಪುರ.**

೧೯೨೬

**ಬೆಲೆ ೨ ಆಣೆ**

# ಲಿಂಗಪೂಜೆಯ ತತ್ವಗಳು.

"ಉದ್ಧವನೇರುವದಕ್ಕೆ ಗದ್ದುಗೆ ಇಲ್ಲದೆ ಎಯ್ದುಬಾರದು. ಚಿದ್ರೂಪನನರಿವುದಕ್ಕೆ ಪೂಜೆ ಅರ್ಚನೆ ನಿತ್ಯನೇಮವಿಲ್ಲದೆ ಕಾಣಬಾರದು. ಅದನ್ನು ಸತ್ಯದಿಂದ ಮಾಡಿ ಅಸತ್ಯವ ಮರೆದಡೆ ಇದೇ ಸತ್ಯ ನಾಸ್ತಿನಾಥಾ"

ಎಂದು **ಗೊಗ್ಗವ್ವೆಯು** ಹ್ಯಾಗೆ ಒಂದು ಎತ್ತರವಾದ ಸ್ಥಳವನ್ನು ಮುಟ್ಟಲಿಕ್ಕೆ ಒಂದು ಗದ್ದುಗೆಯು ಅವಶ್ಯವೋ ಹಾಗೆ ಪರಮಾತ್ಮನನ್ನು ಮುಟ್ಟಲಿಕ್ಕೆ ಪೂಜೆ ಅರ್ಚನೆಯು ಅವಶ್ಯವೆಂದು ಇಲ್ಲಿ ಹೇಳಿದ್ದಾಳೆ.

ಅದೇಮೇರೆಗೆ **ಶಿವಲೆಂಕ ಮಂಚಣ್ಣನು:-**

ಧರೆಯು ಕೃಷಿ ಶುದ್ಧವಾಗಿಯಲ್ಲದೆ ಸಸಿ ಶುದ್ಧವಲ್ಲ. ಅರ್ಚನೆ ಅರ್ಪಿತ ಧ್ಯಾನದಿಂದಲ್ಲದೆ ಶುದ್ಧವಿಲ್ಲ. ಇದು ನಿಶ್ಚಯ ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವನರಿವುದಕ್ಕೆ.

ಎಂದರೆ ಸಸಿಯು ಚೆನ್ನಾಗಿ ಹುಟ್ಟಬೇಕಾದರೆ ಭೂಮಿಯನ್ನು ಚೆನ್ನಾಗಿ ಹಸನಮಾಡುವದು ಹ್ಯಾಗೆ ಅವಶ್ಯವೋ ಹಾಗೆ ಪರಮಾತ್ಮನನ್ನು ಅರಿಯಬೇಕಾದರೆ ಪೂಜೆಯು ಅವಶ್ಯವೆಂದು ಇಲ್ಲಿ ಹೇಳಿದ್ದಾನೆ.

ಅದೇಮೇರೆಗೆ **ಅಲ್ಲಮ ಪ್ರಭುವು** ಹೇಳಿರುವದೇನಂದರೆ:--

"ಪರುಷವಾದರೂ ಒಂದರಲ್ಲಿರಿಸಬೇಕು. ರತ್ನ ವಿಶೇಷವೆಂದಡೂ ಬಂಧಿಸಿದಲ್ಲಿ ಸಂದಿರಬೇಕು. ಲಿಂಗವ ಹಿಡಿದಿದ್ದಲ್ಲಿ ಪೂಜಿಸುವ ಅಂಗವಿರಬೇಕು. ಆ ಗುಣ ಗುಹೇಶ್ವರ ಲಿಂಗವನರಿದು ಪೂಜೆಯ ಮರೆಯದಿರಲಾಗದು ಚಂದಯ್ಯ"

ಮನುಷ್ಯನು ಎಷ್ಟು ಸುಗುಣಿಯಾಗಿದ್ದರೂ ಕೂಡ, ಹ್ಯಾಗೆ ರತ್ನಕ್ಕೆ ಕುಂದಣವು ಅವಶ್ಯವೋ ಹಾಗೆ ಮೋಕ್ಷವನ್ನು ಹೊಂದಲು ಲಿಂಗಾರ್ಚನೆಯು ಅವಶ್ಯವೆಂಬ ಅಭಿಪ್ರಾಯವು ಇಲ್ಲಿ ಹೇಳಲ್ಪಟ್ಟಿದೆ.

ಉಪಾಸನೆಯು ಇಲ್ಲದಂಥಾ ಯಾವ ಧರ್ಮವೂ ಜಗತ್ತಿನಲ್ಲಿ ಇಲ್ಲ. ಅದರ ಉದ್ದೇಶವು ಪರಮಾತ್ಮನ ನೆನಪನ್ನು ಮಾಡಿಕೊಳ್ಳುವದು ಇರು

ತ್ತದೆ. ಈ ನೆನಪಿನಿಂದ ಮನುಷ್ಯನು ಕೆಡಕಾದವನ್ನು ತ್ಯಜಿಸಿ, ಯಾವದು ಉತ್ಕೃಷ್ಟವೋ ಅದನ್ನು ಸ್ವೀಕರಿಸಲು ಅವನ ಮನಸ್ಸು ಸಿದ್ಧವಾಗುತ್ತದೆ. ಆದ್ದರಿಂದ ಪೂಜೆಯು ಚಿತ್ತಶುದ್ಧಿಗೆ ಕಾರಣವಾಗಿರುತ್ತದೆ. ಅದು ಕಲುಷಿತವಾದ ಮನಸ್ಸನ್ನು ಶಾಂತಗೊಳಿಸುತ್ತದೆ. ಆದ್ದರಿಂದ ಉಪಾಸನೆಗೆ ಪ್ರತಿಯೊಂದು ಧರ್ಮದವರು ಬಹಳ ಮಹತ್ವ ಕೊಟ್ಟಿರುತ್ತಾರೆ. ಅವರು ಈ ಬಗ್ಗೆ ವಿಧಿಗಳನ್ನು ಕಲ್ಪಿಸಿ ಅವುಗಳನ್ನು ಪಾಲಿಸಲೇಬೇಕೆಂದು ಕಠಿಣತರವಾದ ನಿರ್ಬಂಧನೆಗಳನ್ನು ಮಾಡಿರುತ್ತಾರೆ. ಉದಾಹರಣಾರ್ಥವಾಗಿ, ಹಿಂದೂ ಜನರು ಸಂಧ್ಯಾವಂದನೆ ದೇವಪೂಜೆ ಮೊದಲಾದ ಕರ್ಮಗಳನ್ನು ಮಾಡಬೇಕೆಂತಲೂ ಕ್ರಿಶ್ಚನ್ನರು ನಿಯಮಿತ ದಿನಗಳಲ್ಲಿ ಪ್ರಾರ್ಥನಾ ಮಂದಿರಗಳಿಗೆ ಹೋಗಿ ಪರಮಾತ್ಮನನ್ನು ಪ್ರಾರ್ಥಿಸಲೇಬೇಕೆಂತಲೂ ಮುಸಲ್ಮಾನರು ದಿನಾಲು ನಿಯಮಿತ ವೇಳೆಯಲ್ಲಿ ನಮಾಜನ್ನು ಮಾಡಬೇಕೆಂತಲೂ ಒತ್ತಾಯದ ನಿರ್ಬಂಧನೆಗಳು ಮಾಡಲ್ಪಟ್ಟಿವೆ.

ಆದರೆ ಒಂದು ಧರ್ಮದಲ್ಲಿಯ ಉಪಾಸನಾ ಪದ್ಧತಿಗಳು ಮಾತ್ರ ಒಂದೇ ತರದವು ಇರುವದಿಲ್ಲ. ಅವು ಬಹುತರವಾಗಿ ಆ ಧರ್ಮದಲ್ಲಿ ದೇವರ ಸ್ವರೂಪದ ಬಗ್ಗೆ ಯಾವ ವಿಚಾರಗಳು ರೂಢವಾಗಿರುತ್ತವೋ ಅವುಗಳ ಮೇಲೆ ಬಹಳ ಅವಲಂಬಿಸಿವೆ. ಕಾಡು ಜನರು ದೇವರು ಒಬ್ಬ ಬಲಿಷ್ಠನಾದ ಪುರುಷನೆಂದು ಭಾವಿಸುತ್ತಾರೆ. ಆದ್ದರಿಂದ ತಮ್ಮಲ್ಲಿರುವ ಇಂಥವನನ್ನು ಹ್ಯಾಗೆ ಒಲಿಸಬೇಕೆಂದು ಅವರ ವಿಚಾರಗಳು ಇವೆಯೋ ಹಾಗೆಯೇ ಅವರ ಉಪಾಸನಾ ಪದ್ಧತಿಗಳೂ ಆಗಿರುತ್ತವೆ. ಆದ್ದರಿಂದ ಅವರು ಪಶುಗಳನ್ನು ಹಿಂಸಿಸಿ ತಮ್ಮ ದೇವತೆಗೆ ಬಲಿಯನ್ನು ಕೊಡುತ್ತಾರೆ. ಈ ಪದ್ಧತಿಯು ಪೂರ್ವಕಾಲದ ಆರ್ಯರಲ್ಲಿಯೂ ಗ್ರೀಕ ರೋಮನ್ನರಲ್ಲಿಯೂ ಸಹ ರೂಢವಾಗಿತ್ತು. ಆದರೆ ನಮ್ಮ ಹಿಂದುಸ್ತಾನ ದೇಶದಲ್ಲಿ ಈ ಬಗೆಯ ಪದ್ಧತಿಗಳು ಜೈನ ಬೌದ್ಧರ ಪ್ರಭಾವದಿಂದ ಇತ್ತಿತ್ತ ನಿಂತು ಹೋದವು. ಆದರೆ ಅವುಗಳ ಬದಲು ಧಾನ್ಯಾದಿಗಳಿಂದ ಮಾಡಿದ ರುಚಿಕರ ಪದಾರ್ಥಗಳು ಆತನಿಗೆ ಸಮರ್ಪಿಸಲ್ಪಡಹತ್ತಿದವು. ಮುಂದೆ ಪರಮಾತ್ಮನು ಒಬ್ಬ ಮನುಷ್ಯನು ಅಲ್ಲ, ಆತನು ನಿರಾಕಾರನು ಸರ್ವವ್ಯಾಪಿಯು ಆಗಿದ್ದಾನೆ, ಎಂಬಿವೇ ಮೊದಲಾದ ವಿಚಾರಗಳು ಉತ್ಪನ್ನವಾಗ ಹತ್ತಿದವು. ಆಗ ನಮ್ಮ ದೇಶದಲ್ಲಿ ಈ ಮೊದಲಿನ ಉಪಾಸನಾ ಪದ್ಧತಿಗಳು ಹೋಗಿ, ಅವುಗಳ ಬದಲು ಆತನ ಸ್ಮರಣೆ ಮತ್ತು ಧ್ಯಾನಕ್ಕೆ ಜನರು ವಿಶೇಷ ಮಹತ್ವ ಕೊಡ

ಹತ್ತಿದರು. ಆ ಕಾಲಕ್ಕೆ ಹಿಂದುಸ್ಥಾನದಲ್ಲಿ ಯೋಗಾಭ್ಯಾಸದಲ್ಲಿ ಮಹತ್ವದ ಶೋಧಗಳು ಮಾಡಲ್ಪಟ್ಟವು. ವೀರಶೈವರು ಪರಮಾತ್ಮನಿಗೆ ಆಕೃತಿಯು ಇರುವದಿಲ್ಲ, ಆವನು ಸರ್ವವ್ಯಾಪಿಯೂ ಜಗತ್ತಿನಲ್ಲಿಯ ಚರಾಚರ ವಸ್ತುಗಳಲ್ಲಿದ್ದು ಅವುಗಳ ಪ್ರೇರಕನೂ ಆಗಿರುತ್ತಾನೆಂದು ಅವರು ಭಾವಿಸುತ್ತಾರೆ. ಇಷ್ಟೇ ಅಲ್ಲ, ಆತನ ಅಸ್ತಿತ್ವವು ತಮ್ಮಲ್ಲಿಯೇ ಇದೆ ಎಂದು ಭಾವಿಸಿ ಆತನ ಚಿನ್ಹ (ಲಿಂಗ) ವನ್ನು ಅವರು ಧಾರಣ ಮಾಡುತ್ತಾರೆ. ಈ ವಿಚಾರಗಳು ಅವರಲ್ಲಿ ಇರುವದರಿಂದ ಅವರಲ್ಲಿಯ ಉಪಾಸನೆಯ ಪದ್ಧತಿಯು ಒಂದು ವಿಶೇಷ ತರದ ಸ್ವರೂಪವನ್ನು ಹೊಂದಿರುತ್ತದೆ.

ವೀರಶೈವರಲ್ಲಿ ಲಿಂಗ ಪೂಜೆಯ ಉದ್ದೇಶವು ಆತ್ಮಾನುಭಾವವೇ ಮುಖ್ಯವಾಗಿರುತ್ತದೆ. ಅಂದರೆ ಅದರಿಂದ ತನ್ನನ್ನು ತಾನು ತಿಳಿದುಕೊಳ್ಳುವದು ಇರುತ್ತದೆ. ಇದು ದೇವರಿಗೆ ಯೋಗ್ಯವಾದ ಶ್ರೇಷ್ಠ ಗುಣಗಳನ್ನು ತನ್ನಲ್ಲಿ ಬರಮಾಡಿಕೊಳ್ಳುವದರಿಂದಲೇ ಸಾಧ್ಯವು. ವೀರಶೈವರು ದೇವರು ಸ್ವರ್ಗ, ಕೈಲಾಸ ಅಥವಾ ಆಕಾಶ ಇಂಥ ಒಂದು ವಿಶಿಷ್ಟ ಸ್ಥಾನದಲ್ಲಿ ಇದ್ದಾನೆಂದು ತಿಳಿಯುವದಿಲ್ಲ. ಅವನು ಚರಾಚರ ವಸ್ತುವಿನಲ್ಲಿ ಸಂಪೂರ್ಣವಾಗಿ ತುಂಬಿಕೊಂಡಿರುತ್ತಾನೆಂದು ತಿಳಿದಿದ್ದಾರೆ. ಆದರೆ ಆತನು ಅವ್ಯಕ್ತನಾಗಿ ಇದ್ದಾನೆ. ಅವ್ಯಕ್ತಭಾವದಿಂದ ಇದ್ದ ಆತನನ್ನು ತನ್ನಲ್ಲಿ ವ್ಯಕ್ತಗೊಳಿಸುವದೇ ಮನುಷ್ಯನ ಕರ್ತವ್ಯವು. ಈ ಉದ್ದೇಶಕ್ಕೆ ಸಹಾಯಕವಾಗಿರುವ ಕರ್ಮಗಳನ್ನು ಮಾಡುವದೇ ಲಿಂಗ ಪೂಜೆಯು. ದೇವರ ದಾಸಿಮಯ್ಯನೆಂಬ ಶರಣನು ಪರಮಾತ್ಮನ ಸ್ವರೂಪದ ಬಗ್ಗೆ ಅನ್ನುವದೇನಂದರೇ--

> **ಮರದೊಳಗಿನ ಮಂದಾಗ್ನಿಯ ಉರಿಯದಂತಿರಿಸಿದೆ, ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ. ಶರೀರದೊಳಗಾತ್ಮನ ಕಾಣದಂತೆ ಇರಿಸಿದೆ. ನೀಬೆರಿಸುವ ಭೇದಕ್ಕೆ ಬೆರಗಾದೆನ್ನೆ ರಾಮನಾಥಾ.**

ಇದರಲ್ಲಿ ಪರಮಾತ್ಮನು ಅವ್ಯಕ್ತವಾಗಿ ಮನುಷ್ಯನಲ್ಲಿ ಹ್ಯಾಗೆ ವ್ಯಾಪಿಸಿರುತ್ತಾನೆಂಬದನ್ನು ಈ ಶಿವಶರಣನು ಬಹು ಸುಂದರವಾಗಿ ಇಲ್ಲಿ ವರ್ಣಿಸಿದ್ದಾನೆ. ಹೀಗೆ ಅವ್ಯಕ್ತವಾಗಿ ವಾಸಿಸುವ ಪರಮಾತ್ಮನನ್ನು ತನ್ನಲ್ಲಿ ವ್ಯಕ್ತಗೊಳಿಸಬೇಕೆಂದು ಗುರುವು ಭಕ್ತನಿಗೆ ಲಿಂಗಧಾರಣವನ್ನು ಮಾಡುವನು. ಲಿಂಗಧಾರಣೆ ಮಾಡುವ ಕಾಲಕ್ಕೆ ಗುರುವು ಶಿಷ್ಯನಿಗೆ ಬೋಧಿಸುವ ಉಪದೇಶದ ಅರ್ಥವು ಇದೇ ಇರುತ್ತದೆ. ಹೀಗೆ ಗುರುವು ಬೋಧಿಸಿದ ಪ್ರಕಾರ

ಲಿಂಗದ ಗುಣಗಳನ್ನು ತನ್ನಲ್ಲಿ ಪ್ರಕಟ ಪಡಿಸುವದೇ ಲಿಂಗಪೂಜೆಯ ಮುಖ್ಯ ಉದ್ದೇಶವಾಗಿದೆ.

ಪ್ರತಿಯೊಬ್ಬ ಮನುಷ್ಯನಿಗೆ ಮೂರು ಶರೀರಗಳಿರುತ್ತವೆ. ಅವು ಯಾವವೆಂದರೆ ಸ್ಥೂಲ, ಸೂಕ್ಷ್ಮ, ಕಾರಣ. ಈ ಮೂರೂ ಶರೀರಗಳ ವ್ಯಾಪಾರಗಳು ಸರಿಯಾಗಿ ನಡೆದರೆ ಮಾತ್ರ ಅವನಿಂದ ಕಾರ್ಯಗಳು ಆಗುತ್ತವೆ. ಈ ಶರೀರಗಳು ಒಂದಕ್ಕೊಂದು ಪರಸ್ಪರಾವಲಂಬಿಗಳು ಅವೆ. ಒಂದು ಶರೀರದ ಕಾರ್ಯವು ಕೆಟ್ಟರೆ. ಮತ್ತೊಂದು ಸರಿಯಾಗಿ ವ್ಯವಹರಿಸಲಾರದು. ಶರೀರದ ಬಾಹ್ಯ ಕ್ರಿಯೆಗಳು ಸ್ಥೂಲ ಶರೀರದಿಂದ ಆಗುತ್ತವೆ. ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ವ್ಯವಹರಿಸುವ ಶರೀರವು ಸೂಕ್ಷ್ಮ ಶರೀರವು. ಈ ಸೂಕ್ಷ್ಮ ಶರೀರದ ಸಹಾಯವಿಲ್ಲದೆ ಸ್ಥೂಲ ಶರೀರವು ವ್ಯವಹರಿಸಲಾರದು. ಈ ಎರಡೂ ಶರೀರಗಳಿಗೆ ಚೈತನ್ಯ ಕೊಡುವಂಥ ಮೂರನೆಯದೊಂದು ಶರೀರವಿದ್ದು ಅದಕ್ಕೆ ಕಾರಣ ಶರೀರವೆಂಬ ಹೆಸರು. ಈ ಮೂರೂ ಶರೀರಗಳ ಸಹಾಯದಿಂದ ಮನುಷ್ಯನ ಕಾರ್ಯಗಳು ಜಗತ್ತಿನಲ್ಲಿ ಸಾಗುತ್ತವೆ. ಆದ್ದರಿಂದ ಈ ಮೂರೂ ಶರೀರಗಳಲ್ಲಿ ಲಿಂಗವನ್ನು ಚೈತನ್ಯಗೊಳಿಸಿದ ಹೊರ್ತು ಆತನು ಪರಮಾತ್ಮನನ್ನು ಅರಿಯಲಾರನು. ಸ್ಥೂಲ ಶರೀರದಲ್ಲಿ ಪ್ರಜ್ವಲಿಸತಕ್ಕ ಲಿಂಗಕ್ಕೆ ಇಷ್ಟಲಿಂಗವೆಂತಲೂ ಸೂಕ್ಷ್ಮಶರೀರದಲ್ಲಿ ಪ್ರಜ್ವಲಿಸತಕ್ಕ ಲಿಂಗಕ್ಕೆ ಪ್ರಾಣಲಿಂಗವೆಂತಲೂ ಕಾರಣ ಶರೀರದಲ್ಲಿ ಪ್ರಜ್ವಲಿಸತಕ್ಕ ಲಿಂಗಕ್ಕೆ ಭಾವಲಿಂಗವೆಂತಲೂ ವಚನಕಾರರು ಹೆಸರುಗಳನ್ನು ಕೊಟ್ಟಿರುವರು. ಎಂದರೆ ಇಷ್ಟಲಿಂಗವು ಬಾಹ್ಯ ಕ್ರಿಯೆಗಳಿಗೆ ಸಂಬಂಧಿಸಿದಂಥಾದ್ದು, ಪ್ರಾಣಲಿಂಗವು ಮನಸ್ಸಿಗೆ ಸಂಬಂಧ ಪಟ್ಟಂಥಾದ್ದು, ಭಾವಲಿಂಗವು ಇವೆಲ್ಲವುಗಳಿಗೂ ಕಾರಣವಾದ ಕಾರಣ ಶರೀರಕ್ಕೆ ಸಂಬಂಧ ಪಟ್ಟಂಥಾದ್ದು ಇರುತ್ತದೆ. ಈ ಮೂರೂ ಶರೀರಗಳ ವ್ಯಾಪಾರಗಳು ಲಿಂಗ ಚೈತನ್ಯಪೂರ್ಣವಾಗಿ ಮಾಡುವದೇ ಲಿಂಗ ಪೂಜೆಯ ಮುಖ್ಯ ತತ್ವವಿರುತ್ತದೆ. ಈ ದೃಷ್ಟಿಯಿಂದ ಪೂಜಾರ್ಚನೆಗಳನ್ನು ಮಾಡುವದೇ ವೀರಶೈವನ ಕರ್ತವ್ಯವಾಗಿದೆ. ಕೇವಲ ಅಷ್ಟವಿಧಾರ್ಚನೆ ಷೋಡಶೋಪಚಾರಗಳನ್ನು ಲಿಂಗ ಪೂಜೆಯ ನಿಜವಾದ ಮರ್ಮವನ್ನು ಅರಿಯದೆ ಮಾಡಿದ್ದಾದರೆ, ಅದರಿಂದ ಏನೂ ಪ್ರಯೋಜನವಾಗಲಾರದು. ಈ ರೀತಿಯಾಗಿ ನಿರರ್ಥಕ ಪೂಜೆ ಮಾಡುವವರನ್ನು ವಚನಕಾರರು ಬಹಳ ಹಳಿದಿದ್ದಾರೆ. ಈ ಬಗ್ಗೆ ಬಸವೇಶ್ವರನು ಅನ್ನುವದೇನಂದರೆ:—

ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವ ಹವ್ಯಾಸನಲ್ಲಿ ಬೆಂದೆನಯ್ಯಾ. ಗುರುವೆಂದರಿಯೆ ಲಿಂಗವೆಂದರಿಯೆ ಜಂಗಮವೆಂದರಿಯೆ ಪ್ರಸಾದವೆಂದರಿಯೆ. ಆನು ಬೆಂದೆನಯ್ಯಾ. ಕೂಡಲ ಸಂಗಮದೇವ ಆನು ಮಾಡುವದೆಲ್ಲ ಬರಿಯ ಉಪಚಾರವಯ್ಯ.

ಬಂಡಿತುಂಬ ಪತ್ರಿಯ ತಂದು ಕಂಡ ಕಂಡಲ್ಲಿ ಮಜ್ಜನಕ್ಕೆರೆವರಯ್ಯ ತಾಪತ್ರಯವ ಕಳೆದು ಪೂಜಿಸಿ, ತಾಪತ್ರಯವ ಲಿಂಗನೊಲ್ಲ. ಕೂಡಲಸಂಗಮ ದೇವ ಬರಿಯ ಉದಕದಲ್ಲಿ ನೆನೆವನೆ?

ಈ ಮೇರೆಗೆ ಕ್ರಮಪಟ್ಟು ಲಿಂಗ ಪೂಜೆಯನ್ನು ಮಾಡುವದು ವ್ಯರ್ಥವೆಂದು ಬಸವೇಶ್ವರನು ಹೇಳಿದ್ದಾನೆ. ಲಿಂಗ ಪೂಜೆಯ ಕ್ರಮದಲ್ಲಿ ಗುರು, ಲಿಂಗ, ಜಂಗಮ, ಪ್ರಸಾದವೆಂದರೇನು ಎಂಬುದನ್ನು ತಿಳಿದು ಪೂಜೆಯನ್ನು ಮಾಡಬೇಕೇ ಹೊರ್ತು ಬರೇ ಮೇಲಿನ ಉಪಚಾರಗಳನ್ನು ಮಾಡುತ್ತ ತಾಸುಗಟ್ಟಲೇ ಲಿಂಗದ ಮೇಲೆ ನೀರನ್ನು ಹಣಿಸುತ್ತ ಕೂಡುವದರಿಂದ ಪರಮಾತ್ಮನು ಎಂದೂ ಒಲಿಯಲಾರನೆಂದು ಇಲ್ಲಿ ಹೇಳಿದ್ದಾನೆ.

ಆದ್ದರಿಂದ ಈ ಮೂರು ಲಿಂಗಗಳ ಪೂಜೆಯ ಮಾರ್ಗವನ್ನು ಅರಿಯುವದು ಅತ್ಯಂತ ಅವಶ್ಯವಾಗಿರುತ್ತದೆ. ಪ್ರತಿಯೊಬ್ಬ ವೀರಶೈವನು ಇದನ್ನರಿತು ಆಚರಿಸಲಿಕ್ಕೇಬೇಕು. ಈ ಬಗ್ಗೆ ಅನೇಕ ವಚನಗಳುಂಟು. ಅವುಗಳಲ್ಲೊಂದನ್ನು ನಾವು ಇಲ್ಲಿ ಉದಾಹರಿಸುತ್ತೇವೆ.

"ಇಷ್ಟಲಿಂಗದ ಪೂಜೆಯಾವದು ಪ್ರಾಣಲಿಂಗದ ಪೂಜೆಯಾವದು ಭಾವಲಿಂಗದ ಪೂಜೆಯಾವದು ಹೇಳಿಹೆ ಕೇಳಿರಯ್ಯ. ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಮಾಡುವದು, ಅದು ಇಷ್ಟಲಿಂಗದ ಪೂಜೆ. ಆ ಲಿಂಗವ ಮನಸ್ಸಿನಲ್ಲಿ ಧ್ಯಾನಿಸಿ ಮನೋಮಧ್ಯದಲ್ಲಿಪ್ಪ ನಿಃಕಲ ಬ್ರಹ್ಮವನುಧ್ಯಾನವೆಂಬ ಹಸ್ತದಲ್ಲಿ ಹಿಡಿದು ಕರಸ್ಥಲದಲ್ಲಿಪ್ಪ ಲಿಂಗದ ಗೊತ್ತಿನಲ್ಲಿ ಕಟ್ಟಿ ನಿಲಿಸುವದೀಗ ಪ್ರಾಣಲಿಂಗದ ಪೂಜೆ. ಮನಸ್ಸು ತಲ್ಲಿಂಗದಲ್ಲಿ ಲೀಯವಾಗಿ ನಚ್ಚು ಮೆಚ್ಚು ಅಚ್ಚೊತ್ತಿ ಅಗಲದಿಪ್ಪುದೀಗ ಭಾವಲಿಂಗದ ಪೂಜೆ. ಇವು ಮೂರು ಲಿಂಗದ ಅರ್ಚನೆಯೇ ಮೂರು ಲಿಂಗದ ಉಪಚಾರ ಶಿವಾರ್ಚಕರಾದ ವೀರಶೈವರು ಮಾಡುವ ಲಿಂಗಾರ್ಚನೆಯ ಕ್ರಮವೆಂದು ಹೇಳಲ್ಪಟ್ಟಿತಯ್ಯ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ [ತೋಂಟದಾರ್ಯ]

ಇನ್ನೊಬ್ಬ ವಚನಕಾರನು ಅನ್ನುವದೇನಂದರೆ:-

ಇಷ್ಟಲಿಂಗದಲ್ಲಿ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಂ ಮಾ

**ಡುವದು ಇಷ್ಟಲಿಂಗದ ಪೂಜೆ ಆ ಲಿಂಗವನು ಮನಸ್ಸಿನಲ್ಲಿ ಧ್ಯಾನಿಸುವುದೇ ಪ್ರಾಣಲಿಂಗದಪೂಜೆ. ಅಪ್ರಮಾಣ ಕೂಡಲಸಂಗಮದೇವಾ. ಉಪ್ಪು ಉದಕವ ಬೆರಿಸಿದಂತೆ ವಾರಿಕಲ್ಲು ವಾರಿಯ ಬೆರಿಸಿದಂತೆ ಕರ್ಪುರ ಅಗ್ನಿಯ ಬೆರಿಸಿದಂತೆ ಮನ ಲಿಂಗದಲ್ಲಿ ಲೀಯ್ಯವಾಗಿಹುದು ಭಾವಲಿಂಗ ಪೂಜೆ ನೋಡಾ ಅಪ್ರಮಾಣ ಕೂಡಲಸಂಗಮದೇವಾ.**

ಈ ವಚನಗಳ ಮೇಲಿಂದ ಬಾಹ್ಯೋಪಚಾರಗಳು ಇಷ್ಟಲಿಂಗದ ಪೂಜೆ ಎಂತಲೂ ಪರಮಾತ್ಮನ ಧ್ಯಾನವು ಪ್ರಾಣಲಿಂಗದ ಪೂಜೆ ಎಂತಲೂ ಆತನನ್ನು ಬೆರೆದುಕೊಂಡು ಏಕಾಕಾರವಾದ ಮನಸ್ಸಿನಿಂದಿರುವದು ಭಾವಲಿಂಗದ ಪೂಜೆ ಎಂತಲೂ ಸ್ಥೂಲರೀತಿಯಿಂದ ಅವರು ಇಲ್ಲಿ ಹೇಳಿದ್ದಾರೆ. ಈ ಮೂರೂ ಕಾರ್ಯಗಳನ್ನು ಯಾವ ವಿಧವಾದ ರೀತಿಯಿಂದ ಲಿಂಗಪೂಜೆಯಲ್ಲಿ ನೆರವೇರಿಸಬೇಕೆಂಬುದನ್ನು ನಾವು ತಿಳಿದುಕೊಳ್ಳುವದು ಅವಶ್ಯವದೆ.

ಈ ಸಂಗತಿಯನ್ನು ಕೊನೆಗಾಣಿಸಲು ವಚನಕಾರರು ಈ ಮೂರು ಲಿಂಗಗಳಲ್ಲಿ ಪ್ರತಿಯೊಂದರಲ್ಲಿ ಎರಡೆರಡು ಭಾಗಮಾಡಿ, ಒಟ್ಟಿಗೆ ಆರು ಲಿಂಗಗಳನ್ನು ಮಾಡಿದ್ದಾರೆ. ಆ ಆರು ಲಿಂಗಗಳ ಆಚರಣೆಗಳನ್ನು ಒಳಕೊಂಡರೆ, ಮೇಲ್ಕಂಡ ಮೂರೂ ಲಿಂಗಗಳು ಸಾಧ್ಯವಾಗುವವೆಂದು ಅವರ ಅಭಿಪ್ರಾಯವದೆ. ಈ ಆರು ಲಿಂಗಗಳು ಯಾವವೆಂದರೆ:--

ಇಷ್ಟಲಿಂಗದಲ್ಲಿ ಆಚಾರಲಿಂಗ ಗುರುಲಿಂಗವೆಂತಲೂ, ಪ್ರಾಣಲಿಂಗದಲ್ಲಿ ಶಿವಲಿಂಗ ಚರಲಿಂಗವೆಂತಲೂ, ಭಾವಲಿಂಗದಲ್ಲಿ ಪ್ರಸಾದಲಿಂಗ ಮಹಾಲಿಂಗವೆಂತಲೂ ಆರು ವಿಭಾಗಗಳು ಮಾಡಲ್ಪಟ್ಟಿವೆ. ಷಟ್‌ಸ್ಥಲ ಶಾಸ್ತ್ರದಲ್ಲಿ ಈ ಆರು ಲಿಂಗಗಳ ವ್ಯಾಖ್ಯೆಗಳು ಸವಿಸ್ತಾರವಾಗಿ ಮಾಡಲ್ಪಟ್ಟಿವೆ. ಆದರೆ ಪ್ರಸ್ತುತದಲ್ಲಿ ಲಿಂಗಪೂಜೆಯ ದೃಷ್ಟಿಯಿಂದ ಈ ಆರುಲಿಂಗಗಳ ಅರ್ಥವನ್ನು ತಿಳಿಯುವದು ಅವಶ್ಯವದೆ. ಈ ಆರು ಲಿಂಗಗಳ ಅರ್ಥವು ಮಿಶ್ರಾರ್ಪಣ ಗ್ರಂಥದಲ್ಲಿ ಕೆಳಗೆ ಬರೆದ ಪ್ರಕಾರ ವಿವರಿಸಲ್ಪಟ್ಟಿರುತ್ತದೆ.

**ಪಂಚಾಕ್ಷರ ಸ್ವರೂಪವಾದ ಆಚಾರಲಿಂಗ, ಮಂತ್ರ ಮೂರ್ತಿಯಾದ ಗುರುಲಿಂಗ, ಪರಮಪ್ರಕಾಶಸ್ವರೂಪವಾದ ಶಿವಲಿಂಗ, ಯಜನಸ್ವರೂಪವಾದ ಚರಲಿಂಗ, ಈಳನ ಸ್ವರೂಪವಾದ ಪ್ರಸಾದಲಿಂಗ, ಬೋಧಾಸ್ವರೂಪವಾದ ಮಹಾಲಿಂಗವಾಗಿ ನೆಲೆಗೊಂಡಿಪ್ಪದು.**

ಮೇಲ್ಕಂಡ ಉಕ್ತಿಯಲ್ಲಿ ಪೂಜಾದೃಷ್ಟಿಯಿಂದ ಈ ಆರು ಲಿಂಗಗಳ

ಸ್ವರೂಪವು ಹೇಳಲ್ಪಟ್ಟಿದೆ. ಇದನ್ನು ತಿಳಿದುಕೊಂಡು ಈ ಆರು ಲಿಂಗಗಳನ್ನು ತನ್ನಲ್ಲಿ ಪ್ರಜ್ವಲಿಸುವದೇ ಈ ಷಟ್‌ಸ್ಥಲಾತ್ಮಕವಾದ ಲಿಂಗಪೂಜೆಯ ವಿವರವಿರುತ್ತದೆ.

**ಆಚಾರಲಿಂಗ:**--ಆಚಾರಲಿಂಗವು ಪಂಚಾಚಾರ ಸ್ವರೂಪವೆಂದು ಇಲ್ಲಿ ಹೇಳಲ್ಪಟ್ಟಿದೆ. ಸದಾಚಾರ ಭೃತ್ಯಾಚಾರ ಶಿವಾಚಾರ ನಿಯತಾಚಾರ ಗಣಾಚಾರ ಇವು ಪಂಚಾಚಾರಗಳು. ಈ ಪಂಚಾಚಾರಗಳನ್ನು ದೃಢಪಡಿಸುವವರಿಂದ ಮನುಷ್ಯನ ನೀತಿನಡತೆಗಳು ಶುದ್ಧವಾಗುವವು. ಹೀಗೆ ಶುದ್ಧವಾದಹಾಗೆ ಅವನಲ್ಲಿ ಆಚಾರಲಿಂಗದ ಸ್ವಭಾವವು ನೆಲೆಗೊಳ್ಳ ಹತ್ತುತ್ತದೆ. ಲಿಂಗಪೂಜೆಯನ್ನು ಮಾಡುವವನು ಶುದ್ಧನಡತೆಯುಳ್ಳವನಾಗಿರುವದು ಅತ್ಯಂತ ಅವಶ್ಯವಿರುತ್ತದೆಂದು ತೋರಿಸಲು ಆಚಾರಲಿಂಗದ ವ್ಯಾಖ್ಯೆಯನ್ನು ವಚನಕಾರರು ಹೀಗೆ ಮಾಡಿರುವರು. ಈ ದೃಷ್ಟಿಯಿಂದ ನಾವು ವಿಚಾರಿಸಿದರೆ ಶುದ್ಧಾಚಾರ ವರ್ತನೆಯುಳ್ಳವನು ಯಾವಾಗಲೂ ಆಚಾರಲಿಂಗದ ಪೂಜೆಯಲ್ಲಿಯೇ ಮಗ್ನನಾಗಿರುತ್ತಾನೆಂದು ಹೇಳಬಹುದು. ಆದರೆ ನಿತ್ಯದ ಪೂಜಾಕ್ರಿಯೆಗಳಲ್ಲಿ ಈ ಆಚಾರಲಿಂಗದ ಸ್ಥಾನವನ್ನು ವಚನಕಾರರು ಎಲ್ಲಿ ಇಟ್ಟಿರುವರೆಂಬದನ್ನು ತಿಳಿಯುವದು ಅವಶ್ಯವಿದೆ. ನಾನು ಈ ಲೇಖದಲ್ಲಿ ಲಿಂಗಪೂಜೆಯ ೨ ವಚನಗಳನ್ನು ಕೊಟ್ಟಿರುತ್ತೇನೆ. ಅವುಗಳಮೇಲಿಂದ ಆಚಾರಲಿಂಗದ ಪೂಜೆಯನ್ನು ಪೂಜೆಯ ಪೂರ್ವದಲ್ಲಿ ತನ್ನ ದೇಹಶುದ್ಧಿಗೋಸ್ಕರ ಮಾಡುವ ಕ್ರಿಯೆಗಳಲ್ಲಿ ಎಂದರೆ ಸ್ಥಲಸಮ್ಮಾರ್ಜನೆ, ಸ್ನಾನ, ಪದಾರ್ಥ ಶುದ್ಧಿ, ವಿಭೂತಿ ರುದ್ರಾಕ್ಷಿಧಾರಣ, ಪ್ರಣವ ಸಂಬಂಧ, ಕರನ್ಯಾಸ ಅಂಗನ್ಯಾಸ ಇಂಥ ಕ್ರಮಗಳಲ್ಲಿ ಇಟ್ಟಿರುವರೆಂದು ತಿಳಿದುಬರುತ್ತದೆ. ಆದ್ದರಿಂದ ಲಿಂಗಪೂಜಾ ಕಾಲದಲ್ಲಿ ಈ ಕಾರ್ಯಗಳನ್ನು ಮಾಡುವದರಲ್ಲಿಯೇ ಆಚಾರಲಿಂಗದ ಪ್ರಜ್ವಲನೆಯು ಇರುತ್ತದೆ. ಇದು ಯೋಗ್ಯವಿರುತ್ತದೆ. ಈ ರೀತಿಯಾಗಿ ವರ್ತಿಸುವದರಿಂದ ಮನುಷ್ಯನ ದೇಹ ಮತ್ತು ಮನಸ್ಸು ಒಂದುತರದ ನಿರ್ಮಲತೆಯನ್ನು ಹೊಂದಿ ನಿತ್ಯದ ಕ್ರಿಯೆಗಳನ್ನು ಶುದ್ಧವಾದ ರೀತಿಯಿಂದ ಮಾಡಲು ಉತ್ಸಾಹ ಭರಿತನಾಗುತ್ತಾನೆ. ಇದನ್ನು ಪ್ರತಿಯೊಬ್ಬನು ಪ್ರಯೋಗದಿಂದ ತಿಳಿದುಕೊಳ್ಳಬಹುದು. ಇದು ಆಚಾರಲಿಂಗದ ಸಾಧನೆಯು. ಇದುಭಕ್ತಸ್ಥಲವು.

**ಗುರುಲಿಂಗ:**--ಗುರುಲಿಂಗವು ಮಂತ್ರಮೂರ್ತಿಯೆಂದು ಮೇಲ್ಕಂ

ಡ ವಚನದಲ್ಲಿ ಹೇಳಿದೆ ಗುರುವು ದೀಕ್ಷೆಯ ಕಾಲದಲ್ಲಿ ಭಕ್ತನಿಗೆ ಮಂತ್ರೋಪದೇಶವನ್ನು ಮಾಡುತ್ತಾನೆ. ಇದರ ಪ್ರಭಾವದಿಂದ ಆ ಶಿಷ್ಯನು ಗುರುವಿನ ಶ್ರೇಷ್ಠತರದ ಚೈತನ್ಯಗಳನ್ನು ಒಳಕೊಳ್ಳುತ್ತಾನೆ. ಆದ್ದರಿಂದ ಶಿಷ್ಯನು ಗುರುವಿನ ಮಗನೆಂದು ಭಾವಿಸುವದುಂಟು. ಹೀಗೆ ಉಪದೇಶಿಸಲ್ಪಟ್ಟ ಮಂತ್ರವನ್ನು ಧ್ಯಾನಿಸುವದು ಶಿಷ್ಯನ ಕರ್ತವ್ಯವು. ಈ ಕ್ರಿಯೆಯಿಂದ ಭಕ್ತನಲ್ಲಿಯು ಲೈಂಗಿಕ ಗುಣಗಳು ಬೆಳೆಯುತ್ತ ಹೋಗುತ್ತವೆ. ಹೀಗೆ ಗುರುಮಂತ್ರ ಜಪಿಸುವದರಿಂದ ಗುರುಲಿಂಗವು ಪೂಜಕನಲ್ಲಿ ಪ್ರಜ್ವಲಿಸುತ್ತ ಹೋಗುತ್ತದೆ. ಇದೇ ಗುರುಲಿಂಗವನ್ನು ಒಳಕೊಳ್ಳುವ ರೀತಿಯು. ಇದು ಲಿಂಗಪೂಜೆಯ ಎರಡನೇ ಭಾಗವು, ಮಹೇಶ್ವರ ಸ್ಥಲಕ್ಕೆ ಸಂಬಂಧಿಸಿದಂಥಾದ್ದು.

ಈ ಎರಡು ಕ್ರಿಯೆಗಳು ಮನುಷ್ಯನ ಸ್ಥೂಲಶರೀರಕ್ಕೆ ಸಂಬಂಧಪಟ್ಟವಿರುತ್ತವೆ. ಇವರಿಂದ ಅವನ ಬಹಿರಂಗ ಕ್ರಿಯೆಗಳು ಶುದ್ಧವಾಗುತ್ತ ಹೋಗುತ್ತವೆ. ಮತ್ತು ಇಷ್ಟ ಲಿಂಗವು ಪೂಜಕನಲ್ಲಿ ಜಾಗ್ರತೆಯನ್ನು ಹೊಂದುತ್ತ ಹೋಗುತ್ತದೆ.

**ಶಿವಲಿಂಗ:**--ಶಿವಲಿಂಗವು ಪರಮ ಪ್ರಕಾಶ ಸ್ವರೂಪವೆಂದು ಮೇಲ್ಕಂಡ ವಚನದಲ್ಲಿ ಹೇಳಿದೆ. ಈ ಲಿಂಗವು ಮನಸ್ಸಿಗೆ ಸಂಬಂಧಪಟ್ಟದ್ದಿರುತ್ತದೆ. ಇಷ್ಟ ಲಿಂಗವನ್ನು ಭಕ್ತನು ಕರಕಮಲದಲ್ಲಿಟ್ಟುಕೊಂಡು ಅದನ್ನು ಏಕಚಿತ್ತದಿಂದ ಅದರ ಮೇಲೆ ದೃಷ್ಟಿಯನ್ನಿಟ್ಟು ಧ್ಯಾನಿಸುವದರಿಂದ ಪ್ರಕಾಶ ಸ್ವರೂಪವಾದ ಈ ಶಿವಲಿಂಗವು ಭಕ್ತನಿಗೆ ದೃಗ್ಗೋಚರವಾಗಹತ್ತುತ್ತದೆ. ಈ ಪ್ರಕಾಶವನ್ನು ಸಾಧಿಸುವದೇ ತನ್ನಲ್ಲಿ ಶಿವಲಿಂಗವನ್ನು ಪ್ರಜ್ವಲಗೊಳಿಸುವ ಕ್ರಮವಿರುತ್ತದೆ. ಈ ಕ್ರಿಯೆಯನ್ನು ಅನುಸರಿಸುವದರಿಂದ ಮನುಷ್ಯನು ತನ್ನ ಚಿತ್ತವನ್ನು ನಿಗ್ರಹಿಸಲು ಸಮರ್ಥನಾಗುತ್ತಾನೆ. ಮತ್ತು ಪರಮಾತ್ಮನಲ್ಲಿ ಧ್ಯಾನೈಕತತ್ಪರನಾಗಲು ಶಕ್ತನಾಗುತ್ತಾನೆ. ಇದು ಲಿಂಗಪೂಜೆಯ ಮೂರನೇ ಭಾಗವಿರುತ್ತದೆ. ಇದು ಶಿವಲಿಂಗ ಸಾಧನೆಯು. ಇದು ಪ್ರಸಾದಿಸ್ಥಲವು.

**ಚರಲಿಂಗ ಅಥವಾ ಜಂಗಮ ಲಿಂಗ:**- ಚರಲಿಂಗವು ಯಜನ ಸ್ವರೂಪವೆಂನು ಮೇಲ್ಕಂಡ ವಚನದಲ್ಲಿ ಹೇಳಲ್ಪಟ್ಟಿದೆ. ಎಂದರೆ ಅರ್ಚನೆ, ಪೂಜೆ ಇವರಿಂದ ಸಾಧ್ಯವಾಗುವದೆಂದು ಹೇಳಲ್ಪಟ್ಟಿದೆ. ನಿಜವಾಗಿ ಅರ್ಚನೆ ಪೂಜನೆಯಿಂದ ಪ್ರಪಂಚದಲ್ಲಿ ವ್ಯಗ್ರವಾದ ಮನುಷ್ಯನ ಮನಸ್ಸು ಪರ

ಮಾತ್ಮನತ್ತ ಹೊರಳುವದು. ಅದು ಮನುಷ್ಯನ ಮನಸ್ಸಿನ ಚಂಚಲತೆಯ ನ್ನು ದೂರಮಾಡುವದು. ಆದ್ದರಿಂದ ಇದು ಮನಶ್ಶುದ್ಧಿಗೆ ಕಾರಣವು. ಈ ರೀತಿಯ ಕ್ರಿಯೆಗಳಿಂದ ಮನಸ್ಸಿನಲ್ಲಿ ಮೊದಲು ನೆಲೆಗೊಂಡ ಶಿವ ಲಿಂಗವು ಮತ್ತಿಷ್ಟು ಧೃಢತೆಯನ್ನು ಹೊಂದಲಿಕ್ಕೆ ಕಾರಣವಾಗುವದು. ಹೀಗೆ ಪ್ರಸಾದಿ ಸ್ಥಲದಲ್ಲಿ ಮೂಡಿದ ಶಿವಲಿಂಗವು ಪ್ರಾಣಲಿಂಗವಾಗುವದು. ಆದ್ದರಿಂದ ವಚನಕಾರರು ಈ ಪೂಜಾ ಅರ್ಚನೆಗಳನ್ನು ಪ್ರಾಣಲಿಂಗಿ ಸ್ಥಲಕ್ಕೆ ಸೇರಿಸಿದಹಾಗೆ ತೋರುತ್ತದೆ.

ಈ ಪ್ರಕಾರ ಶಿವಲಿಂಗ ಮತ್ತು ಚರಲಿಂಗಗಳನ್ನು ತನ್ನಲ್ಲಿ ಪ್ರಜ್ವ ಲಗೊಳಿಸುವದೇ ಪ್ರಾಣಲಿಂಗದ ಪೂಜೆಯು ಎಂದು ಎನಿಸುವದು.

**ಪ್ರಸಾದಲಿಂಗ:**--ಪ್ರಸಾದ ಲಿಂಗವು ಐದನೇ ಲಿಂಗವಾಗಿದೆ. ಇದು ಈಳನ ಸ್ವರೂಪವೆಂದು ಮೇಲ್ಕಂಡ ವಚನದಲ್ಲಿ ಹೇಳಲ್ಪಟ್ಟಿದೆ. ಈಳನ ವೆಂದರೆ ಪರಮಾತ್ಮನ ಗುಣ ಕೀರ್ತನೆಗಳನ್ನು ಮಾಡುವದು. ಹೀಗೆ ಪ್ರಾರ್ಥನೆ ಮಾಡುವ ಕಾರ್ಯವನ್ನು ವಚನಕಾರರು ಐದನೇಸ್ಥಲವಾದ ಶರಣಸ್ಥಲಕ್ಕೆ ಹಾಕಿದ್ದಾರೆ. ಇದರಮೇಲಿಂದ ಪರಮಾತ್ಮನನ್ನು ಪ್ರಾರ್ಥಿ ಸುವ ಕಾರ್ಯಕ್ಕೆ ವಚನಕಾರರು ಎಷ್ಟು ಮಹತ್ವ ಕೊಟ್ಟಿರುವರೆಂಬದು ತಿಳಿದುಬರುತ್ತದೆ. ಯಾಕಂದರೆ ಈ ರೀತಿಯಾಗಿ ಪ್ರಾರ್ಥಿಸುವವನು ಪರ ಮಾತ್ಮನಿಗೆ ತನ್ನ ಸರ್ವಸ್ವವನ್ನು ಒಪ್ಪಿಸಿ ಭಕ್ತಿಯಿಂದ ತುಂಬಿತುಳುಕ ವಂಥವನಾಗಿರಬೇಕಾಗುತ್ತದೆ. ಈತನು ಶರಣನು. ಇದು ಲಿಂಗಪೂಜೆಯ ಐದನೇ ಭಾಗವು. ಇದರಿಂದ ಪ್ರಸಾದಲಿಂಗವು ಪ್ರಜ್ವಲಿಸುತ್ತ ಹೋಗು ತ್ತದೆ.

**ಮಹಾಲಿಂಗ:**— ಮಹಾಲಿಂಗವು ಬೋಧಾಸ್ವರೂಪವೆಂದು ಮೇ ಲ್ಕಂಡ ವಚನದಲ್ಲಿ ಹೇಳಲ್ಪಟ್ಟಿರುತ್ತದೆ. ಬೋಧಾಸ್ವರೂಪವೆಂದರೆ ಪರ ಮಾತ್ಮನೊಡನೆ ಏಕಾಕಾರ ಭಾವದಿಂದ ವರ್ತಿಸುವದೇ ಇರುತ್ತದೆ. ಆಗ ಆತನು ಲಿಂಗಾನಂದದೊಡನೆ ಕೂಡಿಕೊಂಡು ತಾನೇ ತಾನಾಗಿರುತ್ತಾನೆ. ತಾನು ಸೇವಿಸುವ ವಸ್ತುಗಳನ್ನು ಪರಮಾತ್ಮನೊಡನೆ ಆತನು ಸಮರಸ ಭಾವದಿಂದ ಸ್ವೀಕರಿಸುತ್ತಾನೆ. ಪಾದೋದಕ ಪ್ರಸಾದಸೇವನೆ ಎಂದರೆ ಇದೇ ಇರುತ್ತದೆ. ಇದರಲ್ಲಿ ಆತನು ತನ್ನನ್ನು ಮರೆತು ಪರಮಾತ್ಮನಲ್ಲಿ ಮಗ್ನನಾಗಿರುತ್ತಾನೆ. ಇದು ಲಿಂಗಪೂಜೆಯ ಕಡೆಯ ಸ್ಥಲವು. ಅಂದರೆ ಐಕ್ಯಸ್ಥಲವು. ಈ ರೀತಿಯ ವ್ಯವಹರಣೆಯಿಂದ ಪೂಜಕನಲ್ಲಿ ಮಹಾಲಿಂ

ಗವು ಒಳಕೊಳ್ಳುಹತ್ತುತ್ತದೆ. ಹೀಗೆ ಪ್ರಸಾದಲಿಂಗ ಮತ್ತು ಮಹಾಲಿಂಗ ಗಳನ್ನು ಒಳಕೊಳ್ಳುವದೇ ಭಾವಲಿಂಗದ ಪೂಜೆಯು.

ಈ ಮೇರೆಗೆ ಲಿಂಗಪೂಜೆಯಲ್ಲಿ ಆರು ಭಾಗಗಳು ಇರುತ್ತವೆ. ಅವುಗಳ ಮರ್ಮಗಳನ್ನು ಪೂಜಕನು ಸಂಪೂರ್ಣವಾಗಿ ಮನಸ್ಸಿನಲ್ಲಿ ಬಿಂಬಿಸಿಕೊಂಡು ತನ್ನ ಪೂಜಾಕಾರ್ಯಗಳಿಗೆ ತೊಡಗಿದರೆ ಮಾತ್ರ ಅವನ ಲಿಂಗಪೂಜೆಯು ಫಲದಾಯಕವಾಗುತ್ತದೆ.

ಈ ತತ್ವಗಳು ಸೂಕ್ಷ್ಮಾಗಮದಲ್ಲಿಯೂ ಬಹು ಸಂಕ್ಷೇಪವಾಗಿ ವಿವರಿಸಲ್ಪಟ್ಟಿವೆ. ಸೂಕ್ಷ್ಮಾಗಮದ ಪಟಲ ೬ ಶ್ಲೋಕ ೬೪ ರಿಂದ ೬೮ ರವರೆಗೆ ನೋಡಿರಿ. ಇಲ್ಲಿ ಲಿಂಗಪೂಜೆಯು ಹ್ಯಾಗೆ ಷಟ್‌ಸ್ಥಲಾತ್ಮಕವಾಗಿರುತ್ತದೆಂದು ಹೇಳಲ್ಪಟ್ಟಿರುತ್ತದೆ ನಾನು ಮುಂದೆ ಹೇಳಿದ ವಚನಗಳನ್ನು ವಾಚಕರು ನೋಡಿದರೆ, ಅವುಗಳಲ್ಲಿ ವಿವರಿಸಿದ ಸಂಗತಿಗಳು ಈ ಸೂಕ್ಷ್ಮಾಗಮದ ತತ್ವಗಳಿಗೆ ಸರಿಯಾಗಿ ಕೂಡುತ್ತವೆಂಬುದು ತಿಳಿದು ಬರುತ್ತದೆ.

> ಇದಂ ಮಂತ್ರ ರಹಸ್ಯಂ ವೈಶ್ರೂಯತಾಂ ಷಟ್ಸ್ಥಲಾತ್ಮಕಂ ।
> ಭಕ್ತಸ್ಥಲೆ ಸಮಾಸಿನೋಭೂತಿ ರುದ್ರಾಕ್ಷಸಂಯುತಃ ‖ ೬೪ ‖
> ಷಡಕ್ಷರಜಪಂ ಕೃತ್ವಾ ತತೋ ಮಾಹೇಶ್ವರಸ್ಥಲೆ ।
> ಹಸ್ತೇಕೃತ್ವಾ ಸಾವಧಾನಂ ಪ್ರಸಾದಿಸ್ಥಲಮಾಶ್ರಿತಃ ‖ ೬೫ ‖
> ಲಿಂಗಂ ಚ ಭಕ್ತ್ಯಾ ಸಂಪೂಜ್ಯ ಪ್ರಾಣಲಿಂಗಿಸ್ಥಲೆ ತತಃ ।
> ಕೃತ್ವಾ ಶಿವಾರ್ಪಣಂ ದೇವಿ ಸಾನಂದಂ ಶರಣಸ್ಥಲೆ ‖ ೬೬ ‖
> ಐಕ್ಯಸ್ಥಲೆ ಪ್ರಸಾದೋಪ ಭೋಗತೃಪ್ತಿಮವಾಪ್ನುಯಾತ್ ।
> ಏವಂ ಸಮರಸಾದ್ಭಾವಾದಂಗ ಷಟ್ಸ್ಥಲಯೋಗತಃ ‖ ೬೭ ‖
> ಯಃಪೂಜಯತಿ ಮಾಂ ದೇವಿ ವೀರಶೈವಃಸಉಚ್ಯತೆ ।
> ತತ್ರಲಿಂಗಾರ್ಚನಂ ಕುರ್ಯಾದ್ಯಥಾ ಯೋಗಮತಂದ್ರಿತಃ ‖ ೬೮ ‖

ಇದರಲ್ಲಿ ಷಟ್ಸ್ಥಲಾತ್ಮಕ ಲಿಂಗಪೂಜೆಯ ತತ್ವಗಳು ಬಹು ಸ್ಪಷ್ಟವಾಗಿ ನಿರೂಪಿಸಲ್ಪಟ್ಟಿವೆ. ವಿಭೂತಿ ರುದ್ರಾಕ್ಷಿ ಸಂಯುತನಾಗಿ ಲಿಂಗಪೂಜೆಗೆ ಕೂಡುವದು ಭಕ್ತಸ್ಥಲವೆಂತಲೂ, ಷಡಕ್ಷರಜಪವನ್ನು ಮಾಡುವದು ಮಹೇಶ್ವರಸ್ಥಲವೆಂತಲೂ, ಸಾವಧಾನಚಿತ್ತದಿಂದ ಹಸ್ತದಲ್ಲಿ ಲಿಂಗ ನಿರೀಕ್ಷಣೆ ಮಾಡುವದೇ ಪ್ರಸಾದಿಸ್ಥಲವೆಂತಲೂ ಆ ಲಿಂಗವನ್ನು ಭಕ್ತಿಯಿಂದ

ಪೂಜಿಸುವದೇ ಪ್ರಾಣಲಿಂಗಿ ಸ್ಥಲವೆಂತಲೂ, ಆನಂದದಿಂದ ಶಿವಾರ್ಪಣ ಮಾಡಿಕೊಳ್ಳುವದೇ ಶರಣಸ್ಥಲವೆಂತಲೂ, ಪ್ರಸಾದೋಪಭೋಗ ತೃಪ್ತಿಯೇ ಐಕ್ಯಸ್ಥಲವೆಂತಲೂ ಇಲ್ಲಿ ಹೇಳಲ್ಪಟ್ಟಿದೆ. ಈ ಮೇರೆಗೆ ಇರುವ ಆಗಮೋಕ್ತಿಗಳಿಗನುಸಾರವಾಗಿಯೇ ವಚನಕಾರರು ಲಿಂಗಪೂಜಾ ಕ್ರಮವನ್ನು ಏರ್ಪಡಿಸಿರುತ್ತಾರೆ. ನಾನು ಮೇಲೆ ಕಾಣಿಸಿದ ವಿಷಯಗಳನ್ನು ವಾಚಕರು ಧ್ಯಾನದಲ್ಲಿಟ್ಟುಕೊಂಡು ಲಿಂಗಪೂಜೆಗೆ ಸಂಬಂಧಪಟ್ಟ ಮುಂದಿನ ವಚನಗಳನ್ನು ಲಕ್ಷಪೂರ್ವಕವಾಗಿ ನೋಡಿದರೆ ಲಿಂಗಪೂಜೆಯು ಹ್ಯಾಗೆ ಷಟ್ಸ್ಥಲಾತ್ಮಕವಾಗಿರುತ್ತದೆಂಬದು ಅವರಿಗೆ ತಿಳಿಯದೆ ಇರಲಾರದು.

---

## ೧ ನೇ ವಚನ.

### ಲಿಂಗಪೂಜೆ, ಲಿಂಗಾರ್ಪಿತ ಮುಗಿಯುವದರೊಳಗೆ ಷಟ್ಸ್ಥಲಗಳು ಸಂಬಂಧವಾಗುವ ಕ್ರಮವೆಂತೆಂದೊಡೆ.

## ಭಕ್ತಸ್ಥಲ.

ಪ್ರಾತಃಕಾಲದಲ್ಲಿ ಶಿವ ಸ್ಮರಣೆಯಿಂದ ಹಾಸಿಗೆ ಬಿಟ್ಟು ಎದ್ದು ಮುಖ ಪ್ರಕ್ಷಾಲಿಸಿಕೊಂಡು ಭಸ್ಮಧಾರಣ ಮಾಡಿಕೊಂಡು, ಬಹಿರ್ಭೂಮಿಗೆ ಹೋಗಿ ಮರಳಿ ಬಂದು ಸೂಕ್ಷ್ಮ ಮಲಗಳನ್ನು ತೊಳೆಯಬೇಕು. ಅವು ಯಾವವೆಂದರೆ:- ಎರಡು ನೇತ್ರಗಳಲ್ಲಿರುವ ಪಿಚ್ಚು, ಎರಡು ಕಿವಿಯೊಳಗಿರುವ ಕೂಗಣಿ ಎರಡು ನಾಸಿಕದ ದ್ವಾರದಲ್ಲಿರುವ ಸುಂಬಳ, ಗಂಟಲಲ್ಲಿರುವ ಶ್ಲೇಷ್ಮ, ಹಸ್ತದ ಹತ್ತು ಬೆರಳುಗಳಲ್ಲಿರುವ ಮಣ್ಣು ಇಂತಿಷ್ಟು ತೊಳೆದು ಶುಚಿಮಾಡಿಕೊಂಡು, ಆ ಮೇಲೆ ಪುಷ್ಪಕದ ಕರಡಿಗೆಯನ್ನು ತೆಗೆದುಕೊಂಡು ವನಕ್ಕೆ ಹೋಗಿ ಪತ್ರಿ ಪುಷ್ಪ ಇರುವಂಥ ಗಿಡಗಳ ಸಮಿಪದಲ್ಲಿ ನಿಂತು ಶಬ್ದ ಹಾಕಬೇಕು. ಎಂತೆಂದೊಡೆ:- ಗ್ರಂಥ॥ ಇದಂ ಕಾರಣಂ ಪುಷ್ಪಸ್ಯ ಉತ್ಸತ್ಯಾದಿ ಮಹೀತಲೆ। ಶಿವಪೂಜಾ ನಿಮಿತ್ತಾರ್ಥಂ ಭಿಕ್ಷಾಂದೇಹಿ ವನಸ್ಪತೆ॥ ಹೀಗೆಂದು ಆ ಗಿಡಗಳಲ್ಲಿರುವ ಪತ್ರಿ ಪುಷ್ಪಗಳನ್ನು ತೆಗೆದುಕೊಂಡು ಬಂದು ಆ ಮೇಲೆ ಲಿಂಗಪೂಜೆಯ ಸ್ಥಲ ಸಮ್ಮಾರ್ಜನೆಯ ಮಾಡಬೇಕು.

**ಸ್ಥಲ ಸಮ್ಮಾರ್ಜನೆ:--** ಅದೆಂತೆಂದೊಡೆ "ಗೋಮಯಂ ಗೋರೋ

ಜನಂ ಮೂತ್ರಂ। ದಧಿಕ್ಷೀರೇ ಘೃತಂಗವಾಂ॥ ಪವಿತ್ರಾಣಿ ಷಡಂಗಾನಿ ತ್ರೀತ್ರೈಃ ಸಮ್ಮಾರ್ಜನಂ ಚರೇತ್ ॥ಟೀ॥ ಗೋವಿನ ಗೋಮಯು, ಗೋರೋಜನ, ಗೋಮೂತ್ರ, ಗೋದಧಿ, ಗೋಕ್ಷೀರ, ಗೋಘೃತ ಈ ಆರು ಸನ್ನಾಹಗಳಿಂದ ನೆಲ ಸಮ್ಮಾರ್ಜನೆಯು ಮಾಡಿ, ಆ ಮೇಲೆ ಆ ಸ್ಥಳವಲ್ಲಿ ರಂಗವಲ್ಲಿಯು ಹಾಕಬೇಕು. ಅದೆಂತೆಂದೊಡೆ ಬೆಣಚಿ ಕಲ್ಲಿನ ಹಿಟ್ಟಿನ ಪುಡಿ ಮಾಡಿ ಅದ ರೊಳಗೆ ಅರ್ಧ ಹಿಟ್ಟಿಗೆ ಕಾಕಿ ಸೊಪ್ಪಿನ ರಸವಾಗಲಿ ತೊಂಡೇ ಸೊಪ್ಪಿನ ರಸ ವಾಗಲಿ ಈ ಎರಡರೊಳಗೆ ಯಾವದಾದರೊಂದು ಸೊಪ್ಪಿನ ರಸವ ಹಿಂಡಿ ಮೂರು ಭಾಗವನಿಟ್ಟು ಹಸರು ಮಾಡಿಕೊಂಡು ಬೇರೆ ಬಿಳೀ ಹಿಟ್ಟು, ಇಪ್ಪ ಲಿ ಹಿಟ್ಟು ಈ ಪಂಚ ಹಿಟ್ಟಿನಿಂದ ಹಾಕಬೇಕು. ಮೇಲಾಗಿ ಈ ಪಂಚ ರಂಗವಲ್ಲಿಯು ಹಾಕಿ, ಆ ಮೇಲೆ ಗದ್ದಿಗೆ ಹಾಕಬೇಕು.

**ಗದ್ದಿಗೆ ಹಾಕುವದುಃ**— ಗದ್ದಿಗೆ ಹಾಕಬೇಕಾದರೆ ಚಿತ್ರಾಸನ ಬಿಳಿ ಕಂಬಳಾಸನ ಈ ಎರಡರೊಳಗೆ ಯಾವದಾದರೂ ಒಂದಾಸನವ ಹಾಕಿ ಅದರ ಮೇಲೆ ಲಿಂಗಪೂಜಾ ಸಾಮಗ್ರಿಗಳ ಶುಚಿಮಾಡಿ ಇಟ್ಟು, ಉದಕವ ಸೋಸಿ ಇಟ್ಟು, ಗಂಧ, ಅಕ್ಷತೆ, ಕರ್ಪುರ ಮೊದಲಾದ ಸಾಮ ಗ್ರಿಗಳನ್ನು ಇಟ್ಟು ಜ್ಯೋತಿಯು ಮುಟ್ಟಿಸಿ ಈ ಸಾಮಗ್ರಿಗಳ ಮೇಲೆ ತುಂಬಾ ಮಡಿ ವಸ್ತ್ರವ ಮುಚ್ಚಿ ಆ ಮೇಲೆ ಅತ್ತಿ, ಆಲ, ನೀರಲ, ಮಾವು, ಬೇವು, ನೆಲ್ಲಿ, ಹುಣಚಿ, ಜಾಲಿ, ಉತ್ತರಾಣಿ ವೇಣಿ ಈ ಹತ್ತು ಕಾಷ್ಠದೊಳಗೆ ಯಾವದಾದರೂ ಒಂದು ಕಡ್ಡಿಯು ತಂದು ಹನ್ನೆರಡು ಬೆರಳುದ್ದ ತೆಗೆದು ಕೊಂಡು ದಂತ ಧಾವನ ಮಾಡಿ, ಮುಕ್ಕಳಿಸಿ ಮುಖ ಪ್ರಕ್ಷಾಲನವ ಮಾಡಿ ಆ ಮೇಲೆ ಸ್ನಾನ ಮಾಡಬೇಕು.

**ಸ್ನಾನಃ**-- ಸ್ನಾನ ಮಾಡಬೇಕಾದರೆ, ಉತ್ತಮ ಶಿರಸ್ನಾನ, ಮಧ್ಯಮ ಕಂಠಸ್ನಾನ, ಕನಿಷ್ಠ ಕಟಿಸ್ನಾನ ಹೀಗೆಂಬಲ್ಲಿ ಉತ್ತಮವಾದ ಶಿರಸ್ನಾನ ಮಾಡಿ ಮಡಿ ವಸ್ತ್ರವ ಹೊದ್ದುಕೊಂಡು ಶಿವ ಸ್ಮರಣೆಯು ಮಾಡುತ್ತ ಬಂದು ಗದ್ದಿಗೆಯು ಮೇಲೆ ಮೂರ್ತವ ಮಾಡುವಾಗ ಮಂತ್ರ ಉಚ್ಚರಿಸ ಬೇಕು. ಯಾವ ಮಂತ್ರವೆಂದರೆ, "ಓಂ ಹಃ ಅನಂತ ಶಕ್ತಿಧಾಮ್ನೆ ಜ್ಯೋತಿ ರೂಪಾಯ ಫಟ್" ಎಂದು ಮೂರ್ತವ ಮಾಡಿಕೊಂಡು ಲಿಂಗಕ್ಕೆ ಮಜ್ಜನ ನೀಡಬಾರದು. ಏನು ಕಾರಣವೆಂದೊಡೆ ಗ್ರಂಥ॥ ಆದಿಮಾಂಸಂತುತೋಯನಾಂ। ಮಧ್ಯಮಾಂಸಂತು ಗೋರಸಂ॥ ಸರ್ವ ಮಾಂಸಂತು ನಾರೀಣಾಂ। ಕಿಂ ಶೀಲಂ ಹಿ ಮಹೇಶ್ವರ॥ಟೀ॥ ಎಲೆ ಪರಮೇ

ಶ್ವರನೇ, ಉದಕದಿಂದ ನಿನಗೆ ಅಭಿಷೇಕವಾಗುತ್ತದೆ. ಆ ಉದಕ ಅವಿಯಲ್ಲಿ ಮಾಂಸ ಸ್ವರೂಪ. ಕ್ಷೀರದಿಂದ ಅಭಿಷೇಕವಾಗುತ್ತದೆ. ಆ ಕ್ಷೀರ ಎಂಥಾದ್ದೆಂದರೆ ಆಕಳ ಕೆಚ್ಚಲಲ್ಲಿರುವ ಮಾಂಸದಿಂದ ಹುಟ್ಟುತ್ತದೆ. ಸ್ತ್ರೀಯಳ ಧರಿಸಿದಿ ಆ ಸ್ತ್ರೀಯಳು ಆ ಪಾದಮಸ್ತಕ ಪರಿಯಂತರ ಮಾಂಸಸ್ವರೂಪವು. ಹೀಗೆಂಬಲ್ಲಿ ನಿನ್ನ ಶೀಲವೆಂಬುದೇನು, ಎಂದು ಪಾರ್ವತೀ ಕೇಳಲಾಗಿ, ಪರಮೇಶ್ವರನು ನಿವೃತ್ತಿ ಹೇಳುತ್ತಿದ್ದನು. ಗ್ರಂಥ॥ ಮಂತ್ರ ಶುದ್ಧಂತುತೋಯಾನಾಂ॥ ಭಸ್ಮ ಶುದ್ಧಂತು ಗೋರಸಃ॥ ದೀಕ್ಷಾ ಶುದ್ಧಂತು ನಾರೀಣಾಂ। ಮಮಶೀಲಂ ಮಹೇಶ್ವರಿ ॥ಟೀ॥ ಎಲೇ ಪಾರ್ವತೀ ಕೇಳು, ಮಂತ್ರದಿಂದ ಉದಕ ಶುದ್ಧ ಮಾಡಬೇಕು. ಭಸ್ಮ ಮಿಶ್ರಮಾಡಿ ಕ್ಷೀರ ಶುದ್ಧ ಮಾಡಬೇಕು. ದೀಕ್ಷೆಯಿಂದ ಸ್ತ್ರೀಯಳ ಶುದ್ಧ ಮಾಡಬೇಕು. ಎಂದು ಪರಮೇಶ್ವರನ ವಾಕ್ಯ ಇದ್ದ ಕಾರಣ, ಮಂತ್ರೋದಕ ಮಾಡಿ ಪುಷ್ಪ ಪತ್ರೆ ಉಪಕರಣಗಳ ಮೇಲೆ ಸಂಪ್ರೋಕ್ಷಿಸಿ ಆ ಮೇಲೆ ಲಿಂಗಕ್ಕೆ ಮಜ್ಜನವ ನೀಡಬೇಕು. ಅವರೆ ಕರಡಿಗಿ ಅರಗಿನಲ್ಲಿ ಎಡ ಹಸ್ತವನಿಟ್ಟು ಬಲಹಸ್ತದ ಹೆಬ್ಬೆರಳ ಲಿಂಗ ಮಸ್ತಕದ ಮೇಲಿಟ್ಟು ನಡುವಿನ ಎರಡು ಬೆರಳು ಲಿಂಗದ ಬುಡಭಾಗದಲ್ಲಿಟ್ಟು ಗೋಮುಖ ಮೇಲು ಮಾಡಿ ಬಿಡಯಂಗೈಸಿಕೊಂಡು ಎಡ ಹಸ್ತದಲ್ಲಿ ಮೂರ್ತವ ಮಾಡಿಸಿ ಮಂತ್ರೋದಕದಿಂದ ಅಭಿಷೇಕವ ಮಾಡಿ ವಿಭೂತಿಯ ಧರಿಸಿ ಪತ್ರಿ ಪುಷ್ಪವ ಧರಿಸಿ ಲೋಬಾನವನರ್ಪಿಸಿ ಸೆಜ್ಜೆಯಲ್ಲಿ ಮೂರ್ತವ ಮಾಡಿಸಿ, ವಿಭೂತಿ ಧಾರಣಮಾಡಬೇಕು.

**ವಿಭೂತಿ ಧಾರಣ**:— ಬಲ ಹಸ್ತದ ಹೆಬ್ಬೆರಳು ಮಧ್ಯದ ಎರಡು ಬೆರಳುಗಳಿಂದ ಕೂಡಿದ್ದು ಕುರಂಗಮುದ್ರೆ ಎನಿಸುವದು. ಈ ಕುರಂಗ ಮುದ್ರೆಯಿಂದ ಆಧಾರದಲ್ಲಿರುವ ವಿಭೂತಿಯನ್ನು ಎತ್ತಿ, ಎಡದ ಹಸ್ತದಲ್ಲಿಟ್ಟು ಬಲದ ಹಸ್ತದ ಶುಕ್ತಿ ಮುದ್ರೆಯಿಂದ ಜಲ ಪುಷ್ಪಗಳ ಹಿಡಿದು ಅರ್ಘ್ಯ ಕೊಟ್ಟು ಕೂರ್ಮ ಮುದ್ರೆಯಿಂದ ಮುಚ್ಚಿ ನಮಸ್ಕರಿಸಿ, ಆ ಮೇಲೆ "ಅಗ್ನಿರಿತಿ ಭಸ್ಮ, ವಾಯುರಿತಿ ಭಸ್ಮ, ಜಲಮಿತಿ ಭಸ್ಮ, ಸ್ಥಲಮಿತಿ ಭಸ್ಮ, ವ್ಯೋಮಮಿತಿ ಭಸ್ಮ, ಸೂರ್ಯೋತಿ ಭಸ್ಮ, ಓಂ ಕ್ಷಂ ಎಂದು ಎರಡು ಮೊಳಪಾದ ಎರಡು ಬಗಲು, ಉದರ, ಎರಡು ಭುಜ, ಹೃದಯ, ಕಂಠ, ಮಸ್ತಕ ಸ್ಥಾನಗಳಲ್ಲಿ ಸೋಂಕಿಸಿ, ಸರ್ವಾಂಗದಲ್ಲಿ ಧೂಳನವಗೈದು, ಸರ್ವಾಂಗಕ್ಕೆ ಉದ್ವರ್ತನವ ಮಾಡಿ, ಆ ಮೇಲೆ ವಿಭೂತಿ ಧರಿಸುವ ಸ್ಥಾನಗಳಾವವೆಂದೊಡೆ ಲಲಾಟ, ಗ್ರೀವ, ಕರ್ಣಂಚ, ಚಕ್ಷುಷೀ, ಘ್ರಾಣಕಂ ತಥಾ। ಮುಖ,

ಬಾಹೂ ಭುಜದ್ವಂದ್ವಂ ಸ್ತನಮುಷ್ಯುದರಂ ತಥಾ। ಮಣಿ ಬಂಧೇಚ ಹೃತ್ಪಾರ್ಶ್ವರ್ನಾಭಿ ಮೇಢ್ರಸ್ತ್ರಷ್ಟ ಪೃಷ್ಮಕೇ। ಊರೂಚ ಜಾನುಕಾಚೈವ ಜಂಘೇ ಪಾಯುಸ್ತಥೈವಚ। ಪಾದೌದ್ವೌ ತ್ರಿಂಬಕಂ ಚೈವ ಸಂಧಿಷ್ವಪಿ ಯಥಾ ಕ್ರಮಂ ॥ಟೀ॥ ಹಣೆ, ಕಂಠ, ಎರಡು ಕಿವಿ, ಎರಡು ನೇತ್ರ, ಎರಡು ಘ್ರಾಣ ರಂಧ್ರ, ಮುಖ, ಎರಡು ತೋಳು, ಎರಡು ಭುಜ, ಎರಡು ಕುಚ, ಹೊಟ್ಟೆ, ಎರಡು ಮೊಳಕೈ. ಎದೆ, ಎರಡು ಬಗಲು, ಹೊಕ್ಕಳ, ಮೇಢ್ರ, ಬೆನ್ನು, ಎರಡು ತೊಡೆ, ಎರಡು ಮೊಳಕಾಲು, ಎರಡು ಕಣಕಾಲು, ಗುದ, ಎರಡು ಪಾದಗಳು ಇಂತು ಮೂವತ್ತೆರಡು ಸ್ಥಾನಗಳಲ್ಲಿ ವಿಭೂತಿ ಧರಿಸುವಾಗ ಮಂತ್ರ ಉಚ್ಚರಿಸಬೇಕು ಯಾವ ಮಂತ್ರವೆಂದರೆ "ಪುನಾತಿ ಯಜ್ಜಗತ್ಸರ್ವಂ ತ್ರಿಪುಂಡ್ರಾತ್ಮಾ ಸದಾಶಿವಃ। ಐಶ್ವರ್ಯ ಪ್ರಾಪ್ತಿಬೀಜಾಯ ತಸ್ಮೈ ಶ್ರೀ ಭಸ್ಮನೇ ನಮಃ॥ ಭೂತಿರ್ಭೂತಿಕರೀ ಪವಿತ್ರ ಜನನೀ ಪಾಪೌಘವಿ ಧ್ವಂಸಿನೀ। ಸರ್ವೋಪದ್ರವನಾಶಿನೀ ಶುಭಕರೀ ಶೋಕಂಚವಿಚ್ಛೇದಿನೀ॥ ಭೂತ ಪ್ರೇತ ಪಿಶಾಚ ರಾಕ್ಷಸಹರೀ ಸರ್ವಂಚ ಸಂಪತ್ಕರೀ। ತೇಜೋರಾಶಿ ವಿಶೇಷ ಭೂಷಿತಕರೀ ಭೂತಿಸ್ಸದಾ ಪಾತುಮಾಂ॥" ಎಂದು ಉಚ್ಚರಿಸುತ್ತ ಮೇಲೆ ಹೇಳಿದ ಸ್ಥಾನಗಳಲ್ಲಿ ವಿಭೂತಿಧಾರಣವ ಮಾಡಿಕೊಳ್ಳಬೇಕು.

**ಪ್ರಣವ ಸಂಬಂಧಃ—** ಆ ಮೇಲೆ ದೇಹದಲ್ಲಿ ಪ್ರಣವ ಸಂಬಂಧವ ಮಾಡಿಕೊಳ್ಳಬೇಕು. ಅದೆಂತೆಂದೊಡೆ ॥ಗ್ರಂಥ॥ ಓಂಕಾರಂ ವಂದನಂ ದೇವಿ ನಮಸ್ಕಾರೋ ಭುಜದ್ವಯಂ ಶಿಕಾರಂ ದೇಹ ಮಧ್ಯಸ್ತು ನಯಕಾರಂ ಪದದ್ವಯಂ ॥ಟೀ॥ ಓಂಕಾರ ಲಲಾಟದಲ್ಲಿ, ನಕಾರ ಬಲ ಭುಜದಲ್ಲಿ, ಮಕಾರ ಎಡ ಭುಜದಲ್ಲಿ, ಶಿಕಾರ ನಾಭಿಯಲ್ಲಿ, ವಕಾರ ಬಲ ಮೊಳಕಾಲಲ್ಲಿ ಯಕಾರ ಎಡ ಮೊಳಕಾಲಲ್ಲಿ, ಹ್ರಾಂ ಹ್ರೀಂ ಹ್ರೂಂ ಹ್ರೈಂ ಹ್ರೌಂ ಹ್ರಂ ಇವು ಆರು ಪ್ರಣವ ಬಲದ ಬಗಲಲ್ಲಿ. ನಮಃ ಶಿವಾಯ ಎಡದ ಬಗಲಲ್ಲಿ, 'ಬಸವ' ಕೊರಳಲ್ಲಿ, ಮುಂದೆಸೆಯಲ್ಲಿ. ಅ ಉ ಮ ಅಕ್ಷರ ಕಂಠದಲ್ಲಿ, ಎರಡು ಶಿಕಾರ ಎರಡು ನೇತ್ರದಲ್ಲಿ, ಎರಡು ಯಕಾರ ಎರಡು ಕರ್ಣದಲ್ಲಿ ನಾಸಿಕದಲ್ಲಿ ನಕಾರ, ಬ್ರಹ್ಮರಂಧ್ರದಲ್ಲಿ ಸಕಾರ, ಗುದ ಸ್ಥಾನದಲ್ಲಿ ಲಿಕಾರ ಇಂತಿಷ್ಟು ಪ್ರಣವಂಗಳನ್ನು ಸಂಬಂಧವ ಮಾಡಿಕೊಳ್ಳಬೇಕು.

**ರುದ್ರಾಕ್ಷಿ ಧಾರಣಃ—** ಆ ಮೇಲೆ ರುದ್ರಾಕ್ಷಿ ಧರಿಸುವ ಕ್ರಮವೆಂತೆಂದೊಡೆ ॥ಗ್ರಂಥ॥ ಶಿಖಾಯಾಂ ಧಾರಯೇದೇಕಂ। ಷಟ್ತ್ರಿಂಶನ್ಮಸ್ತಕೆ ತಥಾ। ದ್ವಾತ್ರಿಂಶತ್ಕಂಠದೇಶೇಚ। ಪಂಚಾಶನ್ಮಾಲಿಕಾ ಹೃದಿ। ಷೋಡಶಾ

ಬಾಹುದ್ವಯೋ ದ್ವಾದಶಂ ಮಣಿ ಬಂಧಕೆ। ಕರ್ಣಯೋರೇಕ ಮೇಕಂ। ವಾಹ್ಯುಪವೀತೆ ಶತಾಷ್ಟಕಂ ಮಾಲಾಂಯೆ ೀಧಾರಯೇನ್ನಿತ್ಯಂ। ಸನರೋ ಭಾಗ್ಯವಾಸಿಕಹ॥ ಪವೇ ಪದೇ ಽ ಶ್ವಮೇಧಸ್ಯ। ಫಲಂ ಪ್ರಾಪ್ನೋತ್ಯ ಸಂಶಯಂ॥೬॥ ಶಿಖಿಯಲ್ಲಿ ಒಂದು, ತಲೆ ಬಳಸಿ ಮೂವತ್ತಾರು, ಕಂಠದಲ್ಲಿ ಮೂವತ್ತೆರಡು, ಎದೆಯಲ್ಲಿ ಐವತ್ತು, ಎರಡು ತೋಳುಗಳಲ್ಲಿ ಹದಿನಾರು ಹದಿನಾರು ಎರಡು ಮುಂಗೈಗಳಲ್ಲಿ ಹನ್ನೆರಡು ಹನ್ನೆರಡು, ಎರಡು ಕಿವಿಗಳಲ್ಲಿ ಒಂದೊಂದು, ಯಜ್ಞೋಪವೀತ ನೂರಾ ಎಂಟು ಇಂತಿಷ್ಟು ಮೇಲೆ ಹೇಳಿದ ಸ್ಥಾನಗಳಲ್ಲಿ. "ರುದ್ರಾಕ್ಷ ವೃಕ್ಷ ಬೀಜಾಯ। ಭೂತಿ ಸಂಭೂತಿ ಹೇತವೇ ನೇತ್ರತ್ರಯಾಯ। ರುದ್ರಾಯ ನಮೋ ಲೋಕ ಹಿತಾರ್ಥಿನೆ। ಎಂದು ರುದ್ರಾಕ್ಷಿಯ ಧರಿಸಿಕೊಳ್ಳಬೇಕು.

**ನ್ಯಾಸಗಳು**:— ಆ ಮೇಲೆ ಹಸ್ತಕ್ಕೆ ಲೇಪನವ ಮಾಡಿಕೊಂಡು ಪ್ರಣಮಂಗಳ ಲಿಖಿಸಿಕೊಂಡು ಕರನ್ಯಾಸ, ಅಂಗನ್ಯಾಸ ಪ್ರಾಣಾಯಾಮ ಅಷ್ಟ ದಿಗ್ಬಂಧನವ ಮಾಡಿದಲ್ಲಿಗೆ ಭಕ್ತಸ್ಥಲ ಸಂಬಂಧವಾದುದು.

## ಮಾಹೇಶ್ವರ ಸ್ಥಲ.

ಆ ಮೇಲೆ ಗುರುವು ಅಪ್ಪಣೆಕೊಟ್ಟಂಥ ಮಂತ್ರವನ್ನು ಹಸ್ತಕ್ಕೆ ವಿಭೂತಿಯನ್ನು ಧರಿಸಿಕೊಂಡು ಮಡಿವಸ್ತ್ರ ಮುಸುಕು ಹಾಕಿಕೊಂಡು ಪರಶ್ರುತಿಗೆ ಕೇಳದ ಹಾಗೆ ಉಚ್ಚರಿಸಿದಲ್ಲಿಯೇ ಮಹೇಶ್ವರ ಸ್ಥಲ ಸಂಬಂಧವಾಗುವದು. ॥೨॥

## ಪ್ರಸಾದಿಸ್ಥಲ.

ಬಲ ಹಸ್ತದ ತರ್ಜನಿ ಅಂಗುಲಿ ಮಧ್ಯಮಾಂಗುಲಿ ಸಂದಿಗಳಲ್ಲಿ ಒಂದು ಪುಷ್ಪವ ಹಿಡಿದು ಕರಡಿಗೆಯ ಅರಗಿನಲ್ಲಿ ಎಡಹಸ್ತವ ಅಡ್ಡ ಇಟ್ಟು ಮೇಲೆ ಹೇಳಿದ ಪ್ರಕಾರ ಲಿಂಗವನ್ನು ಬಿಜಯಂಗೈಸಿ ಎಡದ ಹಸ್ತದಲ್ಲಿ ಮೂರ್ತವ ಮಾಡಿಸಿದಲ್ಲಿಗೆ ಪ್ರಸಾದಿಸ್ಥಲವೆನಿಸುವದು. ॥೩॥

## ಪ್ರಾಣಲಿಂಗಿ ಸ್ಥಲ.

ಆ ಮೇಲೆ ಲಿಂಗಕ್ಕೆ ಪಾದ್ಯ, ಅರ್ಘ್ಯ, ಆಚಮನ, ಮಧುಪರ್ಕ, ಪಂಚಾಮೃತ, ಸಪ್ತೋದಕಗಳಲ್ಲಿ ಜಂಗಮ ಪಾದೋದಕವ ಮಿಶ್ರಮಾಡಿ

ಅಭಿಷೇಕ ಎರೆದು, ಲಿಂಗದ ದ್ರವವ ತೆಗೆದು, ಲೋಭಾನದ ಹೊಗೆಯಿಂದ ಲಿಂಗವ ತೋರಿಸಿ ವಿಭೂತಿಯನ್ನು ಅನಾಮಿಕ ಅಂಗುಲಿಯಿಂದ ಧರಿಸಿ ಗಂಧ ಅಕ್ಷತಿ, ಪುಷ್ಪ, ಪತ್ರೆ, ಯಜ್ಞೋಪವೀತ ಉತ್ತರೀಯ ಆಭರಣ ಮೊದಲಾದವುಗಳನ್ನು ಧರಿಸಿ, ಧೂಪ ದೀಪ ನೈವೇದ್ಯ ತಾಂಬೂಲಂಗಳಿಂದ ಅರ್ಚಿಸಿ, ಗಂಟೆ, ದರ್ಪಣ ಚಾಮರ, ಬೀಸಣಿಕೆ, ಛತ್ರ, ಉಡಾಸವಸ್ತ್ರ ನಗಾರಿ ಜಾಗುಟೆ, ಕೈತಾಳ ಸಮಾಳ, ಬುರುಗು ಕಿನ್ನರಿ, ವೀಣಾ ಚಿನ್ನ ಕಾಳಿ, ನಪೂರಿ, ಕರಣಿ ಕಾಳಿ, ಹೆಗ್ಗಾಳಿ ಕೊಳಲು ಕಂಚಿನ ಸಮಾಳ ಭೇರಿ ನರ್ತನ ಇವು ಮೊದಲಾದ ಉಪಚಾರಗಳಿಂದ ಪೂಜಿಸಿದಲ್ಲಿಗೆ ಪ್ರಾಣಲಿಂಗಿ ಸ್ಥಲ ಸಂಬಂಧವಾಗುವದು. ॥೪॥

## ಶರಣಸ್ಥಲ.

ಆ ಮೇಲೆ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಗಾಯತ್ರಿ ವೇದಗಳ ಸ್ತೋತ್ರ, ಶಾಸ್ತ್ರಸೂತ್ರ, ಪುರಾಣಸ್ತೋತ್ರ ಆದ್ಯರು ವೇದ್ಯರು ಸಾಧ್ಯರು ಮಹಿಮ್ನ ಮಲಯರಾಜ, ಮಲುಹಣ, ಹಲಾಯುಧ, ಅನಾದಿಯ ಮೊದಲಾದ ಕವಿಗಳು ಶಿವನ ಕೀರ್ತಿ ಮಾಡಿದ ಸ್ತೋತ್ರಗಳನ್ನು ಮಾಡಿ ಶಿರಸಪ್ರದಕ್ಷಿಣವ ಮಾಡಿ, ಪುಷ್ಪಾಂಜಲಿಯ ಮಾಡಿ, ನಮಸ್ಕರಿಸಿ ನಿರ್ಮಾಲ್ಯವ ವಿಸರ್ಜನ ಗೈದಲ್ಲಿಗೆ ಶರಣಸ್ಥಲ ಸಂಬಂಧವಾಗುವದು.

## ಐಕ್ಯಸ್ಥಲ.

ಆ ಮೇಲೆ ಜಂಗಮ ಮೂರ್ತಿಗಳು ಆ ವೇಳೆಗೆ ದಯಮಾಡಿದರೆ ದಶವಿಧಪಾದೋದಕದಲ್ಲಿ ಹೇಳಿದ ಪ್ರಕಾರ ಮಹತ್ಪಾದೋದಕವನ್ನು ಪಡೆದು ಕೊಂಡು, ಅರ್ಪಿತವ ಮಾಡುವದು. ಆ ವೇಳೆಗೆ ಮೂರ್ತಿಗಳು ಯಾರೂ ಬರದಿದ್ದರೆ ಮಾಡಿದ ಪದಾರ್ಥಗಳನ್ನು ಎಡೆಮಾಡಿಸಿಕೊಂಡು ಹಸ್ತಕ್ಕೆ ಭಸ್ಮ ಲೇಪನವ ಮಾಡಿಕೊಂಡು ಗುರುವು ಅಪ್ಪಣೆ ದಯಪಾಲಿಸಿದ ಮಂತ್ರವನ್ನು ಐದುವೇಳೆ ಉಚ್ಚರಿಸಿ ಆ ಪದಾರ್ಥಕ್ಕೆ ಸಂಪ್ರೋಕ್ಷಿಸಿ, ಓಗರರೂಪವಳಿದು ಪ್ರಸಾದ ಸ್ವರೂಪವನ್ನು ಮಾಡಿ, ಲಿಂಗಕ್ಕೆ ಮೂರು ವೇಳೆ ಚತುರಂಗುಲ ಪ್ರಮಾಣದಲ್ಲಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳ ಮಂತ್ರ ಉಚ್ಚರಿಸಿ ಲಿಂಗನಿರೀಕ್ಷಣೆಯಿಂದ, ಅರ್ಪಿತವ ಮಾಡುವದು. ಆ ವೇಳೆಯಲ್ಲಿ

ಬಹು ಮಾತುಗಳನ್ನಾಡಲಿಕ್ಕಾಗದು. ಪರಶಬ್ದ, ಹಿಂಸಾಶಬ್ದ, ಅಶುಚಿ, ಅಮಂಗಲಶಬ್ದ, ಪಾಪಶಬ್ದ, ವಿಷಯಶಬ್ದ, ಹಾಸ್ಯಪ್ರಸಂಗದಶಬ್ದ, ಗಾಯನಶಬ್ದ, ನ್ಯಾಯದಶಬ್ದ, ದುಃಖದಶಬ್ದ, ಮರಣಶಬ್ದ, ಅಗ್ನಿಪ್ರವೇಶದಶಬ್ದ ಇವು ಮೊದಲಾದ ಕನಿಷ್ಟ ಶಬ್ದಗಳ ಕೇಳದೆ, ಲಿಂಗಾರ್ಪಿತವ ಮಾಡಿ, ಬಟ್ಟಲ ಖಂಡಿತವಮಾಡಿ, ಹಸ್ತದ್ರವನಾರಿಸಿದ ಬಳಿಕ, ಕರಡಿಗೆಯಲ್ಲಿ ಇರುವ ಇಷ್ಟ ಲಿಂಗವನ್ನು ಮೇಲೆ ಹೇಳಿದ ಪ್ರಕಾರದಲ್ಲಿ ಬಿಜಯಂಗೈಸಿ, ಎಡಹಸ್ತದಲ್ಲಿ ಮೂರ್ತವಮಾಡಿಸಿ ಅಭಿಷೇಕವ ಮಾಡಿ, ವಿಭೂತಿ ಪತ್ರಿ ಪುಷ್ಪವಧರಿಸಿ ಲೋಭಾನವನರ್ಪಿಸಿ ಹಸ್ತಜಪವಮಾಡಿ ನಮಸ್ಕರಿಸಿ, ಕರಡಿಗೆ ಒಳಗೆ ಮೂರ್ತವ ಮಾಡಿಸಿದಲ್ಲಿಗೆ ಐಕ್ಯಸ್ಥಲ ಸಂಬಂಧವಾಗುವದೆಂದು ಕಲ್ಯಾಣಪಟ್ಟಣದಲ್ಲಿ ಚನ್ನಬಸವೇಶ್ವರ ಸ್ವಾಮಿಗಳು ಬಸವಣ್ಣ ಮೊದಲಾದ ಪ್ರಮಥ ಗಣಂಗಳಿಗೆ ಅಪ್ಪಣೆಯ ದಯಪಾಲಿಸಿದ ಆಚರಣೆಯ ವಚನ ಸಮಾಪ್ತ ಮಂಗಲಮಹಾ ಶ್ರೀ—-

---

## ೨ ನೇ ವಚನ.

### ಷಟ್‌ಸ್ಥಲಯುಕ್ತ ಲಿಂಗಪೂಜಾವಿಧಿ.

## ಭಕ್ತಸ್ಥಲ.

ಶಿವಶರಣನು ಶಿವಯೋಗನಿದ್ರಾಮುದ್ರೆಯಲ್ಲಿ ಪವಡಿಸಿದರ್ಗೆ "ಬ್ರಾಹ್ಮೀ ಮುಹೂರ್ತೇಚ ಉತ್ಥಾಯ" ಎಂದು ಹೇಳುತ್ತಿಹುದಾದ ಕಾರಣ ಬ್ರಾಹ್ಮೀ ಮುಹೂರ್ತದಲ್ಲಿ ಶಿವಧ್ಯಾನದಿಂದೆದ್ದು ಶಿವಮಂತ್ರೋಚ್ಚಾರಣೆ ಶಿವಲಿಂಗ ನಿರೀಕ್ಷಣೆ ಮಾಡಿ, ಸ್ಥೂಲ ಶೌಚಾಚಮನಂಗಳಿಗೆ ಹೋಗಿಬಂದು, ಸ್ನಾನಂಗೈದು ಕುಸುಮಂಗಳಂ ಶೋಧಿಸಿಕೊಂಡು ಪಾವಗೊರಡಮಂ ಮೆಟ್ಟಿಕೊಂಡು ಬಂದು ಭಕ್ತಸ್ಥಲ ಸುಖಾಸನವೆಂದು ಹೇಳುತ್ತಿಹುದಾದಕಾರಣ ಉನ್ನತಾಸನವ ಗದ್ದುಗೆಯ ಮೇಲೆ ಸುಖಾಸನದಲ್ಲಿ ಮುಹೂರ್ತವ ಮಾಡಿಕೊಂಡು, ಶ್ರೀ ವಿಭೂತಿ ರುದ್ರಾಕ್ಷಿಗಳನ್ನು ಜಲಮಿಶ್ರ ಪುಷ್ಪಗಳಿಂದರ್ಚಿಸಿ ತತ್ತತ್ ಸ್ಥಾನಂಗಳಲ್ಲಿ ಅತ್ಯಂತ ವಿಶ್ವಾಸದಿಂದ ಅಲಂಕರಿಸಿಕೊಂಬುವದೇ ಶ್ರದ್ಧಾಭಕ್ತಿಯನುಳ್ಳ ಭಕ್ತಸ್ಥಲವಾಗಿಪ್ಪುದು.

## ಮಹೇಶ್ವರಸ್ಥಲ.

ತದನಂತರದಲ್ಲಿ ಪರಶಿವನ ದ್ವಯಾಭಿಧಾನದಿಂದ ಮೂಲ ಪಂಚಾ

ಕ್ಷರೀ ಮಂತ್ರವನ್ನು, ಮಾನಸ ವಾಚಕ ಉಪಾಂಶುಕವೆಂಬ ತ್ರಿಕರಣಂಗಳಲ್ಲಿ ಅತ್ಯಂತ ನೈಷ್ಠಿಕೆಯಿಂದ ಪುನಶ್ಚರಣೆ ಜಪಗೈವುದೇ ನೈಷ್ಠಿಕಾಭಕ್ತಿಯನುಳ್ಳ ಮಹೇಶ್ವರ ಸ್ಥಲವಾಗಿಪ್ಪುದು.

## ಪ್ರಸಾದಿಸ್ಥಲ.

ತದನಂತರದಲ್ಲಿ ಸೆಜ್ಜೆ ವಸ್ತ್ರಂಗಳಲ್ಲಿಪ್ಪ ಶಿವಲಿಂಗಮೂರ್ತಿಯನ್ನು ಒಂದಾನೊಂದು ಸೊಪ್ಪೆಯ ಸಿವುಡ ಹಿರಿವ ಹಾಗೂ ಕುಪ್ಪಸದ ಗಳಿಗೆಯ ತೆಗೆಯುವ ಹಾಗೆಯೂ, ಅಡ್ಡ ಮೋರೆಯ ಹಾಕಿಕೊಂಡು ತೆಗೆಯದೆ ಎಡದ ಹಸ್ತವನ್ನು ಸೆಜ್ಜೆ ಪಾಲಿಕೆಯ ತಾವು ಮಡಿಗಿಕೊಂಡು ಬಲಹಸ್ತದಿಂದ ಲಿಂಗದ ಷಟ್ಸ್ಥಲಂಗಳನ್ನು ಜಿಮ್ಮಗೆ ಪಿಡಿದುಕೊಂಡು ಅತ್ಯಂತ ಸುಯಿಧಾನದಿಂದ ವಾಮಭಾಗದ ಕರಸ್ಥಲಕ್ಕೆ ಬಿಜಯಂಗೈಸಿಕೊಂಬುವುದೇ ಸುಯಿಧಾನ ಭಕ್ತಿಯನುಳ್ಳ ಪ್ರಸಾದಿಸ್ಥಲವಾಗಿಪ್ಪುದು.

## ಪ್ರಾಣಲಿಂಗಿಸ್ಥಲ.

ತದನಂತರದಲ್ಲಿ ಆ ಲಿಂಗಕ್ಕೆ ಭಸ್ಮೋದಕ, ಕುಸುಮೋದಕ, ಕುಳಿರೋದಕ, ಶ್ರೀಗಂಧೋದಕ, ಸ್ವರ್ಣೋದಕ, ರತ್ನೋದಕ, ಮಂತ್ರೋದಕ ಪಾದೋದಕಂಗಳಿಂದ ಮಜ್ಜನಕ್ಕೆರೆದು ಸಣ್ಣ ಧೌತ ವಸ್ತ್ರದಿಂದ ದ್ರವವ ನಾರಿಸಿ ಶುಭ್ರವಾದ ಶ್ರೀವಿಭೂತಿಯನ್ನು ಅತ್ಯಂತ ಸಾವಧಾನದಿಂದ ಧರಿಸಿ ಪುಣ್ಯವು ಪುಟವಿಕ್ಕುವಂತೆಯೂ, ಭಾಗ್ಯವು ಸೂಸುವಂತೆಯೂ ತರವರಿಮ, ಕುಸುಮಾಲಂಕಾರಗಳ ಹಿಂಡು ದಂಡೆಗಳಿಂದ ಪೂಜೆಯನಲಂಕರಿಸಿ, ಆ ಲಿಂಗವನ್ನು ವ್ಯಾಘ್ರದೃಷ್ಟಿ, ಬಕದೃಷ್ಟಿ, ಕುರಂಗದೃಷ್ಟಿ, ಸಂಚಲದೃಷ್ಟಿ, ವ್ಯವಹಾರದೃಷ್ಟಿ, ಊರ್ಧ್ವದೃಷ್ಟಿ, ಅಧೋದೃಷ್ಟಿಗಳಲ್ಲವೊಂದಾನೊಂದು ಅರೆವಿರಿದ ತಾವರೆಯಂತೆ ಅನಿಮಿಷಾವಲೋಕನದಿಂದ ನಿರೀಕ್ಷಿಸುತ್ತ ಆ ಲಿಂಗದ ೨೫ ಲೀಲಾಮೂರ್ತಿಗಳಾದ ಮಹಿಮಾತಿಶಯಗಳನ್ನು ಕಂದ ವೃತ್ತ ಗದ್ಯ ಪದ್ಯ ಸ್ವರ ಸಂಗೀತ ಪ್ರಬಂಧಾದಿಗಳಿಂದ ಸ್ತೋತ್ರ ಮಾಡುವದೇ ಅನುಭಾವ ಭಕ್ತಿಯನುಳ್ಳ ಪ್ರಾಣಲಿಂಗಿಸ್ಥಲವಾಗಿಪ್ಪುದು.

## ಶರಣಸ್ಥಲ.

ತದನಂತರದಲ್ಲಿ ಕ್ರಿಯಾ ಕಾಲದಲ್ಲಿ ಗಡಣಿಸಿ ಬಂದ ಸಕಲ ಪದಾ

ರ್ಥಂಗಳನ್ನು ಶರಣಸತಿ ಲಿಂಗಪತಿ ಎಂಬ ಭಾವದಿಂದ ಲಿಂಗಕ್ಕರ್ಪಿಸಿ, ಆ ಲಿಂಗಪ್ರಸಾದವನ್ನು ಸವಿದು ಆನಂದಿಸುವದೇ ಆನಂದ ಭಕ್ತಿಯನುಳ್ಳ ಶರಣಸ್ಥಲವಾಗಿಪ್ಪುದು.

## ಐಕ್ಯಸ್ಥಲ.

ತದನಂತರದಲ್ಲಿ ಶಿಖಿ ಕರ್ಪೂರ ಸಂಯೋಗವಾದ ಹಾಗೆ ಲಿಂಗದಲ್ಲಿ ತಾ ಕೂಡಿ, ತನ್ನಲ್ಲಿ ಲಿಂಗವು ಕೂಡಿ ತಾನು ಲಿಂಗವೆಂಬ ಉಭಯ ಭಾವವಳಿದು ತಾನೇ ತಾನಾಗಿರುವದೇ ಸಮರಸ ಭಕ್ತಿಯನುಳ್ಳ ಐಕ್ಯಸ್ಥಲವಾಗಿರುವದು.

ಹೀಗೆ ಶಿವಶರಣನು ಶಿವಾರ್ಚನೆಗೆ ಮುಹೂರ್ತವ ಮಾಡಿದುದೇ ಮೊದಲಾಗಿ ಶಿವಾರ್ಪಿತ ಮುಗಿಯುವಷ್ಟರಲ್ಲಿ ಅವೆಲ್ಲವೂ ಷಟ್ಸ್ಥಲಂಗಳಾಗಿರ್ಪವು.

ಶಿವಾನುಭವ ಗ್ರಂಥಮಾಲಾ ನಂ॥ ೩

ಶ್ರೀ

# ಮಹಾದೇವಿಯಕ್ಕನ ವಚನಗಳು.

ಸಂಪಾದಕರು.

**ರಾ॥ ಸಾ॥ ಫ. ಗು. ಹಳಕಟ್ಟಿ.**

ಬಿ. ಎ. ಎಲ್. ಎಲ್ ಬಿ. ವಕೀಲ

**ವಿಜಾಪುರ.**

೧೯೨೬

**ಬೆಲೆ ೬ ಆಣೆ**

# ಪ್ರಸ್ತಾವನೆ.

ಪೂರ್ವ ಕಾಲದ ಶಿವಶರಣರ ವಚನಗಳು ಬಹುಶಃ ಸಮಗ್ರವಾಗಿ ಎಲ್ಲಿಯೂ ಒತ್ತಟ್ಟಿಗೆ ಸಿಗುವದಿಲ್ಲ. ಅವು ಬೇರೆ ಬೇರೆ ವಚನ ಸಂಗ್ರಹಗಳಲ್ಲಿ ಖಂಡಶಃ ದೊರೆಯುತ್ತವೆ. ಆದ್ದರಿಂದ ಈ ವಚನಗಳನ್ನು ಇಂಥ ಸಂಗ್ರಹಗಳೊಳಗಿಂದ ಆರಿಸಿ ಬೇರೆ ತೆಗೆದು ಆಯಾ ವಚನಕಾರರ ಗ್ರಂಥಗಳನ್ನು ರಚಿಸಬೇಕಾಗುತ್ತದೆ. ಈಗ ನಾನು ವಾಚಕರ ಮುಂದೆ ಇಟ್ಟ ಮಹಾದೇವಿಯಕ್ಕನ ವಚನ ಗ್ರಂಥವು ಈ ಪ್ರಕಾರ ರಚಿಸಲ್ಪಟ್ಟದ್ದಾಗಿದೆ. ನನಗೆ ದೊರೆದ ೧೨ ವಚನ ಸಂಗ್ರಹಗಳೊಳಗಿನ ವಚನಗಳನ್ನು ಬೇರೆ ತೆಗೆದು ಅವು ಈ ಗ್ರಂಥದಲ್ಲಿ ಸೇರ್ಪಡಿಸಲ್ಪಟ್ಟಿವೆ. ವಚನ ಸಂಗ್ರಹಗಳಲ್ಲಿ ಈ ವಚನಗಳು ಯಾವ ವಿಷಯಕ್ಕನುಸಾರವಾಗಿಯೂ ಇರದೆ ಅತ್ಯಂತ ಅವ್ಯವಸ್ಥಿತವಾಗಿ ದೊರಕುತ್ತವೆ. ಆದರೆ ಇವೆಲ್ಲವುಗಳನ್ನು ಒತ್ತಟ್ಟಿಗೆ ಕೂಡಿಸಿ ಯಾವ ಪದ್ಧತಿಯ ಮೇರೆಗೆ "ವಚನಶಾಸ್ತ್ರಸಾರ ಗ್ರಂಥ" ವನ್ನು ರಚಿಸಿರುವೆನೋ ಅದೇ ಮಾದರಿಯ ಮೇಲೆ ಈ ವಚನಗಳನ್ನು ವಿಷಯಾನುಸಾರವಾಗಿ ಕ್ರಮ ಪಡಿಸಲು ಯತ್ನಿಸಿದ್ದೇನೆ.

ಮಹಾದೇವಿಯಕ್ಕನ ನಿಜವಾದ ಚರಿತ್ರೆಯು ಇನ್ನೂ ಪೂರ್ಣವಾಗಿ ಶೋಧಿಸಲ್ಪಟ್ಟಿಲ್ಲ. ಚಾಮರಸನು ತನ್ನ ಪ್ರಭುಲಿಂಗ ಲೀಲೆಯಲ್ಲಿ ಈಕೆಯ ಬಗ್ಗೆ ಕೆಲವು ವೃತ್ತಾಂತವನ್ನು ಕೊಟ್ಟಿದ್ದಾನೆ. ಅದರ ಮೇಲಿಂದ ತಿಳಿಯುವದೇನೆಂದರೆ, ಈಕೆಯು ತಂದೆಯು ಹೆಸರು ವಿಮಲ ಮತ್ತು ತಾಯಿಯು ಹೆಸರು ಸುಮತಿ. ಇವರು ದಕ್ಷಿಣ ದೇಶದಲ್ಲಿರುವ ಉಡುತಡಿ ಎಂಬ ಗ್ರಾಮದಲ್ಲಿ ವಾಸಿಸುತ್ತಿದ್ದರು. ಆ ಗ್ರಾಮದಲ್ಲಿ ಕೌಶಿಕನೆಂಬ ಜೈನ ಅರಸನು ಆಳುತ್ತಿದ್ದನು. ಅವನು ಒಂದು ದಿವಸ ಮಹಾದೇವಿಯಕ್ಕನನ್ನು ಅಕಸ್ಮಾತ್ತಾಗಿ ನೋಡಲಾಗಿ, ಆಕೆಗೆ ಮೋಹಿತನಾಗಿ ಆಕೆಯನ್ನು ಲಗ್ನವಾಗಲು ಇಚ್ಛಿಸಿದನು. ಆದರೆ ವೀರಶೈವರಾಗಿದ್ದ ಆಕೆಯ ತಂದೆ ತಾಯಿಗಳು ಇದಕ್ಕೆ ಒಪ್ಪಲಿಲ್ಲ. ಆಗ ಮಹಾದೇವಿಯಕ್ಕನು ರಾಜನಿಂದ ತನ್ನ ತಂದೆ ತಾಯಿಗಳಿಗೆ ಇದರಿಂದ ಏನಾದರೂ ತೊಂದರೆ ಸಂಭವಿಸೀತೆಂದು ತಿಳಿದು, ಇದನ್ನು ಉಪಾಯದಿಂದ ದೂರ ಮಾಡಲು ಉದ್ದೇಶಿಸಿ, ಅರಸನ ಅರ

ಮನೆಗೆ ಹೋಗಲಿಕ್ಕೆಸಿದ್ಧಳಾದಳು. ಮಹಾದೇವಿಯಕ್ಕನು ಅರಸನನ್ನು ಅಲ್ಲಿ ಕಂಡ ಕಾಲಕ್ಕೆ ತನ್ನ ಒಂದು ಪ್ರತಿಜ್ಞೆಯನ್ನು ಪೂರೈಸಿದರೆ ಮದುವೆಯಾಗುವೆನೆಂದು ಅವನಿಗೆ ಹೇಳಿದಳು. ಅದಕ್ಕೆ ಅರಸನು ಒಪ್ಪಿದನು. ಆಗ ಮಹಾದೇವಿಯಕ್ಕನು ನೀನು ವೀರಶೈವ ದೀಕ್ಷೆಯನ್ನು ಹೊಂದಿದರೆ ನಿನ್ನನ್ನು ವರಿಸುವೆನೆಂದು ಹೇಳಿದಳು. ಇದಕ್ಕೆ ಕೌಶಿಕನು ಒಪ್ಪಲಿಲ್ಲ. ಆಗ ಮಹಾದೇವಿಯಕ್ಕನು ಆಜನ್ಮ ಯಾರನ್ನೂ ವರಿಸಲಾರೆನೆಂದು ಪ್ರತಿಜ್ಞೆಯನ್ನು ಮಾಡಿ, ಕೌಶಿಕ ರಾಜನ ಐಶ್ವರ್ಯಾತಿಶಯಗಳನ್ನು ನಿರಾಕರಿಸಿದಳು. ಆಕೆಯ ಈ ತೇಜಃಪುಂಜವಾದ ವರ್ತನೆಗೆ ಅರಸನು ಆಶ್ಚರ್ಯ ಚಕಿತನಾದನು. ಆಗ ಅವನ ವಿಷಯ ವಾಸನೆಯು ಅಡಗಿತು. ಮತ್ತು ಆಕೆಗೆ ಕೈ ಹಚ್ಚಲು ಹಿಂದೆಗೆದನು. ಆಗ ಮಹಾದೇವಿಯಕ್ಕನು ತನ್ನ ಬಂಧು ಬಳಗವನ್ನೂ ಐಶ್ವರ್ಯವನ್ನೂ ತೊರೆದು ಧರ್ಮಾಸಕ್ತಳಾಗಿ ಕಲ್ಯಾಣನಗರಕ್ಕೆ ಬಸವೇಶ್ವರನಿದ್ದಲ್ಲಿಗೆ ಹೊರಟಳು. ಆಕೆಯು ಕಲ್ಯಾಣವನ್ನು ಸೇರಿ ಬಸವೇಶ್ವರನ ಜೊತೆಯಲ್ಲಿಯೇ ಕಾಲಕಳೆಯಲಾರಂಭಿಸಿದಳು. ಅಲ್ಲಿ ಬಸವೇಶ್ವರನ ಶಿವಾನುಭವ ಮಂಟಪದಲ್ಲಿ ಶಿವಶರಣರೊಂದಿಗೆ ಆಕೆಯು ತನ್ನ ಉಚ್ಚತಮ ವಿಚಾರಗಳನ್ನು ಪ್ರಕಟ ಮಾಡುತ್ತಿದ್ದಳು. ಇದರಿಂದ ಮಹಾದೇವಿಯಕ್ಕನು ಎಲ್ಲರಲ್ಲಿಯೂ ಅತ್ಯಂತ ಪೂಜ್ಯತೆಯನ್ನು ಹೊಂದಿದಳು. ಈ ಸಂಗತಿಯು ಚನ್ನಬಸವೇಶ್ವರನ ಕೆಳಗಿನ ವಚನದಿಂದ ಸ್ಪಷ್ಟವಾಗಿ ಕಂಡು ಬರುವಂತೆ ಇದೆ.

> "ಅಜಕೋಟಿ ವರುಷದವರೆಲ್ಲರೂ ಹಿರಿಯರೆ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೆ? ನಡುಮುರಿದು, ತಲೆ ನಡುಗಿ, ನೆರೆತೆರೆ ಹೆಚ್ಚಿ, ಮತಿಗೆಟ್ಟು, ಒಂದನಾಡ ಹೋಗಿ ಒಂಬತ್ತನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೇ? ಅನುವರಿದು, ಘನವ ಬೆರಿಸಿ, ಹಿರಿದು ಕಿರಿದೆಂಬ ಭೇದವ ಮರೆದು ಕೂಡಲ ಚನ್ನಸಂಗಯ್ಯನಲ್ಲಿ ಬೆರಿಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕನಿಗಾಯಿತ್ತು"

ಬಸವೇಶ್ವರನ ಕಾಲಕ್ಕೆ ಶಿವಶರಣರು ಅಸಂಖ್ಯ ವಚನಗಳನ್ನು ರಚಿಸಿ ಧರ್ಮ ಪ್ರಸಾರವನ್ನು ಮಾಡಿದ್ದಾರೆ. ಅದರಂತೆಯೇ ಮಹಾದೇವಿಯಕ್ಕನೂ ಅನೇಕ ವಚನಗಳನ್ನು ರಚಿಸಿದ್ದಾಳೆ. ಇವು ಎಷ್ಟು ಶ್ರೇಷ್ಠತರದ ವಿರುತ್ತವೆಂಬುದು ನಾನು ಪ್ರಸಿದ್ಧಿಸಿದ ಈಗಿನ ಗ್ರಂಥದಿಂದ ತಿಳಿದು ಬರುವಂತೆ ಇದೆ. ಇವು ಅತ್ಯಂತ ಮಧುರವೂ, ಭಾವ ಗರ್ಭಿತವೂ ಆಗಿ

ರುತ್ತಾನೆ. ಇವುಗಳ ಮಹತ್ವವನ್ನು ಚನ್ನಬಸವೇಶ್ವರನು ಕೆಳಗೆ ಬರೆದ ಮೇರೆಗೆ ವರ್ಣಿಸಿದ್ದಾನೆ.

"ಆದ್ಯರ ಅರುವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ, ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭು ದೇವರ ಹತ್ತು ವಚನ, ಪ್ರಭು ದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ, ಅಜಗಣ್ಣನ ಐದು ವಚನಕ್ಕೆ ಕೂಡಲ ಚನ್ನ ಸಂಗಯ್ಯನಲ್ಲಿ ಮಹಾದೇವಿಯಕ್ಕಗಳ ಒಂದು ವಚನ ಕಾಣಾ ಸಿದ್ಧರಾಮಯ್ಯ"

ಈ ಮೇರೆಗೆ ಮಹಾದೇವಿಯಕ್ಕನು ಬಸವೇಶ್ವರನು ಕಲ್ಯಾಣದಲ್ಲಿ ಇರುವವರೆಗೂ ಅವನಲ್ಲಿಯೇ ಇದ್ದಳು. ಮುಂದೆ ವೀರಶೈವರಿಗೂ ಜೈನರಿಗೂ ಕಲಹವು ಉಂಟಾಗಲು ಶರಣರ ಒಂದು ತಂಡವು ಉಳಿವೆಯ ಕಡೆಗೆ ಹೋಯಿತು. ಮತ್ತೊಂದು ತಂಡವು ಶ್ರೀಶೈಲ ಮಲ್ಲಿಕಾರ್ಜುನನ ಕಡೆಗೆ ತೆರಳಿತು. ಆಗ ಮಹಾದೇವಿಯಕ್ಕನು ಅಲ್ಲಮ ಪ್ರಭುವಿನೊಡನೆ ತನ್ನ ಇಷ್ಟ ದೇವತೆಯಾದ ಶ್ರೀಶೈಲ ಮಲ್ಲಿಕಾರ್ಜುನನ ಕಡೆಗೆ ಹೋದಳು. ಮತ್ತು ಅಲ್ಲಿ ಕದಳಿಯ ಬನದಲ್ಲಿ ಶಿವಸಾಯುಜ್ಯವನ್ನು ಹೊಂದಿದಳು.

ಯಾರಲ್ಲಾದರೂ ಮಹಾದೇವಿಯಕ್ಕನ ವಚನಗಳಿದ್ದರೆ, ಅವರು ಅವುಗಳನ್ನು ನಮ್ಮ ಕಡೆಗೆ ಕಳಿಸಿದಲ್ಲಿ ಅವುಗಳನ್ನು ಈ ಗ್ರಂಥದ ೨ನೇ ಆವೃತ್ತಿಯಲ್ಲಿ ಸೇರಿಸುವೆವು. ಈ ಪ್ರಕಾರ ಅವರು ಈ ಮಹಾತ್ಮಳ ವಿಚಾರಗಳನ್ನು ಪ್ರಕಟ ಮಾಡುವ ಕಾರ್ಯದಲ್ಲಿ ಸಹಾಯಕರಾಗಬೇಕೆಂದು ಪ್ರಾರ್ಥಿಸುತ್ತೇವೆ.

ತಾ॥ ೨೩-೭-೨೬ ಫ. ಗು. ಹ

ವಿಜಾಪುರ.

# ಮಹಾದೇವಿಯಕ್ಕನ ವಚನಗಳು.

## ಪರಮಾತ್ಮನ ಸ್ವರೂಪು.

೧. ಈಳೆ ನಿಂಬೆ ಮಾವು ಮಾದಲಕ್ಕೆ ಹುಳಿನೀರನೆರೆದವರಾರಯ್ಯಾ! ಕಬ್ಬು ಬಾಳೆ ಹಲಸು ನಾರಿವಾಳಕ್ಕೆ ಸಿಹಿನೀರನೆರೆದವರಾರಯ್ಯಾ! ಕಳವೆ ಶಾಲಿಗೆ ಓಗರದ ಉದಕವನೆರೆದವರಾರಯ್ಯಾ! ಮರುಗ ಮಲ್ಲಿಗೆ ಪಚ್ಚೆಗೆ ಪರಿಮಳದುದಕವ ನೆರೆದವರಾರಯ್ಯಾ! ಇಂತೀ ಜಲವು ಒಂದೆ, ನೆಲವು ಒಂದೆ, ಆಕಾಶವು ಒಂದೆ. ಒಂದೇ ಜಲವು ಹಲವು ದ್ರವ್ಯಂಗಳ ಕೂಡಿ ತನ್ನ ಪರಿಬೇರಾಗಿ ಹಾಗೆ, ಎನ್ನ ದೇವ ಚನ್ನ ಮಲ್ಲಿಕಾರ್ಜುನಯ್ಯನು ಹಲವು ಜಗಂಗಳ ಕೂಡಿಕೊಂಡಿರ್ದರೇನು, ತನ್ನ ಪರಿಬೇರೆ.

ಈಳೆ= ಕಿತ್ತಳೆ ಅಥವಾ ಕಂಚಿ ಗಿಡ. ಮಾದಲ =ಮಾದಾಳದ ಗಿಡ. ನಾರಿವಾಳ = ತೆಂಗು. ಶಾಲಿ =ಬತ್ತ. ಓಗರ =ಅನ್ನ.

೨ ನೆಲವ ಮರೆಯ ನಿಧಾನದಂತೆ, ಫಲವ ಮರೆಯ ರುಚಿಯಂತೆ, ಸಿಲೆಯ ಮರೆಯ ಹೇಮದಂತೆ, ತಿಲದ ಮರೆಯ ತೈಲದಂತೆ, ಭಾವದ ಮರೆಯ ಬ್ರಹ್ಮವಾಗಿಪ್ಪ ಚನ್ನಮಲ್ಲಿಕಾರ್ಜುನನ ನಿಲವನಾರು ಅರಿಯಬಾರದು.

ನಿಧಾದ= ದ್ರವ್ಯ.

೩. ನೆಲದ ಮರೆಯ ನಿಕ್ಷೇಪದಂತೆ, ಸಿಲೆಯ ಮರೆಯ ಕನಕದಂತೆ ತಿಲದ ಮರೆಯ ತೈಲದಂತೆ, ಮರದ ಮರೆಯ ತೇಜದಂತೆ, ಭಾವದ ಮರೆಯ ಬ್ರಹ್ಮವಾಗಿಪ್ಪ ಚನ್ನಮಲ್ಲಿಕಾರ್ಜುನನ ನಿಲವ ನರಿಯಬಾರದು.

ನಿಕ್ಷೇಪ= ದ್ರವ್ಯ.

೪. ವನವೆಲ್ಲ ನೀವೆ. ವನದೊಳಗಣ ದೇವತರುವೆಲ್ಲ ನೀವೆ. ತರುವಿನೊಳಗಾಡುವ ಖಗ ಮೃಗವೆಲ್ಲ ನೀವೆ. ಚನ್ನ ಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ ಮುಖದೋರ.

ಖಗ= ಪಕ್ಷಿ.

೫. ತನ್ನ ವಿನೋದಕ್ಕೆ ತಾನೇ ಸೃಷ್ಟಿಸಿದ ಸಕಲ ಪ್ರಪಂಚವನು. ತನ್ನ ವಿನೋದಕ್ಕೆ ತಾನೇ ತಿರುಗಿಸಿದ ಅನಂತ ಮುಖಂಗಳಲ್ಲಿ. ಇಂತೆನ್ನ ಚನ್ನಮಲ್ಲಿಕಾರ್ಜುನ ದೇವನೆಂಬ ಪರಶಿವನು ತನ್ನ ಜಗದ್ವಿಲಾಸ ಸಾಕಾದಡೆ ಮತ್ತೆ ತಾನೇ ಪರಿವನದರ ಮಾಯಾಪಾಶವನು.

ಪರಿ = ಹರಿ, ನಾಶಮಾಡು.

೬. ಅರಿದೆನೆಂದರೆ ಅರಿಯಬಾರದು ನೋಡಾ! ಘನಕ್ಕೆ ಘನ ತಾನೆ ನೋಡಾ! ಚನ್ನಮಲ್ಲಿಕಾರ್ಜುನನ ನಿರ್ಣಯವಿಲ್ಲದೆ ಪೋದೆನು.

## ಸಂಸಾರ ಹ್ಯೇಯ.

೧. ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಯ ಮಾಡಿ, ತನ್ನ ನೂಲು ತನ್ನ ಸುತ್ತಿಸಾವ ತೆರನಂತೆ, ಮನಬಂದುದ ಬಯಸಿ ಬೇವುತ್ತಿದ್ದೇನೆ, ಅಯ್ಯ! ಎನ್ನ ಮನದ ದುರಾಶೆಯ ಮಾಣಿಸಿ ನಿಮ್ಮತ್ತ ತೋರಾ ಚನ್ನಮಲ್ಲಿಕಾರ್ಜುನಾ.

ಸ್ನೇಹ = ಜಿಗಟು, ಎಣ್ಣೆ. ಮಾಣಿಸಿ = ಬಿಡಿಸಿ.

೨. ಸಂಸಾರ ಬೆಂಬಿಡದೆ ಕಾಡುತ್ತಿದೆಯಯ್ಯಾ! ಏವೆನೇವೆನಯ್ಯಾ! ಅಂದಂದಿನ ದಂದುಗಕ್ಕೆ ಏವೆನೇವೆನಯ್ಯಾ! ಬೆಂದ ಒಡಲ ಹೊರೆವುದಕ್ಕೆ ನಾನಾರೆ. ಚನ್ನಮಲ್ಲಿಕಾರ್ಜುನಯ್ಯಾ, ಕೊಲ್ಲು, ಕಾಯಿ, ನಿಮ್ಮ ಧರ್ಮ.

ಏವೆನು = ಏನು ಮಾಡಲಿ. ದಂದುಗ = ತೊಂದರೆ. ಆರೆ = ಶಕ್ತನಲ್ಲ.

೩. ಸಂಸಾರವೆಂಬ ಹಗೆಯಯ್ಯಾ ತಂದೆ. ಎನ್ನ ವಂಶ ವಂಶದಪ್ಪದೆ ಅರಸಿಕೊಂಡು ಬರುತ್ತಿದೆಯಯ್ಯಾ! ಎನ್ನವನರಸಿ ಯರಸಿ ಹಿಡಿದು ಕೊಲ್ಲುತ್ತಿದೆಯಯ್ಯಾ! ನಿಮ್ಮ ಮರೆವೊಕ್ಕೆ ಕಾಯಯ್ಯಾ! ಎನ್ನ ಬಿನ್ನಪವನವಧಾರು, ಚನ್ನ ಮಲ್ಲಿಕಾರ್ಜುನಾ.

ಅರಸು = ಹುಡುಕು. ಬಿನ್ನಪ = ವಿನಂತಿ. ಅವಧಾರು = ಲಕ್ಷಿಸು.

೪. ಎನ್ನ ಮಾಯದ ಮದವ ಮುರಿಯಯ್ಯಾ! ಯನ್ನ ಕಾಯದ ಕತ್ತಲೆಯ ಕಳೆಯಯ್ಯಾ! ಎನ್ನ ಜೀವದ ಜಂಜಡವ ಮಾಣಿಸಯ್ಯಾ! ಎನ್ನ ದೇವ ಚನ್ನಮಲ್ಲಿಕಾರ್ಜುನ ದೇವಯ್ಯಾ, ಎನ್ನ ಸುತ್ತಿದ ಪ್ರಪಂಚವ ಬಿಡಿಸು ನಿಮ್ಮ ಧರ್ಮ.

ಜಂಜಡ = ತೊಂದರೆ.

೫ ಒಂದಲ್ಲ, ಎರಡಲ್ಲ, ಮೂರಲ್ಲ, ನಾಲ್ಕಲ್ಲ, ಎಂಬತ್ತು ನಾಲ್ಕು ಲಕ್ಷ ಯೋನಿಯೊಳಗೆ ಬಂದೆ ಬಂದೆ. ಬಾರದ ಭವಂಗಳನುಂಡೆನುಂಡೆ. ಶುಭಾಶುಭಂಗಳ ಹಿಂದಣ ಜನ್ಮಂಗಳೇನಾದಡೂ ಆಗಲಿ! ಮುಂದೆ ನೀ ಕರುಣಿಸಾ ಚನ್ನ ಮಲ್ಲಿಕಾರ್ಜುನಾ.

೬. ಊರ ಸೀರೆಗೆ ಅಸಗ ತಡಬಡಗೊಂಬಂತೆ ಹೊನ್ನೆನ್ನದು, ಹೆಣ್ಣೆನ್ನದು, ಮಣ್ಣೆನ್ನದು ಎಂದು ನೆನೆನೆನೆದು ನಿಮ್ಮನರಿಯದ ಕಾರಣ ಕೆಮ್ಮನೆ ಕೆಟ್ಟೆನಯ್ಯಾ ಚನ್ನ ಮಲ್ಲಿಕಾರ್ಜುನಯ್ಯಾ.

ತಡಬಡಗೊಳ್ಳು =ಮೇಲಾಡು. ಕೆಮ್ಮನೆ= ವ್ಯರ್ಥವಾಗಿ.

೭. ಕಲ್ಲ ಹೊಕ್ಕರೆ ಕಲ್ಲ ಬರಿಸಿದೆ, ಗಿರಿಯ ಹೊಕ್ಕರೆ ಗಿರಿಯ ಬರಿಸಿದೆ. ಭಾಪು ಸಂಸಾರವೆ! ಬೆನ್ನಿಂದ ಬೆನ್ನ ಹತ್ತಿ ಬಂದೆ. ಚನ್ನ ಮಲ್ಲಿಕಾರ್ಜುನಯ್ಯ, ಇನ್ನೇವೆನಿನ್ನೇವೆ?

೮. ಆಲಿಸೆನ್ನ ಬಿನ್ನಪವ, ಲಾಲಿಸೆನ್ನ ಬಿನ್ನಪವ, ಪಾಲಿಸೆನ್ನ ಬಿನ್ನಪವ. ಏಕೆನ್ನ ಮೊರೆಯು ನೋಡೆನ್ನ ದುಃಖವ ಚನ್ನ ಮಲ್ಲಿಕಾರ್ಜುನಯ್ಯಾ?

ಆಲಿಸು = ಕೇಳು. ಲಾಲಿಸು =ಲಕ್ಷಕೊಟ್ಟು ಕೇಳು.

೯. ಬಲ್ಲಿದನ ಹಗೆಯು ತೆಗೆವನ್ನ ಬರ ಬಡವನ ಹರಣ ಹೋದ ತೆರನಂತಾಯಿತ್ತು. ನೀ ಕಾಡಿ ನೋಡುವನ್ನಬರ, ಎನಗಿದು ವಿಧಿಯೇ ಹೇಳಾ ತಂದೆ? ಮೂರುವಾರುವನ್ನ ಬರ, ಒಮ್ಮೆ ಗಾಳಿಗೆ ಹಾರಿ ಹೋದತೆರನಂತಾಯಿತ್ತು. ಎನಗೆ ನೀನಾವ ಪರಿಯಲ್ಲಿ ಕರುಣಿಸುವೆಯಯ್ಯ ಚನ್ನ ಮಲ್ಲಿಕಾರ್ಜುನಾ?

ಬಲ್ಲಿದ = ಶಕ್ತಿವಂತ.

೧೦. ಪುಣ್ಯ ಪಾಪಂಗಳನರಿಯದ ಮೊದಲು, ಅನೇಕ ಭವಂಗಳಲ್ಲಿ ಬಂದೆನಯ್ಯಾ! ನಂಬಿ ಶರಣುವೊಕ್ಕೆನಯ್ಯಾ! ನಿಮ್ಮನೆಂದೂ ಅಗಲದಂತೆ ಮಾಡಿ ನಡಿಸಯ್ಯಾ! ನಿಮ್ಮ ಧರ್ಮ, ನಿಮ್ಮ ಧರ್ಮ ನಿಮ್ಮನೊಂದನೇ ಬೇಡುವೆನು; ಎನ್ನ ಬಂಧನವ ಬಿಡುವಂತೆ ಮಾಡಯ್ಯಾ ಶ್ರೀ ಚನ್ನ ಮಲ್ಲಿಕಾರ್ಜುನಾ.

೧೧. ಆವಾಗಳು ಎನ್ನ ಮನ ಉದರಕ್ಕೆ ಹರಿವುದು. ಕಾಣಲಾರೆನಯ್ಯ, ನಿಮ್ಮುವನು. ಭೇದಿಸಲರಿಯೆನಯ್ಯ! ಮಾಯದ ಸಂಸಾರದಲ್ಲಿ ಸಿಲುಕಿದೆನು. ಎನ್ನ ದೇವ ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಹೊದ್ದುವಂತೆ ಮಾಡಾ ನಿಮ್ಮ ಧರ್ಮ.

ಭೇದಿಸು = ತಿಳಿ.

೧೨. ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ, ಎಲುವಿನ ತಡಿಕೆ, ಕೀವಿನ ಹಡಿಕೆ. ಸುಡಲೀ ದೇಹವ. ಒಡಲುವಿಡಿದು ಕೆಡದಿರು. ಚನ್ನ ಮಲ್ಲಿಕಾರ್ಜುನನರಿ ಮರುಳೇ.

ಅಮೇಧ್ಯ= ಅಶುದ್ಧ ವಸ್ತು, ಮಲ. ಹಡಿಕೆ =ಹೊಲಸು. ತಡಿಕೆ =ಬಿದಿರಿನ ತಟ್ಟಿ.

೧೩. ಕಾಯಕ್ಕೆ ನೆಳಲಾಗಿ ಕಾಡಿತ್ತು ಮಾಯೆ. ಪ್ರಾಣಕ್ಕೆ ಮನವಾಗಿ ಕಾಡಿತ್ತು ಮಾಯೆ. ಮನಕ್ಕೆ ನೆನಹಾಗಿ ಕಾಡಿತ್ತು ಮಾಯೆ. ನೆನಹಿಂಗೆ ಅರಿವಾಗಿ ಕಾಡಿತ್ತು ಮಾಯೆ. ಜಗದ ಜಂಗುಳಿಗಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ. ಚನ್ನ ಮಲ್ಲಿಕಾರ್ಜುನ, ನೀನೊಡ್ಡಿದ ಮಾಯೆಯನಾರೂ ಗೆಲಲಾರರು.

ನೆನಹು = ಧ್ಯಾನ. ಅರಿವು =ತಿಳಿವಳಿಕೆ. ಜಂಗುಳಿ= ಜನ ಸಮುದಾಯ. ಬೆಂಗೋಲ =ಬಾರಕೋಲ.

೧೪. ಪುರುಷನ ಮುಂದೆ ಮಾಯೆ ಸ್ತ್ರೀ ಎಂಬ ಅಭಿಮಾನವಾಗಿ ಕಾಡಿತ್ತು ನೋಡಾ! ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡಿತ್ತು ನೋಡಾ! ಲೋಕವೆಂಬ ಮಾಯೆಗೆ ಶರಣಚಾರಿತ್ರ ಮರುಳಾಗಿ ತೋರುವುದು ನೋಡಾ! ಚನ್ನ ಮಲ್ಲಿಕಾರ್ಜುನ ನೊಲಿದ ಶರಣಂಗೆ ಮಾಯೆ ಇಲ್ಲ, ಮರಹಿಲ್ಲ, ಅಭಿಮಾನವೂ ಇಲ್ಲ.

ಮರಹು = ಅಜ್ಞಾನ.

೧೫. ಬಿಟ್ಟೆನೆಂದರೆ ಬಿಡದೀ ಮಾಯೆ. ಬಿಡದಿದ್ದರೆ ಬೆಂಬತ್ತಿತ್ತು ಮಾಯೆ. ಯೋಗಿಗೆ ಯೋಗಿಣಿಯಾಯಿತ್ತು ಮಾಯೆ. ಸವಣಗೆ ಸವಣಿಯಾಯಿತ್ತು ಮಾಯೆ. ಯತಿಗೆ ಪರಾಕಿಯಾಯಿತ್ತು ಮಾಯೆ. ನಿನ್ನ ಮಾಯೆಗೆ ನಾನಂಜುವಳಲ್ಲ ಚನ್ನ ಮಲ್ಲಿಕಾರ್ಜುನ ದೇವ ನಿಮ್ಮಾಣೆ.

ಸವಣ= ಜೈನ ಸನ್ಯಾಸಿ. ಪರಾಕಿ = ಭಷ್ಟಂಗಿ.

೧೬. ಹರಿಯ ನುಂಗಿತ್ತು ಮಾಯೆ. ಅಜನ ನುಂಗಿತ್ತು ಮಾಯೆ. ಇಂದ್ರನ ನುಂಗಿತ್ತು ಮಾಯೆ. ಚಂದ್ರನ ನುಂಗಿತ್ತು ಮಾಯೆ. ಬಲ್ಲೆನೆಂಬ ಬಲುಗಯ್ಯರ ನುಂಗಿತ್ತು ಮಾಯೆ. ಅರಿಯೆನೆಂಬ ಅಜ್ಞಾನಿಗಳ ನುಂಗಿತ್ತು ಮಾಯೆ. ಈರೇಳು ಭುವನವನಾರಡಿಗೊಂಡಿತ್ತು ಮಾಯೆ. ಚನ್ನ ಮಲ್ಲಿಕಾರ್ಜುನಯ್ಯ, ಎನ್ನ ಮಾಯೆಯ ಮಾಣಿಸಾ ಕರುಣಿ.

ಅಜ = ಬ್ರಹ್ಮ. ಬಲುಗಯ್ಯ = ಗಟ್ಟಿಗ. ಈರೇಳು =ಹದಿನಾಲ್ಕು. ಆರಡಿ

ಗೊಳ್ಪು = ತೊಂದರೆ ಕೊಡು.

೧೭. ಎನಗೇಕಯ್ಯಾ ಸಾವ ಪ್ರಪಂಚಿನ ಪುತ್ಥಳಿ? ಮಾಯಿಕದ ಮಲಭಾಂಡ ಆತುರದ ಭವನಿಳಯ ಎನಗೇಕಯ್ಯಾ? ಬೆರಳು ತಾಳ ಹಣ್ಣ ಹಿಸುಕಿದಡೆ, ಮೆಲಲುಂಟೆ? ಎನ್ನ ತಪ್ಪ ಒಪ್ಪುಗೊಳ್ಳಾ ಚನ್ನ ಮಲ್ಲಿಕಾರ್ಜುನ ದೇವಾ.

ಮಾಯಿಕ = ಮಾಯಾ ಸಂಬಂಧಿ. ನಿಳಯ = ಮನೆ. ಹಿಸುಕು = ಹಿಚುಕು. ಮೆಲು = ತಿನ್ನು.

೧೮. ಅಯ್ಯಾ, ಸರ್ವಮೂಲಾಹಂಕಾರವಿಡಿದು, ಕುಲಭ್ರಮೆ, ಛಲಭ್ರಮೆ, ಜಾತಿಭ್ರಮೆ, ನಾಮವರ್ಣ ಆಶ್ರಮ ಮತ ಶಾಸ್ತ್ರ ಭ್ರಮೆ, ರಾಜ್ಯಭ್ರಮೆ, ಧನ ಧಾನ್ಯ ಪುತ್ರಮಿತ್ರ ಐಶ್ವರ್ಯ ತ್ಯಾಗ ಯೋಗಭ್ರಮೆ, ಕಾಯ ಕರಣ ವಿಷಯಭ್ರಮೆ, ವಾಯು ಮನ ಭಾವ ಜೀವ ಮೋಹ ಭ್ರಮೆ, ನಾಹಂ ಕೋಹಂ ಭ್ರಮೆ, ಶಿವೋಹಂ ಭ್ರಮೆ, ಮಾಯಾ ಭ್ರಮೆ, ಮೊದಲಾದ ಮೂವತ್ತೆರಡು ಪಾಶಾ ಭ್ರಮಿತರಾಗಿ ತೊಳಲುವ ವೇಷಧಾರಿಗಳ ಕಂಡು, ಶಿವಭಕ್ತಿ ಶಿವಭಕ್ತ ಶಿವಪ್ರಸಾದಿ ಶಿವಶರಣ ಶಿವೈಕ್ಯ ಶಿವಜಂಗಮವೆಂದು ನುಡಿಯಲಾರದೆ, ಎನ್ನ ಮನ ನಾಚಿ ನಿಮ್ಮಡಿಗಭಿಮುಖವಾಯಿತಯ್ಯಾ ಚನ್ನ ಮಲ್ಲಿಕಾರ್ಜುನ.

ತೊಳಲು = ತಿರುಗಾಡು.

೧೯. ಅಯ್ಯಾ ಆದಿ ಅನಾದಿಯಿಂದತ್ತತ್ತ ಮೀರಿ ತೋರುವ ನಿತ್ಯ ನಿರಂಜನ ಗುರುಲಿಂಗಜಂಗಮ ಶಿವಶರಣರ ಸತ್ಯ ಸನ್ಮಾರ್ಗದ ಗೊತ್ತಿನ ಮರಿಯಾದೆಯನರಿಯದೆ, ಮರ್ತ್ಯದ ಜಡಜೀವಿ ಭವಿ ಪ್ರಾಣಿಗಳ ಹಾಗೆ ಗುಹ್ಯಾಲಂಪಟಕ್ಕಿಚ್ಚೈಸಿ, ದಾಸಿ ವೇಶಿಯರ ಕೂಡಿಕೊಂಡು ಭುಂಜಿಸಿ ಷಟ್ಸ್ಥಲ ಬ್ರಹ್ಮಾನುಭಾವವ ಕೇಳಿ ಹೇಳುವ ಮೂಳಚುಕ್ಕೆಯರ ಕಂಡು ಎನ್ನ ಮನ ನಾಚಿತ್ತು ಕಾಣಾ. ಅವ್ವ ನೀಲಮ್ಮನ ಮೋಹದ ಮಗಳೆ, ಅಪ್ಪ ಬಸವಣ್ಣನ ಸುಚಿತ್ತದ ಪುತ್ಥಳೆ, ನಿಃಕಳಂಕ ಸದ್ಗುರು ಪ್ರಭುದೇವರ ಸತ್ಯದ ಸೊಸೆಯೇ, ಚನ್ನ ಮಲ್ಲಿಕಾರ್ಜುನನರ್ಧಾಂಗಿನಿಯೆ, ಚಿಕ್ಕಯ್ಯ ಪ್ರಿಯ ಸಿದ್ಧಲಿಂಗನೊಡ ಹುಟ್ಟಿದಳೆ, ಕೇಳವ್ವ ಇದು ಮರ್ತ್ಯದ ಜಡಜೀವಿ ಭ್ರಷ್ಟರ ಬಾಳುವೆ ಎಂದೆ.

ನಿರಂಜನ = ಶುದ್ಧ. ಗೊತ್ತು = ಆಶ್ರಯ ಸ್ಥಳ. ಮೂಳ = ಮೂಢ. ಚುಕ್ಕೆ = ಕ್ಷುಲಕ ಮನುಷ್ಯ, ತಪ್ಪುಗಾರ.

## ಲಿಂಗಧಾರಣ.

೧ ಶ್ರೀ ಗುರುಲಿಂಗ ದೇವರು ತಮ್ಮ ಹಸ್ತವ ತಂದು ಎನ್ನ ಮಸ್ತಕದ ಮೇಲೆ ಇರಿಸಿದಾಗಳೇ ಎನ್ನ ಭವಂ ನಾಸ್ತಿಯಾಯಿತ್ತು. ಎನ್ನ ತನ್ನಂತೆ ಮಾಡಿದ. ಎನಗೆ ತನಗೆ ತೆರಹಿಲ್ಲವಂತೆ ಮಾಡಿ ತೋರಿದನು ನೋಡಾ! ತನ್ನ ಕರಸ್ಥಲದಲ್ಲಿದ್ದ ಮಹಾಲಿಂಗವನೆನ್ನ ಕರಸ್ಥಲದಲ್ಲಿ ಮೂರ್ತಿಗೊಳಿಸಿದ. ಎನ್ನ ಕರಸ್ಥಲದಲ್ಲಿದ್ದ ಮಹಾಲಿಂಗವನು ಎನ್ನ ಮನಸ್ಥಲದಲ್ಲಿ ಮೂರ್ತಿಗೊಳಿಸಿದ. ಎನ್ನ ಮನಸ್ಥಲದಲ್ಲಿದ್ದ ಮಹಾಲಿಂಗವನು ಎನ್ನ ಭಾವಸ್ಥಲದಲ್ಲಿ ಮೂರ್ತಿಗೊಳಿಸಿದ. ಎನ್ನ ಭಾವಸ್ಥಲದಲ್ಲಿದ್ದ ಮಹಾಲಿಂಗವನು ಎನ್ನ ಜ್ಞಾನಸ್ಥಲದಲ್ಲಿ ಮೂರ್ತಿಗೊಳಿಸಿದ. ಎನ್ನ ಜ್ಞಾನಸ್ಥಲದಲ್ಲಿದ್ದ ಮಹಾಲಿಂಗವನು ಎನ್ನ ಸರ್ವಾಂಗದೊಳ ಹೊರಗೆ ತೆರಹಿಲ್ಲದಳವಡಿಸಿದ ನಮ್ಮ ಶ್ರೀ ಗುರುಲಿಂಗದೇವ ಚನ್ನಮಲ್ಲಿಕಾರ್ಜುನಾ.

ತೆರಹು = ಸ್ಥಳ.

೨. ಸಂಸಾರ ಸಾಗರದೊಳಗೆ ಬಿದ್ದೆ ನೋಡಾ ನಾನು. ಸಂಸಾರ ನಿಸ್ಸಾರವೆಂದು ತೋರಿದನೆನಗೆ ಗುರು. ಅಂಗವಿಕಾರದ ಸಂಗವ ನಿಲಿಸಿ ಲಿಂಗವನಂಗದಮೇಲೆ ಸ್ಥಾಪ್ಯವ ಮಾಡಿದನೆನ್ನ ಗುರು. ಹಿಂದಣ ಜನ್ಮವ ತೊಡೆದು ಮುಂದಣ ಪಥವ ತೋರಿದನೆನ್ನ ತಂದೆ. ಚನ್ನಮಲ್ಲಿಕಾರ್ಜುನನ ನಿಜವನರುಹಿದನೆನ್ನ ಗುರು

ತೊಡೆ = ಒರಸು, ಅಳುಕಿಸು; ಪಥ = ದಾರಿ

೩. ಅಂಗದಲ್ಲಿ ಆಚಾರವ ತೋರಿದ. ಆ ಆಚಾರವೇ ಲಿಂಗವೆಂದರುಹಿದ. ಪ್ರಾಣದಲ್ಲಿ ಅರಿವ ನೆಲೆಗೊಳಿಸಿದ- ಆ ಅರಿವೇ ಜಂಗಮವೆಂದು ತೋರಿದ. ಚನ್ನಮಲ್ಲಿಕಾರ್ಜುನನ ಹೆತ್ತ ತಂದೆ ಸಂಗನ ಬಸವಣ್ಣನು ಎನಗೀ ಕ್ರಮವನರುಹಿದನಯ್ಯ.

೪. ಅಯ್ಯಾ ಪಾತಾಳ ವಿತ್ತಿತ್ತ, ಶ್ರೀಪಾದವತ್ತತ್ತ. ಬ್ರಹ್ಮಾಂಡ ವಿತ್ತಿತ್ತ, ಮಣಿಮಕುಟವತ್ತತ್ತ. ಅಯ್ಯ ದಶದಿಕ್ಕು ಇತ್ತಿತ್ತ, ದಶಭುಜಗಳತ್ತತ್ತ. ಚನ್ನಮಲ್ಲಿಕಾರ್ಜುನಯ್ಯ ನೀನೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ.

ಚುಳುಕು = ಸೂಕ್ಷ್ಮ, ಸಣ್ಣ

## ಸತಿ ಪತಿ ಭಾವದ ವಚನಗಳು.

೫. ಹರನೇನೀನೆನಗೆ ಗಂಡನಾಗಬೇಕೆಂದು ಅನಂತ ಕಾಲತಪ

ಸಿದ್ದೆ ನೋಡಾ. ಹಸೆಯ ಮೇಲಣ ಮಾತ ಬೆಸಗೊಳಲಟ್ಟಿದರೆ, ಶಶಿಧರನ ಹತ್ತಿರಕ್ಕೆ ಕಳುಹಿದರೆಮ್ಮವರು. ಭಸ್ಮವನೆ ಹೂಸಿ, ಕಂಕಣವನೇ ಕಟ್ಟಿದರು, ಚನ್ನಮಲ್ಲಿಕಾರ್ಜುನಯ್ಯಾ, ನನಗೆ ನೀನಾಗಬೇಕೆಂದು.

ಹಸೆ =ಆಸನ, ಲಗ್ನಕ್ಕಾಗಿ ಶೃಂಗರಿಸಿದ ಸ್ಥಳ; ಬೆಸಗೊಳ್ಳು= ಪ್ರಶ್ನೆ ಮಾಡು;

೬. ಪಚ್ಚೆಯ ನೆಲಗಟ್ಟು, ಕನಕದ ತೋರಣ, ವಜ್ರದ ಕಂಭ, ಪವಳದ ಚಪ್ಪರವನಿಕ್ಕಿ ಮುತ್ತು ಮಾಣಿಕದ ಮೇಲು ಕಟ್ಟು ಕಟ್ಟಿ, ಮದುವೆಯ ಮಾಡಿದರು, ನಮ್ಮವರೆನ್ನ ಮದುವೆಯ ಮಾಡಿದರು. ಕಂಕಣ ಕೈದಾರ ಸ್ಥಿರ ಸೇಸೆಯನಿಕ್ಕಿ, ಚನ್ನಮಲ್ಲಿಕಾರ್ಜುನನೆಂಬ ಗಂಡಗೆನ್ನ ಮದುವೆಯ ಮಾಡಿದರು.

ಶಶಿಧರ= ಈಶ್ವರ

೭. ಜಲದ ಮಂಟಪದ ಮೇಲೆ ಉರಿಯ ಚಪ್ಪರವನಿಕ್ಕಿ, ಆಲಿಕಲ್ಲ ಹಸೆಯ ಹಾಸಿ, ಕಾಲಿಲ್ಲದ ಹೆಂಡತಿಗೆ, ತಲೆಯಿಲ್ಲದ ಗಂಡಬಂದು ಮದುವೆಯಾದನು. ಎಂದೆಂದೂ ಬಿಡದ ಬಾಳುವೆಗೆ ಕೊಟ್ಟರೆನ್ನ ಚನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ ಮದುವೆಯ ಮಾಡಿದರು.

ಚಪ್ಪರ= ಹಂದರ; ಸೇಸೆ = ಲಗ್ನದಲ್ಲಿ ಹಾಕುವ ಅಕ್ಕೀಕಾಳು

೮. ಗುರುವೇ ತೆತ್ತಿಗನಾದ, ಲಿಂಗವೇ ಮದುವಣಿಗನಾದ, ಆನು ಮದುವಳಿಗೆ ಯಾದೆನು. ವಸುಧೆಯ ಭಕ್ತರೆಲ್ಲರು ನಿಬ್ಬಣಿಗರಾದರು. ಕೊಟ್ಟರು ಸಾದೃಶ್ಯವಪ್ಪಗಂಡನ ನೋಡಿ. ಇದು ಕಾರಣ ಚನ್ನಮಲ್ಲಿಕಾರ್ಜುನಯ್ಯನೇ ಗಂಡನೆನಗೆ

ಆಲಿಕಲ್ಲು= ಆಣೀಕಲ್ಲು, ಮದುವಣಿಗ = ಮದುಮಗ; ವಸುಧೆ = ಭೂಮಿ ತೆತ್ತಿಗ= ಹಿತಸ್ಥ, ಮಿತ್ರ; ಸಾದೃಶ್ಯ = ತನಗೆ ತಕ್ಕ

೯. ಮಂಗಳವೇ ಮಜ್ಜನವೆನಗೆ, ವಿಭೂತಿಯೇ ಒಳುಗುಂದದ ರಿಸಿನವೆನಗೆ, ದಿಗಂಬರವೇ ದಿವ್ಯಾಂಬರವೆನಗೆ, ಶಿವಪಾದರೇಣುವೆ ಅನುಲೇಪನವೆನಗೆ, ರುದ್ರಾಕ್ಷಿಯೇ ವೈದೊಡಿಗೆ ಎನಗೆ, ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ, ಚನ್ನಮಲ್ಲಿಕಾರ್ಜುನನೇ ಗಂಡ ನೆನಗೆ, ಆನು ಚನ್ನಮಲ್ಲಿಕಾರ್ಜುನಂಗೆ ಮದುವಳಿಗೆ, ಎನಗೆ ಬೇರೆ ಶೃಂಗಾರವೇಕೆ ಹೇಳಿರವ್ವಾ?

ಒಳ್ಪುಗುಂದದ= ಸೌಂದರ್ಯವು ಬಾಡದ; ಅಂಬರ= ಅರಿವೆ; ರೇಣು = ಧೂಳು;

೧೦. ಅತ್ತೆ ಮಾಯೆ, ಮಾವ ಸಂಸಾರಿ, ಮುಪ್ಪರು ಮೈದುನರು ಹುಲಿ

ಯಂತವರು, ನಲ್ಲನು ನಗೆವೆಣ್ಣು ಕೆಳದಿಯರ ಭಾವದಲಿರುವನು. ಇವನೇ ವನಲ್ಲ. ಅತ್ತಿಗೆಯರ ಮೀರಲಾರೆನು. ತೊತ್ತುವಿನ ಕಾವಲು- ಹೇಳುವರ ಕೇಳು, ಕರ್ಮವೆಂಬ ಗಂಡನ ಬಾಯಟೊಣೆದು, ಹಾದರವ ನಾಡುವೆನು ಹರನ ಕೂಡೆ. ಮನವೆಂಬ ಸಖಿಯ ಪ್ರಸಾದದಿಂದ ಅನುಭಾವವ ಕಲಿತೆನು ಶಿವನೊಡನೆ. ಕರಚೆಲ್ವ ಶ್ರೀ ಶೈಲ ಚನ್ನಮಲ್ಲಿಕಾರ್ಜುನನ ಸಜ್ಜನ ಗಂಡನ ಮಾಡಿಕೊಂಬೆ.

ನಗೆವೆಣ್ಣು = ನಗುವ ಹೆಂಗಸು; ಕೆಳದಿ = ಗೆಳತಿ; ಟೊಣೆ = ಸುಳ್ಳು ಹೇಳು ಠಕ್ಕಿಸು; ಅನುಭಾವ = ಜ್ಞಾನ; ಕರ = ಅತ್ಯಂತ

೧೧ ಎನ್ನಂತೆ ಪುಣ್ಯ ಗೈದವರುಂಟೆ? ಎನ್ನಂತೆ ಭಾಗ್ಯಗೈಯ್ದುವರುಂಟೆ? ಕಿನ್ನರನಂತಪ್ಪ ಸಹೋದರರೆನಗೆ. ಏಳೇಳು ಜನ್ಮದಲಿ ಶಿವಭಕ್ತರೇ ಬಂಧುಗಳೆನಗೆ. ಚನ್ನಮಲ್ಲಿಕಾರ್ಜುನ ನಂತಪ್ಪ ಗಂಡ ನೋಡಾ ಎನಗೆ.

## ಗುರುವಿನ ಮಹತ್ವ.

೧. ಒಳಗೆ ಶೋಧಿಸಿ ಹೊರಗೆ ಶುದ್ಧವಿಸಿ, ಒಳಹೊರಗೆಂಬ ಉಭಯ ಶಂಕೆಯ ಕಳೆದು, ಸ್ಫಟಿಕದ ಶಲಾಕೆಯಂತೆ ತಳವೆಳಗು ಮಾಡಿ, ಸುಕ್ಷೇತ್ರವನರಿದು ಬೀಜವ ಬಿತ್ತುವಂತೆ ಶಿಷ್ಯನ ಸರ್ವ ಪ್ರಪಂಚ ನಿವೃತ್ತಿಯಂ ಮಾಡಿ, ನಿಜೋಪದೇಶವನಿತ್ತು. ಆ ಶಿಷ್ಯನ ನಿಜದಾದಿಯ ನೈದಿಸುವ ನೀಗಜ್ಞಾನ ಗುರು. ಆ ಸಹಜ ಗುರುವೀಗ ಜಗದಾರಾಧ್ಯರು. ಅವರ ಶ್ರೀಪಾದಕ್ಕೆ ನಮೋ ನಮೋ ಎಂಬೆ ಕಾಣಾ ಚನ್ನಮಲ್ಲಿಕಾರ್ಜುನಾ.

ತಳವೆಳಗು = ಪೂರ್ಣ ಪ್ರಕಾಶ; ಸುಕ್ಷೇತ್ರ = ಹಸನಾದ ಹೊಲ; ಐದಿಸು = ಮುಟ್ಟಿಸು

೨. ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ, ಭವಬಂಧನವ ಬಿಡಿಸಿ ಪರಮ ಸುಖವ ತೋರಿದ ಗುರುವೇ, ಭವಿ ಎಂಬುದ ತೊಡೆದು ಭಕ್ತೆ ಎಂದೆನಿಸಿದ ಗುರುವೇ, ಚನ್ನಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಗುರುವೇ ಶರಣು.

೩. ನಿತ್ಯವೆನ್ನ ಮನೆಗೆ ನಡೆದು ಬಂದಿತ್ತು. ಮುಕ್ತಿ ಎನ್ನ ಮನೆಗೆ ನಡೆದು ಬಂದಿತ್ತು; ಜಯ ಜಯ ಗುರುವೇ, ನಮೋ ಪರಮ ಗುರುವೇ, ನಮೋ ನಮೋ, ಚನ್ನಮಲ್ಲಿಕಾರ್ಜುನನ ತಂದೆನಗೆ ತೋರಿಕೊಟ್ಟ ಗುರು

ಪೆ. ನಮೋ ನಮೋ.

೪. ಗುರುವಿನ ಕರುಣದಿಂದ ಲಿಂಗ ಜಂಗಮವ ಕಂಡೆ. ಗುರುವಿನ ಕರುಣದಿಂದ ಪಾದೋದಕ ಪ್ರಸಾದವ ಕಂಡೆ. ಗುರುವಿನ ಕರುಣದಿಂದ ಸಜ್ಜನ ಸದ್ಭಕ್ತರ ಗೋಷ್ಠಿಯ ಕಂಡೆ. ಚನ್ನಮಲ್ಲಿಕಾರ್ಜುನಯ್ಯ, ನಾ ಹುಟ್ಟಲೊಡನೆ ವಿಭೂತಿಯ ಪಟ್ಟವ ಕಟ್ಟಿ ಪಸ್ಗುರು ಸ್ವಾಮಿ ಲಿಂಗ ಸ್ವಾಯತವ ಮಾಡಿದನಾಗಿ ಧನ್ಯಳಾದೆನು.

ಗೋಷ್ಠಿ = ಮಾತು, ಸಹವಾಸ; ಸ್ವಾಯತ = ಒಳಕೊಳ್ಳುವ ಸ್ಥಿತಿ

## ವಿಭೂತಿ ಮಹಾತ್ಮ್ಯ.

೧. ಹಿತವಿದೆ ಸಕಲಲೋಕದ ಜನಕ್ಕೆ ಮತವಿದೆ. ಶೃತಿ ಪುರಾಣದ ಗತಿ ಇದೆ. ಭಕುತಿಯ ಬೆಳಗಿ ನುನ್ನತಿ ಇದೆ ಶ್ರೀ ವಿಭೂತಿಯ ನೊಲಿದು ಧರಿಸಿರೆ, ಭವವನು ಪರಿವುದು, ದುರಿತ ಸಂಕುಳವ ನೊರಿಸುವುದು, ಹರನ ಸಾಲೋಕ್ಯ, ಸಾಮೀಪ್ಯದಲ್ಲಿರಿಸುವುದು ನಿರುತವಿದನೇ ನಂಬು ಮನುಜಾ. ಜವನ ಭೀತಿ, ಮರಣಭಯದಿಂದ ಈ ವಿಭೂತಿಯ ಅಗಸ್ತ್ಯ, ಕಶ್ಯಪ, ಜಮದಗ್ನಿಗಳು ಧರಿಸುವರು ನೋಡಾ! ಶ್ರೀ ಶೈಲ ಚನ್ನಮಲ್ಲಿಕಾರ್ಜುನ ನೊಲಿಸುವ ಶ್ರೀ ವಿಭೂತಿ.

ಮತ = ಒಪ್ಪಿಗೆ; ಬೆಳಗು = ಪ್ರಕಾಶ; ದುರಿತ = ಪಾಪ; ಸಂಕುಳ = ಗುಂಪು; ನಿರುತ = ನಿಶ್ಚಯವಾಗಿ; ಜವ = ಯಮ.

## ಮಂತ್ರ ಮಹಾತ್ಮೆ.

೧. ಒಪ್ಪುವ ಶ್ರೀ ವಿಭೂತಿಯ ನೊಸಲಲ್ಲಿ ಧರಿಸಿ, ದೃಷ್ಟಿವಾರೆ ನಿಮ್ಮ ನೋಡಲೊಡನೆ ಬೆಟ್ಟದಷ್ಟು ತಪ್ಪುಳ್ಳೊಡೆ ಮುಟ್ಟಲಮ್ಮವು ನೋಡಾ! ದುರಿತವ ಪರಿಹರಿಸ ಬಲ್ಲಡೆ, ಓಂನಮಃಶಿವಾಯ ಶರಣೆಂಬುದೆ ಮಂತ್ರ, ನಮಃ ಶಿವಾಯೇತಿ ಮಂತ್ರ; "ಯಃಕರೋತಿ ತ್ರಿಪುಂಡ್ರಕಂ ॥ ಸಮಸ್ತ ಜನ್ಮ ಕೃತಂಪಾಪಂ ತತ್ಕ್ಷಣಾದೇವವಿನಶ್ಯತಿ"। ಎಂದುದಾಗಿ, ಸಿಂಹದ ಮರಿಯ ಸಿಳ್ನಾಯಿ ತಿಂಬರೆ, ಭಂಗವಿನ್ನಾರದೋ ಚನ್ನಮಲ್ಲಿಕಾರ್ಜುನಾ.

ನೊಸಲು = ಹಣೆ, ದೃಷ್ಟಿವಾರೆ = ಕಣ್ಣು ತುಂಬ; ಅಶಕ್ಯವಲ್ಲ ಸೀವ್ಮವು ॥

ಕೀಳ್ನಾಯಿ = ಕ್ಷುದ್ರವಾದ ನಾಯಿ; ಭಂಗ = ಅಪಮಾನ

೨. ಏಳುಕೋಟಿ ಮಹಾ ಮಂತ್ರ. ಉಪಮಂತ್ರಂಗಳಿಗೆ ಲೆಕ್ಕವಿಲ್ಲ. ಚಿತ್ತ ವ್ಯಾಕುಳನಾಗಿ ಭ್ರಮಿಸದಿರು. ಎಲೆ ಮನವೇ, ಶಿವಶಿವಾ, ಎಂದರೆ ಸಾಲದೆ? ಅದೆಂತೆಂದೊಡೆ, "ಶಿವೇತಿ ಮಂಗಳಂನಾಮ । ಯಸ್ಯವಾಚ್ಯಂ ಪ್ರವರ್ತತೆ । ಭಸ್ಮೀಭವಂತು ತಸ್ಯತು । ಮಹಾಪಾತಕ ಕೋಟಯಃ ।" ಎಂದುದಾಗಿ ಎನಗಿದೇ ತಂತ್ರ, ಎನಗಿದೇಮಂತ್ರ, ಎನಗಿದೇ ಗತಿ ಮತಿ ಚೈತನ್ಯವಯ್ಯ. ಸದ್ಗುರು ಚನ್ನಮಲ್ಲಿಕಾರ್ಜುನ ತೋರಿದ ಎನಗಿದೇ ಸಹಜ ಮಂತ್ರ.

# ಭಕ್ತಸ್ಥಲ.

## ಸದಾಚಾರದಿಂದಿರುವದು.

೧. ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ. ಬೆಳೆದೆನು ಅಸಂಖ್ಯಾತರ ಕರುಣದೊಳಗೆ. ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ. ಪರಮಾರ್ಥವೆಂಬ ಸಕ್ಕರೆಯನ್ನಿಕ್ಕಿದರು ನೋಡಾ! ಇಂತಪ್ಪ ತ್ರಿವಿಧಾಮೃತದ ದಣಿಯುಲೆರೆದು ಸಲಹಿದರೆನ್ನ ವಿವಾಹವ ಮಾಡಿದಿರಿ. ಸಯುವಪ್ಪಗಂಡಗೆ ಕೊಟ್ಟಿರಿ. ಕೊಟ್ಟಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು ನೆರೆದು ಬಂದಿರಿ. ಬಸವಣ್ಣ ಮೆಚ್ಚಲು ಒಗತನವ ಮಾಡುವೆ ಚನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮಂಡೆಗೆ ಹೂವ್ವ ತಾಹೆನಲ್ಲದೆ, ಹುಲ್ಲತಾರೆನು. ಅವಧರಿಸಿನಿವ್ಮಡಿಗಳೆಲ್ಲರು. ಮರಳಿಬಿಜಯಂಗೈವುದು ಶರಣಾರ್ಥಿ.

ಅಸಂಖ್ಯಾತರು = ಶಿವಶರಣರಿಗೆ ಉದ್ದೇಶಿಸಿ ಇದೆ. ಸಯು = ಯೋಗ್ಯವಾದ. ಒಗತನ = ಬಾಳುವೆ. ಮಂಡೆ = ತಲೆ.

೨ ಅಯ್ಯಾ ಸದಾಚಾರ, ಸದ್ಭಕ್ತಿ, ಸತ್ಕ್ರಿಯೆ, ಸಮ್ಯಜ್ಞಾನ, ಸದ್ವರ್ತನೆ, ಸಗುಣ, ನಿರ್ಗುಣ, ನಿಜಗುಣ, ಸಚ್ಚರಿತ, ಸದ್ಭಾವ, ಅಕ್ರೋಧ, ಸತ್ಯವಚನ, ಕ್ಷಮೆ, ದಮೆ, ಭವಿಭಕ್ತ ಭೇದ, ಸತ್ಪಾತ್ರ, ದ್ರವ್ಯಾರ್ಪಣ, ಗೌರವಬುದ್ಧಿ, ಲಿಂಗಲೀಯ, ಜಂಗಮಾನುಭಾವ, ದವಿಧಪಾದೋದಕ, ಏಕಾದಶ ಪ್ರಸಾದ, ಷೋಡಶಭಕ್ತಿ ನಿರ್ವಾಹ, ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಚನೆ, ತ್ರಿವಿಧ ಷಡ್ವಿಧ ನವವಿಧ ಜಪ, ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಪಿತ, ಚಿದ್ವಿಭೂತಿ ಸ್ನಾನಧೂಳನ ಧಾರಣ, ಸರ್ವಾಂಗದಲ್ಲಿ ಚಿದ್ರುದ್ರಾಕ್ಷಿ ಧಾರಣ, ತಾ ಮಾಡುವ ಸತ್ಯಕಾಯಕ, ತಾ ಬೇಡುವ ಸದ್ಭಕ್ತಿ ಭಿಕ್ಷ, ತಾ ಕೊಟ್ಟು ಕೊಂಬುವ ಭೇದ, ತಾನಾಚರಿಸುವ ಸತ್ಯ ನಡೆನುಡಿ, ತಾ ನಿಂದ ನಿರ್ವಾಣಪದ, ಇಂತೀ ಮೂವತ್ತೆರಡು ಕಲೆಗಳ ಸದ್ಗುರು ಮುಖದಿಂದರಿದ ಬಸವ ಮೊದಲಾದ ಸಮಸ್ತ ಪ್ರಮಥಗಣಂಗಳೆಲ್ಲ ನಿರಾಭಾರಿ ವೀರಶೈವ ಸನ್ಮಾರ್ಗವಿಡಿದಾಚರಿಸಿದರು ನೋಡಾ. ಇಂತು ಪ್ರಮಥಗಣಂಗಳಾಚರಿಸಿದ ಸತ್ಯಸನ್ಮಾರ್ಗವನರಿಯದ ಮೂಢ ಅಧಮರನೆಂತು ಶಿವಶಕ್ತಿ ಶಿವಭಕ್ತಿ ಶಿವಜಂಗಮವೆಂಬೆನಯ್ಯ ಚನ್ನಮಲ್ಲಿಕಾರ್ಜುನಾ?

೩. ಗುಣದೋಷ ಸಂಪಾದನೆಯ ಮಾಡುವನ್ನಕ್ಕರ, ಕಾಮದ ಒಡಲು, ಕ್ರೋಧದ ಗೊತ್ತು, ಲೋಭದ ಇಕ್ಕೆ, ಮೋಹದ ಮಂದಿರ, ಮದದಾವರಣ, ಮತ್ಸರದ ಹೊದಿಕೆ. ಆ ಭವವರತಲ್ಲದೆ, ಚನ್ನಮಲ್ಲಿಕಾರ್ಜುನನರಿವುದಕ್ಕೆ ಇಂಬಿಲ್ಲ ಕಾಣಿರಣ್ಣ.

ಗೊತ್ತು= ಸ್ಥಳ. ಇಕ್ಕೆ= ಸ್ಥಳ, ಮನೆ. ಆವರಣ= ಹೊದಿಕೆ. ಅರತಲ್ಲದೆ= ನಾಶವಾದ ಹೊರತು.

೪ ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದಡೆಂತಯ್ಯ! ಸಮುದ್ರದ ತಡೆಯಲ್ಲಿ ಮನೆಯ ಮಾಡಿ, ನೊರೆತೆರೆಗಳಿಗಂಜಿದಡೆಂತಯ್ಯ! ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ! ಚನ್ನಮಲ್ಲಿಕಾರ್ಜುನದೇವ ಕೇಳಯ್ಯ! ಲೋಕದೊಳಗೆ ಹುಟ್ಟಿರ್ದ ಬಳಿಕ ಸ್ತುತಿನಿಂದೆಗಳು ಬಂದಡೆ, ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.

ತಡೆ= ದಂಡೆ.

೫. ಸಟೆದಿಟವೆಂಬುವೆರಡು ವಿಡಿದು ನಡೆವುದೀಲೋಕವೆಲ್ಲವು. ಸಟೆದಿಟವೆಂಬುವೆರಡುವಿಡಿದು ನಡೆವ ಲೋಕದೊಡನೆ ಶರಣನು ಗುರುಲಿಂಗಜಂಗಮದಲ್ಲಿ ಸಟೆಯ ಬಳಸಿದೊಡೆ, ಆತನು ತ್ರಿವಿಧಕ್ಕೆ ದ್ರೋಹಿ, ಆ ಘೋರನರಕಿ, ಉಂಬುದೆಲ್ಲ ಕಿಲ್ಬಿಷ, ತಿಂಬುದೆಲ್ಲ ಅಡಗು, ಕುಡಿವುದೆಲ್ಲ ಸುರೆ. ಹುಸಿಎಂಬುದೇ ಹೊಲೆ. ಶಿವಭಕ್ತಂಗೆ ಹುಸಿಎಂಬುದುಂಟೇಅಯ್ಯಾ! ಹುಸಿಯನಾಡಿ ಲಿಂಗವ ಪೂಜಿಸಿದಡೆ, ಹೊಳ್ಳಬಿತ್ತಿ ಫಲವನರಸುವಂತೆ ಕಾಣಾಚನ್ನಮಲ್ಲಿಕಾರ್ಜುನಾ.

ಕಿಲ್ಬಿಷ= ಹೊಲಸು. ಅಡಗು = ಮಾಂಸ. ಹೊಳ್ಳು= ಜೊಳ್ಳು ಪೊಳ್ಳಾದದ್ದು.

೬. ಜಾಲಗಾರನೊಬ್ಬ ಜಲವ ಹೊಕ್ಕು, ಶೋಧಿಸಿ ಹಲವು ಪ್ರಾಣಿಯ ಕೊಂದು ನಲಿನಲಿದಾಡುವ. ತನ್ನ ಮನೆಯಲೊಂದು ಶಿಶು ಸತ್ತಡೆ, ಅದಕ್ಕೆ ಮರುಗುವಂತೆ ಅವಕೇಕೆ ಮರುಗನು? ಅದೆಂತೆಂದೊಡೆ?॥ ಸ್ವಾತ್ಮನಾಮಿತರಶ್ಚೈವ ದೃಷ್ಟ್ವೈತ್ರನಿತ್ಯಾದಿ ಭಿನ್ನತೆ। ಸರ್ವಂಜಿಜ್ಜ್ಯೋತಿರೇವೇತಿಯಃಪಶ್ಯತಿಸಪಶ್ಯತಿ ॥ ಎಂದುದಾಗಿ ಜಾಲಗಾರನ ದುಃಖ ಜಗಕ್ಕೆಲ್ಲ ನಗೆಗೆಡೆ. ಇದು ಕಾರಣ ಚನ್ನಮಲ್ಲಿಕಾರ್ಜುನಯ್ಯನ ಭಕ್ತನಾಗಿರ್ದು ಜೀವಹಿಂಸೆಯ ಮಾಡುವ ಮಾದಿಗರನೇನೆಂಬೆನಯ್ಯಾ?

ಜಾಲಗಾರ= ಮೀನಹಿಡಿಯುವವ. ನಲಿ= ಆನಂದಪಡು.

೭. ಸಜ್ಜನನಾಗಿ ಮಜ್ಜನಕ್ಕೆರೆವೆ ಶಾಂತನಾಗಿ ಪೂಜೆಯ ಮಾಡುವೆ. ಸಮರತಿಯಿಂದ ನಿಮ್ಮ ಹಾಡುವೆ. ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮನಗಲದ ಪೂಜೆ ಅನುವಾಯಿತ್ತೆನಗೆ.

೮. ತನುಕರಗದವರಲ್ಲಿ ಮಜ್ಜನವನೊಲ್ಲೆಯಯ್ಯ ನೀನು. ಮನ ಕರಗದವರಲ್ಲಿ ಪುಷ್ಪವನೊಲ್ಲೆಯಯ್ಯ ನೀನು. ಹದುಳಿಗರಲ್ಲದವರಲ್ಲಿ ಗಂಧಾಕ್ಷತೆಯನೊಲ್ಲೆಯಯ್ಯ ನೀನು. ಅರಿವು ಕಣ್ದೆರೆಯದವರಲ್ಲಿ ಆರತಿಯನೊಲ್ಲೆಯಯ್ಯ ನೀನು. ಭಾವಶುದ್ಧವಿಲ್ಲದವರಲ್ಲಿ ಧೂಪವನೊಲ್ಲೆಯಯ್ಯ ನೀನು. ಪರಿಣಾಮಿಗಳಲ್ಲದವರಲ್ಲಿ ನೈವೇದ್ಯವನೊಲ್ಲೆಯಯ್ಯ ನೀನು. ತ್ರಿಕರಣ ಶುದ್ಧವಿಲ್ಲದವರಲ್ಲಿ ತಾಂಬೂಲವನೊಲ್ಲೆಯಯ್ಯ ನೀನು. ಹೃದಯಕಮಲ ಶುದ್ಧವಿಲ್ಲದವರಲ್ಲಿ ಇರಲೊಲ್ಲೆಯಯ್ಯ ನೀನು. ಎನ್ನಲ್ಲಿ ಏನುಂಟೆಂದು ಕರಸ್ಥಲವನಿಂಬುಗೊಂಡೆ ಹೇಳಾ ಚೆನ್ನಮಲ್ಲಿಕಾರ್ಜುನಯ್ಯ?

ಹದುಳಿಗ = ಸುಖವುಳ್ಳವ, ಯೋಗ್ಯವರ್ತನೆಯುಳ್ಳವ. ಪರಿಣಾಮಿ = ಲಿಂಗಾನಂದವುಳ್ಳವ.

## ಪರಮಾತ್ಮನಲ್ಲಿ ವಿಶ್ವಾಸವುಳ್ಳವನಾಗಿರುವುದು.

೧. ಅಯ್ಯಾ ನೀ ಕೇಳಿದರೆ ಕೇಳು, ಕೇಳದಿರ್ದೊಡೆ ಮಾಣು ನಾನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯ! ಅಯ್ಯ ನೀ ಒಲಿದರೆ ಒಲಿ, ಒಲಿಯದಿರ್ದೊಡೆ ಮಾಣು. ನಾನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯ! ಅಯ್ಯಾ, ನೀ ಮೆಚ್ಚಿದರೆ ಮೆಚ್ಚು, ಮೆಚ್ಚದಿರ್ದೊಡೆ ಮಾಣು. ನಾನಿನ್ನನಪ್ಪಿದಲ್ಲದೆ ಸೈರಿಸಲಾರೆನಯ್ಯ! ಅಯ್ಯ ನೀ ನೋಡಿದೊಡೆ ನೋಡು, ನೋಡದಿರ್ದೊಡೆ ಮಾಣು. ನಾನಿನ್ನ ನೋಡಿ ಹಿಗ್ಗಿಹಾರೈಸಿದಲ್ಲದೆ ಸೈರಿಸಲಾರೆನಯ್ಯ! ಚನ್ನಮಲ್ಲಿಕಾರ್ಜುನಯ್ಯ ನಾನಿಮ್ಮ ಪೂಜಿಸಿ ಹರುಷದೊಳೋಲಾಡುವೆನಯ್ಯ.

ಮಾಣು = ಬಿಡು. ಓಲಾಡು = ತಿರುಗಾಡು, ತೂಗಾಡು.

೨. ಅರಲುಗೊಂಡ ಕೆರೆಗೆ ತೊರೆಬಂದು ಹಾಯ್ದಂತೆ, ಬರಲುಗೊಂಡ ಸಸಿಗೆ ಮಳೆಸುರಿದಂತಾಯಿತ್ತು ನೋಡಾ. ಇದೆ ಎನಗೆ ಇಹದ ಸುಖ, ಪರದ ಗತಿ, ನಡೆದು ಬಂದಂತಾಯಿತ್ತೆನಗೆ. ಚನ್ನ ಮಲ್ಲಿಕಾರ್ಜುನನೆಂಬ ಗುರುಪಾದವ ಕಂಡು ಧನ್ಯಳಾದೆನು.

ತೊರೆ = ಹಳ್ಳ.

೩. ಅಷ್ಟವಿಧಾರ್ಚನೆಯ ಮಾಡಿ ಒಲಿಸುವೆನೇ ಅಯ್ಯ? ನೀನು ಬಹಿ

ರಂಗ ವ್ಯವಹಾರದೂರಸ್ಥನು. ಅಯ್ಯ, ಅಂತರಂಗದಲ್ಲಿ ಧ್ಯಾನವ ಮಾಡಿ ಒಲಿಸುವೆನೆ ಅಯ್ಯ? ನೀನು ವಾಙ್ಮನಾತೀತನು. ಅಯ್ಯ, ಜಪಸ್ತೋತ್ರದಿಂದೊಲಿಸುವೆನೆ ಅಯ್ಯಾ? ನೀನು ನಾದಾತೀತನು. ಭಾವಜ್ಞಾನದಿಂದೊಲಿಸುವೆನೇ ಅಯ್ಯ? ನೀನು ಮತಿಗತೀತನು. ಹೃದಯಕಮಲದಲ್ಲಿಂಬಿಟ್ಟುಕೊಂಬೆನೆ, ಅಯ್ಯಾ? ನೀನು ಸರ್ವಾಂಗ ಪರಿಪೂರ್ಣನು ಅಯ್ಯಾ ನಿನ್ನ ಒಲಿಸಲೆನ್ನಳವಲ್ಲ. ನೀನೊಲಿವುದೆ ಸುಖವಯ್ಯ ಚನ್ನ ಮಲ್ಲಿಕಾರ್ಜುನಾ.

ಅತೀತನು = ಮೀರಿದವನು. ಅಳವಲ್ಲ = ಶಕ್ತಿಯಲ್ಲ.

೪. ಎನ್ನ ತನು ಶುದ್ಧವಾಯಿತ್ತು, ಶಿವಭಕ್ತರೊಕ್ಕುದಕೊಂಡು. ಎನ್ನ ಮನ ಶುದ್ಧವಾಯಿತ್ತು ಅಸಂಖ್ಯಾತರ ನೆನೆದು. ಎನ್ನ ಕಂಗಳು ಶುದ್ಧವಾಯಿತ್ತು ಸಕಲ ಪುರಾತನರ ನೋಡಿ. ಎನ್ನ ಶ್ರೋತ್ರ ಶುದ್ಧವಾಯಿತ್ತು ಅವರ ಕೀರ್ತಿಯ ಕೇಳಿ. ಎನ್ನ ಭಾವನೆ ಎನಗಿದು ಜೀವನವು ಕೇಳಾ ಲಿಂಗ ತಂದೆ. ನೆಟ್ಟನೆ ನಿಮ್ಮುವ ಪೂಜಿಸಿ ಭವಗೆಟ್ಟೆ ಕಾಣಾ ಚನ್ನ ಮಲ್ಲಿಕಾರ್ಜುನ.

ಒಕ್ಕು = ಹೊರಚಲ್ಲು, ಕೊಡು. ಕೊಂಡು = ತೆಗೆದುಕೊಂಡು.

೫. ಕ್ರಿಯುಳ್ಳೊಡಂತೊಂದಾಸೆ. ಸದ್ಭಕ್ತರ ನುಡಿಗಡಣವುಳ್ಳೊಡಂತೊಂದಾಸೆ. ಶ್ರೀಗಿರಿಯನೇರಿ ನಿಮ್ಮ ಬೆರಿಸಿದರೆ, ಎನ್ನಾಸೆಗೆ ಕಡೆಯೇ ಅಯ್ಯ? ಆವಾಸೆಯೂ ಇಲ್ಲವೆ, ನಿಮ್ಮ ನಂಬಿ ಕೆಟ್ಟೆನಯ್ಯ ಚನ್ನ ಮಲ್ಲಿಕಾರ್ಜುನ.

ಗಡಣ = ಸಮೂಹ.

೬. ಬೆರಿಸುವರೆ ಬೇಗ ತೋರಾ. ಹೊರಹಾಕದಿರಯ್ಯ. ನಿಮ್ಮಲ್ಲಿಗೆ ಸಲೆಸಂದ ತೊತ್ತಾನು. ಎನ್ನ ಹೊರ ಹಾಕದಿರಯ್ಯ ಚನ್ನ ಮಲ್ಲಿಕಾರ್ಜುನಯ್ಯ ನಿಮ್ಮ ಸಂಬಲೆಂದು ಬಳಿಯ ಬಂದೆನು. ಇಂಬುಗೊಳ್ಳಯ್ಯ ಬೇಗ ಪಲಿ.

ಸಂದ = ಸಲ್ಲಿದ, ಒಳಸೇರಿದ, ಬಂಧಿಸಿದ.

೭. ಅರಸಿ ತೊಳಲಿದರಿಲ್ಲ. ಬಯಸಿ ಹೊಕ್ಕರಿಲ್ಲ. ತಪಸ್ಸು ಮಾಡಿದರಿಲ್ಲ. ಅದು ತನ್ನ ಬಹಕಾಲಕ್ಕಲ್ಲದೆ ಸಾಧ್ಯವಾಗದು. ಶಿವನೊಲಿದಲ್ಲದೆ ಕೈಗೂಡದು. ಚನ್ನ ಮಲ್ಲಿಕಾರ್ಜುನನಿಗೊಲಿದೆನಾಗಿ, ನಾನು ಸಂಗನ ಬಸವಣ್ಣನ ಶ್ರೀಪಾದವ ಕಂಡು ಬದುಕಿದೆನು.

೮. ನೀರ ಕ್ಷೀರದಂತೆ ನೀನಿಪ್ಪೆಯಾಗಿ, ಆವುದು ಮುಂದು ಆವುದು ಹಿಂದು ಎಂದರಿಯೆನು. ಆವುದು ಕರ್ತು ಆವುದು ಭೃತ್ಯನೆಂದರಿಯೆನು.

ಆವುದು ಘನ, ಆವುದು ಕಿರಿದೆಂದರಿಯೆನು. ಚನ್ನ ಮಲ್ಲಿಕಾರ್ಜುನಯ್ಯ, ನಿನ್ನನೊಲಿದು ಕೊಂಡಾಡಿದರೆ, ಇರುಹೆ ರುದ್ರನಾಗದೆ ಹೇಳಯ್ಯ?

ಭೃತ್ಯ = ಸೇವಕ.

೯. ಭಕ್ತೆಯಾನಪ್ಪೆನಯ್ಯ, ಕರ್ತೃ ಭೃತ್ಯತ್ವವ ನಾನರಿಯೆ. ಮಾಹೇಶ್ವರಿಯಾನಪ್ಪೆನಯ್ಯ, ವ್ರತ ನೇಮವ ನಾನರಿಯೆ ಪ್ರಸಾದಿಯಾನಪ್ಪೆನಯ್ಯ, ಅರ್ಪಿತ ಅನರ್ಪಿತವೆಂಬ ಭೇದವ ನಾನರಿಯೆ. ಪ್ರಾಣಲಿಂಗಿಯಾನಪ್ಪೆನಯ್ಯ, ಅನುಭಾವದ ಗಮನವ ನಾನರಿಯೆ. ಶರಣೆಯಾನಪ್ಪೆನಯ್ಯ, ಶರಣ ಸತಿ ಲಿಂಗಪತಿಯೆಂಬ ಭಾವವ ನಾನರಿಯೆ. ಐಕ್ಯಳಾನಪ್ಪೆನಯ್ಯ, ಬೆರಸಿ ಭೇದವ ನಾನರಿಯೆ. ಚನ್ನ ಮಲ್ಲಿಕಾರ್ಜುನಯ್ಯ ಷಟ್ಸ್ಥಲದಲ್ಲಿ ನಿಃಸ್ಥಲವಾಗಿಪ್ಪೆನು.

ನಿಃಸ್ಥಲ = ಸ್ಥಲವಿಲ್ಲದ ರೀತಿ, ಐಕ್ಯ.

## ಪರಮಾತ್ಮನಲ್ಲಿ ಮೋಹ.

೧. ಕಿಚ್ಚಿಲ್ಲದ ಬೇಗೆಯಲಿ ಬೆಂದೆನವ್ವಾ! ಏರಿಲ್ಲದ ಗಾಯದಲ್ಲಿ ನೊಂದೆನವ್ವಾ! ಸುಖವಿಲ್ಲದ ಧಾವತಿಗೊಂಡೆನವ್ವಾ! ಚನ್ನ ಮಲ್ಲಿಕಾರ್ಜುನ ದೇವನೊಲಿದು ಬಾರದ ಭವಂಗಳಲಿ ಬಂದೆನವ್ವಾ!

ಬೇಗೆ = ಕಾವು. ಏರು = ಗಾಯ. ಧಾವತಿ = ಕಷ್ಟ.

೨. ಅಕ್ಕ ಕೇಳವ್ವ, ಅಕ್ಕಯ್ಯ ನಾನೊಂದ ಕನಸು ಕಂಡೆ. ಅಕ್ಕಿಯ ಡಕೆ ತೆಂಗಿನ ಕಾಯ ಕಂಡೆ. ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲಗೊರವನು ಬಿಕ್ಷಕ್ಕೆ ಬಂದುದ ಕಂಡೆನವ್ವ. ಮಿಕ್ಕುಮೀರಿ ಹೋಹನ ಬೆಂಬತ್ತಿ ಕೈವಿಡಿದೆನು. ಚನ್ನ ಮಲ್ಲಿಕಾರ್ಜುನನ ಕಂಡು ಕಣ್ದೆರೆದೆನು.

ಗೊರವ = ಬೇಡ, ಈಶ್ವರ.

೩. ಕಾಮ ಬಲ್ಲಿದನೆಂದರೆ, ಉರುಹಿ ಭಸ್ಮವ ಮಾಡಿದ. ಬ್ರಹ್ಮಬಲ್ಲಿದನೆಂದರೆ ಶಿರವ ಚಿವುಟಿಯಾಡಿದ. ಎಲೆ ಅವ್ವ, ನೀನು ಕೇಳಾ ತಾಯೆ. ವಿಷ್ಣು ಬಲ್ಲಿದನೆಂದರೆ, ಆಕಳ ಕಾಯ್ದಿರಿಸಿದ. ತ್ರಿಪುರದ ಕೋಟೆ ಬಲ್ಲಿತ್ತೆಂದರೆ ನೊಸಲಕಂಗಳಲುರುಹಿದನವ್ವಾ! ಇದು ಕಾರಣ ಚನ್ನ ಮಲ್ಲಿಕಾರ್ಜುನಗಂಡ ನೆನಗೆ. ಜನನ ಮರಣಕ್ಕೊಳಗಾಗದ ಬಲುಹನೇನ ಬಣ್ಣಿಪೆನವ್ವಾ

ಉರುಹು = ಸುಡು. ನೊಸಲು = ಹಣೆ. ಬಲುಹ = ಸಾಮರ್ಥ್ಯ.

೪. ಹೊಳೆವ ಜಡೆಯ ಮೇಲೆ ಎಳೆವೆಳದಿಂಗಳು. ಫಣಿ ಮಣಿ, ಕರ್ನ ಕುಂಡಲದವ ನೋಡವ್ವ! ರುಂಡಮಾಲೆಯ ಕೊರಳವನ ಕಂಡರೆ ಒಮ್ಮೆ

ಬರಹೇಳವ್ವಾ! ಗೋವಿಂದನನಯನ ಉಂಗುಟದ ಮೇಲಿಪ್ಪದು. ಚನ್ನ ಮಲ್ಲಿಕಾರ್ಜುನದೇವ, ನಿನ್ನ ಕುರುಹವ್ವಾ!

ಎಳೆ = ಮೃದುವಾದ.

೫. ಒಳಗಿನ ಗಂಡನವ್ವಾ. ಹೊರಗಿನ ಮಿಂಡನವ್ವಾ. ಎರಡನು ನಡಿಸಲು ಬಾರದಯ್ಯಾ! ಲೌಕಿಕಪಾರಮಾರ್ಥಿಕವೆಂಬೆರಡನು ನಡಿಸಲು ಬಾರದಯ್ಯಾ. ಚನ್ನ ಮಲ್ಲಿಕಾರ್ಜುನಯ್ಯಾ! ಬಿಲ್ಲು ಬೆಳವಲಕಾಯಿ ಒಂದಾಗಿ ಹಿಡಿಯಲು ಬಾರದಯ್ಯಾ.

೬. ಎನ್ನ ಮನವ ಮಾರುಗೊಂಡನವ್ವಾ! ಎನ್ನ ತನುವ ಸೂರೆಗೊಂಡನವ್ವಾ! ಎನ್ನ ಸುಖವನೊಪ್ಪುಗೊಂಡನವ್ವಾ! ಎನ್ನಿರವನಿಂಬುಗೊಂಡನವ್ವಾ! ಚನ್ನ ಮಲ್ಲಿಕಾರ್ಜುನನ ಒಲುಮೆಯುವಳಾನು.

ಮಾರುಗೊಳ್ಳು = ಬದಲಾಗಿ ತೆಗೆದುಕೊಳ್ಳು. ಇರವು = ಸ್ಥಿತಿ. ಒಲುಮೆ = ಪ್ರೀತಿ.

೭. ಸಾವಿಲ್ಲದ, ಕೇಡಿಲ್ಲದ ರೂಹಿಲ್ಲದ, ಚಲುವಂಗಾನೊಲಿದೆನವ್ವ. ಎಡೆ ಇಲ್ಲದ ಕಡೆ ಇಲ್ಲದ ತೆರಹಿಲ್ಲದ ಕುರುಹಿಲ್ಲದ ಚಲುವಂಗಾನೊಲಿದೆ ಎಲೆ ಅವ್ವಾ. ನೀನು ಕೇಳಾ ತಾಯೆ. ಭವವಿಲ್ಲದ ಭಯವಿಲ್ಲದ ನಿರ್ಭಯ ಚಲುವಂಗೊಲಿದೆ ನಾನು. ಕುಲ ಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ. ಇದು ಕಾರಣ ಚನ್ನ ಮಲ್ಲಿಕಾರ್ಜುನ ಚಲುವ ಗಂಡನೆನಗೆ. ಈ ಸಾವ ಕೆಡುವ ಗಂಡರ ನೊಯ್ದು ಒಲೆಯೊಳಗಿಕ್ಕು.

ರೂಹು = ರೂಪು, ಆಕೃತಿ. ಎಡೆ = ಸ್ಥಳ.

೮. ಮನ ಮನ ತಾರ್ಕಣೆಯ ಕಂಡು ಅನುಭವಿಸಲು, ನೆನಹೇ ಘನವಹುದಲ್ಲದೆ, ಅದು ಹವಣಿಲ್ಲಿ ನಿಲುವುದೆ ಎಲೆ ಅವ್ವ? ನೀನು ಮರುಳವ್ವೆ. ಎನ್ನ ದೇವ ಚನ್ನಮಲ್ಲಿಕಾರ್ಜುನಯ್ಯ ಗೊಲಿದು, ಸಲೆ ಮಾರು ಹೋದೆನು ನಿನ್ನ ತಾಯಿತನವನೊಲ್ಲೆ ಹೋಗೇ.

ತಾರ್ಕಣೆ = ಸರಿಯಾಗಿ ಕೂಡುವದು, ಸಂಘಟ್ಟನೆ; ನೆನಹು = ಧ್ಯಾನ; ಹವಣು = ಪ್ರಮಾಣ, ಅಳತೆ; ಮಾರುಹೋಗು = ಪ್ರತಿಯಾಗಿ ತೆಗೆದುಕೊಳ್ಳಲ್ಪಡು

೯. ಚಿನ್ನಕ್ಕರಿಸಿನ ಚಿನ್ನಕ್ಕರಿಸಿನ ಚಿನ್ನಕ್ಕರಿಸಿನವ ಕೊಳ್ಳಿರವ್ವಾ! ನಮ್ಮ ನಲ್ಲನ ಮೆಯ್ಯ ಹುತ್ತವ ಅರಿಸಿನವ ಕೊಳ್ಳಿರವ್ವಾ! ಒಳುಗುಂದದರಿಸಿನವ ಮಿಂದು ಚನ್ನಮಲ್ಲಿಕಾರ್ಜುನನಪ್ಪಿರವ್ವಾ.

೧೦. ನೀನು ದಂಡು ಮುಂತಲಕ್ಕೆ ಹೋದೆನೆಂಬೊಡೆ, ನಾನು ಸುಮ್ಮನಿಹೆನು. ನೀನು ಎನ್ನ ಕೈಯ್ಯೊಳಗಿರ್ದು ಎನ್ನ ಮನದೊಳಗಿರ್ದು ನುಡಿ

ಯುದಿರ್ದೊಡಾನು ಎಂತು ಸೈರಿಸುವೆನಯ್ಯ! ನೇಹವೆಂಬ ಕುಂಟಿಣಿ ಚೆನ್ನಮಲ್ಲಿಕಾರ್ಜುನನ ನೊಲಿಸದಿದ್ದರೆ, ಇನ್ನೇವೆ ಸಖಿಯೆ?

ದಂಡು ಮಂಡಲ = ಯುದ್ಧ ಭೂಮಿ; ನೇಹ = ಪ್ರೀತಿ; ಇನ್ನೇವೆ = ಇನ್ನೇನು ಮಾಡಲಿ

## ಅನುಭಾವಿಗಳ ಸಂಗ ಮಾಡುವುದು.

೧. ಸಂಗದಿಂದಲ್ಲದೆ ಅಗ್ನಿ ಹುಟ್ಟದು. ಸಂಗದಿಂದಲ್ಲದೆ ಬೀಜ ಮೊಳೆದೋರದು. ಸಂಗದಿಂದಲ್ಲದೆ ದೇಹವಾಗದು. ಸಂಗದಿಂದಲ್ಲದೆ ಸರ್ವ ಸುಖದೋರದು ಚೆನ್ನಮಲ್ಲಿಕಾರ್ಜುನ ದೇವಯ್ಯಾ, ನಿಮ್ಮ ಶರಣರ ಅನುಭಾವ ಸಂಗದಿಂದಾನು ಪರಮ ಸುಖಿಯಾದೆನು.

೨. ಅಯ್ಯ, ನಿಮ್ಮನುಭಾವಿಗಳ ಸಂಗದಿಂದ ಎನ್ನ ತನು ಶುದ್ಧವಾಯಿತ್ತು. ಅಯ್ಯ ನಿಮ್ಮನುಭಾವಿಗಳ ಸಂಗದಿಂದ ಎನ್ನ ಮನಶುದ್ಧವಾಯಿತ್ತು. ಅಯ್ಯ, ನಿಮ್ಮನುಭಾವಿಗಳ ನೊರೆನೊರೆದು ಆಗು ಮಾಡಿದ ಕಾರಣ, ಚೆನ್ನಮಲ್ಲಿಕಾರ್ಜುನ ನಿಮಗಾನು ತೊಡಿಗೆಯಾದೆನು.

ಒರೆ = ತಿಕ್ಕು, ಆಗು = ಸ್ಥಿತಿ; ತೊಡಿಗೆ = ಆಭರಣ

೩. ಮರ ಮರ ಮಥನಿಸಿ, ಕಿಚ್ಚು ಹುಟ್ಟಿ, ಸುತ್ತಣ ತರುಮರಾದಿಗಳ ಸುಡಲಾಯಿತ್ತು. ಆತ್ಮವಾತ್ಮ ಮಥನಿಸಿ, ಅನುಭಾವ ಹುಟ್ಟಿ, ತನುಗುಣಾದಿಗಳ ಸುಡಲಾಯಿತ್ತು. ಇದು ಕಾರಣ ನಿಮ್ಮ ಮಹಾನುಭಾವಿಗಳ ಅನುಭಾವವ ತೋರಿ, ಎನ್ನೊಡಲ ನುಳುಹಿಕೊಳ್ಳಾ ಚೆನ್ನಮಲ್ಲಿಕಾರ್ಜುನಾ

ಮಥನಿಸು = ತಿಕ್ಕು, ಒಡಲ = ಶರೀರ

೪ ಅಯ್ಯಾ, ನಿಮ್ಮ ಶರಣರ ಕೂಡಿದ ಸುಖವನುಪಮೆಗೆ ತರಬಾರದಯ್ಯ! ಅಯ್ಯ ನಿಮ್ಮ ಮಹಂತರ ಕೂಡಿಯುಗಲುವಘಾವತಿಯಿಂದ ಸಾವುದೇ ಕರ ಲೇಸು ಕಂಡಯ್ಯ. ಚೆನ್ನಮಲ್ಲಿಕಾರ್ಜುನಯ್ಯ, ನಿಮ್ಮ ನರುಹಿದ ಮಹಿಮರನಗಲಿ ಆನು ನಿಲಲಾರೆನಯ್ಯಾ.

ಕರ = ಬಹಳ; ಅರುಹು = ತಿಳಿಸು

೫. -ಹಡೆವುದರಿಂದು ನರಜನ್ಮವ. ಹಡೆವುದರಿದು ಗುರುಕಾರುಣ್ಯವ ಹಡೆವುದರಿದು ಲಿಂಗಜಂಗಮದ ಸೇವೆಯು. ಚೆನ್ನಮಲ್ಲಿಕಾರ್ಜುನಯ್ಯನ

ಶರಣರ ಸಂಗದಲ್ಲಿ ನಲಿದಾಡು ಕಂಡೆಯಾ ಎಲೆ ಮನವೇ.

ಹರೆ = ಪಸೆ, ಅರಿದು = ಆಶ್ಚರ್ಯ; ನಲಿ = ಸಂತೋಷ ಪಡು

೬ ಆಡುವುದು, ಪಾಡುವುದು, ಕೇಳುವುದು, ಹೇಳುವುದು, ನಡೆವುದು, ನುಡಿವುದು, ಸರಸ ಸಮ್ಮೇಳವಾಗಿಪ್ಪುದಯ್ಯಾ ಶರಣರೊಡನೆ. ಚನ್ನಮಲ್ಲಿಕಾರ್ಜುನಯ್ಯ, ನೀ ಕೊಟ್ಟ ಆಯುಷ್ಯವುಳ್ಳನ್ನಕ್ಕರ, ಲಿಂಗಸುಖಿಗಳ ಸಂಗದಲ್ಲಿ ದಿನಂಗಳ ಕಳೆವೆನು.

ಸರಸ = ಚೇಷ್ಟೆ, ಕ್ರಿಯೆ; ಸಮ್ಮೇಳ = ಹೊಂದಿಕೆಯಾಗಿರುವುದು

೭. ಅರಿಯದವರೊಡನೆ ಸಂಗವ ಮಾಡಿದರೆ, ಕಲ್ಲು ಹೊಯ್ದು ಕಿಡಿಯ ತೆಗೆದುಕೊಂಬಂತೆ. ಬಲ್ಲವರೊಡನೆ ಸಂಗವ ಮಾಡಿದರೆ, ಹೊಸೆದು ಬೆಣ್ಣೆಯ ತೆಗೆದುಕೊಂಬಂತೆ. ಚನ್ನಮಲ್ಲಿಕಾರ್ಜುನಯ್ಯ, ನಿಮ್ಮ ಶರಣರ ಸಂಗ ಕರ್ಪೂರ ಗಿರಿಯ ಉರಿಕೊಂಡಂತೆ.

ಹೊಸೆ = ಕಡೆಯು

೮. ಆಯುತ ಸ್ವಾಯುತ ಅನುಭಾವವ ನಾನೆತ್ತ ಬಲ್ಲೆನಯ್ಯಾ! ಗುರು ಲಿಂಗ ಜಂಗಮಕ್ಕೆ ಅರ್ಥಪ್ರಾಣಾಭಿಮಾನವ ನಿತ್ತ ಭಕ್ತರ ಭೃತ್ಯರ ಭೃತ್ಯರಿಗಾಳಾಗಿಪ್ಪೆನಯ್ಯ. ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣರಲ್ಲದನ್ಯವ ತೋರದಿರಯ್ಯಾ

ಆಯುತ = ಒಳಗಾದ

## ಪರಮಾತ್ಮನ ಧ್ಯಾನ.

೧. ನಚ್ಚುಗೆ ಮನ ನಿಮ್ಮಲ್ಲಿ. ಮಚ್ಚುಗೆ ಮನ ನಿಮ್ಮಲ್ಲಿ. ಸಲುಗುಗೆ ಮನ ನಿಮ್ಮಲ್ಲಿ. ಸೋಲುಗೆ ಮನ ನಿಮ್ಮಲ್ಲಿ. ಅಳಲುಗೆ ಮನ ನಿಮ್ಮಲ್ಲಿ. ಬಳಲುಗೆ ಮನ ನಿಮ್ಮಲ್ಲಿ. ಕರಗುಗೆ ಮನ ನಿಮ್ಮಲ್ಲಿ. ಕೊರಗುಗೆ ಮನ ನಿಮ್ಮಲ್ಲಿ. ಎನ್ನ ಪಂಚೇಂದ್ರಿಯಂಗಳು ಕಬ್ಬುನ ಉಂಡ ನೀರಿನಂತೆ, ನಿಮ್ಮಲ್ಲಿ ಬೆರಸುಗೆ ಚನ್ನಮಲ್ಲಿಕಾರ್ಜುನಯ್ಯ.

ಸಲುಗು = ಒಳಸೇರು; ಬಳಲು = ದುಃಖಪಡು; ಬಳಲು = ಕಷ್ಟಪಡು

೨. ಲೋಕದ ಚೇಷ್ಟೆಗೆ ರವಿ ಬೀಜವಾದಂತೆ, ಕರಣಂಗಳ ಚೇಷ್ಟೆಗೆ ಮನವೇ ಬೀಜ. ಎನಗುಳ್ಳದೊಂದು ಮನ. ಆ ಮನ ನಿಮ್ಮಲ್ಲಿ ಒಡವೆರೆದಬಳಿಕ ಎನಗೆ ಭವವುಂಟೆ ಚನ್ನಮಲ್ಲಿಕಾರ್ಜುನಾ?

ಚೇಷ್ಟೆ = ಕ್ರಿಯೆ; ಒಡಹೆರೆ = ಬೆರಸು, ಕೂಡು

೩. ವೇದಶಾಸ್ತ್ರ ಪುರಾಣಾಗಮಂಗಳೆಲ್ಲ ಕೊಟ್ಟಣವ ಕುಟ್ಟುತ್ತ ನುಚ್ಚುತೌಡು ಕಾಣಿಭೋ! ಇವ ಕುಟ್ಟಲೇಕೆ? ಅತ್ತಲಿತ್ತ ಹರಿವ ಮನದ ಶಿರವನರಿದಡೆ, ಬಚ್ಚ ಬರಿಯ ಬಯಲು ಚನ್ನಮಲ್ಲಿಕಾರ್ಜುನ.

ಕೊಟ್ಟಣ = ಬತ್ತ ಕುಟ್ಟುವುದು; ಬಚ್ಚ = ತೆರೆದ; ಅರಿ = ಕೊಯ್ಯು

೪. ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವನೆನೆವಂತೆ, ನೆನೆವೆನಯ್ಯ! ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನೆವಂತೆ ನೆನೆವೆನಯ್ಯ! ಕಂದಾ ನೀನಿತ್ತ ಬಾ ಎಂದು ನೀವು ನಿಮ್ಮಂದವ ತೋರಯ್ಯ ಚನ್ನಮಲ್ಲಿಕಾರ್ಜುನಾ.

ಹಿಡಿವಡೆದ = ಹಿಡಿಯಲ್ಪಟ್ಟ; ಕುಂಜರ = ಆನೆ; ವಿಂಧ್ಯ = ಪರ್ವತ; ಅಂದ = ರೀತಿ

೫. ಉದಯದಲೆದ್ದು ನಿಮ್ಮ ನೆನೆವೆನಯ್ಯ. ನಿಮ್ಮ ಬರವಹಾರುತ್ತಿರ್ಪೆನಯ್ಯ. ಹಸೆ ಹಂದರವನಿಕ್ಕಿ, ನಿಮ್ಮಡಿಗಳಿಗೆಡೆ ಮಾಡಿಕೊಂಡಿಪ್ಪೆನ್ನಯ್ಯಾ! ಚನ್ನಮಲ್ಲಿಕಾರ್ಜುನಾ, ನೀನಾವಾಗಬಂದಿಹನೆಂದು.

ಬರವ = ಆಗಮನ; ಹಾರು = ನಿರೀಕ್ಷಿಸು; ಹಸೆ = ಆಸನ

೬. ಗಿರಿಯಲ್ಲದೆ ಹುಲ್ಲು ಮೊರಡಿಯಲ್ಲಾಡುವದೇ ನವಿಲು? ಕೊಳನಲ್ಲದೆ ಕಿರಿವಳ್ಳಕ್ಕೆಳಿಸುವುದೆ ಹಂಸೆ? ಮಾಮರ ತಳಿತಲ್ಲದೆ ಸ್ವರಗೈವುದೆ ಕೋಗಿಲೆ? ಪರಿಮಳವಿಲ್ಲದ ಪುಷ್ಪಕ್ಕೆಳಿಸುವುದೇ ಭ್ರಮರ? ಎನ ದೇವ ಚನ್ನಮಲ್ಲಿಕಾರ್ಜುನನಲ್ಲದೆ, ಅನ್ಯಕ್ಕೆಳಿಸುವುದೇ ಎನ್ನ ಮನ ಕೇಳಿರೆ, ಕೆಳದಿಯರಿರಾ?

ಕೊಳ = ಸರೋವರ; ಕಿರಿವಳ್ಳ = ಸಣ್ಣ ಹಳ್ಳ; ಎಳಸು = ಇಚ್ಛಿಸು; ಮಾಮರ = ಮಾವಿನ ಮರ; ತಳಿ = ಚಿಗರು; ಕೆಳದಿ = ಗೆಳತಿ

೭. ಎನ್ನ ಕಾಯ ಮಣ್ಣು, ಜೀವ ಬಯಲು, ಆವುದ ಹಿಡಿವೆನಯ್ಯ ದೇವಾ? ನಿಮ್ಮನಾವಪರಿಯಲ್ಲಿ ನಾ ನೆನೆವೆನಯ್ಯ? ಎನ್ನ ಮಾಯವನು ಮಾಣಿಸಯ್ಯ ಚನ್ನಮಲ್ಲಿಕಾರ್ಜುನಯ್ಯ.

೮. ಕಾಯದೊಳಗೆ ಅಕಾಯವಾಯಿತ್ತು, ಜೀವದೊಳಗೆ ನಿರ್ಜೀವವಾಯಿತ್ತು, ಭಾವದೊಳಗೆ ನಿರ್ಭಾವವಾಯಿತ್ತು, ನೆನಹಿನೊಳಗೆ ಮನಘನವಾಯಿತ್ತು, ಎನ್ನ ತಲೆಮೊಲೆಯ ನೋಡಿ ಸಲಹಿದ ಕಾರಣ ಚನ್ನಮಲ್ಲಿಕಾರ್ಜುನಾ ನಿಮ್ಮ ಧರ್ಮದವಳಾದೆನಯ್ಯಾ?

## ಶರಣರ ಸ್ತೋತ್ರಗಳು.

೧. ಅಯ್ಯಾ ನಿಮ್ಮ ಶರಣರು ಮೆಟ್ಟಿದ ಧರೆ ಪಾವನವಯ್ಯಾ ಅಯ್ಯಾ ನಿಮ್ಮ ಶರಣರು ಇದ್ದ ಪುರವೇ ಕೈಲಾಸಪುರವಯ್ಯಾ, ಅಯ್ಯಾ ನಿಮ್ಮ ಶರಣರು ನಿಂದುದೇ ನಿಜನಿವಾಸವಯ್ಯಾ. ಚನ್ನಮಲ್ಲಿಕಾರ್ಜುನಯ್ಯಾ, ನಿಮ್ಮ ಶರಣ ಬಸವಣ್ಣನಿದ್ದ ಕ್ಷೇತ್ರವೇ ಅವಿಮುಕ್ತ ಕ್ಷೇತ್ರ. ಆನು ಬಸವಣ್ಣನ ಶ್ರೀಪಾದಕ್ಕೆ ನಮೋನಮೋ ಎನುತಿರ್ದೆನು.

ಕ್ಷೇತ್ರ= ಭೂಮಿ. ಅವಿಮುಕ್ತಕ್ಷೇತ್ರ= ಕಾಶಿಯಲ್ಲಿದ್ದ ಒಂದು ಕ್ಷೇತ್ರ.

೨. ಎನ್ನಂಗದಲ್ಲಿ ಆಚಾರವ ತೋರಿದನಯ್ಯ ಬಸವಣ್ಣನು. ಆಚಾರವೇ ಲಿಂಗವೆಂದರುಹಿದನಯ್ಯ ಬಸವಣ್ಣನು. ಎನ್ನ ಪ್ರಾಣದಲ್ಲಿ ಅರಿವ ತೋರಿದನಯ್ಯ ಬಸವಣ್ಣನು. ಅರಿವೇ ಜಂಗಮವೆಂದು ಅರುಹಿದನಯ್ಯ ಬಸವಣ್ಣನು. ಚನ್ನಮಲ್ಲಿಕಾರ್ಜುನಯ್ಯ, ಎನ್ನ ಹೆತ್ತ ತಂದೆ ಸಂಗನಬಸವಣ್ಣ ಎನಗೀಕ್ರಮವನರುಹಿದನಯ್ಯ

೩. ಬಸವಣ್ಣ, ನಿಮ್ಮಂಗದಾಚಾರವ ಕಂಡು ಎನಗೆ ಲಿಂಗಸಂಗವಾಯಿತ್ತು. ಅಯ್ಯ ಬಸವಣ್ಣ, ನಿಮ್ಮ ಮನದ ಸುಜ್ಞಾನವ ಕಂಡು ಎನಗೆ ಜಂಗಮಸಂಬಂಧವಾಯಿತ್ತಯ್ಯ. ಬಸವಣ್ಣ, ನಿಮ್ಮ ಸದ್ಭಕ್ತಿಯ ತಿಳಿದು ಎನಗೆ ನಿಜವು ಸಾಧ್ಯವಾಯಿತ್ತು. ಚನ್ನಮಲ್ಲಿಕಾರ್ಜುನಯ್ಯನ ಹೆಸರಿಟ್ಟ ಗುರು ನೀವಾದಕಾರಣ ನಿಮ್ಮ ಶ್ರೀಪಾದಕ್ಕೆ ನಮೋನಮೋ ಎನುತಿರ್ದೆನು.

೪. ಕಾಮನ ಗೆಲಿದೆನು ಬಸವಾ ನಿಮ್ಮ ದಯದಿಂದ. ಸೋಮಧರನ ಹಿಡಿತಪ್ಪೆನು ಬಸವಾ ನಿಮ್ಮ ಕೃಪೆಯಿಂದ. ನಾಮದಲ್ಲಿ ಹೆಂಗುಸೆಂಬ ಹೆಸರಾದರೇನು, ಭಾವಿಸಲು ಗಂಡುರೂಪು. ಬಸವಾ ನಿಮ್ಮ ದಯದಿಂದ ಅತಿಕಾಮಿ ಚನ್ನಮಲ್ಲಿಕಾರ್ಜುನಯ್ಯಂಗೆ ತೊಡರನಿಕ್ಕಿ ಎರಡು ಮರಿಯದೆ ಕೂಡಿದೆನು ಬಸವಾ ನಿಮ್ಮ ಕೃಪೆಯಿಂದ.

ಸೋಮಧರ= ಶಿವ. ತೊಡರು= ಬೇಡಿ.

೫. ಶಿವಶಿವಾ! ಆದಿಯುನಾದಿ ಎಂಬೆರಡೂ ಇಲ್ಲದ ನಿರವಯವಾಗಿಪ್ಪ ಶಿವನೇ, ನಿಮ್ಮ ನಿಜವನಾರಯ್ಯಾ ಬಲ್ಲರು? ವೇದಂಗಳಿಗಭೇದ್ಯನು, ಶಾಸ್ತ್ರಂಗಳಿಗಸಾಧ್ಯನು, ಪುರಾಣಕ್ಕೆ ಅಗಮ್ಯನು, ಆಗಮಕ್ಕೆ ಅಗೋಚರನು, ತರ್ಕಕ್ಕೆ ಅತರ್ಕ್ಯನು, ವಾಙ್ಮನಕ್ಕತೀತನೆನಿಪ ಪರಶಿವಲಿಂಗವನು ಕೆಲಂಬರು ಸಕಲನೆಂಬರು, ಕೆಲಂಬರು ನಿಷ್ಕಲನೆಂಬರು, ಕೆಲಂಬರು

ಸೂಕ್ಷ್ಮನೆಂಬರು, ಕೆಲಂಬರು ಸ್ಥೂಲನೆಂಬರು. ಈ ಬಗೆಯ ಭಾವದಿಂದ ಹರಿ ಬ್ರಹ್ಮ ಇಂದ್ರ ಚಂದ್ರ ರವಿಕಾಲ ಕಾಮ ದಕ್ಷ ಶಿವರೊಳಗಾದ ಸಮಸ್ತ ದೇವದಾನವ ಮಾನವರೆಲ್ಲರೂ ಕಾಣಲರಿಯದೆ ಅಜ್ಞಾನದಿಂದ ಭವಭಾರಿಗಳಾದರು. ಈ ಪರಿಯಲ್ಲಿ ಭವಭಾರಿಗಳಾಗಿ ಬಯಲಾಗಿ ಹೋಗಬಾರದೆಂದು ನಮ್ಮ ಬಸವಣ್ಣನು ಜಗದ್ಧಿತಾರ್ಥವಾಗಿ ಮರ್ತ್ಯಕ್ಕೆ ಬಂದು ವೀರಶೈವಮಾರ್ಗವನರುಪುವುದಕ್ಕೆ ಐವತ್ತೆರಡು ವಿಧವನೊಳಕೊಂಡು ಚರಿಸಿದನು. ಅದೆಂತೆಂದೊಡೆ ಗುರುಕಾರುಣ್ಯವೇದ್ಯನು, ವಿಭೂತಿ ರುದ್ರಾಕ್ಷಿಧಾರಕನು, ಪಂಚಾಕ್ಷರೀಭಾಷಾಸಮೇತನು, ಲಿಂಗಾಂಗಸಂಬಂಧಿ, ನಿತ್ಯಲಿಂಗಾರ್ಚಕನು, ಅರ್ಪಿತದಲ್ಲಿ ಅವಧಾನಿ, ಪಾದೋದಕಪ್ರಸಾದ ಗ್ರಾಹಕನು, ಗುರುಭಕ್ತಿ ಸಂಪನ್ನನು, ಏಕಲಿಂಗನಿಷ್ಠಾಪರನು, ಚರಲಿಂಗಲೋಲುಪ್ತನು, ಶರಣಸಂಗಮೇಶ್ವರನು, ತ್ರಿವಿಧಕ್ಕೆ ಆಯತನು, ತ್ರಿಕರಣಶುದ್ಧನು, ತ್ರಿವಿಧ ಲಿಂಗಾಂಗಸಂಬಂಧಿ, ಅನ್ಯದೈವಸ್ಮರಣೆಯ ಹೊದ್ದ, ಭವಿಸಂಗವ ಮಾಡ, ಭವಿಶಾಕವಕೊಳ್ಳ, ಪರಸ್ತ್ರೀಯರ ಬೆರಸ, ಪರಧನವನೊಲ್ಲ, ಪರನಿಂದೆಯನಾಡ, ಅನೃತವ ನುಡಿಯ, ಹಿಂಸೆಯ ಮಾಡ, ತಾಮಸಭಕ್ತಸಂಗವ ಮಾಡ, ಗುರುಲಿಂಗಜಂಗಮಕ್ಕೆ ಅರ್ಥಪ್ರಾಣಾಭಿಮಾನ ಮುಂತಾದ ಸಮಸ್ತವೆಲ್ಲವ ಸಮರ್ಪಿಸಿ ಪ್ರಸಾದ ಮುಂತಾಗಿ ಭೋಗಿಸುವ, ಜಂಗಮನಿಂದೆಯ ಸೈರಿಸ, ಪ್ರಸಾದನಿಂದೆಯ ಕೇಳ, ಅನ್ಯರ ನಾಶಿಗೈಯ್ಯ, ಪಾತ್ರಾಪಾತ್ರವನರಿದೀವ, ಚತುರ್ವಿಧಸವವಿಯುಹಾರ, ಅರಿಷಡ್ವರ್ಗಕ್ಕಳುಕ, ಕುಲಾದಿ ಮದಂಗಳ ಬಗೆಗೊಳ್ಳ, ದ್ವೈತಾದ್ವೈತವ ನುಡಿವನಲ್ಲ, ಸಂಕಲ್ಪ ವಿಕಲ್ಪವ ಮಾಡುವನಲ್ಲ, ಕಾಲೋಚಿತವಬಲ್ಲ, ಕ್ರಮಯುಕ್ತನಾಗಿಹ, ಷಟ್‌ಸ್ಥಲಭರಿತ, ಸರ್ವಾಂಗಲಿಂಗಿ, ದಾಸೋಹ ಸಂಪನ್ನ, ಇಂತೀ ಐವತ್ತೆರಡು ವಿಧದಲ್ಲಿ ನಿಪುಣನಾಗಿ ಮೆರೆವ ನಮ್ಮ ಬಸವಣ್ಣನು. ಆ ಬಸವಣ್ಣನ ಶ್ರೀ ಪಾದಕ್ಕೆ ನಾನು ಅಹೋರಾತ್ರಿಯಲ್ಲಿ ನಮೋನಮೋ ಎಂದು ಬದುಕಿದೆನು ಕಾಣಾ ಚನ್ನ ಮಲ್ಲಿಕಾರ್ಜುನಾ.

ನಿರವಯ = ನಿರಾಕಾರ, ಬಯಲು; ಅಭೇದ್ಯ = ತಿಳಿಯಲಿಕ್ಕೆ ಅಸಾಧ್ಯ; ವೇದ್ಯ = ತಿಳಿಯಲಿಕ್ಕೆ ಶಕ್ಯ; ಅವಧಾನಿ = ಮನಸ್ಸಿನ ಏಕಾಗ್ರತೆಯುಳ್ಳವನು; ಲೋಲುಪ್ತ = ಮಗ್ನ; ಹಾರು = ಇಚ್ಛಿಸು; ಅಳುಕು = ಅಂಜು; ಬಗೆಗೊಳ್ಳು = ಮನಸ್ಸಿಗೆ ತರು.

೬. ಮರ್ತ್ಯಲೋಕದ ಭಕ್ತರ ಮನವ ಬೆಳಗಲೆಂದು ಇಳಿತಂದನ

ಯ್ಯ ಶಿವನು. ಕತ್ತಲೆಯ ಪಾಳೆಯುವ ರವಿಹೊಕ್ಕಂತಾಯಿತ್ತಯ್ಯ. ಚಿತ್ರದ ಪ್ರವೃತ್ತಿಯು ಹಿಂಗಿಸಿ, ಮುಕ್ತಿಪಥವ ತೋರಿದನಲ್ಲ ಅಸಂಖ್ಯಾತರುಗಳಿಗೆ. ತನುವೆಲ್ಲ ಸ್ವಯಲಿಂಗ, ಮನವೆಲ್ಲ ಚರಲಿಂಗ, ಭಾವವೆಲ್ಲ ಮಹಾಘನದ ಬೆಳಗು. ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣ ಸರ್ವಜ್ಞಾನಿ ಚನ್ನಬಸವಣ್ಣನ ಶ್ರೀ ಪಾದಕ್ಕೆ ಶರಣೆಂದು ಎನ್ನ ಭವಂ ನಾಸ್ತಿಯಾಯಿತ್ತಯ್ಯ ಪ್ರಭುವೇ.

ಪಾಳೆಯು = ಪಾಳ್ಯ, ಠಾಣೆ.

೭. ಬಸವಣ್ಣನ ಭಕ್ತಿ, ಚನ್ನಬಸವಣ್ಣನ ಜ್ಞಾನ, ಮಡಿವಾಳಯ್ಯನ ನಿಷ್ಠೆ, ಪ್ರಭುದೇವರ ಜಂಗಮಸ್ಥಲ, ಅಜಗಣ್ಣನ ಐಕ್ಯಸ್ಥಲ, ನಿಜಗುಣನ ಆರೂಢಸ್ಥಲ, ಸಿದ್ಧರಾಮಯ್ಯನ ಸಮಾಧಿಸ್ಥಲ, ಇಂತಿವರ ಕರುಣಪ್ರಸಾದವೆನಗಾಯಿತ್ತು ಚನ್ನಮಲ್ಲಿಕಾರ್ಜುನಯ್ಯ.

೮ ಬಸವಣ್ಣ, ಎನ್ನ ಭಕ್ತಿಯೇ ನಿಮ್ಮ ಧರ್ಮ, ಎನ್ನ ಜ್ಞಾನವೇ ಪ್ರಭುದೇವರ ಧರ್ಮ, ಎನ್ನ ಪರಿಣಾಮವೇ ಚನ್ನಬಸವಣ್ಣನ ಧರ್ಮ, ಇಂತೀ ಮೂವರು ಒಂದೊಂದು ಕೊಟ್ಟಕಾರಣ ಎನಗೆ ಮೂರು ಭಾವವಾಯಿತ್ತು. ಆ ಮೂರು ಭಾವವ ನಿಮ್ಮಲ್ಲಿ ಸಮರ್ಪಿಸಿದ ಕಾರಣ ಚನ್ನಮಲ್ಲಿಕಾರ್ಜುನಯ್ಯನ ನೆನಹು ಹೋದಲ್ಲಿಯೇ ನಿಮ್ಮ ಕರುಣದ ಕಂದನು ಕಾಣಾ ಸಂಗನಬಸವಣ್ಣಾ

೯. ಬಸವಣ್ಣನ ಮನೆಯ ಮಗಳಾದ ಕಾರಣ ಭಕ್ತಿಪ್ರಸಾದವ ಕೊಟ್ಟನು. ಪ್ರಭುದೇವರ ತೊತ್ತಿನ ತೊತ್ತಿನ ಮರಿದೊತ್ತಿನ ಮಗಳಾದ ಕಾರಣ ಜ್ಞಾನಪ್ರಸಾದವಕೊಟ್ಟನು ಶಿದ್ಧರಾಮಯ್ಯನ ಶಿಶುಮಗಳಾದಕಾರಣ ಪ್ರಾಣಪ್ರಸಾದವ ಕರುಣಿಸಿ ಕೊಟ್ಟನು. ಮಡಿವಾಳಯ್ಯನ ಮನೆಯ ಮಗಳಾದ ಕಾರಣ ನಿರ್ಮಲಪ್ರಸಾದವ ನಿಶ್ಚಯಿಸಿ ಕೊಟ್ಟನು. ಇಂತೀ ಅಸಂಖ್ಯಾತ ಗಣಂಗಳೆಲ್ಲರೂ ತಮ್ಮ ಕರುಣದ ಕಂದನೆಂದು ತಲೆದಡಹಿದ ಕಾರಣ ಚನ್ನಮಲ್ಲಿಕಾರ್ಜುನಯ್ಯನ ಶ್ರೀ ಪಾದಕ್ಕೆ ಯೋಗ್ಯಳಾದೆನು.

ತಡಹು = ಮುಟ್ಟು.

೧೦. ಸಂಗನಬಸವಣ್ಣನ ಪಾದವ ಕಂಡೆನಾಗಿ ಎನ್ನಂಗ ನಾಸ್ತಿಯಾಯಿತ್ತು. ಚನ್ನಬಸವಣ್ಣನ ಪಾದವ ಕಂಡೆನಾಗಿ ಎನ್ನ ಪ್ರಾಣನಾಸ್ತಿಯಾಯಿತ್ತು. ಪ್ರಭುವೇ ನಿಮ್ಮ ಶ್ರೀ ಚರಣಕ್ಕೆ ಶರಣೆಂದೆನಾಗಿ ಎನಗೆ ವರುಹು ಸ್ವಾಯತನಾಯಿತ್ತು ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣ

ರ ಕರುಣವ ಪಡೆದೆನಾಗಿ ಎನಗಾವ ಜಂಜಡವಿಲ್ಲವಯ್ಯ ಪ್ರಭುವೇ.

ಜಂಜಡ = ತೊಂದರೆ.

೧೧. ಮಾಟಕೂಟ ಬಸವಣ್ಣಂಗಾಯಿತ್ತು. ನೋಟಕೂಟ ಪ್ರಭುದೇವರಿಗಾಯಿತ್ತು. ಭಾವಕೂಟ ಅಜಗಣ್ಣಂಗಾಯಿತ್ತು. ಸ್ನೇಹಕೂಟಬಾಚಿರಾಜಂಗಾಯಿತ್ತು. ಇವರೆಲ್ಲರ ಕೂಟ ಚನ್ನಬಸವಣ್ಣಂಗಾಯಿತ್ತು. ಎನಗಿನ್ನಾವ ಕೂಟವಿಲ್ಲವಯ್ಯ ಚನ್ನಮಲ್ಲಿಕಾರ್ಜುನಯ್ಯ.

ಮಾಟ= ಕ್ರಿಯೆ.

೧೨. ಮಾಟಕೂಟದಲ್ಲಿ ಬಸವಣ್ಣನಿಲ್ಲ. ನೋಟಕೂಟದಲ್ಲಿ ಪ್ರಭುದೇವರಿಲ್ಲ. ಭಾವಕೂಟದಲ್ಲಿ ಅಜಗಣ್ಣನಿಲ್ಲ. ಸ್ನೇಹಕೂಟದಲ್ಲಿ ಬಾಚಿರಾಜನಿಲ್ಲ. ಇವರೆಲ್ಲರ ಕೂಟದಲ್ಲಿ ಚನ್ನಬಸವಣ್ಣನಿಲ್ಲ. ಎನಗಿನ್ನಿದೇನಯ್ಯ ಚನ್ನಮಲ್ಲಿಕಾರ್ಜುನಯ್ಯ?

೧೩. ಕರ್ಮವೆಂಬ ಕದಳಿ ಎನಗೆ, ಕಾಯವೆಂಬ ಕದಳಿ ನಿನಗೆ, ಮಾಟವೆಂಬ ಕದಳಿ ಬಸವಣ್ಣಂಗೆ, ಭಾವವೆಂಬ ಕದಳಿ ಚನ್ನಬಸವಣ್ಣಂಗೆ. ಬಂದ ಭಾವ ಸಲೆ ಸಂದಿತ್ತು. ಎನ್ನಂಗದವಸಾನ ಹೇಳಾ ಚನ್ನಮಲ್ಲಿಕಾರ್ಜುನಯ್ಯ.

ಕದಳಿ= ಅರಣ್ಯದ ಮಧ್ಯಸ್ಥಳ; ಅವಸಾನ= ಅಂತ್ಯ.

# ಮಹೇಶ್ವರ ಸ್ಥಲ.

೧. ಕಡೆಗೆ ಮಾಡದ ಭಕ್ತಿ, ದೃಢವಿಲ್ಲದಾಳುತನ, ಮೃಡನೊಲಿಯ ಹೇಳಿದರೆ, ಎಂತೊಲಿವನಯ್ಯ? ಮಾಡಲಾಗದು, ಆಳಿಮನವ ಮಾಡಿದೊಡೆ ಮನದೊಡೆಯ ಬಲ್ಲನೈಸೆ. ವಿರಳವಿಲ್ಲದೆ ಮಣಿಯ ಪೋಣಿಸಿಹೆನೆಂದೊಡೆ, ದುರುಳ ಚೆನ್ನಮಲ್ಲಿಕಾರ್ಜುನಯ್ಯನೆಂತೊಲಿವನಯ್ಯ?

ಆಳುತನ = ಒಡೆತನ; ಆಳಿ = ಕ್ಷುದ್ರ; ವಿರಳವಿಲ್ಲದೆ = ಒಂದೇಸವನೆ.

೨. ಹುಟ್ಟಿದ ಯೋನಿಯಲ್ಲಿ ಹುಟ್ಟಿಸಿ, ಬಾರದ ಭವಂಗಳಲ್ಲಿ ಬರಿಸಿ, ಉಣ್ಣದ ಊಟವನುಣಿಸಿ, ವಿಧಿಗೊಳಗಾಗಿಸುವ ಕೇಳಿರಣ್ಣಾ! ತನ್ನವರೆಂದೊಡೆ, ಮನ್ನಿಸುವನೇ ಶಿವನು? ಹತ್ತಿರಿರ್ದ ಭೃಂಗಿಯ ಚರ್ಮವ ಕಿತ್ತೀಡಾಡಿದನು. ಮತ್ತೆ ಕೆಲಂಬರ ಬಲ್ಲನೆ? ಇದನರಿದು ಬಿಡದಿರು. ಚೆನ್ನಮಲ್ಲಿಕಾರ್ಜುನನಿಂತಹ ಸಿತಗನವ್ವಾ.

ಈಡಾಡು = ಎಳೆ; ಸಿತಗ = ಪುಂಡ.

೩. ಹಸಿವಾದೊಡೆ ಭಿಕ್ಷಾನ್ನಂಗಳುಂಟು. ತೃಷೆಯಾದೊಡೆ, ಕೆರೆ ಹಳ್ಳ ಭಾವಿಗಳುಂಟು. ಶಯನಕ್ಕೆ ಹಾಳು ದೇಗುಲಗಳುಂಟು. ಚೆನ್ನಮಲ್ಲಿಕಾರ್ಜುನಯ್ಯ ಆತ್ಮಸಂಗಾತಕ್ಕೆ ನೀನೆನಗುಂಟು.

ತೃಷೆ = ನೀರಡಿಕೆ; ಸಂಗಾತ = ಜೋಡು.

೪. ಆರೂ ಇಲ್ಲದವಳೆಂದು ಅಳಿಗೊಳಲುಬೇಡ ಕಂಡೆಯ್ಯ. ಏನು ಮಾಡಿದರೆಯೂ, ನಾನಂಜುವಳಲ್ಲ. ತರಗೆಲೆಯ ಮೆಲ್ಲಿದ್ದು ನಾನಿಹೆನು. ಸುರಿಗೆಯ ಮೇಲೊರಗಿ ನಾನಿಹೆನು. ಚೆನ್ನಮಲ್ಲಿಕಾರ್ಜನಯ್ಯ, ಕರಕೆಡೆನೋಡಿದೊಡೆ, ಒಡಲನು ಪ್ರಾಣವನು ನಿಮಗೊಪ್ಪಿಸಿ ಶುದ್ಧಳಹೆನು.

ಅಳಿಗೊಳು = ತೊಂದರೆಕೊಡು, ನಾಶಮಾಡು; ತರಗೆಲೆ = ಒಣಗಿದ ಎಲೆ; ಮೆಲ್ಲು = ತಿನ್ನು; ಸುರಿಗೆ = ಕತ್ತಿ; ಒರಗು = ಮಲಗು; ಕರಕೆಡೆ = ಬಹಳ ಕೆಟ್ಟ ರೀತಿಯಿಂದ.

೫. ಕಿಡಿಕಿಡಿಕೆದರಿದಡೆ, ಎನಗೆ ಹಸಿವು ತೃಷೆ ಅಡಗಿತೆಂಬೆನು. ಮುಗಿಲು ಹರಿದು ಬಿದ್ದರೆ, ಎನಗೆ ಮಜ್ಜನಕ್ಕೆರೆದರೆಂಬೆನು. ಗಿರಿ ಮೇಲೆ ಬಿದ್ದರೆ ಎನಗೆ ಪುಷ್ಪವೆಂಬೆನು ಚೆನ್ನಮಲ್ಲಿಕಾರ್ಜುನಯ್ಯಾ, ಶಿರಹರಿದು ಬಿದ್ದರೆ, ಪ್ರಾಣನಿಮಗರ್ಪಿತವೆಂಬೆನು.

ಕೆಮತು = ಹರವು, ಓಡಿ; ಮಜ್ಜನ = ಸ್ನಾನ.

೬. ಚಂದನವ ಕಡಿದು ಕೊರೆದು ತೇದೊಡೆ, ನೊಂದೆನೆಂದು ಕಂಪಬಿಟ್ಟಿತ್ತೆ? ತಂದು ಸುವರ್ಣವ, ಕಡಿದೊರೆದೊಡೆ, ಬೆಂದು ಕಳಂಕ ಹಿಡಿದಿತ್ತೆ? ಸಂದು ಸಂದು ಕಡಿದ ಕಬ್ಬಿನವ ಗಾಣದಲಿಕ್ಕಿ ಬೆಂದು ಪಾಕಾಗುಳ್ಳ ಸಕ್ಕರೆಯಾಗಿ ನೊಂದೆನೆಂದು ಸವಿಯು ಬಿಟ್ಟಿತ್ತೆ? ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ನಿಮಗೆ ಹಾನಿಯೆ? ಎನ್ನ ತಂದೆ ಚನ್ನಮಲ್ಲಿಕಾರ್ಜುನದೇವಯ್ಯ ಕೊಂದಡೆ ಶರಣೆಂಬುದ ಮಾಣೆ.

ಒರೆ = ತಿಕ್ಕು; ಕಳಂಕ = ಕಪ್ಪು.

೭. ಮನೆ ಮನೆ ತಪ್ಪದೆ ಕೈಯ್ಯೊಡ್ಡಿ ಬೇಡುವಂತೆ ಮಾಡಯ್ಯ. ಬೇಡಿದರೆ ಇಕ್ಕದಂತೆ ಮಾಡಯ್ಯ. ಇಕ್ಕಿದೊಡೆ ನೆಲಕ್ಕೆ ಬೀಳುವಂತೆ ಮಾಡಯ್ಯ. ನೆಲಕ್ಕೆ ಬಿದ್ದೊಡೆ, ನಾನೆತ್ತಿಕೊಂಬುದಕ್ಕೆ ಮುನ್ನವೆ ಶುನಿ ಎತ್ತಿಕೊಂಬಂತೆ ಮಾಡಯ್ಯ ಚನ್ನಮಲ್ಲಿಕಾರ್ಜುನಯ್ಯ.

ಶುನಿ = ನಾಯಿ.

೮. ಕಾಯ ಕರ್ರನೆ ಕಂದಿದರೇನು? ಕಾಯ ಮಿರ್ರನೆ ಮಿಂಚಿದರೇನು ಅಂತರಂಗ ಶುದ್ಧವಾದ ಬಳಿಕ, ಚನ್ನಮಲ್ಲಿಕಾರ್ಜುನನೊಲಿದ ಕಾಯ ಎಂತಾದೊಡೆಮಗೇನಯ್ಯ?

೯. ಶೀಲಶೀಲವೆಂತೆಂಬಿರಯ್ಯ, ಶೀಲದ ನೆಲೆಯ ಬಲ್ಲರೆ ಹೇಳಿರೋ? ಅರಿಯದಿದ್ದರೆ ಕೇಳಿರೊ? ಕಾಮ ಒಂದು ಭವಿ, ಕ್ರೋಧ ಎರಡನೇ ಭವಿ ಲೋಭ ಮೂರನೇ ಭವಿ, ಮೋಹ ನಾಲ್ಕನೇ ಭವಿ, ಮದ ಐದನೇಭವಿ, ಮತ್ಸರ ಆರನೇ ಭವಿ, ಆಮಿಷ ಏಳನೇ ಭವಿ, ಇಂತೀ ಏಳುಭವಿಗಳ ತಮ್ಮೊಳಗಿಟ್ಟುಕೊಂಡು ಲಿಂಗವಿಲ್ಲದವರ ಭವಿಭವಿ ಎಂಬರು. ತಮ್ಮಂತರಂಗದಲ್ಲಿದ್ದ ಲಿಂಗಾಂಗದ ಸುದ್ದಿಯನರಿಯದೆ, ಅಚ್ಚಪ್ರಸಾದಿ, ನಿಚ್ಚಪ್ರಸಾದಿ, ಸಮಯಪ್ರಸಾದಿಗಳೆಂದು, ಜಲಕ್ಕೆ ಕನ್ನವನಿಕ್ಕಿ ಉದಕವ ತಂದು ಲಿಂಗಕ್ಕೆ ಮಜ್ಜನಕ್ಕೆರೆವ ಹಗಲಗಳ್ಳರಿಗೆ ಮೆಚ್ಚುವನೆ ಚನ್ನಮಲ್ಲಿಕಾರ್ಜುನನು?

ನೆಲೆ = ರೀತಿ, ಹದ. ಆಮಿಷ = ಆಶೆ.

೧೦. ಭವಿಸಂಗವಳಿದು ಶಿವಭಕ್ತನಾದ ಬಳಿಕ ಭಕ್ತಂಗೆ ಭವಿಸಂಗವತಿಘೋರನರಕ ಶರಣಸತಿ ಲಿಂಗಪತಿಯಾದ ಬಳಿಕ ಶರಣಂಗೆ ಸತಿಸಂಗವತಿಘೋರನರಕ. ಚನ್ನಮಲ್ಲಿಕಾರ್ಜುನ ಲಿಂಗೈಕ್ಯಂಗೆ ಪ್ರಾಣಗುಣವಳಿಯದವರ ಸಂಗವೇ ಭಂಗ.

೧೧. ಹಾಲಹಿಡಿದು ಬೆಣ್ಣೆಯನರಸಲುಂಟೆ? ಲಿಂಗವ ಹಿಡಿದು ಪು

ಣ್ಯತೀರ್ಥಕ್ಕೆ ಹೋಗಲುಂಟೆ? ಲಿಂಗವ ಪಾದತೀರ್ಥ ಪ್ರಸಾದವಕೊಂಡು
ಅನ್ಯಬೋಧೆ ಅನ್ಯಶಾಸ್ತ್ರಕ್ಕೆ ಹಾರೈಸಲೇತಕ್ಕೆ? ಇಷ್ಟಲಿಂಗವಿದ್ದಂತೆ ಸ್ಥಾವ
ರಲಿಂಗಕ್ಕೆ ಶರಣೆಂದೊಡೆ, ತಡೆಯದೆ ಹುಟ್ಟಿಸುವ ಶ್ವಾನನ ಗರ್ಭದಲ್ಲಿ.
॥ ಅದೆಂತೆಂದೊಡೆ, ಶಿವಧರ್ಮ ಪುರಾಣೆ ॥ ಶ್ಲೋ ॥ ಇಷ್ಟಲಿಂಗಮವಿಶ್ವಸ್ಯ
ತೀರ್ಥಲಿಂಗಂ ನಮಸ್ಕೃತಃ । ಶ್ವಾನಯೋನಿ ಶತಂಗತ್ವಾ ಚಾಂಡಾಲಗೃಹ
ಮಾಚರೇತ್ ॥ ಎಂದುದಾಗಿ ಇದನರಿದು, ಗುರು ಕೊಟ್ಟ ಲಿಂಗದಲ್ಲಿಯೇ
ಎಲ್ಲ ತೀರ್ಥಂಗಳು, ಎಲ್ಲ ಕ್ಷೇತ್ರಂಗಳು ಇಹವೆಂದು ಭಾವಿಸಿ ಮುಕ್ತರಪ್ಪು
ದಯ್ಯಾ! ಇಂತಲ್ಲದೆ ಗುರುಕೊಟ್ಟ ಲಿಂಗವಕಿರಿದು ಮಾಡಿ, ತೀರ್ಥಲಿಂಗ
ವ ಹಿರಿದು ಮಾಡಿ, ಹೋದಾತಂಗೆ ಅಘೋರನರಕ ತಪ್ಪದು ಕಾಣಾ ಚ
ನ್ನಮಲ್ಲಿಕಾರ್ಜುನಾ.

# ಪ್ರಸಾದಿ ಸ್ಥಲ.

## ಪ್ರಸಾದ.

೧. ನಾನು ಮಜ್ಜನವ ಮಾಡುವುದಕ್ಕೆ ಮುನ್ನವೆ, ಜಂಗಮಕ್ಕೆ ಮಜ್ಜನವ ಮಾಡಿಸುವೆ. ನಾನು ಸೀರೆಯನುಡುವುದಕ್ಕೆ ಮುನ್ನವೆ, ಜಂಗಮಕ್ಕೆ ದೇವಾಂಗವನುಡಿಸುವೆ. ನಾನು ಪರಿಮಳವ ಲೇಪಿಸುವದಕ್ಕೆ ಮುನ್ನವೇ, ಜಂಗಮಕ್ಕೆ ಸುಗಂಧ ದ್ರವ್ಯಂಗಳ ಲೇಪಿಸುವೆ. ನಾನು ಅಕ್ಷತೆಯನಿಡುವುದಕ್ಕೆ ಮುನ್ನವೆ, ಜಂಗಮಕ್ಕೆ ಅಕ್ಷತೆಯ ನಿಡುವೆ. ನಾನು ಪುಷ್ಪವ ಮುಡಿವುದಕ್ಕೆ ಮುನ್ನವೆ, ಜಂಗಮಕ್ಕೆ ಪರಿಮಳ ಪುಷ್ಪವ ಮುಡಿಸುವೆ. ನಾನು ಧೂಪ ವಾಸನೆಯ ಕೊಳ್ಳದ ಮುನ್ನವೆ, ಜಂಗಮಕ್ಕೆ ಧೂಪವಾಸನೆಯ ಕೊಡುವೆ. ನಾನು ದೀಪಾರತಿಯ ನೋಡದ ಮುನ್ನವೆ, ಜಂಗಮಕ್ಕೆ ಆರತಿಯ ನೋಡಿಸುವೆ. ನಾನು ಸಕಲ ಪದಾರ್ಥವ ಸ್ವೀಕರಿಸದ ಮುನ್ನವೆ, ಜಂಗಮಕ್ಕೆ ಮೃಷ್ಟಾನ್ನವ ನೀಡಿಸುವೆ. ನಾನು ಪಾನಂಗಳ ಕೊಳ್ಳದ ಮುನ್ನವೆ, ಜಂಗಮಕ್ಕೆ ಅಮೃತ ಪಾನಂಗಳ ಕೊಡುವೆ. ನಾನು ಕೈದೊಳೆಯದ ಮುನ್ನವೆ, ಜಂಗಮಕ್ಕೆ ಹಸ್ತ ಪ್ರಕ್ಷಾಳನವ ಮಾಡಿಸುವೆ. ನಾನು ವಿಳೆಯವ ಮಾಡುವದಕ್ಕೆ ಮುನ್ನವೆ, ಜಂಗಮಕ್ಕೆ ತಾಂಬೂಲವ ಕೊಡುವೆ. ನಾನು ಗದ್ದುಗೆಯ ಮೇಲೆ ಕುಳ್ಳಿರುವದಕ್ಕೆ ಮುನ್ನವೆ, ಜಂಗಮಕ್ಕೆ ಉನ್ನತಾಸನವ ನಿಕ್ಕುವೆ. ನಾನು ಸುನಾದಂಗಳ ಕೇಳುವುದಕ್ಕೆ ಮುನ್ನವೆ, ಜಂಗಮಕ್ಕೆ ಸುಗೀತ ವಾದ್ಯಂಗಳ ಕೇಳಿಸುವೆ. ನಾನು ಭೂಷಣಂಗಳ ತೊಡುವುದಕ್ಕೆ ಮುನ್ನವೇ ಜಂಗಮಕ್ಕೆ ಆಭರಣಂಗಳ ತೊಡಿಸುವೆ. ನಾನು ವಾಹನಂಗಳ ನೇರುವದಕ್ಕೆ ಮುನ್ನವೆ, ಜಂಗಮಕ್ಕೆ ವಾಹನಂಗಳ ನೇರಿಸುವೆ. ಇಂತೀ ಹದಿನಾರು ತೆರದ ಭಕ್ತಿಯನು ಚರಲಿಂಗಕ್ಕೆ ಕೊಟ್ಟು ಆ ಚರಲಿಂಗ ಮೂರ್ತಿ ಭೋಗಿಸಿದ ಬಳಿಕ ನಾನು ಪ್ರಸಾದ ಮುಂತಾಗಿ ಭೋಗಿಸುವೆನಲ್ಲದೆ, ಜಂಗಮವಿಲ್ಲದೆ ಇನಿತರೊಳಗೊಂದು ಭೋಗವನಾವಡೂ ನಾನು ಭೋಗಿಸಿದೆನಾದೊಡೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಇಂತೀ ಕ್ರಮದಲ್ಲಿ ನಡೆದಾತಂಗೆ ಗುರುವುಂಟು, ಲಿಂಗವುಂಟು, ಜಂಗಮವುಂಟು, ಪಾದೋದಕವುಂಟು, ಪ್ರಸಾ

ದವುಂಟು, ಆಚಾರವುಂಟು, ಭಕ್ತಿಯುಂಟು. ಈ ಕ್ರಮದಲ್ಲಿ ನಡೆಯದಾತಂಗೆ, ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪಾದೋದಕವಿಲ್ಲ, ಪ್ರಸಾದವಿಲ್ಲ, ಆಚಾರವಿಲ್ಲ, ಸದ್ಭಕ್ತಿಯಿಲ್ಲ. ಅವನ ಬಾಳುವೆ ಹಂದಿಯ ಬಾಳುವೆ. ಅವನ ಬಾಳುವೆ ನಾಯ ಬಾಳುವೆ. ಅವನ ಬಾಳುವೆ ಕತ್ತೆಯ ಬಾಳುವೆ. ಅವನು ಸುರೆಮಾಂಸ ಭುಂಜಕನು. ಅವನು ಸರ್ವ ಚಾಂಡಾಲನಯ್ಯ ಚನ್ನಮಲ್ಲಿಕಾರ್ಜುನಾ.

ದೇವಾಂಗ = ವಸ್ತ್ರ

೨. ಲಿಂಗಕ್ಕೆ ರೂಪನರ್ಪಿಸುವೆ, ಜಂಗಮಕ್ಕೆ ರುಚಿಯನರ್ಪಿಸುವೆ, ಕಾಯಕ್ಕೆ ಶುದ್ಧ ಪ್ರಸಾದವ ಕೊಂಬೆ, ಪ್ರಾಣಕ್ಕೆ ಸಿದ್ಧ ಪ್ರಸಾದವ ಕೊಂಬೆ, ನಿಮ್ಮ ಪ್ರಸಾದದಿಂದ ಧನ್ಯಳಾದೆನಯ್ಯ ಚನ್ನಮಲ್ಲಿಕಾರ್ಜುನಾ.

೩. ಕಾಯಪ್ರಸಾದವೆನ್ನ, ಜೀವಪ್ರಸಾದವೆನ್ನ, ಪ್ರಾಣಪ್ರಸಾದವೆನ್ನ, ಭಾವಪ್ರಸಾದವೆನ್ನ, ಸುಯಿಧಾನ ಪ್ರಸಾದವೆನ್ನ, ಸಮಯ ಪ್ರಸಾದವೆನ್ನ. ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಪ್ರಸಾದವ ಹಾಸಿ ಹೊದೆದು ಕೊಂಡಿಪ್ಪೆನು.

ಸುಯಿಧಾನ = ಏಕಾಗ್ರತೆ, ಸಮಾಧಾನ; ಸಮಯ = ಸಮಾಜ

೪. ಭಾವಿಸಿ ನೋಡಿದೊಡೆ, ಅಂಗವಾಯಿತ್ತು. ಅಂಗ ಗುಣವಳಿದು ಳಿದ ಬಳಿಕ ನಾ ನಿನಗಂಗನಾದೆ. ಭಿನ್ನರುಚಿಯ ಬಿಟ್ಟು ಲಿಂಗರುಚಿಯಾದ ಬಳಿಕ ಚನ್ನಮಲ್ಲಿಕಾರ್ಜುನನಕೊಂಡು ಸಾವ ಭಾಷೆ.

೫. ಅಯ್ಯಾ ಚಿದಂಗ ಚಿಹ್ನನ ಲಿಂಗಶಕ್ತಿ ಭಕ್ತಿ ಹಸ್ತ ಮುಖ ಪದಾರ್ಥ ಪ್ರಸಾದವೆಂಬಿವಾದಿಯಾದ ಸಮಸ್ತ ಸಕೀಲಂಗಳ ನೆಲೆ ಕಲೆಯನರಿಯದೆ, ಜಿಹ್ವಾಲಂಪಟಕ್ಕೆ ಆಹ್ವಾನಿಸಿ, ಗುಹ್ಯಾಲಂಪಟದಲ್ಲಿ ವಿಸರ್ಜಿಸಿ, ಸಕಲೇಂದ್ರಿಯ ಮುಖದಲ್ಲಿ ಮೋಹಿಯಾಗಿ, ಸದ್ಗುರು ಕರುಣಾಮೃತ ರಸತಾನೆಂದರಿಯದೆ. ಬರಿದೆ ಭಕ್ತಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ ಗುರುಚರಪರವೆಂದು ಬೊಗಳುವ ಕುನ್ನಿಗಳ ನೋಡಿ ಎನ್ನ ಮನ ಬೆರಗು ನಿಬ್ಬೆರಗು ಆಯಿತ್ತಯ್ಯ ಚನ್ನಮಲ್ಲಿಕಾರ್ಜುನಾ.

ಆಹ್ವಾನಿಸು = ಕರೆಯು, ಒಳಗಾಗು. ಬೆರಗು = ಆಶ್ಚರ್ಯ. ನಿಬ್ಬೆರಗು = ವಿಶೇಷ ಆಶ್ಚರ್ಯ.

೬. ಅಯ್ಯಾ ಪರಾತ್ಪರ ಸತ್ಯ ಸದಾಚಾರ ಗುರುಲಿಂಗ ಜಂಗಮದ ಶ್ರೀಚರಣವನ್ನು ಹಿಂದೆ ಹೇಳಿದ ಅಚ್ಚಪ್ರಸಾದಿಯೋಪಾದಿಯಲ್ಲಿ ನಿರ್ವಂಚಕತ್ವದಿಂದ ಗುರುಲಿಂಗಜಂಗಮಕ್ಕೆ ಅರ್ಥ ಪ್ರಾಣಾಭಿಮಾನವ ಸಮರ್ಪಿಸಿ

ಒಪ್ಪೊತ್ತು ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ ಪೂಜಾರ್ಚನೆಯು ಮಾಡಿ ಪಾದೋದಕ ಪ್ರಸಾದವನ್ನು ತನ್ನ ಸರ್ವಾಂಗದಲ್ಲಿ ನೆಲಿಸಿರ್ಪ ಇಷ್ಟ ಮಹಾಲಿಂಗ ದೇವಂಗೆ ಕೊಟ್ಟು ಕೊಂಬುವಂಥಾದ್ದೇ ಇದಿರಿಟ್ಟು ಜಂಗಮ ಪಾದೋದಕ ಪ್ರಸಾದವ ಕೊಂಬ ಆಚರಣೆಯು ನಿಲುಕಡೆಯು ನೋಡಾ. ಆ ಮೇಲೆ ಒಪ್ಪೊತ್ತು ಸಂಬಂಧವಿಟ್ಟು ಆಚರಿಸುವ ನಿಲುಕಡೆ ಎಂತೆಂದೊಡೆ, ಅಯ್ಯ ನಿನ್ನ ಷಟ್‌ಸ್ಥಾನವಲ್ಲಿ ನೆಲಿಸಿರ್ಪ ಇಷ್ಟ ಮಹಾಲಿಂಗದೇವನ ತ್ರಿವಿಧ ಸ್ಥಾನದಲ್ಲಿ ಬಸವಣ್ಣ ಚನ್ನಬಸವಣ್ಣ ಅಲ್ಲಮಪ್ರಭು ಎಂಬ ತ್ರಿವಿಧ ನಾಮ ಸ್ವರೂಪವಾದ ಷೋಡಶಾಕ್ಷರಂಗಳೆ ಷೋಡಶ ವರ್ಣವಾಗಿ ನೆಲಸಿರ್ಪವು ನೋಡಾ. ಇಂತು ಷೋಡಶ ಕಲಾಸ್ವರೂಪವಾದ ಚಿದ್ಘನ ಮಹಾಲಿಂಗ ದೇವನ ನಿರಂಜನ ಜಂಗಮದೋಪಾದಿಯಲ್ಲಿ ಸಗುಣ ನಿರ್ಗುಣ ಪೂಜೆಗಳ ಮಾಡಿ ಜಂಗಮ ಚರಣ ಸೋಂಕಿನಿಂ ಬಂದ ಗುರುಪಾದೋದಕವಾದರೂ ಸರಿಯೆ, ಅದು ದೊರೆಯದಿರ್ದೊಡೆ ಲಿಂಗಾಣತಿಯಿಂದ ಬಂದೊದಗಿದ ಪರಿಣಾಮೋದಕವಾದರೂ ಸರಿಯೇ, ಒಂದು ಭಾಜನದಲ್ಲಿ ಸೂಕ್ಷ್ಮದಿಂದರಚಿಸಿ, ಆ ಉದಕದೊಳಗೆ ಹಸ್ತೋದಕ ಮಂತ್ರೋದಕವ ಮಾಡಿ, ಆ ಮೇಲೆ ಅನಾದಿ ಪ್ರಣಮವ ಪ್ರಸಾದಪ್ರಣವದೊಳಗೆ ಅಖಂಡ ಮಹಾ ಜ್ಯೋತಿಪ್ರಣಮವ ಲಿಖಿತವ ಮಾಡಿ, ಶ್ರದ್ಧಾದಿಯಾದ ಪೂರ್ಣ ಭಕ್ತಿಯಿಂದ ಮಹಾ ಚಿದ್ಘನ ತೀರ್ಥವೆಂದು ಭಾವಿಸಿ, ಪಂಚಾಕ್ಷರ ಷಡಕ್ಷರ ಮಂತ್ರಧ್ಯಾನದಿಂದ ಅನಿಮಿಷ ದೃಷ್ಟಿಯಿಂದ ನಿರೀಕ್ಷಿಸಿ, ಮೂರು ವೇಳೆ ಪ್ರದಕ್ಷಿಣೆಯ ಮಾಡಿ, ಆ ಚಿದ್ಘನ ತೀರ್ಥವನ್ನು ದ್ವಾದಶದಳ ಕಮಲದಲ್ಲಿ ನೆಲಿಸಿರುವ ಇಷ್ಟಮಹಾ ಲಿಂಗಜಂಗಮಕ್ಕೆ ಅಷ್ಟ ವಿಧಮಂತ್ರ ಸಕೀಲಂಗಳಿಂದ ಆಚಾರಾದಿ ಶೂನ್ಯಾಂತವಾದ ಅಷ್ಟವಿಧಲಿಂಗಧ್ಯಾನದಿಂದ ಅಷ್ಟವಿಧ ಬಂಧಗಳ ಸಮರ್ಪಿಸಿದಲ್ಲಿಗೆ ಅಷ್ಟವಿಧೋದಕವಾಗುವದಯ್ಯ. ಆ ಇಷ್ಟಮಹಾಲಿಂಗ ಜಂಗಮವೆ ಅಷ್ಟಾದಶ ಸ್ಮರಣೆಯಿಂದ ಮುಗಿದಲ್ಲಿಗೆ ನವಮೋದಕವಾಗುವದಯ್ಯ ಉಳಿದುದಕವ ತ್ರಿವಿಧೋದಕವೆನಿಸುವದಯ್ಯ. ಹೀಗೆ ಮಹಾಜ್ಞಾನ ಲಿಂಗಜಂಗಮ ಸ್ವರೂಪವಾದ ತೀರ್ಥವ ಮುಗಿದ ಮೇಲೆ ತಟ್ಟೆ ಬಟ್ಟಲಲ್ಲಿ ಎಡೆ ಮಾಡ ಬೇಕಾದರೆ ಗೃಹದಲ್ಲಿರ್ದ ಕ್ರಿಯಾಶಕ್ತಿಯರಿಗೆ ಧಾರಣವಿದ್ದರೆ ತಾವು ಸಲಿಸಿದ ಪಾದೋದಕ ಪ್ರಸಾದವ ಕೊಡುವುದಯ್ಯ. ಸಹಜ ಲಿಂಗಭಕ್ತರಾದರೆ, ಮುಖ ಮಜ್ಜನವ ಮಾಡಿಸಿ ತಾ ಧರಿಸುವ ವಿಭೂತಿಧಾರಣವ ಮಾಡಿಸಿ, ಶಿವಶಿವ ಹರಹರಾ ಬಸವಲಿಂಗಾಯೆಂದು ಬೋಧಿಸಿ, ಎಡೆ ಮಾಡಿಸಿ

ಕೊಂಬುವಯ್ಯ. ಆ ಮೇಲೆ ತಾನು ಸ್ಥಲವಾದೊಡೆ, ಸಂಬಂಧವಿಟ್ಟು, ಪರ ಸ್ಥಲವಾದೊಡೆ, ಚಿದ್ಘನ ಇಷ್ಟಮಹಾಲಿಂಗಜಂಗಮವ ಕರಸ್ಥಲದಲ್ಲಿ ಮೂರ್ತವ ಮಾಡಿಸಿಕೊಂಡು, ದಕ್ಷಿಣ ಹಸ್ತದಲ್ಲಿ ಗುರುಲಿಂಗಜಂಗವು ಸೂತ್ರ ವಿಡಿದು, ಬಂದ ಕ್ರಿಯಾಭಸಿತವ ಲೇಪಿಸಿ, ಮೂಲಪ್ರಣವ ಪ್ರಸಾದ ಪ್ರಣವ ದೊಳಗೆ ಗೋಳಕ ಪ್ರಣವು ಅಖಂಡ ಗೋಳಕಪ್ರಣವು ಅಖಂಡ ಮಹಾ ಗೋಳಕಪ್ರಣವು ಜ್ಯೋತಿಪ್ರಣವು ಧ್ಯಾನದಿಂದ ದ್ವಾದಶಮಣಿಯ ಧ್ಯಾನಿಸಿ ಪ್ರದಕ್ಷಿಣ ಮಾಡಿ ಮೂಲ ಮೂರ್ತಿಲಿಂಗಜಂಗಮದ ಮಸ್ತಕದ ಮೇಲೆ ಸ್ಪರ್ಶನವ ಮಾಡಿ, ಬಟ್ಟಲಿಗೆ ಮೂರು ವೇಳೆ ಸ್ಪರ್ಶನವಮಾಡಿ ಪದಾರ್ಥದ ಪೂರ್ವಾಶ್ರಯವ ಕಳೆದು, ಶುದ್ಧ ಪ್ರಸಾದವೆಂದು ಭಾವಿಸಿ ಇಷ್ಟ ಮಹಾಲಿಂಗಜಂಗಮಕ್ಕೆ ಅಷ್ಟಾದಶಮಂತ್ರ ಸ್ಮರಣೆಯಿಂದ ಮೂರುವೇಳೆ ರೂಪನರ್ಪಿಸಿ ಎರಡು ವೇಳೆ ರೂಪವ ತೋರಿ, ಸುರುಚಿ ಪ್ರಾಣಲಿಂಗ ಮಂತ್ರ ಜಿಹ್ವೆಯುಲ್ಲಿಟ್ಟು, ಆರನೆಯ ವೇಳೆ ಭೋಜನವ ಇಷ್ಟಮಹಾಲಿಂಗ ಮಂತ್ರ ಧ್ಯಾನ ದಿಂದ ಸಮರ್ಪಿಸಿ, ಷಡ್ವಿಧಲಿಂಗಲೋಲುಪ್ತಿಯಿಂದ ಸಂತೃಪ್ತನಾಗಿ ಆಚರಿಸಿದಾತನೇ ಗುರುಭಕ್ತನಾದ ನಿಚ್ಚ ಪ್ರಸಾದಿ ಎಂಬೆ ಚನ್ನ ಮಲ್ಲಿಕಾರ್ಜುನ.

ಇತಿರಿಡು =ಭಿನ್ನತೆಯಿಂದ ಆಚರಿಸು. ನಿಲುಕಡೆ= ಸ್ಥಿತಿ. ಆಣತಿ= ಆಜ್ಞೆ. ಭಾಜನ = ಪದಾರ್ಥಗಳನ್ನು ಇಡುವ ಸ್ಥಳ, ಪಾತ್ರೆ. ಅನಿಮಿಷ ದೃಷ್ಟಿ = ಎವೆ ಹಳಚದೆ ನೋಡುವದು.

## ಪ್ರಸಾದಿಯ ಪರಿಪೂರ್ಣತೆ.

೧. ತನು ನಿಮ್ಮ ರೂಪಾದಬಳಿಕ ನಾನಾರಿಗೆ ಮಾಡುವೆ? ಮನನಿಮ್ಮ ರೂಪಾದ ಬಳಿಕ ನಾನಾರನೆನೆವೆ? ಪ್ರಾಣ ನಿಮ್ಮ ರೂಪಾದ ಬಳಿಕ, ನಾನಾರನಾರಾಧಿಸುವೆ? ಅರಿವು ನಿಮ್ಮಲ್ಲಿ ಸ್ವಯವಾದ ಬಳಿಕ, ನಾನಾರನರಿವೆ? ಚನ್ನ ಮಲ್ಲಿಕಾರ್ಜುನಾ, ನಿಮ್ಮಲ್ಲಿ ನೀವಾಗಿ ನಿಮ್ಮಿಂದ ನಿಮ್ಮ ಮರೆದೆನಯ್ಯಾ.

ಸ್ವಯ= ಏಕಾಕಾರವಾಗುವದು.

೨. ಅಂಗವ ಲಿಂಗಮುಖದಲ್ಲಿ ಅರ್ಪಿಸಿ, ಅಂಗವ ನಂಗವಾಯಿತ್ತು. ಮನ ವರಿದು ಲಿಂಗಕರ್ಪಿಸಿ ಮನಲೀಯ್ಯವಾಯಿತ್ತು. ಭಾವವನಿರ್ಭಾವಕ್ಕರ್ಪಿಸಿ, ಭಾವಬಯಲಾಯಿತ್ತು. ಇಂತೀ ಅಂಗಮನ ಭಾವವಳಿದಕಾರಣ ಕಾಯವ ಕಾಯವಾಯಿತ್ತು. ಎನ್ನಅಕಾಯದ ಸುಖಭೋಗವ ಲಿಂಗವೇ ಭೋಗಿ

ಸುವನಾಗಿ ಶರಣ ಸತಿ ಲಿಂಗ ಪತಿಯಾದೆನು. ಇದುಕಾರಣ ಚನ್ನಮಲ್ಲಿಕಾರ್ಜುನನೆಂಬ ಗಂಡನ ಒಳಹೊಕ್ಕು ಬೆರಸಿದೆನು.

೩. ಕಾಯದೊಳಗೆ ಅಕಾಯವಾಯಿತ್ತು. ಜೀವದೊಳಗೆ ನಿರ್ಜೀವವಾಯಿತ್ತು. ಭಾವದೊಳಗೆ ನಿರ್ಭಾವವಾಯಿತ್ತು. ಎನ್ನ ಮನಗೆಟ್ಟವಳನೇತಕ್ಕೆ ನುಡಿಸುವಿರಯ್ಯ ಪ್ರಭುವೆ?

೪. ಐದುಪರಿಯ ಬಣ್ಣವ ತಂದು ಕೊಟ್ಟರೆ ನಾಲ್ಕು ಮೊಲೆಯ ಹಸುವಾಯಿತ್ತು. ಹಸುವಿನ ಬಸಿರಲ್ಲಿ ಕರುವು ಹುಟ್ಟಿತ್ತು. ಕರುವ ಮುಟ್ಟಲೀಯದೆ ಹಾಲು ಕರೆದುಕೊಂಡರೆ, ಕರರುಚಿಯಾಯಿತ್ತು. ಮಧುರ ತಲೆಗೇರಿ ಅರ್ಘವ ನೀಗಾಡಿ, ಆ ಕರುವಿನ ಬೆಂಬಳಿವಿಡಿದು ಭವಹರಿಯಿತ್ತು, ಚನ್ನ ಮಲ್ಲಿಕಾರ್ಜುನಾ.

೫. ಹಾವಿನ ಹಲ್ಲ ಕಳೆದು ಹಾವನಾಡಿಸ ಬಲ್ಲರೆ ಹಾವಿನ ಸಂಗವೇ ಲೇಸು ಕಂಡಯ್ಯ. ಕಾಯದ ಸಂಗವೇ ಲೇಸು ಕಂಡಯ್ಯ. ತಾಯಿರಕ್ಕಸಿಯಾದಂತೆ ಕಾಯವಿಕಾರವು ಚನ್ನ ಮಲ್ಲಿಕಾರ್ಜುನಯ್ಯ ನೀನೊಲಿದವರು ಕಾಯಗೊಂಡಿದ್ದರೆನಬೇಡ.

೬. ಒಡಲ ಕಳವಳಕ್ಕಾಗಿ ಅಡವಿಯ ಪೊಕ್ಕೆ. ಗಿಡು ಗಿಡುವಪ್ಪದೆ ಬೇಡಿದೆನೆನ್ನಂಗಕ್ಕೆಂದು. ಅವು ನೀಡಿದವು ತಮ್ಮ ಲಿಂಗಕ್ಕೆಂದು. ಆನುಬೇಡಿ ಭವಿಯಾದೆನು. ಅವು ನೀಡಿ ಭಕ್ತರಾದವು. ಇನ್ನು ಬೇಡಿದೆನಾದರೆ ಚನ್ನ ಮಲ್ಲಿಕಾರ್ಜುನಯ್ಯ ನಿಮ್ಮಾಣೆ.

# ಪ್ರಾಣಲಿಂಗಿ ಸ್ಥಲ.

## ಪ್ರಾಣಲಿಂಗ.

೧. ಎನ್ನ ನಾನರಿಯದಂದು ಮುನ್ನ ನೀನೆಲ್ಲಿರ್ದೆ ಹೇಳಯ್ಯಾ! ಚಿನ್ನದೊಳಗಣ ಬಣ್ಣದಂತೆ, ಎನ್ನೊಳಗಿರ್ದೆಯಯ್ಯಾ! ಎನ್ನೊಳಗೆ ಇರ್ದು ಮೈದೋರದ ಭೇದವ ನಿಮ್ಮಲ್ಲಿ ಕಂಡೆನು ಕಾಣಾ ಚನ್ನಮಲ್ಲಿಕಾರ್ಜುನಾ.

ಮುನ್ನ = ಮೊದಲು; ಮೈದೋರು = ಪ್ರತ್ಯಕ್ಷವಾಗು

೨. ಪ್ರಾಣಲಿಂಗನೆಂದರಿವ ಬಳಿಕ ಪ್ರಾಣದಾಸೆ ಹಿಂಗಿತ್ತು. ಲಿಂಗ ಪ್ರಾಣವೆಂದರಿದಬಳಿಕ, ಅಂಗದಾಸೆ ಹಿಂಗಿತ್ತು. ಲಿಂಗ ಸೋಂಕು ಸಂಗಿಗೆ ಕಂಗಳೇ ಕರುವಾಗಿದ್ದವಯ್ಯಾ, ಚನ್ನಮಲ್ಲಿಕಾರ್ಜುನಯ್ಯ ಹಿಂಗದೆ ಅನಿಮಿಷನಾದ ಶರಣಂಗೆ.

ಕರು= ದೊಡ್ಡದಾದಂಥಾದ್ದು, ಅನಿಮಿಷ = ಎವೆಯಳಚದೆ ಇರುವ

೩. ಅಂಗಲಿಂಗವ ವೇಧಿಸಿ, ಅಂಗಲಿಂಗದೊಳಗಾಯಿತ್ತು. ಮನ ಲಿಂಗವ ವೇಧಿಸಿ ಮನ ಲಿಂಗದೊಳಗಾಯಿತ್ತು. ಭಾವ ಲಿಂಗವ ವೇಧಿಸಿ ಭಾವಲಿಂಗದೊಳಗಾಯಿತ್ತು. ಚನ್ನಮಲ್ಲಿಕಾರ್ಜುನ, ನಿಮ್ಮೊಲುಮೆಯ ಸಂಗದಲ್ಲಿರ್ದು ಸ್ವಯ ಲಿಂಗಿಯಾದೆನು.

ವೇಧಿಸು= ಸಂಬಂಧಿಸು, ಒಲುಮೆ= ಪ್ರೀತಿ

೪. ಹಾಲು ತುಪ್ಪವ ನುಂಗಿ ಬೇರಾಗಬಲ್ಲುದೇ? ಸೂರ್ಯಕಾಂತಿಯಲ್ಲಿದ್ದಗ್ನಿಯನಾರು ಭೇದಿಸಬಲ್ಲರು? ಅಪಾರ ಮಹಿಮ ಚನ್ನಮಲ್ಲಿಕಾರ್ಜುನ ನೀನೆನ್ನೊಳಡಗಿರ್ದ ಪರಿಯ ಬೇರಿಲ್ಲದೆ ಕಂಡು ಕಣ್ದೆರೆದೆನು.

೫. ಮೂಲಾಧಾರದ ಬೇರ ಮೆಟ್ಟಿ, ಭೂಮಂಡಲವನೇರಿದೆ. ಆಧಾರದ ಬೇರ ಹಿಡಿದು ಐಕ್ಯದ ತುದಿಯನೇರಿದೆ. ವೈರಾಗ್ಯದ ಸೋಪಾನದಿಂದ ಶ್ರೀ ಪರ್ವತವನೇರಿದೆ. ಕೈವಿಡಿದು ತೆಗೆದುಕೊಳ್ಳಾ, ಚನ್ನಮಲ್ಲಿಕಾರ್ಜುನಾ.

೬. ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೆಯ ಮಾತ ಹೇಳಿದೊಡೇನು? ಕೇಳಿದೊಡೇನು? ತನ್ನಲ್ಲಿದ್ದುದ ತಾನರಿಯದನ್ನಕ್ಕ ಹೇಳಿದೊಡೆನು, ಕೇಳಿದೊಡೇನು, ಉನ್ಮನಿಯ ರಭಸದ ಪವನದಲ್ಲಿದ್ದ ಚನ್ನಮಲ್ಲಿಕಾರ್ಜುನಯ್ಯನ ಭೇದಿಸದನ್ನಕ್ಕರ?

ಉನ್ಮನಿ = ಉತ್ಕಟೇಚ್ಛೆ

೭. ಪಂಚೇಂದ್ರಿಯದ ಉರುವಣೆಯಹುದು. ಮದದ ಭರದ ಜವ್ವನದೊಡಲು ವೃಥಾ ಹೋಯಿತ್ತಲ್ಲಾ! ತುಂಬಿ ಪರಿಮಳವನೆ ಕೊಂಡು ಲಂಬಿಸುವ ತೆರನಂತೆ, ಇನ್ನೆಂದಿಂಗೆ ಒಳಕೊಂಬೆಯೋ ಅಯ್ಯ ಚನ್ನಮಲ್ಲಿಕಾರ್ಜುನಾ.

**ಉರವಣೆ= ಮೇಲೆ ಬೀಳುವದು; ಜವ್ವನ =ಯವ್ವನ; ವೃಥಾ= ವ್ಯರ್ಥವಾಗಿ ತುಂಬಿ =ಗುಂಗೀಹುಳ; ಲಂಬಿಸು = ದೂರ ತೆಗೆದುಕೊಂಡು ಹೋಗು**

೮. ನಾನು ನಿನಗೊಲಿದೆ ನೀನು ಎನಗೊಲಿದೆ· ನೀನೆನ್ನ ನಗಲದಿಪ್ಪೆ· ನಾ ನಿನ್ನನಗಲದಿಪ್ಪೆನಯ್ಯ. ನಿನಗೆ ನನಗೆ ಬೇರೊಂದು ಠಾವುಂಟೆ? ನೀನು ಕರುಣಿ ಎಂಬುದ ನಾನು ಬಲ್ಲೆನು. ನೀನಿರಿಸಿದ ಗತಿಯೊಳಗೆ ಇಪ್ಪವಳಾನಯ್ಯ. ನೀನೇ ಬಲ್ಲೆ ಚನ್ನಮಲ್ಲಿಕಾರ್ಜುನಾ.

೯. ಇಂದ್ರ ನಿಲಗಿರಿಗಳನೇರಿಕೊಂಡು, ಚಂದ್ರ ಶಿಲೆಗಳ ಮೆಟ್ಟಿಕೊಂಡು, ಕೊಂಬ ಬಾರಿಸುತ, ಹರನೇ ಎನ್ನ ಕುಂಭ ಕುಚದ ಮೇಲೆ ನಿಮ್ಮನ್ನೆದಿಪ್ಪೆಕೊಂಬೆನಯ್ಯ! ಅಂಗ ಭಂಗ ಮನ ಭಂಗವಳಿದು, ನಿಮ್ಮನೆಂದಿಗೊಮ್ಮೆ ನೆರೆವೆನೋ ಚನ್ನಮಲ್ಲಿಕಾರ್ಜುನಾ.

**ನೆರೆ= ಕೂಡು, ಏಕಾಕಾರವಾಗು**

೧೦. ತಾನು ದಂಡು ಮಂಡಲಕ್ಕೆ ಹೋದನೆಂದೊಡೆ, ನಾನು ಸುಮ್ಮನಿಹೆನಲ್ಲದೆ, ತಾನೆನ್ನ ಕೈಯ್ಯೊಳಗಿರ್ದು ಎನ್ನ ಮನದೊಳಗಿರ್ದು, ಎನ್ನ ಕೂಡದಿರ್ದೊಡೆ, ನಾನೆಂತು ಸೈರಿಸುವೆನವ್ವಾ! ನೆನಹೆಂಬ ಕುಂಟಣಿ ಚನ್ನಮಲ್ಲಿಕಾರ್ಜುನನ ನೆರೆಯದಿರ್ದೊಡೆ, ಆನೇವೆ ಸಖಿಯೆ?

## ಲಿಂಗದ ವಿಕಳಾವಸ್ಥೆ.

೧. ಬಂಜೆ ಬೇನೆಯನರಿಯುಳು. ಬಲದಾಯಿ ಮುದ್ದಬಲ್ಲಳೆ? ನೊಂದ ನೋವ ನೋಯದವರೆತ್ತಬಲ್ಲರು? ಚನ್ನಮಲ್ಲಿಕಾರ್ಜುನ, ನೀನಿರಿದಲಗು ಒಡಲಲ್ಲಿ ಮುರಿದು ಹೊರಳುವಳ ನೀವೆತ್ತ ಬಲ್ಲಿರೆ ಎಲೆ ತಾಯಿಗಳಿರಾ?

**ಬಲದಾಯಿ= ಮಲತಾಯಿ; ಅಲಗು= ಕತ್ತಿ.**

೨. ಮುಚ್ಚು ಆಚ್ಚುಗವಾಗಿಪ್ಪ ಪರಿಯನೋಡಾ! ಎಚ್ಚರ ಗರಿದೋರದಂತಿರಬೇಕು. ಅಪ್ಪಿದರೆ ಅಸ್ಥಿಗಳು ನುಗ್ಗುನುರಿಯಾಗಬೇಕು.

ಬೆಚ್ಚಡೆ ಬೆಸುಗೆಯರಿಯದಂತಿರಬೇಕು. ಮಚ್ಚು ಒಪ್ಪಿತ್ತು ಚನ್ನಮಲ್ಲಿಕಾರ್ಜುನಯ್ಯನ ಸ್ನೇಹ.

ಮಚ್ಚು= ಪ್ರೀತಿ; ಅಚ್ಚುಗ= ಆಕೃತಿ, ಗಟ್ಟಿಯಾಗಿರುವ ಸ್ಥಿತಿ; ಬೆಚ್ಚು= ಕೂಡು; ಬೆಸುಗೆ= ಪದರು; ಸ್ನೇಹ= ಪ್ರೀತಿ.

೩. ಕಳವಳದ ಮನವು ತಲೆಕೆಳಗಾದುದವ್ವಾ! ಸುಳಿದು ಬೀಸುವ ಗಾಳಿ ಉರಿಯಾಯಿತ್ತವ್ವಾ! ಬೆಳುದಿಂಗಳು ಬಿಸಲಾಯಿತ್ತು ಕೆಳದಿ. ಹೊಳಲು ಸುಂಕಿಗನಂತೆ ತೊಳಲುತ್ತಿದೆನವ್ವಾ! ತಿಳುಹಾ ಬುದ್ಧಿಯ. ಹೇಳಿ ಕರತಾರೆಲೆಗವ್ವಾ! ಚನ್ನಮಲ್ಲಿಕಾರ್ಜುನಂಗೆ ಎರಡರ ಮುನಿಸವ್ವಾ.

ಹೊಳಲು= ಊರು; ಸುಂಕಿಗ= ಜಕಾತಿಯನ್ನು ತೆಗೆದುಕೊಳ್ಳುವವ; ಮುನಿಸು= ಸಿಟ್ಟು.

೪. ಒಮ್ಮೆ ಕಾಮನ ಕಾಲ ಹಿಡಿವೆ. ಮತ್ತೊಮ್ಮೆ ಚಂದ್ರಮಂಗೆ ಸೆರೆಗೊಡ್ಡಿ ಬೇಡುವೆ. ಸುಡಲೀವಿರಹವ. ನಾನಾರಿಗೆ ಧೃತಿಗೆಡುವೆ? ಚನ್ನಮಲ್ಲಿಕಾರ್ಜುನ ದೇವನೆನ್ನನೊಲ್ಲದಕಾರಣ ಎಲ್ಲರಿಗೆ ಹಂಗಿತಿಯಾದೆನವ್ವಾ.

ಧೃತಿ= ಧೈರ್ಯ; ಹಂಗಿತಿ= ಆಶ್ರಯವನ್ನು ಕೋರುವವಳು.

೫. ಅರಿಸಿನವನೆ ಮಿಂದು, ಹೊಂದುಡಿಗೆಯನೆ ತೊಟ್ಟು, ದೇವಾಂಗವನುಟ್ಟು, ಪುರುಷಬಾರಾ! ನಿನ್ನ ಬರವೆನ್ನಸುವಿನ ಬರವು ಬಾರಯ್ಯ! ಚನ್ನಮಲ್ಲಿಕಾರ್ಜುನಯ್ಯ ಬಂದಾನೆಂದು ಬಟ್ಟೆಗಳ ನೋಡಿ ಬಾಯಾರುತ್ತಿಹೆನು.

ಮಿಯು= ಹಚ್ಚು; ಹೊಂದುಡಿಗೆ= ಬಂಗಾರದ ಉಡಿಗೆ, ಬಣ್ಣದವಸ್ತ್ರ; ದೇವಾಂಗ= ಅರಿವೆ, ಬಟ್ಟೆ.

೬. ಅಳಿ ಸಂಕುಳವೇ, ಮಾಮರವೇ, ಬೆಳುದಿಂಗಳೇ, ಕೋಗಿಲೆಯೇ, ನಿಮ್ಮನಿಮ್ಮನೆಲ್ಲರನು ಒಂದು ಬೇಡುವೆನು. ಎನ್ನೊಡೆಯ ಚನ್ನಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೆ.

೭. ಚಿಲಿಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೆ, ನೀವು ಕಾಣಿರೆ. ಸರವೆತ್ತಿ ಪಾಡುವ ಕೋಗಿಲೆಗಳಿರಾ, ನೀವುಕಾಣಿರೆ, ನೀವುಕಾಣಿರೆ. ಎರಗಿ ಬಂದಾಡುವ ತುಂಬಿಗಳಿರಾ, ನೀವು ಕಾಣಿರೆ, ನೀವು ಕಾಣಿರೆ. ಕೊಳನತಡೆಯೊಳಾಡುವ ಹಂಸೆಗಳಿರಾ, ನೀವುಕಾಣಿರೆ, ನೀವುಕಾಣಿರೆ ಗಿರಿಗಂಹ್ವರದೊಳಗಾಡುವ ನವಿಲುಗಳಿರಾ, ನೀವು ಕಾಣಿರೆ, ನೀವು ಕಾಣಿರೆ ಚನ್ನಮಲ್ಲಿಕಾರ್ಜುನನೆಲ್ಲಿರ್ದಹನೆಂದು ನೀವು ಹೇಳಿರೆ, ನೀವು ಹೇಳಿರೆ.

ಓದು= ಒದರು; ಎರಗು= ಮೇಲೆ ಬಂದುಬೀಳು; ಕೊಳ= ಸರೋವರ.

೮. ಇಂದೆನ್ನ ಮನೆಗೆ ಗಂಡ ಬಂದಹನೆಲಗವ್ವಾ. ನಿಮನಿಮಗೆಲ್ಲಾ ಶೃಂಗಾರವ ಮಾಡಿಕೊಳ್ಳಿ. ಚನ್ನಮಲ್ಲಿಕಾರ್ಜುನನೀಗಳೆ ಬಂದಿಹನು ಇದಿರುಗೊಳ್ಳಬನ್ನಿರೆ ಅವ್ವಗಳಿರಾ.

೯. ಹಗಲು ನಾಲ್ಕು ಜಾವ ನಿಮ್ಮ ಕಳವಳದಲ್ಲಿಪ್ಪೆ, ನೋಡಯ್ಯ. ಇರುಳು ನಾಲ್ಕುಜಾವ ನಿಮ್ಮ ವಿಕಳಾವಸ್ಥೆಯಲ್ಲಿರ್ಪೆ, ನೋಡಯ್ಯ; ಇರುಳು ಹಗಲು ನಿಮ್ಮ ಕಳವಳದಲ್ಲಿ ಮರೆದೊರಗಿದೆನಯ್ಯಾ. ಚನ್ನಮಲ್ಲಿಕಾರ್ಜುನಾ, ನಿಮ್ಮೊಲುಮೆ ನಟ್ಟು ಹಸಿವು ತೃಷೆ ನಿದ್ರೆಯ ಮರೆತೆನು.

**ಕಳವಳ= ಚಿಂತೆ; ವಿಕಳ= ಉದ್ವೇಗ.**

೧೦. ಬಂದಹನೆಂದು ಬಟ್ಟೆಯ ನೋಡಿ, ಬಾರದಿರ್ದೊಡೆ ಕರಗಿ ಕೊರಗಿದೆನವ್ವಾ! ತಡವಾದೊಡೆ ಬಡವಾದೆ, ತಾಯೆ. ಚನ್ನಮಲ್ಲಿಕಾರ್ಜುನನ ಒಂದಿರುಳಗಲಿದೊಡೆ ತಕ್ಕೆ ಸಡಿಲಿದ ಜಕ್ಕವಕ್ಕಿಯಂತಾದೆನವ್ವಾ.

**ಬಟ್ಟೆ= ದಾರಿ; ಬಡವಾಗು= ಸಣ್ಣಗಾಗು, ಸೊರಗು; ಇರುಳು= ರಾತ್ರಿ. ಜಕ್ಕವಕ್ಕಿ= ಚಕ್ರವಾಕಪಕ್ಷಿ.**

೧೧. ಕೂಡಿ ಕೂಡುವ ಸುಖದಿಂದ ಒಪ್ಪಚ್ಚಿ ಅಗಲಿ ಕೂಡುವ ಸುಖಲೇಸು ಕೆಳದಿ. ಒಚ್ಚತ ಅಗಲಿರೆ, ಕಾಣದೆ ಇರಲಾರೆ. ಎನ್ನದೇವ ಚನ್ನಮಲ್ಲಿಕಾರ್ಜುನನಗಲಿಯಗಲದ ಸುಖವೆಂತಪ್ಪುದೊ?

**ಒಪ್ಪಚ್ಚಿ= ಸ್ವಲ್ಪ. ಒಚ್ಚತ= ಆನಂದ.**

೧೨. ಲಿಂಗಸುಖಸಂಗದಲ್ಲಿ ಮನವೇದ್ಯವಾಯಿತ್ತು. ಇನ್ನೆಲ್ಲಿಯದಯ್ಯ? ಎನಗೆ ನಿಮ್ಮಲ್ಲಿ ನಿರವಯವು ಇನ್ನೆಲ್ಲಿಯದಯ್ಯ? ನಿಮ್ಮಲ್ಲಿ ಕೂಡುವದು ಪರಮಸುಖ ಪರಿಣಾಮ ಮನಮೇರೆದಪ್ಪಿ, ನಾನು ನಿಜವನ್ನೈದುವುದ ಹೇಳಾ ಚನ್ನಮಲ್ಲಿಕಾರ್ಜುನಯ್ಯ.

**ವೇದ್ಯವಾಗು= ಗೊತ್ತಾಗು. ನಿರವಯ= ನಿರಾಕಾರ, ಐಕ್ಯಭಾವವು.**

೧೩. ಒಡಲಿಲ್ಲದ, ನುಡಿ ಇಲ್ಲದ, ಕಡೆಇಲ್ಲದ ನಲ್ಲನ, ಒಡಗೂಡಿ ಸುಖಿಯಾದೆ, ಕೇಳಿರಯ್ಯ. ಓಸರಿಸೆನಯ್ಯಕ್ಕೆ. ಆಶೆಮಾಡೆನು ಮತ್ತೆ ಭಿನ್ನ ಸುಖಕ್ಕೆ. ಆರಳಿದು ಮೂರಾಗಿ, ಮೂರಳಿದು ಎರಡಾಗಿ, ಎರಡಳಿದು ಒಂದಾಗಿ, ನಿಂದೆನಯ್ಯ. ಬಸವಣ್ಣ ಮೊದಲಾದ ಶರಣರಿಗೆ ಶರಣಾರ್ಥಿ. ಪ್ರಭುವಿನಿಂದ ಕೃತಕೃತ್ಯಳಾದೆನು. ನಾನು ಮರೆಯಲಾಗದು. ನಾನು ನಿಮ್ಮರಸುವೆನೆಂದು ಎನ್ನನು ಚನ್ನಮಲ್ಲಿಕಾರ್ಜುನನ ಬೆರಿಸೆಂದು ಹರಿಸುತ್ತಿಹುದು.

೧೪. ಉರಿಯ ಫಣಿಯನೆ ಉಡಿಸಿ, ಊರಿಂದ ಹೊರಗಿರಿಸಿ, ಕರೆಯಲಟ್ಟಿದ ಸಖಿಯ ನೆರೆದೆ ನೋಡೆಲೆಗವ್ವಾ! ತೂರ್ಯಾವಸ್ಥೆಯಲ್ಲಿ ತೂಗಿ

ತೂಗ ನೋಡಿ ಕರನೊಂದೆ ನೋಡವ್ವಾ! ಅವಸ್ಥೆಯಿಂದ ಹಿರಿದು ದುಃ-
ಕರಿಬೆಂದು ಗಿರಿಬೆಂದು ಹೊನ್ನರಳಿಯ ಮರನಾನು ಹಿರಿಯತನಗೆಡಿಸಿಸೆ
ರಿವೆನು ಚನ್ನಮಲ್ಲಿಕಾರ್ಜುನನಾ.

## ಪರಮಾತ್ಮನಲ್ಲಿ ಸಾಮರಸ್ಯ ಭಾವ.

೧. ಅಯ್ಯ, ದೂರವಲ್ಲಿರ್ದಿಹೆಯೆಂದು ಬಾಯಾರಿ ಬಳಲುತ್ತಿರ್ದೆ
ನಯ್ಯ ನಾನು. ಅಯ್ಯ ಸಾರಿ ಬಂದು ನೀನೆನ್ನ ಕರಸ್ಥಲವಲ್ಲಿ ಮೂರ್ತಿ
ಗೊಂಡರೆ, ಇನ್ನಾರತಿಯೆಲ್ಲವೂ ಲಿಂಗ. ಆಲಿ ನಿಮ್ಮಲ್ಲಿ ನಟ್ಟವು ನೋ
ಡಯ್ಯ! ಚನ್ನಮಲ್ಲಿಕಾರ್ಜುನಯ್ಯಾ! ನಿಮ್ಮನೆನ್ನ ಕರಸ್ಥಲದಲ್ಲಿ ನೋಡಿ
ನೋಡಿ ಕಂಗಳೇ ಪ್ರಾಣವಾಗಿರ್ದೆನಯ್ಯಾ,

ಸಾರಿಬರು = ಸಮೀಪಕ್ಕೆ ಬರು; ರತಿ = ಪ್ರೀತಿ; ಆಲಿ= ದೃಷ್ಟಿ

೨. ಸೆಜ್ಜೆಯುಪ್ಪರಿಸಿ, ಶಿವಲಿಂಗ, ನೀನೆನ್ನ ಕರಸ್ಥಲಕ್ಕೆ ಬರೆ, ಪ್ರ
ಜ್ವಲಿಸಿ ತೊಳತೊಳಗಿದೆ. ಬೆಳಗುತ್ತಿಹ ಕಾಂತಿಯಲಿ ಜಜ್ಝರಿಸಿ ತನು
ಮನ ದೃಷ್ಟಿ ನಟ್ಟು, ಲಿಂಗದಲ್ಲಿ ಒಜ್ಝರಿಸಿ ಸುರಿವ ಶಿವಸುಖರತಿಯೊ
ಳೋಲಾಡುತ್ತ, ಸಜ್ಜನ ಸದ್ಭಕ್ತಿ ರತಿಯೊಡನೆ ಕೂಡಿಯಾಡಿ, ಲಜ್ಜೆಗೆ
ಟ್ಟು ನಿಮ್ಮ ನೆರೆವೆ ಚನ್ನಮಲ್ಲಿಕಾರ್ಜುನಾ.

ಸೆಜ್ಜೆ = ಹಾಸಿಗೆ; ಉಪ್ಪರಿಸು= ಮೇಲೆ ಇರು; ಪ್ರಜ್ವಲಿಸು= ಪ್ರಕಾಶಿಸು;
ತೊಳಗು = ಹೊಳೆಯು; ಜಜ್ಝರಿಸು = ತುಣುಕು, ತುಣುಕಾಗು; ಒಜ್ಝರ = ಝರಿ
ಒಜ್ಝರಿಸು= ನೀರಿನಂತೆ ಹೊರಬೀಳು

೩. ಗಟ್ಟಿದುಪ್ಪ ತಿಳಿದುಪ್ಪಕೆ ಭೇದ ಉಂಟೆ? ದೀಪಕ್ಕೆ ದೀಪ್ತಿಗೆ
ಭೇದ ಉಂಟೇ ಅಯ್ಯ? ಆತ್ಮಕ್ಕೆ ಅಂಗಕ್ಕೆ ಭೇದ ಉಂಟೇ ಅಯ್ಯ?
ಎನ್ನಂಗವನು ಶ್ರೀ ಗುರು ಮಂತ್ರವ ಮಾಡಿ ತೋರಿದನಾಗಿ, ಸಾವಯಕ್ಕೆ
ನಿರವಯಕ್ಕೆ ಭಿನ್ನವಿಲ್ಲವಯ್ಯ? ಚನ್ನಮಲ್ಲಿಕಾರ್ಜುನ ದೇವರ ಬೆರಿಸಿ ಮತಿ
ಗೆಟ್ಟವಳ ಏನ ನುಡಿಸುವಿರಯ್ಯ ಪ್ರಭುವೇ.

ದೀಪ್ತಿ= ಪ್ರಕಾಶ

೪. ನಿನ್ನರಿಕೆಯ ನರಕವೇ ಮೋಕ್ಷ ನೋಡಯ್ಯ! ನಿನ್ನ ನರಿಯುವ
ಮುಕ್ತಿಯೇ ನರಕ ಕಂಡಯ್ಯ! ನೀನೊಲ್ಲದ ಸುಖವೇ ದುಃಖ ಕಂಡಯ್ಯ!
ನೀನೊಲಿದ ದುಃಖವೇ ಪರಮಸುಖ ಕಂಡಯ್ಯ! ಚನ್ನಮಲ್ಲಿಕಾರ್ಜುನ
ನಯ್ಯ ನೀ ಕಟ್ಟಿ ಕೆಡಹಿದ ಬಂಧನವೇ ನಿರ್ಬಂಧನವೆಂದಿಪ್ಪೆನು.

ಅರಿಕೆ = ಅಜ್ಞಾನ; ನಿರ್ಬಂಧನ= ಸ್ವತಂತ್ರತೆ

# ಶರಣಸ್ಥಲ.

## ಲಿಂಗಜ್ಞಾನ.

೧. ಗಂಗೆಯೊಡನಾಡಿದ ಗಟ್ಟ ಬೆಟ್ಟಂಗಳು ಕೆಟ್ಟ ಕೇಡ ನೋಡಯ್ಯಾ! ಅಗ್ನಿಯೊಡನಾಡಿದ ಕಾಷ್ಠಂಗಳು ಕೆಟ್ಟ ಕೇಡನೋಡಯ್ಯಾ! ಜ್ಯೋತಿಯೊಡನಾಡಿದ ಕತ್ತಲೆ ಕೆಟ್ಟ ಕೇಡ ನೋಡಯ್ಯಾ! ಜ್ಞಾನಿಯೊಡನಾಡಿದ ಅಜ್ಞಾನ ಕೆಟ್ಟ ಕೇಡನೋಡಯ್ಯಾ! ಇಂತೀ ಪರಶಿವ ಮೂರ್ತಿಹರನೇ, ನಿಮ್ಮ ಜಂಗಮ ಲಿಂಗದೊಡನಾಡಿ ಎನ್ನ ಭವಾದಿ ಭವಂಗಳು ಕೆಟ್ಟ ಕೇಡ ನೋಡಾ ಚನ್ನಮಲ್ಲಿಕಾರ್ಜುನಾ!

೨. ಘನವ ಕಂಡೆ, ಅನುವ ಕಂಡೆ, ಆಯತವ ಕಂಡೆ ಸ್ವಾಯತವ ಕಂಡೆ, ಸನ್ನಿಹಿತವ ಕಂಡೆ, ಅರಿವನರಿದು ಮರಹ ಮರೆದೆ. ಕುರುಹಿನ ಮೋಹದ ಮರವೆಯ ನೀಡಾಡಿದೆ. ಚನ್ನಮಲ್ಲಿಕಾರ್ಜುನಾ, ನಿಮ್ಮನರಿದು ನೀಮೆಗೆಟ್ಟೆನು.

ಈಡಾಡು= ಒಗೆದು ಬಿಡು

೩. ಎಲ್ಲ ಎಲ್ಲವನರಿದು ಫಲವೇನಯ್ಯ, ತನ್ನ ತಾನರಿಯಬೇಕಲ್ಲದೆ? ತನ್ನಲ್ಲಿ ಅರಿವು ಸ್ವಯವಾಗಿರಲು, ಅನ್ಯರ ಕೇಳಲುಂಟೆ? ಚನ್ನಮಲ್ಲಿಕಾರ್ಜುನ ನೀ ಅರಿವಾಗಿ ಮುಂದುದೋರಿದ ಕಾರಣ, ನಿಮ್ಮಿಂದಲರಿದೆನಯ್ಯ ಪ್ರಭುವೇ.

೪. ಆಕಾರವಲ್ಲದ ನಿರಾಕಾರದ ಲಿಂಗವ ಕೈಯ್ಯಲ್ಲಿ ಹಿಡಿದು, ಕೊರಳಲ್ಲಿ ಕಟ್ಟಿದೆವೆಂದೆಂಬರು ನರಕಿ ಜೀವಿಗಳು. ಹರಿಬ್ರಹ್ಮರು ವೇದ ಶಾಸ್ತ್ರಂಗಳರಸಿ ಕಾಣದ ಲಿಂಗ, ಭಕ್ತಿಗೆ ಫಲ ಪದಂಗಳಲ್ಲದೆ ಲಿಂಗವಿಲ್ಲ. ಕರ್ಮಕ್ಕೆ ನರಕವಲ್ಲದೆ, ಲಿಂಗವಿಲ್ಲ. ವೈರಾಗ್ಯಕ್ಕೆ ಮುಕ್ತಿಯಲ್ಲದೆ, ಲಿಂಗವಿಲ್ಲ. ಜ್ಞಾನಕ್ಕೆ ಪರಿಭ್ರಮಣವಲ್ಲದೆ, ಲಿಂಗವಿಲ್ಲ. ಇದು ಕಾರಣ ಅದ್ವೈತದಿಂದ ತನ್ನತಾನರಿದು ತಾನಾದರೆ ಚನ್ನಮಲ್ಲಿಕಾರ್ಜುನ ಲಿಂಗ ತಾನೆ ಬೇರಿಲ್ಲ.

ಪರಿಭ್ರಮಣ= ತಿರುಗಾಟ, ಗೊಂದಲ

೫. ಅರಿವು ಸಾಧ್ಯವಾಯಿತ್ತೆಂದು ಗುರುಲಿಂಗ ಜಂಗಮವ ಬಿಡಬಹುದೆ? ಸಂಮ ಸಂಶಯವಳಿದು ಅಖಂಡ ಜ್ಞಾನವಾಯಿತ್ತೆಂದು ಪರ

ಧನ ಪರಸ್ತ್ರೀಗಳುಪಬಹುದೆ? "ಯತ್ರ ಜೀವಸ್ತತ್ರ ಶಿವಃ" ಎಂಬ ಅಭಿನ್ನ ಜ್ಞಾನವಾಯಿತ್ತೆಂದು ಶುನಕ ಸೂಕರ ಕುಕ್ಕುಟ ಮಾರ್ಜಾಲಗಳ ಕೂಡಿ ಭುಂಜಿಸಬಹುದೆ? ಭಾವದಲ್ಲಿ ತನ್ನ ನಿಜದನೆಲೆಯು ನಿವೃತ್ತಿಹುದು. ಸುಜ್ಞಾನ ಸತ್ಕ್ರಿಯಾಸುನೀತಿ ಸುಮಾರ್ಗದಲ್ಲಿ ವರ್ತಿಸುವದು. ಹೀಗಲ್ಲದೆ ಜ್ಞಾನವಾಯಿತ್ತೆಂದು ತನ್ನ ಮನಕ್ಕೆ ಬಂದ ಹಾಗೆ ನಿಂದು ನುಡಿದು ನಡೆದನಾದೊಡೆ ಶ್ವಾನಗರ್ಭದಲ್ಲಿ ಹುಟ್ಟಿಸದೆ ಬಿಡುವನೇ ಚನ್ನಮಲ್ಲಿಕಾರ್ಜುನಯ್ಯನು?

ಅಳುಪು= ತೊಂದರೆ ಕೊಡು; ಸೂಕರ= ಹಂದಿ; ಕುಕ್ಕುಟ ಕೋಳಿ; ಮಾರ್ಜಾಲ= ಬೆಕ್ಕು; ಶುನಕ, ಶ್ವಾನ= ನಾಯಿ

೬. ಕೆಂಡದ ಶವದಂತೆ, ಸೂತ್ರ ತಪ್ಪಿದ ಬೊಂಬೆಯಂತೆ, ಜಲವರತ ತಟಾಕದಂತೆ, ಬೆಂದನುಲಿಯಂತೆ, ಮತ್ತೆ ಹಿಂದಣ ಹಂಗುಂಟೆ, ಅಣ್ಣಾ ಚನ್ನಮಲ್ಲಿಕಾರ್ಜುನನೇ ಆಶ್ರಯವಾದವಳಿಗೆ?

ಅರತ= ಒಣಗಿದ; ತಟಾಕ= ಕೆರೆ

೭. ಅಂಗದ ಭಂಗವ ಲಿಂಗ ಸುಖದಿಂದೆ ಗೆಲಿದೆ. ಮನದ ಭಂಗವ ಅರಿವಿನ ಮುಖದಲ್ಲಿ ಗೆಲಿದೆ. ಜೀವನ ಭಂಗವ ಶಿವಾನುಭಾವದಿಂ ಗೆಲಿದೆ. ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ. ಜವ್ವನದ ಹೊರ ಮಿಂಚಿನಲ್ಲಿ ನಿಮ್ಮ ಕಣ್ಣಿಗೆ ತೋರುವ ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯ. ಚನ್ನಮಲ್ಲಿಕಾರ್ಜುನ ಕಾಮನ ಕೊಂದು ಮನಸಿಜನಾಗುಳುಹಿದರೆ ಮನಸಿಜನ ತಲೆಯ ಬರಹ ತೊಡೆದೆನು

## ಶರಣನು ನಿರ್ಲೇಪನು.

೧. ಲೋಕವಿಡಿದು ಲೋಕವ ಹಿಂಗಿದಂತಿಪ್ಪೆನು. ಆಕಾರವಿಡಿದು ಸಾಕಾರಸಹಿತ ನಡೆವೆನು. ಹೊರಗೆ ಬಳಸಿ ಒಳಗೆ ಮರೆದಂತಿಪ್ಪೆನು. ಬೆಂದನುಲಿಯಂತೆ ಹುರಿಗುಂದದಂತಿಪ್ಪೆನು. ಎನ್ನ ದೇವ ಚನ್ನ ಮಲ್ಲಿಕಾರ್ಜುನಯ್ಯಾ ಹತ್ತರೊಳಗೆ ಹನ್ನೊಂದಾಗಿ ನೀರತಾವರೆಯಂತಿಪ್ಪೆನು.

ಬಳಸು= ವ್ಯವಹರಿಸು.

೨. ಪುರುಷನ ಮುಂದೆ ಮಾಯೆ ಸ್ತ್ರೀ ಎಂಬ ಅಭಿಮಾನವಾಗಿ ಕಾಡಿಹುದು. ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡಿಹುದು. ಲೋಕವೆಂಬ ಮಾಯೆಗೆ ಶಿವಶರಣರ ಚರಿತ್ರ ಮರುಳಾಗಿ ತೋರಿ

ಹುದು. ಚನ್ನ ಮಲ್ಲಿಕಾರ್ಜುನನೊಲಿದ ಶರಣಂಗೆ ಮಾಯೆಯೂ ಇಲ್ಲ. ಮರಹೂ ಇಲ್ಲ, ಅಭಿಮಾನವೂ ಇಲ್ಲ.

೩. ಹಣ್ಣು ಮೆದ್ದ ಬಳಿಕ ಆ ಮರವನಾರು ತರಿದರೇನು? ಹೆಣ್ಣು ಬಿಟ್ಟ ಬಳಿಕ ಆಕೆಯನಾರು ಕೂಡಿಕೊಂಡರೇನು? ಮಣ್ಣು ಬಿಟ್ಟ ಬಳಿಕ, ಆ ಕೆಯ್ಯಿಯನಾರುತ್ತರೇನು? ಚನ್ನ ಮಲ್ಲಿಕಾರ್ಜುನನರಿದ ಬಳಿಕ ಆ ಕಾಯವ ನಾಯಿತಿಂದರೇನು? ನೀರಕುಡಿದರೇನು?

ಕೆಯ್ಯಿ = ಹೊಲ. ಉತ್ತು = ತಿಳ್ಕು, ಲಂಟೀಹೊಡೆ.

## ಶರಣರು ಪವಿತ್ರರು.

೧. ಲಿಂಗದಿಂದುದಿಸಿ, ಅಂಗವಿಡಿದಿಪ್ಪ ಪುರಾತನರ ಇಂಗಿತವನೇ ನೆಂದು ಬೆಸೆಗೊಂಬಿರಯ್ಯಾ? ಅವರ ನಡೆಯೇ ಆಗಮ, ಅವರ ನುಡಿಯೇ ವೇದ, ಅವರ ಲೋಕದ ಮಾನವರೆಂದೆನ್ನಬಹುದೆ? ಅದೆಂತೆಂದೊಡೆ ॥ಶ್ಲೋ॥ ವೃಕ್ಷಾತ್ಪ್ರಭವಂತಿ ಬೀಜಾನಿ ತದ್ವೃಕ್ಷೋಲೀಯತೆ ಪುನಃ। ರುದ್ರಲೋಕಂ ಪರಿತ್ಯಕ್ತ್ವಾ ಶಿವಲೋಕೆ ಭವಿಷ್ಯತಿ॥ ಎಂದುದಾಗಿ ಅಂಕೋಲೆಯ ಬೀಜದಿಂದಾಯಿತ್ತು ವೃಕ್ಷವು. ಆ ವೃಕ್ಷವು ಮರಳಿ ಬೀಜದೊಳಡಗಿತ್ತು. ಆ ಪ್ರಕಾರದಿಂ ಲಿಂಗದೊಳಗಿದ್ದ ಪುರಾತನರು ಉದ್ಭವಿಸಿದರು. ಮರಳಿ ಆ ಪುರಾತನರು ಆ ಲಿಂಗದೊಳಗೆ ಬೆರಸಿದರು ನೋಡಿರಯ್ಯಾ. ಇಂತಪ್ಪ ಪುರಾತನರಿಗೆ ನಾನು ಶರಣೆಂದು ಹುಟ್ಟುಗೆಟ್ಟೆನಯ್ಯಾ ಚನ್ನ ಮಲ್ಲಿಕಾರ್ಜುನಾ.

ಬೆಸೆಗೊಳ್ಳು = ಕೇಳು.

೨. ಜಂಗಮವೆನ್ನ ಪ್ರಾಣ, ಜಂಗಮವೆನ್ನ ಜೀವ, ಜಂಗಮವೆನ್ನ ಸಿಧಿ ನಿಧಾನ, ಜಂಗಮವೆನ್ನ ಪುಣ್ಯದ ಫಲ, ಜಂಗಮವೆನ್ನ ಹರುಷದ ಮೇರೆ. ಚನ್ನ ಮಲ್ಲಿಕಾರ್ಜುನಾ ಜಂಗಮದ ತಿಂಥಿಣಿಯಲ್ಲಿ ಓಲಾಡುವೆ.

ತಿಂಥಿಣಿ = ಗುಂಪು.

೩. ಲಿಂಗವನು ಪುರಾತನರನು ಅನ್ಯರ ಮನೆಗೆಹೋಗಿ ಹೊಗಳುವರು, ತಮ್ಮದೊಂದುದರ ಕಾರಣ. ಲಿಂಗವು ಪುರಾತನರು ಅಲ್ಲಿಗೆ ಬರಬಲ್ಲರೇ? ಅನ್ಯವನೆ ಮರೆದು ನಿಮ್ಮ ನೆನವರ ಎನಗೊಮ್ಮೆ ತೋರಾ ಚನ್ನ ಮಲ್ಲಿಕಾರ್ಜುನಾ.

೪. ಶಿವಗಣಂಗಳ ಮನೆಯಂಗಣ ವಾರಣಾಸಿಯೆಂಬುದು ಹುಸಿಯೆ? ಪುರಾತರ ಮನೆಯ ಅಂಗಳದಲ್ಲಿ ಅಷ್ಟಾಷಷ್ಟಿ ತೀರ್ಥಂಗಳು ನೆಲಸಿಪ್ಪವಾಗಿ.

ಅದೆಂತೆಂದೊಡೆ, ಸಾಕ್ಷಿ ॥ಶ್ಲೋ॥ "ಕೇದಾರಸ್ಯೋದಕಂ ಪೀತ್ವಾವಾರಣಾ ಸ್ಯಾಂಮೃತಿರ್ಧ್ರುವಂ। ಶ್ರೀಶೈಲ ಶಿಖರಂ ದೃಷ್ಟ್ವಾಪುನರ್ಜನ್ಮನ ವಿದ್ಯತೆ" ಎಂಬ ಶಬ್ದವಧಿಕವು. ಸುತ್ತಿ ಬರಲು ಶ್ರೀಶೈಲ, ಕೆಲಬಲದಲ್ಲಿ ಕೇದಾರ, ಅಲ್ಲಿಂದ ಹೊರಗೆ ವಾರಣಾಸಿ. ವಿರಕ್ತಿ ಬೀಡಾಗಿ ಭಕ್ತಿ ಮೊಳೆಯಾಗಿ, ಎನ್ನ ದೇವ ಚನ್ನ ಮಲ್ಲಿಕಾರ್ಜುನಾ, ನಿಮ್ಮ ಭಕ್ತರಮನೆಯಂಗಣ ಪ್ರಯಾಗ ದಿಂದಧಿಕ ನೋಡಾ.

ಬೀಡು = ಮನೆ. ಮೊಳೆ = ಸಣ್ಣಸಸಿ. ಅಂಗಣ = ಅಂಗಳ.

೫. ಅಯ್ಯ ನಿಮ್ಮಮಹಂತರ ಕೂಡಿದ ಸುಖವನುಪಮೆಗೆ ತರಬಾರ ದಯ್ಯ ಅಯ್ಯ ನಿಮ್ಮಮಹಂತರ ಕೂಡಿ ಅಗಲುವ ಧಾವತಿಯಿಂದ ಸಾವು ದೇ ಕರಲೇಸಯ್ಯ. ಚನ್ನ ಮಲ್ಲಿಕಾರ್ಜುನಯ್ಯ, ನಿಮ್ಮ ನಿಜವನರಿದ ಮ ಹಾಮಹಿಮರನಗಲಿ ನಿಲ್ಲಲಾರೆನಯ್ಯ.

ಧಾವತಿ = ಶ್ರಮ. ಕರ = ಬಹಳ.

# ಐಕ್ಯಸ್ಥಲ.

೧. ಲಿಂಗವೆನ್ನೆ, ಲಿಂಗೈಕ್ಯವೆನ್ನೆ. ಸಂಗವೆನ್ನೆ, ಸಮರಸವೆನ್ನೆ. ಆಯಿತ್ತೆನ್ನೆ. ಆಗದೆನ್ನೆ, ನೀನೆನ್ನೆ. ನಾನೆನ್ನೆ. ಚನ್ನಮಲ್ಲಿಕಾರ್ಜುನನಲ್ಲಿ ಲಿಂಗೈಕ್ಯವಾದ ಬಳಿಕ ಏನೂ ಎನ್ನೆ.

೨. ಕ್ರಿಯೆಗಳು ಮುಟ್ಟಲರಿಯವು. ನಿಮ್ಮನೆಂತು ಪೂಜಿಸುವೆ? ನಾದ ಬಿಂದುಗಳು ಮುಟ್ಟಲರಿಯವು. ನಿಮ್ಮನೆಂತು ಹಾಡುವೆ? ಕಾಯ ಮುಟ್ಟುವಡೆ, ಕಾಣಬಾರದ ಘನವು. ನಿಮ್ಮನೆಂತು ಕರಸ್ಥಲದಲ್ಲಿ ಧರಿಸುವೆ? ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ನೋಡಿ ನೋಡಿ. ಸೈವೆರಗಾಗುತಿರ್ದೆನು.

ಸೈವೆರಗಾಗು = ಆಶ್ಚರ್ಯಪಡು.

೩. ಅಂಗಸಂಗದಲ್ಲಿ ಲಿಂಗಸಂಗಿಯಾದೆ. ಲಿಂಗಸಂಗದಲ್ಲಿ ಅಂಗಸಂಗಿಯಾದೆ. ಉಭಯ ಸಂಗವನು ಅರಿಯದೆ ಪರಿಣಾಮಿಯಾದೆನು. ಸುಡಿಯ ಗಡಣವ ಮರೆದು ತೆರಹಿಲ್ಲದಿದ್ದರೇನು? ಎನ್ನ ದೇವ, ಚನ್ನಮಲ್ಲಿಕಾರ್ಜುನದೇವರ ಬೆರಸಿದ ಬಳಿಕ ಎನ್ನ ನಾನು ಏನೆಂದು ಅರಿಯೆನಯ್ಯ.

ಗಡಣ = ಸಮೂಹ.

೪. ಸತ್ತಹೆಣ ಕೂಗಿದುದುಂಟು. ಬಯಚಿಟ್ಟ ಬಯಕೆ ಕರೆದುದುಂಟು. ಹೆಪ್ಪಿಟ್ಟಹಾಲು ಗಟ್ಟಿಗೊಂಡು ಸಿಹಿಯಾದುದುಂಟು. ಇದನಿಶ್ಚೈಸಿ ನೋಡಿ ಚನ್ನಮಲ್ಲಿಕಾರ್ಜುನದೇವರಲ್ಲಿ.

ಬಯಚಿಡು = ಮುಚ್ಚಿಡು.

೫. ಮರೆದೊರಗಿ, ಕನಸಕಂಡು ಹೇಳುವಲ್ಲಿ ಸತ್ತ ಹೆಣ ಎದ್ದಿತ್ತು. ತನ್ನ ಋಣ ನಿಧಾನ ಎದ್ದು ಕರೆದಿತ್ತು. ಹೆಪ್ಪಿಟ್ಟ ಹಾಲು ಗಟ್ಟಿ ತುಪ್ಪವಾಗಿ ಸಿಹಿಯಾಯಿತ್ತು. ಇದಕ್ಕೆ ತಪ್ಪ ಸಾಧಿಸಲೇಕೆ ಚನ್ನಮಲ್ಲಿಕಾರ್ಜುನದೇವರ ದೇವನಣ್ಣಗಳಿರಾ?

೬. ಅಂಗದೊಳಗೆ ಅಂಗವಾಗಿ ಅಂಗಲಿಂಗೈಕ್ಯವ ಮಾಡಿದೊಡೆ, ಮನದೊಳಗೆ ಮನವಾಗಿ ಮನಲಿಂಗೈಕ್ಯವ ಮಾಡಿದೊಡೆ, ಭಾವದೊಳಗೆ ಭಾವವಾಗಿ, ಭಾವಲಿಂಗೈಕ್ಯವ ಮಾಡಿದೊಡೆ, ಅರಿವಿನೊಳಗೆ ಅರಿವಾಗಿ ಅರಿವ ಲಿಂಗೈಕ್ಯವ ಮಾಡಿದೆ. ಕ್ರಿಯೆಗಳೆಲ್ಲವ ನಿಲಿಸಿ ಕ್ರಿಯಾತೀತವಾಗಿ, ನಿಷ್ಪತ್ತಿ ಲಿಂಗೈಕ್ಯವಾದೆ. ನಾನೆಂಬುದ ನಿಲಿಸಿ ನೀನೆಂಬುದ ಕೆಡಿಸಿ, ಉಭಯ ಲಿಂಗೈಕ್ಯವ ಮಾಡಿದೆ. ಚನ್ನಮಲ್ಲಿಕಾರ್ಜುನನೊಳಗೆ ನಾನಳಿದೆನಾಗಿ ಲಿಂಗ

ವೆಂಬ ಘನವು ಎನ್ನಲ್ಲಿ ಅಳಿಯಿತ್ತು ಕಾಣಾ ಸಂಗನಬಸವಣ್ಣಾ.

ಅತೀತನಾಗು = ಮೀರು; ನಿಷ್ಪತ್ತಿ = ತಿಳಿದುಕೊಳ್ಳುವದು, ಜ್ಞಾನ.

೭. ಅಕ್ಕಕೇಳಕ್ಕ ಆನೊಂದು ಕನಸ ಕಂಡೆ. ಚಿಕ್ಕಚಿಕ್ಕ ಜೆಡೆಸು ಲಿ ಪಲ್ಲಗರುವನು ಬಂದೆನ್ನ ನೆರೆವನು ನೋಡವ್ವಾ! ಆತನನಪ್ಪಿಕೊಂಡು ತಳವೆಳಗಾದೆನೆಲಗೆ. ಚನ್ನಮಲ್ಲಿಕಾರ್ಜುನನ ಕೂಡಿ ಕಣ್ಮುಚ್ಚಿ ತೆರೆದು ತಳ ವೆಳಗಾದೆನೆಲಗೆ.

ಗರುವ = ಶ್ರೇಷ್ಠಮನುಷ್ಯ; ನೆರೆ = ಕೂಡು; ತಳವೆಳಗಾಗು = ಚಿರಗಾಗು.

೮. ಹಗಲಿನಕೂಟಕ್ಕೆ ಹೋರಿ ಬೆಂಡಾದೆ. ಇರುಳಿನಕೂಟದಲ್ಲಿ ಇಂಬರಿದು ಹತ್ತಿದೆ. ಕನಸಿನಲ್ಲಿ ಮನಸಂಗವಾಗಿ, ಮನಸ್ಸಿನಲ್ಲಿ ನೈಮು ರೆದು ಸಂಗವಾಗಿರ್ದೆ. ಚನ್ನಮಲ್ಲಿಕಾರ್ಜುನನ ಕೂಡಿ ಕಣ್ದೆರೆದೆನು.

೯. ಬಯಲಿಂದ ಹುಟ್ಟಿದ ಪರವೆಂಬ ತಾಯಿಗೆ, ಐವರು ಮಕ್ಕ ಳು ಜನಿಸಿದರೆಂತೆಂಬೆ. ಒಬ್ಬ ಭಾವದರೂಪ, ಒಬ್ಬ ಪ್ರಾಣದರೂಪ, ಒಬ್ಬ ನೈಮುಖನಾಗಿ ವಿಶ್ವಕ್ಕೆ ಕಾಯರೂಪಾದ. ಇಬ್ಬರು ಉತ್ಪತ್ತಿಸ್ಥಿತಿಗೆ ಕಾರಣ ರಾದರು. ಐವೊಗನರಮನೆ ಸುಖವಿಲ್ಲೆಂದರಿದೆನಾಗಿ, ಇನ್ನು ಕೈಲಾಸವನು ಹೊಗೆ ಹೊಗೆ. ಮರ್ತ್ಯಕ್ಕೆ ಅಡಿಇಡೆನು. ಚನ್ನಮಲ್ಲಿಕಾರ್ಜುನದೇವ ನೀನೆ ಸಾಕ್ಷಿ.

೧೦. ನಾಳೆ ಮರೆಯು ನೂಲ ಸಡಿಲಿ, ನಾಚುವರು ನೋಡಾ. ಗಂ ಡು ಹೆಣ್ಣೆಂಬ ಜಾತಿ, ಪ್ರಾಣದೊಡೆಯ ಜಗದೊಳಗೆ ಮುಳುಗುತ್ತ ತೆರ ಹಿಲ್ಲದಿರಲು, ದೇವರ ಮುಂದೆ ನಾಚಲಿಡೆಯುಂಟೆ? ಚನ್ನಮಲ್ಲಿಕಾರ್ಜುನಂ ಗೆ ಜಗವೆಲ್ಲ. ಕಣ್ಣಾಗಿ ನೋಡುತ್ತಿರಲು ಮುಚ್ಚಿ ಮರಿಸುವುದು ಹೇಳಯ್ಯಾ?

೧೧. ವನವೆಲ್ಲ ಕಲ್ಪತರು, ಗಿಡವೆಲ್ಲ ಮರುಜೀವಣಿ, ಶಿಲೆಗಳೆಲ್ಲ ಪರುಷ, ನೆಲವೆಲ್ಲ ಅವಿಮುಕ್ತ ಕ್ಷೇತ್ರ. ಜಲವೆಲ್ಲ ನಿರ್ಜರಾವೃತ, ಮೃ ಗವೆಲ್ಲ ಪುರುಷ ಮೃಗ, ಎಡಹುವ ಹರಳುಗಳೆಲ್ಲ ಚಿಂತಾಮಣಿ, ಚನ್ನಮಲ್ಲಿ ಕಾರ್ಜುನಯ್ಯನ ಮಚ್ಚಿನ ಗಿರಿಯ ಸುತ್ತಿ ನೋಡುತ್ತ ಬಂದು, ಕದಳಿಯು ಬನವ ಕಂಡೆ ನಾನು.

ಮರುಜೀವಣಿ = ಸಂಜೀವನಿ ಬೇರು; ನಿರ್ಜರ = ದೇವತೆ

೧೨. ಕದಳಿಯೆಂಬುದು ತನು, ಕದಳಿ ಎಂಬುದು ಮನ, ಕದ ಳಿ ಎಂಬುದು ವಿಷಯಂಗಳು, ಕದಳಿ ಎಂಬುದು ಭವರೋಗದರಣ್ಯ. ಕದಳಿ ಎಂಬುದ ಗೆದ್ದು ಸಲೆ ಬದುಕಿ ಬಂದು, ಕದಳಿಯ ಬನದಲ್ಲಿ ಭವ

ಹರನ ಕಂಡೆನು. ಭವಗೆಟ್ಟ ಮುಗಳಿಂದು ಕರುಣದಿಂ ತೆಗೆದು ಬಿಗಿದಪ್ಪಿದರೆ, ಚೆನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು.

ಕದಳಿ = ಅರಣ್ಯ ಮಧ್ಯ

೧೩. ಹೊಳೆವ ಕೆಂಜೆಡೆಗಳ, ಮಣಿ ಮಕುಟ, ಒಪ್ಪುವ ಸುಲಿಪಲ್ಲ, ನಗೆ ಮೊಗದ ಕಂಗಳ, ಕಾಂತಿಯಿಂ ಈರೇಳು ಭುವನವಂ ಬೆಳಗುವ ದಿವ್ಯ ಸ್ವರೂಪನ ಕಂಡೆ ನಾನು. ಕಂಡೆನ್ನ ಕಂಗಳ ಬರ ಹಿಂಗಿತ್ತಿಂದು. ಗಂಡ ಗಂಡರೆಲ್ಲ ಹೆಂಡ ಹೆಂಡರಾಗಿ, ಆಳುವ ಗರುವನ ಕಂಡೆ ನಾನು. ಜಗದಾದಿ ಶಕ್ತಿಯೊಳು ಬೆರಸಿ ಯೊಡನಾಡುವ ಪರಮ ಗುರು ಚೆನ್ನಮಲ್ಲಿಕಾರ್ಜುನನ ನಿಲವ ಕಂಡು ಬದುಕಿದೆನು.

ಮಕುಟ = ಕಿರೀಟ; ಈರೇಳು = ಹದಿನಾಲ್ಕು

# ಶಿವಾನುಭವ.

ಸಂಪುಟ. ೧ ನವ್ಹಂಬರ. ೧೯೨೬ ಸಂಚಿಕೆ. ೪

## ಶೈವ ಧರ್ಮಗಳು.

### ಲೇಖಾಂಕ ೧.

ಲೇಖಕಃ-ಶ್ರೀ ಎಸ್. ಸೀ. ನಂದೀಮಠ, ಎಮ್, ಏ, ಕನ್ನಡ ಪ್ರೊಫೆಸರ
ರಾಜಾರಾಮ ಕಾಲೇಜ ಕೊಲ್ಲಾಪುರ.

ವೀರಶೈವ ಧರ್ಮವು ಶೈವ ಧರ್ಮಗಳಲ್ಲಿ ಒಂದಾಗಿದೆ. ಶೈವ ಧರ್ಮಾನುಯಾಯಿಗಳಲ್ಲಿ ವೀರಶೈವರಲ್ಲದೆ ಕಾಶ್ಮೀರ ದೇಶದಲ್ಲಿರುವ ಶೈವರೂ ತಮಿಳ ದೇಶದಲ್ಲಿರುವ ಶೈವರೂ, ಆರಾಧ್ಯ ಬ್ರಾಹ್ಮಣರೂ ಸಹ ಬರುವದುಂಟು. ಈ ಯಾವತ್ತು ಧರ್ಮಗಳಲ್ಲಿ ಪರಸ್ಪರ ನಿಕಟ ಸಂಬಂಧವಿದೆ. ಅವರೆಲ್ಲರೂ ಶಿವೋಪಾಸಕರು ಮತ್ತು ಆಗಮ ಧರ್ಮಾನುಯಾಯಿಗಳು. ಅವರಲ್ಲಿ ಅಸಂಖ್ಯ ವಿದ್ವಾಂಸರು ಹುಟ್ಟಿ, ಅನೇಕ ಉದ್ಗ್ರಂಥಗಳನ್ನು ಬರೆದಿದ್ದಾರೆ. ಕಾಶ್ಮೀರೀ ಶೈವರು ಸಂಸ್ಕೃತದಲ್ಲಿಯೂ, ತಮಿಳು ಶೈವರು ತಮಿಳುಭಾಷೆಯಲ್ಲಿಯೂ, ಆರಾಧ್ಯರು ಸಂಸ್ಕೃತ ಮತ್ತು ತೆಲುಗಿನಲ್ಲಿಯೂ ವಿಶೇಷವಾಗಿ ಗ್ರಂಥಗಳನ್ನು ರಚಿಸಿದ್ದಾರೆ. ಈ ಯಾವತ್ತು ಧರ್ಮಗಳ ಪರಸ್ಪರ ಸಂಬಂಧ ಮತ್ತು ಇತಿಹಾಸ ಇವುಗಳು ಇನ್ನೂ ಸಂಪೂರ್ಣವಾಗಿ ಶೋಧಿಸಲ್ಪಟ್ಟಿಲ್ಲ. ಒಂದು ವೇಳೆ ಶೋಧಿಸಲ್ಪಟ್ಟದ್ದಾದರೆ ಹಿಂದುಸ್ತಾನ ದೇಶದಲ್ಲಿಯ ಧಾರ್ಮಿಕ ಜ್ಞಾನಕ್ಕೆ ಒಂದು ದೊಡ್ಡ ಭರತಿಯನ್ನು ನಾವು ಹಾಕಿದಂತಾಗುವದು.

ಮೇಲ್ಕಂಡ ಶೈವ ಧರ್ಮಗಳು ಈ ವರೆಗೆ ನಾನಾಸ್ಥಿತ್ಯಂತರಗಳನ್ನು

ಹೊಂದುತ್ತ ಬಂದಿವೆ. ಅವೆಲ್ಲವುಗಳ ಆಚರಣೆಗಳಲ್ಲಿ ಹೆಚ್ಚುಕಡಿಮೆಯು ಉಂಟಾಗಿರುತ್ತದೆ. ಅದರಂತೆಯೇ ತತ್ವಜ್ಞಾನಗಳಲ್ಲಿಯೂ ಹೆಚ್ಚುಕಡಿಮೆಗಳಾಗಿವೆ. ಹಿಂದುಸ್ಥಾನದಲ್ಲಿ ಈಗ ಪ್ರಚಾರದಲ್ಲಿರುವ ಈ ಮುಖ್ಯಶೈವ ಧರ್ಮಗಳ, ಗ್ರಂಥಗಳ, ಆಚಾರ್ಯರ ಮತ್ತು ವಿಚಾರಗಳ ಪರಿಚಯುವನ್ನು ಸ್ವಲ್ಪದರಲ್ಲಿ ಶಿವಾನುಭವದ ವಾಚಕರಿಗೆ ಮಾಡಿಕೊಡುವದೇ ಈ ಲೇಖದ ಮುಖ್ಯ ಉದ್ದೇಶವಾಗಿದೆ.

ಪೂರ್ವದಲ್ಲಿ ಶೈವಧರ್ಮವು ಬಹಳ ದೂರದವರೆಗೆ ವ್ಯಾಪಿಸಿ, ಅನೇಕ ಜನರಿಗೆ ಮನಶ್ಯಾಂತಿಯನ್ನುಂಟು ಮಾಡಿರುವದು. ಈ ಧರ್ಮವು ಬಲು ಪ್ರಾಚೀನತಮವಾದುದರಿಂದ ಈ ಧರ್ಮದ ಅನುಯಾಯಿಗಳು ಇದು ಅನಾದಿಯಾದುದೆಂದು ನಂಬುವರು. ಈಗ ಶೈವ ಧರ್ಮವು ಹಿಂದುಸ್ಥಾನದ ಎಲ್ಲ ಭಾಗಗಳಲ್ಲಿ ಪ್ರಚಲಿತವಿರುವದು. ಪರಿಸ್ಥಿತಿಗನುಸರಿಸಿ ಅಲ್ಪಸ್ವಲ್ಪ ಭೇದಗಳಿದ್ದರೂ, ಸಾಮಾನ್ಯವಾಗಿ "ಶಿವನೇ ಸರ್ವೋತ್ತಮ" ನೆಂದೂ "ಸೃಷ್ಟಿಸ್ಥಿತಿಲಯಗಳಿಗೆ ಕಾರಣ" ನೆಂದೂ "ವೇದಗಳೆಲ್ಲವು ಈತನ ಹೆಚ್ಚಳವನ್ನು ಸಾರುವ" ವೆಂದೂ ಎಲ್ಲ ಶೈವಧರ್ಮಗಳು ಶ್ರದ್ಧೆಯಿಂದ ನಂಬುವವು. ಭರತಖಂಡದ ಮುಖ್ಯ ಮುಖ್ಯ ಸ್ಥಳಗಳಲ್ಲಿರುವ ಜ್ಯೋತಿರ್ಲಿಂಗಗಳೇ ಈ ಧರ್ಮದ ಕೀರ್ತಿಧ್ವಜಗಳಾಗಿವೆ

"ಶಿವನೇ ಸರ್ವೋತ್ತಮ" ನೆಂದು ನಂಬುವ ಮತ್ತು ಆತನನ್ನು ಆರಾಧಿಸುವ ಜನರೆಲ್ಲರನ್ನು ಶೈವರೆಂದು ಕರೆಯುವರು. ಶಿವನನ್ನು ಅತಿ ಹೀನವಾದ ಆಚರಣೆಯುಳ್ಳ ಕಾಪಾಲಿಕರು ಶಾಕ್ತರು ಪಾಶುಪತರು ಮೊದಲುಗೊಂಡು ಅತಿ ಶುದ್ಧಾಚರಣೆಯುಳ್ಳ ಆರಾಧ್ಯರು ಮತ್ತು ವೀರಶೈವರವರೆಗೆ ಎಲ್ಲರೂ ಅಸಂಖ್ಯರೂಪುಗಳುಳ್ಳ ಮಹಾದೇವನ ಒಂದು ಅಥವಾ ಕೆಲವು ರೂಪುಗಳನ್ನು ಪೂಜಿಸುವರು. ಅತಿ ಪ್ರಾಚೀನಕಾಲದಿಂದ ಶಿವಪೂಜೆಯು ನಡೆಯುತ್ತ ಬಂದಿದೆಯೆಂಬುದಕ್ಕೆ ಅಥರ್ವವೇದ ಶ್ವೇತಾಶ್ವತರೋಪನಿಷತ್ತುಗಳೂ ೧ ರಾಮಾಯಣ ಮಹಾಭಾರತಗಳೂ, ರಾಮಕೃಷ್ಣಾದಿಗಳು ಲಿಂಗಪೂಜಕರಾಗಿದ್ದರೆಂಬುದೂ, ಪ್ರಮಾಣಗಳಾಗಿವೆ

---

೧. ಯೋ ದೇವಾನಾಂ ಪ್ರಭವಶ್ಚೋದ್ಭವಶ್ಚ ವಿಶ್ವಾಧಿಪೋ ರುದ್ರೋ ಮಹರ್ಷಿಃ । ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ ಸನೋ ಬುದ್ಧ್ಯಾ ಶುಭಯಾ ಸಂಯುನಕ್ತು ॥ [ಶ್ವೇತಾಶ್ವತರೋಪನಿಷತ್ತು] ೩. ೪.

ಆವನು ದೇವತೆಗಳ ಉತ್ಪಾದಕನೂ, ವಿಶ್ವಾಧಿಪನೂ, ರುದ್ರನೂ, ಮಹರ್ಷಿಯೂ, ಹಿರಣ್ಯ ಗರ್ಭನನ್ನು ಹುಟ್ಟಿಸಿದವನೂ, ಆಗಿರುವನೋ, ಆತನು ಶುಭ

ಇನ್ನು ಐತಿಹಾಸಿಕ ದೃಷ್ಟಿಯಿಂದಲೂ, ಆಧಾರಗಳಿಂದಲೂ ವಿಚಾರಿಸಲು ಇದೇ ಮಾತು ಸಿದ್ಧಿಸುವದು. ಪಾಣಿನೀಯ ವ್ಯಾಕರಣ ಮಹಾಭಾಷ್ಯಕಾರನಾದ ಪತಂಜಲಿಯು ಶಿವಭಕ್ತಾನುಯಾಯಿಗಳಿಗೆ ಶಿವಭಾಗವತರೆಂದು ಕರೆದಿದ್ದಾನೆ. ಈತನು ಕ್ರಿಸ್ತ ಶತಕಕ್ಕೆ ಪೂರ್ವದಲ್ಲಿ ೨ ಶತಕಗಳಿಗಿಂತಲೂ ಪೂರ್ವದಲ್ಲಿದ್ದನು. ವೈಶೇಷಿಕ ಸೂತ್ರಗಳ ಕರ್ತನಾದ ಕಣಾದನು, ಮಹೇಶ್ವರನ ಭಕ್ತನಿದ್ದನೆಂದು ಪ್ರಶಸ್ತ ಪಾದನು ಹೇಳುತ್ತಾನೆ. ಮೂರನೆಯ ಶತಮಾನದ ಮಧ್ಯದಲ್ಲಿ ಉತ್ತರ ಹಿಂದುಸ್ತಾನದಲ್ಲಿ ಬಹು ಪ್ರದೇಶವನ್ನಾಳಿದ ಕುಶನ ವಂಶದ ವೆಮ ಕ್ಯಾಡಫಿಸೆಸ್ ( Wema kadphises ) ಎಂಬ ಬಲವಂತನಾದ ಅರಸನು ಶೈವನಿದ್ದನು, ಏಕೆಂದರೆ ತನ್ನ ನಾಣ್ಯಗಳ ಒಂದು ಮಗ್ಗಲಿಗೆ ' ಮಹೇಶ್ವರನ ಭಕ್ತ, ನೆಂದು ಬರೆದುಕೊಂಡಿದ್ದಾನೆ; ಮತ್ತೊಂದು ಮಗ್ಗಲಿಗೆ ನಂದಿಯ ಮತ್ತು ತ್ರಿಶೂಲಧಾರಿಯಾದ ಶಂಕರನ ಮುದ್ರೆಯಿದೆ. ಅದೇಕೆ ? ಹಿಂದುಸ್ತಾನದಲ್ಲಿ ಈಗ ಅತಿ ಪ್ರಸಿದ್ಧ ಇತಿಹಾಸ ಕಾರರಾದ ಜದುನಾಥ ಸರಕಾರರವರು ಮೊನ್ನೆ "ಸ್ಟೇಟಮನ್" ಎಂಬ ಪತ್ರದಲ್ಲಿ ' ಹಿಂದುಸ್ತಾನದ ಆಚೆಗಿರುವ ದೇಶಗಳ ಮೇಲೆ ಹಿಂದೂ ಜನರ ವರ್ಚಸ್ಸವು " ಎಂಬ ಶಿರೋಲೇಖದಲ್ಲಿ, ಶೈವಧರ್ಮವು ಕ್ರಿಸ್ತಶಕ ಪೂರ್ವದಲ್ಲಿ ಸುಮಾರು ೩ನೇಯ ಅಥವಾ ೪ನೇಯ ಶತಮಾನದಲ್ಲಿ ಚೀನ ದೇಶದಲ್ಲಿ ಹಬ್ಬಿತ್ತೆಂದೂ, ಆ ನಂತರ ಚೀನ ದೇಶವನ್ನು ಬೌದ್ಧ ಧರ್ಮವು ಪ್ರವೇಶಿಸಿತೆಂದೂ ಬರೆದಿರುವರು. ⌒ ಮೇಲಿನ

---

ಕರವಾದ ಬುದ್ಧಿಯನ್ನು ನಮಗೆ ಉಂಟು ಮಾಡಲಿ.

ಶ್ವೇತಾಶ್ವತರೋಪನಿಷತ್ತು ಬಲು ಪ್ರಾಚೀನವಾದದ್ದೂ, ಮತ್ತು ಆವ ಪಂಥಕ್ಕೂ ಅನುಸರಿಸದೆ ಬರೆದದ್ದೂ ಇರುವದೆಂದೂ, ಭಗವದ್ಗೀತೆಯಲ್ಲಿ ಕಂಡು ಬರುವ ಭಕ್ತಿಯು ಆದಕ್ಕೂ ಬಹಳೇ ಹಿಂದಿನದಾದ ಈ ಉಪನಿಷತ್ತಿನಲ್ಲಿ ರುದ್ರ ಶಿವನಿಗೆ ಸಂಬಂಧಿಸಿ ಕಂಡು ಬರುವದರಿಂದ, ಭಕ್ತಿಯ ಉಗಮವು ಶೈವ ಧರ್ಮದಲ್ಲಿಯೇ ಅನ್ನಲು ಬಹುದೆಂದೂ, ಡಾ. ಭಂಡಾರಕರರವರು ಅಂದಿದ್ದಾರೆ. Vaishnavism Saivism and minor cults P. 110.

⌒ About this date viz. 3rd century B C. another Indian religion came to join the earlier arrived Saivism in-civilizing and Indianizing this country ( China ). This new religion was Budhism.

P. 11, Statesman August 8–1926.

ಆಧಾರಗಳಿಂದ ಶೈವ ಧರ್ಮವು ಈಗ ಜಗತ್ತಿನಲ್ಲಿ ಪ್ರಚಾರದಲ್ಲಿರುವ ಧರ್ಮಗಳಲ್ಲಿ ಅತೀ ಪ್ರಾಚೀನವಾದುದೆಂಬುದೂ, ಬಲು ದೂರದವರೆಗೆ ವ್ಯಾಪಿಸಿತ್ತೆಂಬುದೂ, ಎಲ್ಲರ ಲಕ್ಷದಲ್ಲಿ ಬರಬಹುದು.

ಪಾಶ್ಚಾತ್ಯ ವಿದ್ವಾಂಸನಾದ ಡಾರ್ವಿನ್ನನ ಉತ್ಕ್ರಾಂತಿವಾದ ತತ್ವದ ಪ್ರಕಾರ ಜಗತ್ತಿನೊಳಗಿನ ಆವ ವಸ್ತುವೂ ಪರಿಪೂರ್ಣಸ್ಥಿತಿಯಲ್ಲಿ ಉಗಮವನ್ನು ಹೊಂದಿಲ್ಲ. ಹುಟ್ಟು, ಬೆಳವಣಿಗೆ, ಪರಿಪೂರ್ಣಸ್ಥಿತಿ, ಇವು ಎಲ್ಲ ವಸ್ತುಗಳಲ್ಲಿಯೂ ಸ್ವಾಭಾವಿಕವಿದ್ದಂತೆ ತೋರುವದು. ಈ ನಿಯಮವನ್ನು ಧರ್ಮಕ್ಕಾದರೂ ಹಚ್ಚಲಿಕ್ಕೆ ಬರುವದು. ಹೇಗೆಂದರೆ ವೇದ ಧರ್ಮವನ್ನು ಉದಾಹರಣೆಗಾಗಿ ತೆಗೆದು ಕೊಳ್ಳುವಾ. ವೇದಗಳನ್ನು ಚನ್ನಾಗಿ ಸರಳ ಮನಸ್ಸಿನಿಂದೋದಿದ ಮನುಷ್ಯನು ವೇದ ಧರ್ಮಿಗಳೆಂದು ಹೇಳಿಕೊಳ್ಳುವ ನಮ್ಮ ನಡವಳಿಕೆಗೂ, ವೇದಕಾಲದಲ್ಲಿದ್ದ ಜನರ ನಡವಳಿಕೆಗಳಿಗೂ ಬಹಳೇ ಅಂತರವಾಗಿರುವದನ್ನು ಕಂಡು ಅಚ್ಚರಿಪಡದಿರಲಾರನು. ಋಗ್ವೇದದ ದೇವತೆಗಳಾದ ಇಂದ್ರ, ವರುಣ, ಅಗ್ನಿ, ಸೂರ್ಯ ಮೊದಲಾದ ಪ್ರಸಿದ್ಧ ದೇವತೆಗಳು ತಮ್ಮ ತಮ್ಮ ಸ್ಥಾನಗಳನ್ನು ಕಳೆದು ಕೊಂಡಿರುವವು- ವೇದಗಳಲ್ಲಿ ಅತಿ ಮಹತ್ವವಾದ, ಮತ್ತು ಅಗತ್ಯವಾಗಿ ಮಾಡಲೇ ಬೇಕಾದ ಯಜ್ಞಗಳು ಈಗ ಕಣ್ಣಿಗೆ ಬೀಳುವದಿಲ್ಲ. ಈಗ ನಾವು ಆಚರಿಸುವ ಅಹಿಂಸಾ ಧರ್ಮವೂ, ನಮ್ಮ ಈಗಿನ ತರ್ಕಬದ್ಧವಾದ ತತ್ವಜ್ಞಾನಗಳೂ ಸರಳ ಮನಸ್ಸಿನ ಮತ್ತು ಬಾಲಭಾವದ ಆವರಿಗೆ ಗೊತ್ತಿದ್ದಂತೆ ತೋರುವದಿಲ್ಲ. ಆದರೂ ಅದನ್ನೇ ಈಗ ಹಿಂದೂ ಧರ್ಮಾನುಯಾಯಿಗಳು ಮುಖ್ಯವಾಗಿಟ್ಟು ಕೊಂಡಂತೆ, ಈಗಿನ ಶೈವರಾದರೂ ತೀರ ಪ್ರಾಚೀನ ಸ್ಥಿತಿಯಲ್ಲಿ ಸಂಪೂರ್ಣತ್ವವನ್ನು ಹೊಂದದ ಶೈವ ಧರ್ಮವನ್ನೇ ಮುಖ್ಯವಾಗಿಟ್ಟು ಕೊಂಡಿರ ಬಹುದು. ಎಲ್ಲ ಧರ್ಮಗಳ ಸ್ಥಿತಿಯು ಹೀಗೆಯೇ ಉಂಟೆಂದು ಧರ್ಮಜ್ಞರೆಲ್ಲರು ಒಡಂಬಡುವರು.

ಶೈವ ಧರ್ಮದ ಶಾಖೆಗಳಲ್ಲೊಂದಾದ ಕಾಶ್ಮೀರ ದೇಶದಲ್ಲಿ ಪ್ರಚಾರದಲ್ಲಿರುವ " ತ್ರಿಕ ಅಥವಾ ತ್ರಿಕಶಾಸನ " ವೆಂದು ಕರೆಯಲ್ಪಡುವ ಶೈವ ಧರ್ಮವನ್ನು ಮೊದಲು ನೋಡುವಾ.

## ತ್ರಿಕ ಅಥವಾ ಕಾಶ್ಮೀರೀ ಶೈವ ಧರ್ಮವು.

ಶಿವ, ಶಕ್ತಿ, ಅಣು, ಅಥವಾ ಪತಿ, ಪಾಶ, ಪಶು, ಇವು ಉಳಿದ ತತ್ವಗಳೊಡನೆ ಕೂಡಿಕೊಂಡು, ಮುಖ್ಯತ್ವವನ್ನು ವಹಿಸಿರುವದರಿಂದ ಇದಕ್ಕೆ

"ತ್ರಿಕ" ವೆಂದು ಹೆಸರು ಬಂದಿದೆ. ಪಶು, ಪಾಶ, ಪತಿ, ಇವು ಶೈವ ಧರ್ಮಗಳಲ್ಲೆಲ್ಲ ಸಾಮಾನ್ಯವಾಗಿ ಕಂಡು ಬಂದರೂ, ಕಾಶ್ಮೀರ ಶೈವ ಧರ್ಮವು, ಪಾಶುಪತ ಮೊದಲಾದವುಗಳ ಸಂಬಂಧವನ್ನು ಒಪ್ಪಿ ಕೊಳ್ಳುವದಿಲ್ಲ. ಈ ಧರ್ಮದ ಆಧಾರ ಗ್ರಂಥವಾದ "ಶಿವಸೂತ್ರ ಗಳನ್ನು ವಸುಗುಪ್ತನು ಸಿದ್ಧನಿಂದ ಅಥವಾ ಶಂಕರನಿಂದ ಕಂಡುಕೊಂಡಿದ್ದಾನೆ. ಈ ವಿಷಯವಾಗಿ ಕಾಶ್ಮೀರ ದೇಶದಲ್ಲಿ ಹಲವು ಕಥೆಗಳು ಪ್ರಚಾರದಲ್ಲಿವೆ. ಅವುಗಳ ಉದ್ದೇಶವು, ಶಿವಸೂತ್ರಗಳು ಅಪೌರುಷೇಯುವಾದವುಗಳೂ, ವಸುಗುಪ್ತನು ಕಂಡು ಕೊಂಡವನಲ್ಲದೆ ಗ್ರಂಥ ಕರ್ತನಲ್ಲವೆಂದೂ, ಸಿದ್ಧನಿಂದಲ್ಲದೆ ಅನ್ಯ ಮಾನವರಿಂದ ದೊರಕಿಸದೇ ಇರುವದರಿಂದ, ಕಾಶ್ಮೀರ ಶೈವ ಧರ್ಮವು ಉಳಿದ ಶೈವ ಧರ್ಮಗಳ ಸಂಬಂಧವನ್ನೊಪ್ಪಿ ಕೊಳ್ಳುವದಿಲ್ಲೆಂದೂ, ಇರಬಹುದೆಂಬುದಾಗಿ ಕಂಡು ಬರುವದು. ಅವುಗಳಲ್ಲೊಂದು ಕೆಳಗಿನಂತೆ ಅದೆ:—

ಲೋಕದಲ್ಲಿ ಅಧ್ಯಾತ್ಮಿಕ ಅವನತಿಯು ಬೆಳೆಯ ಹತ್ತಿತು. ಅದನ್ನು ಕಂಡು ಮರುಕಗೊಂಡು ಮಹಾದೇವನು, ಮಹಾದೇವ ಗಿರಿಯಲ್ಲಿ ತಪಸ್ಸು ಮಾಡುತ್ತಿರುವ ವಸುಗುಪ್ತನ ಕನಸಿನಲ್ಲಿ ಬಂದು, ಸಮೀಪದಲ್ಲಿರುವ ಬಂಡೆಗಲ್ಲಿನ ಮೇಲೆ ಶಿವಸೂತ್ರಗಳು ಬರೆಯಲ್ಪಟ್ಟಿರುವವೆಂದೂ, ಬರೆದ ಭಾಗವು ಪಾಪಿಗಳ ದೃಷ್ಟಿಗೆ ಬೀಳಬಾರದೆಂದು ನೆಲದೊಳಗೆ ಮುಚ್ಚಿರುವದೆಂದೂ, ಮುಂಜಾನೆ ಆತನು ಅಲ್ಲಿಗೆ ಹೋಗಿ ಕಲ್ಲನ್ನು ಮುಟ್ಟಿದರೆ ಅದು ಅಕ್ಷರುಗಳುಳ್ಳ ಸ್ಥಾನವು ಮೇಲಾಗುವಂತೆ ಹೊರಳುವದೆಂದೂ, ಓದಿದ ಕೂಡಲೇ ಆತನಿಗೆ ಅವುಗಳ ಅರ್ಥವು ಭಾಸವಾಗುವದೆಂದೂ, ಅವನ್ನು ಯೋಗ್ಯ ಶಿಷ್ಯನಿಗೆ ಉಪದೇಶಿಸಬೇಕೆಂದೂ, ಅಪ್ಪಣೆಯನ್ನಿತ್ತನು. ಅದೇ ಪ್ರಕಾರ ವಸುಗುಪ್ತನು ಮುಂಜಾನೆ ನಿರ್ದಿಷ್ಟಸ್ಥಳಕ್ಕೆ ಹೋಗಿ ನೋಡಲು ಸ್ವಪ್ನದಲ್ಲಿ ಕಂಡಂತೆ ಶಿವಸೂತ್ರಗಳು ದೊರಕಿದವು. ಅವನ್ನು ಕಲ್ಲಟ, ಸೋಮಾನಂದ ಮೊದಲಾದ ಶಿಷ್ಯರಿಗೆ ಉಪದೇಶಿಸಿದನು.

ಈಗಲೂ ಸಹ ಅಲ್ಲಿಯ ಜನರು ಒಂದು ದೊಡ್ಡ ಬಂಡೆಗಲ್ಲನ್ನು ವಸುಗುಪ್ತನು ಕಂಡುಕೊಂಡ ಶಿವಸೂತ್ರಗಳಿದ್ದ ಕಲ್ಲೆಂದು ತೋರಿಸುವರು. ಅದಕ್ಕೆ ಈಗೂ ಸಹ ಶಂಕರಪಲನೆಂದು ಕರೆಯುವರು. ಅದರ ಮೇಲೆ ಅಕ್ಷರಗಳೇನೂ ಇಲ್ಲವಂತೆ. ಈ ಕಥೆಯ ಸತ್ಯತೆಯು ಹೇಗಿದ್ದರೂ ವಸುಗುಪ್ತನು ಶಿವಸೂತ್ರಗಳನ್ನು ಕಂಡುಕೊಂಡನೆಂಬುದೂ ಮತ್ತು ವ

ಸುಗುಪ್ತನೇ ತ್ರಿಕಶಾಸನವನ್ನು ಮೊದಲು ಉಪದೇಶಿಸಿದವನೆಂಬುದೂ ಸತ್ಯವಾದ ಮಾತು. ಆದುದರಿಂದ ಈತನೇ ಕಾಶ್ಮೀರ ಶೈವಧರ್ಮದ ಆದಿಗುರುವೆಂದು ನಂಬಲು ಅಡ್ಡಿಯಿಲ್ಲ.

ಕಾಶ್ಮೀರ ಶೈವಶಾಸ್ತ್ರಗಳು ಹೇಗೆ ಹುಟ್ಟಿದುವೆಂಬ ವಿಷಯಕ್ಕೆ ತಂತ್ರಾಲೋಕ ಭಾಷೆಯಲ್ಲಿ ಕೆಳಗಿನಂತೆ ಹೇಳಿದೆಃ—

ಎಲ್ಲ ಶಾಸ್ತ್ರಗಳು ಉದ್ಭವಿಸುವದಕ್ಕಿಂತ ಮೊದಲು ವಿಶ್ವವೂ ಪರಾವಾಕ್ಕೂ ಪರಾದೇವತೆಯಲ್ಲಿ ಅಡಕವಾಗಿದ್ದವು. ವಿಶ್ವವು ತೋರ್ಪಡಹತ್ತಿದನಂತರ ಪರಾವಾಕ್ಕೂ ವಿಚಾರರೂಪದಿಂದ ಕಾಣಹತ್ತಿತು. ವಿಶ್ವದ ರೂಪವು ಬೆಳೆಯು ಹತ್ತಿದಂತೆ ಅದರಲ್ಲಿರುವ ಪದಾರ್ಥಗಳನ್ನು ಗುರುತಿಸುವದಕ್ಕಾಗಿ ಇದುವರೆಗೆ ಪಶ್ಯಂತೀ ೧ ವಾಗ್ರೂಪದಲ್ಲಿದ್ದ ಪರಾವಾಕ್ಕೂ ಮಧ್ಯಮಾ ವಾಕ್ಕೆಂದಾಯಿತು. ಇದು ವಿಂಗಡಿಸಲು ಬಾರದ ಪಶ್ಯಂತೀ ಮತ್ತು ಶಬ್ದರೂಪವಾದ ವೈಖರೀ ೨ ವಾಕ್ಕೂ ಇವುಗಳ ಮಧ್ಯದಲ್ಲಿರುವದು. ಮುಂದೆ ದೈವೀಮಧ್ಯಮಾವಾಕ್ಕೂ ವೈಖರೀವಾಗ್ರೂಪವನ್ನು ಹೊಂದಿ ಐದು ಪ್ರವಾಹಗಳಾಗಿ, ಪರಮೇಶ್ವರನ ಪಂಚೈಶ್ವರ್ಯಗಳಾದ ಚಿತ್ತು, ಆನಂದ ಇಚ್ಛಾ, ಜ್ಞಾನ, ಕ್ರಿಯೆಗಳ ದ್ಯೋತಕಗಳಾದ ಈಶಾನ, ತತ್ಪರುಷ, ಸದ್ಯೋಜಾತ, ಅಘೋರ, ವಾಮದೇವವೆಂಬ ಪಂಚಮುಖಗಳಿಂದ ಹೊರಬಿದ್ದಿತು.

ಆದಿಯಲ್ಲಿ ಸರ್ವ ಶೈವಶಾಸ್ತ್ರಗಳು ಅರವತ್ತುನಾಲ್ಕು ಶೈವದರ್ಶನಗಳಾಗಿದ್ದವು. ಆದರೆ ಅವೆಲ್ಲವು ದ್ವೈತ, ಅದ್ವೈತ, ದ್ವೈತಾದ್ವೈತ ಅಥವಾ ದ್ವೈತ ಅಥವಾ ಅಭೇದ, ಭೇಧ, ಭೇದಾಭೇದಗಳೆಂದು ಮೂರು ಮುಖ್ಯಭಾಗಗಳಾಗಿದ್ದವು. ಕಲಿಕಾಲ ಮಹಿಮೆಯಿಂದ ೬೪ ಶೈವದರ್ಶನಗಳಲ್ಲಿ ಅನೇಕದರ್ಶನಗಳೂ ಅವುಗಳನ್ನು ಬಲ್ಲ ಋಷಿಗಳೂ ಮಾಯವಾದರು. ಆದುದರಿಂದ ಲೋಕದಲ್ಲಿ ಜನರ ಆಧ್ಯಾತ್ಮಿಕ ಅವನತಿಯು ಹೆಚ್ಚಿತು. ಕರುಣಾಳುವಾದ ಶಿವನು ಕೈಲಾಸ ಪರ್ವತದಲ್ಲಿ ಶ್ರೀ ಕಂಠ ರೂಪದಿಂದ ದೂರ್ವಾಸನಿಗೆ ಪ್ರತ್ಯಕ್ಷನಾಗಿ ಶಿವಶಾಸ್ತ್ರಗಳನ್ನು ಲೋಕದಲ್ಲಿ ಹಬ್ಬಿಸೆಂದು

---

೧. ಪಶ್ಯಂತೀ is the vision of the whole universe in its undifferentiated form.

೨. ವೈಖರೀ ವಾಕ್ಕು is but thought and experience expressed by means of vocal organs.

ಅನುಜ್ಞೆಯಿತ್ತನು. ದೂರ್ವಾಸನು ತ್ರ್ಯಂಬಕ, ಆಮರ್ದಕ, ಶ್ರೀ ನಾಥ ರೆಂದು ಮೂವರು ಮಾನಸ ಪುತ್ರರನ್ನು ನಿರ್ಮಿಸಿ, ಅಭೇದ, ಭೇದ, ಭೇದಾಭೇದವೆಂದು ಮೂರು ರೂಪುಗಳಲ್ಲಿರುವ ಅನಾದಿ ಮತ್ತು ನಿತ್ಯವಾದ ಶೈವ ಧರ್ಮವನ್ನು ಹಬ್ಬಿಸಬೇಕೆಂದು ಅವರಿಗೆ ಅಪ್ಪಣೆಯನ್ನಿತ್ತನು. ತ್ರ್ಯಂಬಕನು ಅಭೇದ ಶೈವವನ್ನೂ, ಆಮರ್ದಕನು ಭೇದಶೈವವನ್ನೂ, ಶ್ರೀನಾಥನು ಭೇದಾ ಭೇದ ಶೈವವನ್ನೂ ಬೋಧಿಸಿದರು. ತ್ರ್ಯಂಬಕನಿಂದ ಹರಡಿಸಲ್ಪಟ್ಟ ಅಭೇದ ಅಥವಾ ಅದ್ವಯ ಶೈವವು ತ್ರಿಕವೆಂದು ಪ್ರಸಿದ್ಧಿ ಹೊಂದಿತು.

**ತ್ರಿಕಧರ್ಮದ ಗ್ರಂಥಗಳು:**- ಇವು ಆಗಮಶಾಸ್ತ್ರ, ಸ್ಪಂದ ಶಾಸ್ತ್ರ, ಪ್ರತ್ಯಭಿಜ್ಞಾ ಶಾಸ್ತ್ರಗಳೆಂದು ಮುಖ್ಯವಾಗಿ ಮೂರು ಭಾಗಗಳಾಗಿವೆ.

**ಆಗಮ ಶಾಸ್ತ್ರವು:**--ದೈವನಿರ್ಮಿತವಾದುದು. ಇದು ಜ್ಞಾನ ಕ್ರಿಯೆ ಗಳೆರಡನ್ನು ಹೇಳುವದು. ಇದು ದೈವೀ ಶಕ್ತಿಯಿಂದ ಯುಗಯುಗಾಂತರಗಳಲ್ಲಿ ಬಂದುದೂ, ಕಾಲಕಾಲಕ್ಕೆ ಗುರುಗಳಿಂದ ಶಿಷ್ಯರಿಗೆ ಪ್ರಾಪ್ತವಾದುದೂ ಆಗಿರುವದರಿಂದ ಇದಕ್ಕೆ ಆಗಮವೆನ್ನುವರು.

**ಸ್ಪಂದಶಾಸ್ತ್ರವು:**--ತತ್ವಗಳನ್ನು ಸಂಪೂರ್ಣವಾಗಿ ಮತ್ತು ವಿಸ್ತೃತವಾಗಿ ವಿವರಿಸುವದು. ಸ್ಪಂದ ಸೂತ್ರಗಳು ಅಥವಾ ಸ್ಪಂದ ಕಾರಿಕೆಗಳು ಮುಖ್ಯವು. ಸ್ಪಂದ ಸೂತ್ರಕಾರನು ವಸುಗುಪ್ತನೆಂದು ಕ್ಷೇಮರಾಜನು ಹೇಳುತ್ತಾನೆ.

**ಪ್ರತ್ಯಭಿಜ್ಞಾ ಶಾಸ್ತ್ರವು:**--ತ್ರಿಕಧರ್ಮದ ತತ್ವಜ್ಞಾನವನ್ನು ಬೋಧಿಸುವ ಮನನ ಅಥವಾ ವಿಚಾರ ಶಾಸ್ತ್ರವೆಂದು ಅನ್ನಬಹುದು. ಇದರಲ್ಲಿ ಪ್ರತಿವಾದಿಗಳ ಮತಖಂಡನವೂ, ತರ್ಕದಿಂದ ಸ್ವಸಿದ್ಧಾಂತ ಸ್ಥಾಪನೆಯೂ ಮಾಡಲ್ಪಟ್ಟಿದೆ. ಇದರ ಉತ್ಪಾದಕನಾದ ಸಿದ್ಧ ಸೋಮಾನಂದನು ತನ್ನ ದರ್ಶನವನ್ನು ವಿಸ್ತೃತವಾಗಿ ವಿವರಿಸಿದ್ದಾನೆ.

## ಆಚಾರ್ಯರುಗಳು.

**ಶ್ರೀಕಂಠ:**-ಆಗಮ ಶಾಸ್ತ್ರವು ಶಿವನಿಂದ ನಿರ್ಮಿತವಾಯಿತು. ಇವನ್ನೂ ಮತ್ತು ಶಿವಸೂತ್ರಗಳನ್ನೂ ಪರಮೇಶನು ಪಾರ್ವತಿಗೆ ಹೇಳಿರುವನು ಇವನ್ನು ವಸುಗುಪ್ತನು ಕಂಡನು. ಈ ಧರ್ಮದ ಆಚಾರ್ಯರ ಮೂಲ ಪುರುಷನಾದ ಶ್ರೀ ಕಂಠನೇ ಶಿವನಾಗಿರಬಹುದು, ಅಥವಾ ಅವನಾದರೂ ಓರ್ವ

ಋಷಿಯಾಗಿರಬಹುದು. ಕಾಶ್ಮೀರದ ಶೈವರು ಆತನನ್ನು ಶಿವನೆಂದೇ ಭಾವಿಸುವರು. ಆತನು ಆಗಮಗಳ ಉತ್ಪಾದಕನೂ, ವಸುಗುಪ್ತನ ಗುರುವೂ ಆಗಿರುವನು.

**ವಸುಗುಪ್ತ**--ಈತನು ಸುಮಾರು ಒಂಬತ್ತನೇಯ ಶತಮಾನದ ಆದಿಯಲ್ಲಿದ್ದನು. ಈತನ ವಂಶದ ವಿಷಯಕ್ಕೆ ಹೆಚ್ಚಿಗೆ ಗೊತ್ತಾಗುವದಿಲ್ಲ. ಈತನು ಮಹಾದೇವಗಿರಿಯಲ್ಲಿ ತಪಸ್ಸು ಮಾಡುತ್ತಿದ್ದನೆಂದೂ, ಶಿವಸೂತ್ರಗಳನ್ನು ಕಂಡನೆಂದೂ ಐತಿಹ್ಯವುಂಟು. ಪೌರಾಣಿಕ ಪುರುಷನಾದ ಶ್ರೀಕಂಠನನ್ನು ಬಿಟ್ಟರೆ ಕಾಶ್ಮೀರದಲ್ಲಿ ಶೈವಧರ್ಮದ ಪ್ರಸಾರಕರಲ್ಲಿ ಈತನೇ ಮೊದಲನೆಯವನು. ಸ್ಪಂದ ಸೂತ್ರಗಳನ್ನು ಸ್ಪಂದಾಮೃತವನ್ನೂ ಭಗವದ್ಗೀತೆಯ ಮೇಲೆ ಟೀಕೆಯನ್ನೂ ಬರೆದಿರುವನು.

**ಕಲ್ಲಟ**-- ವಸುಗುಪ್ತನ ಶಿಷ್ಯ. ಶಿವಸೂತ್ರಗಳನ್ನು ವಸುಗುಪ್ತನಿಂದ ಸ್ವೀಕರಿಸಿ, ಅವುಗಳ ಮೇಲೆ ವ್ಯಾಖ್ಯೆಯನ್ನು ಬರೆದು ಎಲ್ಲಕಡೆಗೂ ಹಬ್ಬಿಸಿದನು. ರಾಜತರಂಗಿಣಿಯು (೫. ೬೬) ಕ್ರಿ. ಶ. ೮೫೫-೮೮೩ ರ ವರೆಗಿದ್ದ ಅವಂತಿವರ್ಮನ ಕಾಲದಲ್ಲಿದ್ದನೆಂದು ಈತನ ವಿಷಯಕ್ಕೆ ತಿಳಿಸುವದು. ಈತನು ಸ್ಪಂದಕಾರಿಕಾ, ಸ್ಪಂದ ವೃತ್ತಿ ಮತ್ತು ಶಿವಸೂತ್ರಗಳ ಮೇಲೆ ತತ್ತ್ವಾರ್ಥ ಚಿಂತಾಮಣಿ, ಮಧುವಾಹಿನಿಗಳೆಂಬ ವ್ಯಾಖ್ಯೆಗಳನ್ನು ಬರೆದಿರುವನು.

**ಸೋಮಾನಂದ**--ಈತನು ಪ್ರತ್ಯಭಿಜ್ಞಾ ಶಾಸ್ತ್ರದ ಉತ್ಪಾದಕನು. ತನ್ನ ವಂಶದ ವಿಷಯಕ್ಕೆ ಶಿವದೃಷ್ಟಿ ವೃತ್ತಿಯಲ್ಲಿ ಸ್ವಲ್ಪ ಹೇಳಿಕೊಂಡಿದ್ದಾನೆ. ತಾನು ಶಿವಾಗಮಗಳನ್ನು ಜಗತ್ತಿನಲ್ಲಿ ಹರಡಿಸಲು ಶಂಕರನಿಂದ ನುಜ್ಞೆಯನ್ನು ಪಡೆದ ದೂರ್ವಾಸನ ವಂಶದವನೆಂದೂ, ಮತ್ತು ಆತನಿಂದ ಹತ್ತೊಂಬತ್ತನೆಯ ತಲೆಯವನಾದ ಆನಂದನ ಮಗನೆಂದೂ ಅಂದಿದ್ದಾನೆ. ಈತನು ಬಹುತರ ಒಂಬತ್ತನೆಯ ಶತಮಾನದಲ್ಲಿರಬಹುದು. ವಸುಗುಪ್ತನ ಶಿಷ್ಯನಾಗಿದ್ದರೂ ಆಗಿರಬಹುದು. ತ್ರಿಕಧರ್ಮದ ತತ್ವಜ್ಞಾನವನ್ನು ತರ್ಕದಿಂದ ಪ್ರತಿಷ್ಠಾಪಿಸಿದನು. ಈತನಿಗೆ ತರ್ಕಶಾಸ್ತ್ರದ ಉತ್ಪಾದಕನೆಂದು ಕರೆಯುವರು; ಏಕೆಂದರೆ ಈ ಧರ್ಮದಲ್ಲಿ ತರ್ಕವನ್ನವಲಂಬಿಸಿ ಅನ್ಯಮತ ಖಂಡನವನ್ನು ಮಾಡಿ, ತ್ರಿಕಧರ್ಮದ ಸಿದ್ಧಾಂತವನ್ನು ಸ್ಥಾಪಿಸಿದನು. ಶಿವದೃಷ್ಟಿಯ ಮೇಲೆ ವೃತ್ತಿಯನ್ನು ಬರೆದಿರುವನು. ಈತನೂ ವಸುಗುಪ್ತನೂ ತ್ರಿಕಧರ್ಮದ ಅತಿ ಪ್ರಸಿದ್ಧರಾದ ಆಚಾರ್ಯರಾಗಿ

ರುವರಲ್ಲದೆ, ತ್ರಿಕಧರ್ಮದ ಆಚಾರ್ಯರೆಲ್ಲರಿಗೆ ಮೂಲಪುರುಷರಾಗಿ ರುವರು.

**ಉತ್ಪಲಾಚಾರ್ಯ**--ಸೋಮಾನಂದನ ಶಿಷ್ಯ. ಈಶ್ವರ ಪ್ರತ್ಯಭಿಜ್ಞಾ ಕಾರಿಕಾ, ಪ್ರತಭಿಜ್ಞಾಕಾರಿಕಾ ವೃತ್ತಿ, ವಿವೃತ್ತಿಯೆಂಬ ಹೆಸರಿನ ಟೀಕಾ, ಸ್ತೋತ್ರಾವಲಿ, ಈಶ್ವರಸಿದ್ಧಿ, ಅಜಡ ಮಾತೃ ಸಿದ್ಧಿ ಮೊದಲಾದವುಗಳನ್ನು ಬರೆದಿರುವನು.

**ಅಭಿನವಗುಪ್ತ**-ಉತ್ಪಲಾಚಾರ್ಯನ ಗ್ರಂಥಗಳ ಮೇಲೆ ವ್ಯಾಖ್ಯೆ ಯನ್ನೂ, ತಂತ್ರಾಲೋಕವೆಂಬ ಗ್ರಂಥವನ್ನೂ ಬರೆದಿರುವನು. ಇವುಗಳ ಲ್ಲದೆ ತ್ರಿಕಧರ್ಮದ ಮೇಲೆ ಬಹಳ ಗ್ರಂಥಗಳನ್ನು ಬರೆದು ಬಲು ಪ್ರಸಿ ದ್ಧನಾದವನು. ಇವನು ಸುಮಾರು ಹನ್ನೊಂದನೆಯ ಶತಮಾನದ ಆದಿ ಯಲ್ಲಿದ್ದನು. ಶಿವಸೂತ್ರದ ಮೇಲೆ ವಿಮರ್ಶಿನಿಯೆಂಬ ವ್ಯಾಖ್ಯೆಯನ್ನು ಬರೆ ದ ಕ್ಷೇಮರಾಜನು ಇವನ ಶಿಷ್ಯ. ಕ್ಷೇಮರಾಜನ ಶಿಷ್ಯ ಯೋಗರಾಜ. ಇವರೇ ಮೊದಲಾದವರು ಕಾಶ್ಮೀರ ಶೈವಧರ್ಮದ ಮುಖ್ಯರಾದ ಆಚಾ ರ್ಯರುಗಳು. ಇನ್ನು ಆತ್ಮಾ, ಪರಮೇಶ್ವರ, ಶಕ್ತಿ, ಜಗತ್ತಿನ ಉತ್ಪತ್ತಿ ಮೊದಲಾದುವುಗಳ ವಿಷಯಕ್ಕೆ ಈ ಆಚಾರ್ಯರುಗಳ ಅಭಿಪ್ರಾಯವೇನ ದೆಯೆಂಬುದನ್ನು ವಿಚಾರಿಸುವಾ .

**ಆತ್ಮಾ**-ಪ್ರತಿಯೊಂದು ಪ್ರಾಣಿಯಲ್ಲಿರುವ ಅಂತರಾತ್ಮವು ಚೈತನ್ಯ ಸ್ವರೂಪವಾಗಿರುವದು. ೧ ಇದಕ್ಕೆ ಚೈತನ್ಯ, ಪರಾಸಂವಿತ್, ಪರಮೇಶ್ವರ, ಶಿವ, ಪರಮಶಿವ, ಎಂದು ಕರೆಯುವರು. ಇದು ರೂಪ, ಲಿಂಗ, ಕಾಲ, ಸ್ಥಾನವಿರಹಿತವಾದದು; ಆದುದರಿಂದ ಇದು ಆದಿ ಮಧ್ಯಾಂತ ರಹಿತವಾ ದುದೂ, ಅಖಂಡವಾದುದೂ; ಉಂಟು. ಪ್ರತಿಯೊಂದು ವಸ್ತುವಿನ ಮೂಲ ಮತ್ತು ಶಕ್ತ್ಯ ಸ್ವರೂಪವಾದುದರಿಂದ ಪರಮ ಶಿವನು ಸರ್ವವ್ಯಾಪಿಯೂ ಸರ್ವಶಕ್ತನೂ ಸರ್ವಾತೀತನೂ ಆಗಿರುವನು. ಆತನಿಗೆ ಮುಖ್ಯವಾಗಿ ಎರಡು ಪ್ರಕಾರದ ಸ್ವರೂಪಗಳಿರುವವು- ಒಂದರಿಂದ ವಿಶ್ವಾತ್ಮಕನಾಗಿರು ವನು ( An immanent aspect ) ಮತ್ತೊಂದರಿಂದ ವಿಶ್ವೋತ್ತೀರ್ಣನಾ ಗಿರುವನು (Transcendental aspect ) ಜಗತ್ತಿನೊಳಗಿನ ನಾನಾಪ್ರಕಾ ರದ ಪದಾರ್ಥಗಳೂ ಅವುಗಳ ಅನುಭವ ಸಾಧನವೂ ಪರಮಾತ್ಮನ ವಿಶ್ವಾ

---

೧. ಚೈತನ್ಯಮಾತ್ಮಾ। [ ಶಿವಸೂತ್ರ ೧. ೧.]

ತ್ಮಕ ರೂಪವೇ ಆಗಿ, ಅವುಗಳ ಬೀಜ ರೂಪವೂ ಆತನೇ ಆಗಿರುವನು. ೧ ಪರಮಾತ್ಮನ ಈ ರೂಪಕ್ಕೆ ಶಕ್ತಿಯೆಂದು ಕರೆಯುವರು. ಆತನ ರೂಪವಾದುದರಿಂದ ಆತನಿಂದ ಅದು ಅಭೇದವಾಗಿದ್ದು ಪರಮ ಶಿವನಲ್ಲಿ ಐಕ್ಯವಾಗಿದೆ. ಅದು ಆತನ ಸರ್ಗ ಶಕ್ತಿಯಿದ್ದು ಸ್ತ್ರೀ ಸ್ವರೂಪವೆಂದು ಕರೆಯಲ್ಪಡುವದು. ೨ ಶಕ್ತಿಗೆ ಅನಂತ ಸ್ವರೂಪಗಳಿವೆ ಅವುಗಳಲ್ಲಿ ಚಿಚ್ಛಕ್ತಿ, ಆನಂದ ಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಗಳೆಂಬ ಐದು ಮುಖ್ಯವಾದುವು

**ಚಿಚ್ಛಕ್ತಿ**-ಜಗತ್ತಿನಲ್ಲಿ ಬೆಳಕನ್ನು ತೋರುವ ವಸ್ತುಗಳಿದ್ದರೇನು, ಇಲ್ಲದಿದ್ದರೇನು! ಅವುಗಳ ಗಣನೆಯಿಲ್ಲದೆ ಸ್ವಪ್ರಕಾಶದಿಂದ ಬೆಳಗುವ ಸೂರ್ಯನಂತೆ ಪರಮ ಶಿವನು ಬೆಳಗುವನು. ಆತನ ಈ ಶಕ್ತಿಗೆ ಚಿಚ್ಛಕ್ತಿಯೆನ್ನುವರು ೩

**ಆನಂದಶಕ್ತಿ**-ಸಂತೋಷವನ್ನುಂಟು ಮಾಡುವ ವಸ್ತುಗಳ ಅಗತ್ಯವಿಲ್ಲದೆ ಸರ್ವದಾ ತೃಪ್ತಿದಾಯಕವಾದ ಸುಖವೂ ಸಂತೋಷವೂ ಉಳ್ಳ ಪರಮ ಶಿವನ ಶಕ್ತಿಗೆ ಆನಂದ ಶಕ್ತಿಯೆಂದು ಹೆಸರು. ೪

**ಇಚ್ಛಾಶಕ್ತಿ**-ಸೃಷ್ಟಿಸಲು ಇಚ್ಛೆಯನ್ನು ತಾಳುವ ದೈವೀ ಶಕ್ತಿಗೂ ಸರ್ವ ಶಕ್ತಿತ್ವಕ್ಕೂ ಅಪ್ರತಿಹತವಾದ ಶಕ್ತಿಗೂ ಇಚ್ಛಾಶಕ್ತಿಯೆನ್ನುವರು. ೫

**ಜ್ಞಾನಶಕ್ತಿ**-ಜಗತ್ತಿನೊಳಗಿನ ಎಲ್ಲ ವಸ್ತುಗಳನ್ನು ಬೇರೆ ಬೇರೆಯಾಗಿ, ಪ್ರತಿಯೊಂದರ ಸ್ವರೂಪಜ್ಞಾನವನ್ನೂ, ಅವುಗಳೆಲ್ಲವನ್ನು ಒಟ್ಟು

---

೧. ಆತ್ಮೈವ ಸರ್ವಭಾವೇಷು ಸ್ಫುರನ್ನಿರ್ವೃತ ಚಿದ್ವಿಭುಃ ।
ಅನಿರುದ್ಧೇಚ್ಛಾಪ್ರಸರಃ ಪ್ರಸರದ್ದೃಕ್ಕ್ರಿಯಃ ಶಿವಃ॥ [ಶಿವದೃಷ್ಟಿಃ. ೨. ೩.]

೨. ನ ಶಿವಃ ಶಕ್ತಿರಹಿತೋ ನ ಶಕ್ತಿರ್ವ್ಯತಿರೇಕಿಣೀ ।
ಶಿವಃ ಶಕ್ತಸ್ತಥಾ ಭಾವಾನ್ನಿಚ್ಛಯಾ ಕರ್ತುಮೀಹತೇ ।
ಶಕ್ತಿ ಶಕ್ತಿ ಮತೋರ್ಭೇದಃ ಶೈವೇ ಜಾತು ನ ವರ್ಣ್ಯತೇ ॥
[ಶಿವದೃಷ್ಟಿ ೩. ೨. ೩.]

೩. ಪ್ರಕಾಶ ರೂಪತಾ ಚಿಚ್ಛಕ್ತಿಃ । [ತಂತ್ರಸಾರ ಅಹ್ನಿಕ. ೧.]

೪. ಸ್ವಾತ್ರಂತ್ರ್ಯಮಾನಂದ ಶಕ್ತಿಃ ॥ [ತಂತ್ರಸಾರ ಆಹ್ನಿಕ. ೧.]
ಆನಂದಃ ಸ್ವಾತಂತ್ರ್ಯಂ ಸ್ವಾತ್ಮ ವಿಶ್ರಾಂತಿ ಸ್ವಭಾವಾಹ್ಲಾದ ಪ್ರಾಧಾನ್ಯಾತ್
[ತಂತ್ರಸಾರ]
ಸ್ವಾತಂತ್ರ್ಯಶ್ಚ ಪುನಃ "ಯೋಹಿ ತಥಾಬುಭೂಷುಃ ನಪ್ರತಿಹತೇಸಃ ।
[ಪ್ರತ್ಯಾಭಿಜ್ಞಾವಿವೃತ್ತಿವಿಮರ್ಶಿನೀ ೨೫೮ ರ ಕೆಳಗಿನದು].

೫. ತಚ್ಚಮತ್ಕಾರ ಇಚ್ಛಾಶಕ್ತಿಃ । [ತಂತ್ರಸಾರ ಆಹ್ನಿಕ. ೧.]

ಗೂಡಿಸಿ ಸಮುದಾಯಕ ಜ್ಞಾನವನ್ನೂ ಮಾಡಿಕೊಡುವ ಪರಮಾತ್ಮನ ಶಕ್ತಿಗೆ ಜ್ಞಾನ ಶಕ್ತಿಯೆನ್ನುವರು. ೧

**ಕ್ರಿಯಾಶಕ್ತಿ**-- ಇಚ್ಛಾನು ರೂಪವಾಗಿ ಸ್ವರೂಪಗಳನ್ನು ಧರಿಸುವ ಪರಮಾತ್ಮನ ರೂಪಕ್ಕೆ ಕ್ರಿಯಾ ಶಕ್ತಿಯೆನ್ನುವರು. ೨

ಮುಖ್ಯವಾದ ಈ ಐದು ಶಕ್ತಿ ರೂಪಗಳಿಂದ ಪರಮಾತ್ಮನು ತನ್ನ ಶಕ್ತಿಯನ್ನು ವಿಶ್ವವಾಗಿ ಪ್ರಕಟಿಸುವನು. ಸ್ವೇಚ್ಛೆಯಿಂದ ಸ್ವಶಕ್ತಿಯ ಹೊರ್ತು ಅನ್ಯ ಸಹಾಯವಿಲ್ಲದೆ ತಾನೇ ವಿಶ್ವದ ಮೂಲಸ್ಥಾನವಾಗಿ ಇದನ್ನುಂಟು ಮಾಡುವನು. ಆದುದರಿಂದ ಪರಮ ಶಿವನ ಶಕ್ತಿಯ ವಿಸ್ತಾರಕ್ಕೆ ಅಥವಾ ಪ್ರಸಾರಕ್ಕೆ ಜಗತ್ತೆನ್ನುವರು. ೩

ಶಕ್ತಿಯು ವಿಸ್ತೃತ ವಾದಾಗ ಅಥವಾ ತೆರೆದಾಗ (ಉನ್ಮಿಷತಿ) ಜಗತ್ತುಂಟಾಗುವದು; ಅದು ಸಕುಂಚಿತ ವಾದಾಗ ಅಥವಾ ಮುಚ್ಚಿ ಕೊಂಡಾಗ ( ನಿಮಿಷತಿ ) ಜಗತ್ತು ಅದೃಶ್ಯವಾಗುವದು. ಶಕ್ತಿಯು ತೆರೆಯುವದನ್ನಾಗಲೀ ಮುಚ್ಚುವದನ್ನಾಗಲೀ ಒಂದೇ ಸಾರೆ ಮಾಡುವದಿಲ್ಲ; ಅನೇಕ ಸಾರೆ ಮಾಡಿರುವದು ಮತ್ತು ಮಾಡುತ್ತ ಇರುವದು; ಇಂಥ ವಿಸ್ತೃತ ಸಕುಂಚಿತಗಳು ಎಷ್ಟೋ ಆಗಿ ಹೋಗಿರುವದರಿಂದ ಈ ಜಗತ್ತು ಮೊದಲನೆಯದೆಂದು ತಿಳಿಯ ಕೂಡದು. ಇಂಥ ಎಷ್ಟೋ ಜಗತ್ತುಗಳು ಆಗಿ ಹೋಗಿವೆ. ಮತ್ತು ಆಗಿ ಹೋಗುವವವೆ. ಜಗತ್ತಿನ ಒಂದು ಜನ್ಮಕ್ಕೆ ಅಂದರೆ ಹುಟ್ಟುವಿಕೆ (ಸೃಷ್ಟಿ) ಗೂ, ನಾಶ (ಪ್ರಳಯ) ಕ್ಕೂ ಒಂದು ಕಲ್ಪವೆನ್ನುವರು. ಜಗತ್ತಿನ ಪ್ರತಿಯೊಂದು ಜನ್ಮವು ಒಂದಕ್ಕೊಂದು ಕೂಡಿ ಕೊಂಡಿರುವದರಿಂದ (linked together by the relation of Causal necessi ty) ಜಗತ್ತು ಅನಾದಿಯಾದುದೂ ಮತ್ತು ಅನಂತವಾದುದೂ ಎಂದು ಕರೆಯಲ್ಪಡುವದು. ಇಂಥ ಜಗತ್ತಿನಲ್ಲಿರುವ ವಸ್ತುಗಳೆಲ್ಲವು ಕೆಲವು ತತ್ವಗಳಿಂದುಂಟಾಗಿರುವವು. ಅವು ಆವುವೆಂದರೆ:--

೧. **ಪಂಚ ಭೂತಗಳು**--ಪೃಥಿವೀ ತತ್ವ, ಅಪ್ ತತ್ವ, ಅಗ್ನಿ ತತ್ವ ವಾಯು ತತ್ವ ಆಕಾಶ ತತ್ವ.

---

೧. ಅಮರ್ಷಾತ್ಮಕತಾ ಜ್ಞಾನ ಶಕ್ತಿಃ ॥ ॥ ॥
"ಅಮರ್ಷ" ಶಬ್ದವನ್ನು "ಈ ಪತ್ತಿಯಾ ವೆದ್ಯೋನ್ಮುಖತಾ" ಎಂದು ಅರ್ಥ ಮಾಡಿದ್ದಾರೆ.

೨. ಸರ್ವಾಕಾರ ಯೋಗಿತ್ವಂ ಕ್ರಿಯಾಶಕ್ತಿಃ। [ತಂತ್ರಸಾರ ಆಹ್ನಿಕ. ೧.]

೩. ಸ್ವ ಶಕ್ತಿ ಪ್ರಚಯೋಽಸ್ಯ ವಿಶ್ವಂ। [ಶಿವಸೂತ್ರ೩. ೩೦.]

೨. **ಕರ್ಮೇಂದ್ರಿಗಳು**--ಉಪಸ್ಥ, ಪಾಯು, ಪಾದ, ಹಸ್ತ, ವಾಕ್.
೩. **ತನ್ಮಾತ್ರೆಗಳು**-ಗಂಧ, ರಸ, ರೂಪ, ಸ್ಪರ್ಶ, ಶಬ್ದ.
೪. **ಜ್ಞಾನೇಂದ್ರಿಯಗಳು**--ಘ್ರಾಣ, ರಸನ, ದರ್ಶನ, ಸ್ಪರ್ಶನ, ಶ್ರವಣ.
೫. **ಅಂತಃಕರಣ**--ಮನಸ್, ಅಹಂಕಾರ, ಬುದ್ಧಿ.
೬. ಪ್ರಕೃತಿ, ಪುರುಷರು
೭. **ಕಂಚುಗಳು**--ಕಾಲ, ನಿಯತಿ, ರಾಗ, ವಿದ್ಯಾ, ಕಲಾ,ಮಾಯಾ.

೮. ಸದ್ವಿದ್ಯಾ ಅಥವಾ ಶುದ್ಧವಿದ್ಯಾ-ಐಶ್ವರ ಅಥವಾ ಈಶ್ವರ ತತ್ವ ಸಾದಾಖ್ಯ ಅಥವಾ ಸದಾಶಿವ ತತ್ವ, ಶಕ್ತಿ ತತ್ವ, ಶಿವ ತತ್ವ. ತ್ರಿಕ ಧರ್ಮದ ಪ್ರಕಾರ ಮೇಲಿನ ಮೂವತ್ತಾರು ತತ್ವಗಳಿಂದೊಡ ಗೂಡಿದ ದೃಶ್ಯ ಜಗತ್ತು ಪರಮ ಶಿವನ ಶಕ್ತಿಯ ದ್ಯೋತಕ ವಾಗಿದೆ. ಅಥವಾ ಪರಮ ಶಿವನೇ ಶಕ್ತಿಯ ರೂಪದಿಂದ ವಿಶ್ವವಾಗಿರುವನು.

ಮುಂದೆ ಸಾಗುವದು.

## ೨೧ ದೀಕ್ಷೆಗಳು.

ಲೇಖಕ:- ರಾ|| ಸಾ|| ಫ. ಗು. ಹಳಕಟ್ಟಿ ಬಿ. ಏ. ಎಲ್. ಎಲ್. ಬಿ.
ವಕೀಲ ವಿಜಾಪುರ

ಪ್ರತಿಯೊಂದು ಧರ್ಮದಲ್ಲಿ ಆ ಧರ್ಮದ ಮಾರ್ಗಗಳನ್ನು ಅನುಸರಿಸಲು ಬಾಧ್ಯನಾದವನೆಂದು ತೋರಿಸಲು ಒಂದು ವಿಶೇಷ ಧಾರ್ಮಿಕ ವಿಧಿಯು ಮಾಡಲ್ಪಡುವದು ವಾಡಿಕೆಯಾಗಿರುತ್ತದೆ. ಆ ವಿಧಿಯು ನೆರವೇರಿಸಲ್ಪಟ್ಟ ಕೂಡಲೆ ಆ ಧರ್ಮವನ್ನು ಅನುಸರಿಸುವ ಹಕ್ಕುಗಳು ಅವನಿಗೆ ಪ್ರಾಪ್ತವಾಗುತ್ತವೆ. ಮತ್ತು ಅಂದಿನಿಂದ ಅವನು ಆ ಸಮಾಜಕ್ಕೆ ಹೊಂದಿದವನಾದನೆಂದು ತಿಳಿಯಲ್ಪಡುತ್ತಾನೆ. ಬ್ರಾಹ್ಮಣ ಧರ್ಮದಲ್ಲಿ ಈ ಸಂಗತಿಯ ದ್ಯೋತಕವಾಗಿ ಯಜ್ಞೋಪವೀತ ಧಾರಣೆಯು ಒಂದು ವಿಶೇಷ

ವಿಧಿಯಿಂದ ಜರಗಿಸಲ್ಪಡುತ್ತದೆ. ಮತ್ತು ಕ್ರಿಶ್ಚನ್ನರಲ್ಲಿ ಈ ತೆರದ ವಿಧಿಗೆ ಬ್ಯಾಪ್ಟಿ ಜಮ್ ಎಂಬ ಹೆಸರು ಇರುತ್ತದೆ. ಮುಸಲ್ಮಾನ, ಜೈನ, ಜ್ಯು, ಫಾರ್ಶಿಜನರಲ್ಲಿಯೂ ಈ ತೆರದ ವಿಶೇಷ ವಿಧಿಗಳು ಇರುತ್ತವೆ. ವೀರಶೈವ ರಲ್ಲಿಯೂ ಈ ತೆರದ ವಿಧಿಯು ಇದ್ದು, ಅದಕ್ಕೆ ಅವರು ದೀಕ್ಷೆ ಎಂದು ಕರೆಯುತ್ತಾರೆ. ಆಗ ಆತನಿಗೆ ಲಿಂಗಧಾರಣೆಯು ಮಾಡಲ್ಪಡುತ್ತದೆ. ಹೀಗೆ ಲಿಂಗಧಾರಣೆಯಾದ ಕೂಡಲೇ ವೀರಶೈವನಿಗೆ ತನ್ನ ಧರ್ಮದ ಮರ್ಮ ಗಳನ್ನು ಅರಿಯುವ ಹಕ್ಕು ಪ್ರಾಪ್ತವಾಗುತ್ತದೆ. ಆಗ ಆತನು ಒಬ್ಬ ಹೊಸ ಮನುಷ್ಯನೆಂದು ಭಾವಿಸಲ್ಪಟ್ಟು, ಪುನರ್ಜನ್ಮ ಹೊಂದಿದವನೆಂದು ತಿಳಿ ಯಲ್ಪಡುತ್ತಾನೆ.

ವೀರಶೈವರಲ್ಲಿ ಶಿಶುವು ಜನಿಸಿದ ಕೂಡಲೇ ಲಿಂಗಧಾರಣೆಯು ಮಾ ಡಲ್ಪಡುತ್ತದೆ. ಮತ್ತು ಗರ್ಭಾವಸ್ಥೆಯ ೮ ನೇ ತಿಂಗಳಲ್ಲಿ ಸಹ ಈ ವಿಧಿ ಯು ಒಮ್ಮೊಮ್ಮೆ ನೆರವೇರಿಸಲ್ಪಡುವದುಂಟು. ಆದರೆ ಈ ಸ್ಥಿತಿಯಲ್ಲಿ ಆ ಚಿನ್ಹದ ತಿಳುವಳಿಕೆಯು ಆಶಿಶುವಿಗೆ ಆಗುವದು ಅಶಕ್ಯವು· ಮುಂದೆ ಆಶಿ ಶುವು ದೊಡ್ಡದಾಗಿ ತಿಳುವಳಿಕೆಯು ಉತ್ಪನ್ನವಾಗಹತ್ತಿದ ಬಳಿಕ ಪುನಃ ದೀಕ್ಷೆಯು ಮಾಡಲ್ಪಡುವದು. ಬಾಲಕನಿಗೆ ಜಗತ್ತಿನ ಸಾಮಾನ್ಯ ಜ್ಞಾನ ವು ೮ ನೇ ವರ್ಷದಲ್ಲಿ ಪ್ರಾರಂಭವಾಗಿ ೧೬ ವರ್ಷಗಳ ವರೆಗೂ ಹೆಚ್ಚುತ್ತ ಹೋಗುತ್ತದೆ. ಈ ಕಾಲವೇ ಮನುಷ್ಯನ ಮಹತ್ವದ ಕಾಲವು. ಆಗ ಉಂ ಟಾದ ಸ್ವಭಾವವು ಆಮರಣ ಉಳಿಯುವದುಂಟು. ಈ ಅವಧಿಯಲ್ಲಿಯೇ ವಿಶೇಷ ತರದ ವಿಧಿಗಳಿಂದ ದೀಕ್ಷೆಯು ಶಿಷ್ಯನಿಗೆ ಜರಗಿಸಲ್ಪಡುವುದು. ಅಂ ದಿನಿಂದ ವೀರಶೈವ ಆಚಾರ ಮತ್ತು ಧರ್ಮ ಇವುಗಳ ತತ್ವಗಳನ್ನು ಆತ ನು ಅರಿತುಕೊಂಡು ಅವುಗಳಂತೆ ಅವನು ನಡಿಯುವದು ಕರ್ತವ್ಯವಾಗಿ ರುತ್ತದೆ.

ಪ್ರತಿಯೊಂದು ಧರ್ಮದಲ್ಲಿ ಕೆಲವು ವಿಶೇಷತರದ ಧಾರ್ಮಿಕ ಸಂ ಸ್ಕಾರಗಳು ಇದ್ದೇ ಇರುತ್ತವೆ. ಅವೆಲ್ಲವುಗಳು ಮನುಷ್ಯನ ಆಯುಷ್ಯದ ಬೇರೆ ಬೇರೆ ಕಾಲಗಳಲ್ಲಿ ಆಚರಿಸಲ್ಪಡುತ್ತವೆ. ನಿಜವಾಗಿ ಈ ವಿಧಿಗಳ ಅರ್ಥವನ್ನು ಅರಿಯುವದು ಬಹು ಅವಶ್ಯವು. ಆದರೆ ನಮ್ಮ ಹಿಂದೂ ಸ ಮಾಜದಲ್ಲಿ ಈ ವಿಧಿಗಳ ಅರ್ಥವನ್ನು ತಿಳಿಸಿ ಕೊಡುವ ಪರಿಪಾಠವು. ಇರುವದಿಲ್ಲ. ಆ ವಿಧಿಗಳ ಕಾಲಕ್ಕೆ ಅನೇಕ ಮಂತ್ರಗಳನ್ನು ಪುರೋಹಿತ ರು ಉಚ್ಚರಿಸುವದುಂಟು. ಆದರೆ ಆ ಮಂತ್ರಗಳ ಅರ್ಥವನ್ನು ತಿಳಿದವರು

ಬಹಳ ಸ್ವಲ್ಪ ಜನರು ಇರುತ್ತಾರೆ. ಆದ್ದರಿಂದ ಆವಿಧಿಗಳು ಅಂಧತೆಯಿಂದ ಆಚರಿಸಲ್ಪಡುತ್ತವೆ. ಇದರಿಂದ ಆವಿಧಿಗಳ ಮಹತ್ವವು ಜನರಿಗೆ ತಿಳಿಯದೆ ಹೋಗಿ, ಅವುಗಳ ಮೇಲಿನ ವಿಶ್ವಾಸವು ಕಡಿಮೆಯಾಗುತ್ತದೆ. ಇದೇ ಹಾಡು ವೀರಶೈವರಲ್ಲಿಯೂ ಆಗಿರುತ್ತದೆ. ಲಿಂಗಧಾರಣೆಯು. ಅವರಲ್ಲಿ ಒಂದು ವಿಶೇಷ ತರದ ವಿಧಿಯು ಇರುತ್ತದೆ. ಅದರಲ್ಲಿ ತಾತ್ವಿಕ ವಿಚಾರಗಳು ತುಂಬಿ ಕೊಂಡಿವೆ. ವೀರಶೈವರ ವಿಧಿಗಳಲ್ಲಿ ಬಹುತರವಾಗಿ ಮಂತ್ರೋಚ್ಚಾರ ಮೊದಲಾದ ಬಾಹ್ಯೋಪಚಾರಗಳು ಬಹಳ ಕಡಿಮೆ ಇರುತ್ತವೆ. ಇವುಗಳಿಗೆ ಅವರು ಮಹತ್ವದ ಸ್ಥಾನವನ್ನು ಕೊಟ್ಟಿರುವದಿಲ್ಲ-ಆದರೆ ಆ ಕಾಲಕ್ಕೆ ಅವನಿಗಿರಬೇಕಾಗುವ ಭಾವನೆಗೆ ಬಹಳ ಮಹತ್ವ ಕೊಟ್ಟಿರುತ್ತಾರೆ. ಈ ಭಾವನೆಯು ಉತ್ಪನ್ನವಾಗ ಬೇಕಾದರೆ, ಆ ವಿಧಿಯ ಮರ್ಮವನ್ನು ತಿಳಿಯದೆ ಎಂದಿಗೂ ಆಗಲಾರದು. ಆದ್ದರಿಂದ ಆಚರಿಸತಕ್ಕ ವಿಧಿಗಳು ಅಥವಾ ಆಚಾರಗಳು ಇವುಗಳ ಮರ್ಮವನ್ನು ಅರಿಯುವದು ವೀರಶೈವನಿಗೆ ಅತ್ಯಾವಶ್ಯಕವಾದದ್ದು. ಈ ಸಂಗತಿಯು ವೀರಶೈವ ದೀಕ್ಷೆಗೆ ವಿಶೇಷವಾಗಿ ಹತ್ತುತ್ತದೆ. ಆಗ ಗುರುವು ಶಿಷ್ಯನಿಗೆ ಅನೇಕ ತರದ ಧರ್ಮಮಾರ್ಗವನ್ನು ಉಪದೇಶಿಸುತ್ತಾನೆ. ಇದನ್ನು ಆತನು ತಿಳಿಯದ ಹೊರತು ಕೇವಲ ಲಿಂಗಧಾರಣೆಯಿಂದ ಏನೂ ಪ್ರಯೋಜನ ವಾಗಲಾರದು. ಈ ಲಿಂಗ ಧಾರಣ ತತ್ವಗಳನ್ನು ವೀರಶೈವ ಧರ್ಮಶಾಸ್ತ್ರಕಾರರು ತಮ್ಮ ಧರ್ಮ ಗ್ರಂಥಗಳಲ್ಲಿ ವಿವರಿಸಿದ್ದು ಅವುಗಳನ್ನು ಸ್ಥೂಲರೀತಿಯಿಂದ ಈ ಲೇಖದಲ್ಲಿ ವಿವರಿಸುವದೇ ನನ್ನ ಈಗಿನ ಮುಖ್ಯೋದ್ದೇಶವಾಗಿದೆ.

ಲಿಂಗ ಧಾರಣೆಯ ಉದ್ದೇಶವು ಲಿಂಗದ ಗುಣಗಳನ್ನು ತನ್ನಲ್ಲಿ ಬರಮಾಡಿಕೊಂಡು ಅದರಂತೆ ಆಚರಿಸುತ್ತ ಕಡೆಗೆ ಲಿಂಗದಲ್ಲಿಯೇ ಲಯವಾಗುವದು ಮುಖ್ಯವಾಗಿರುತ್ತದೆ. ಲಿಂಗವೆಂದರೆ ಏನೋ ಒಂದು ತನಗೆ ಸಂಬಂಧವಲ್ಲದ ತನಗೆ ಅರಿಯಲಾರದ ತನ್ನನ್ನುಬಿಟ್ಟುಹೊರಗಿದ್ದ ಒಂದು ವಸ್ತು ಎಂದು ವೀರ ಶೈವರು ತಿಳಿಯುವದಿಲ್ಲ. ಲಿಂಗವು ತನ್ನಲ್ಲಿಯೇ ಇದೆ. ಆದರೆ ಅದು ಮನುಷ್ಯನ ಪಾಪವಾಸನೆಯಿಂದ ಅಡಗಿಹೋಗಿರುತ್ತದೆ. ಮನುಷ್ಯನಿಗೆ ಪ್ರವೃತ್ತಿ ಮಾರ್ಗದ ಲವಲವಿಕೆಯು ಉತ್ಪನ್ನವಾಯಿತೆಂದರೆ. ಆ ಲಿಂಗವು ದೃಶ್ಯವಾಗಹತ್ತುತ್ತದೆ. ಹೀಗೆ ಲಿಂಗವು ಅವನಲ್ಲಿ ಪ್ರಕಟವಾದದ್ದಕ್ಕೆ ಅವನ ಸದ್ಗುಣ, ಸದಾಚಾರಗಳೇ ಗುರುತು. ಆದ್ದರಿಂದ ಲಿಂಗದ ಅರ್ಥವನ್ನು ವಚನಕಾರರು 'ಪರಶಿವನ ಪರಮಜ್ಞಾನ' "ಸರ್ವಕಾರಣ ನಿರ್ಮಲ" "ಶರಣರ ಹೃದಯದಲ್ಲಿ ಬೆಳಗುವ ಜ್ಯೋತಿರ್ಮಯವು "ಪರ

ಶಕ್ತಿ ಯುತ ಪರಶಿವನ ನಿಜ ದೇಹ" "ಸರ್ವ ತತ್ವ ಪೂರಣ ನಿಜ ಚೈತನ್ಯ" ಇಂಬಿವೇ ಮೊದಲಾದ ಶಬ್ದಗಳಿಂದ ವರ್ಣಿಸಿದ್ದಾರೆ. ಇದರಿಂದ ಲಿಂಗವು ತನ್ನಲ್ಲಿಯೇ ವಾಸಿಸುವ ಒಂದು ಮಹತ್ತಾದ ಪರಶಿವನ ಶಕ್ತಿಯಾಗಿರುತ್ತದೆ. ಈ ಶಕ್ತಿಯ ಗುರುತನ್ನು ಮಾಡಿ ಕೊಳ್ಳುವದೇ ಲಿಂಗ ಧಾರಣದ ಮುಖ್ಯ ಉದ್ದೇಶವಾಗಿದೆ.

ಲಿಂಗಧಾರಣೆಯ ವಿಧಿಯಲ್ಲಿ ವೀರಶೈವ ಧರ್ಮಗ್ರಂಥಕಾರರು ಮೊದಲಿಗೆ ಮೂರು ಭಾಗಗಳನ್ನು ಮಾಡಿದ್ದಾರೆ. ಅವು ಯಾವವೆಂದರೆಃ— ವೇಧಾ, ಮಂತ್ರ ಮತ್ತು ಕ್ರಿಯಾ. ಮತ್ತು ಈ ಪ್ರತಿಯೊಂದರಲ್ಲಿ ಪುನಃ ಏಳೇಳು ದೀಕ್ಷೆಗಳಿರುವವು. ಹೀಗೆ ದೀಕ್ಷೆಯಲ್ಲಿ ಒಟ್ಟಿಗೆ ೨೧ ದೀಕ್ಷೆಗಳಿರುವವು. ಈ ದೀಕ್ಷೆಗಳ ವಿವರಣೆಯು ಈ ಸಂಚಿಕೆಯಲ್ಲಿ ನಾನು ಅಚ್ಚುಹಾಕಿರುವ 'ಸಂಗನ ಬಸವೇಶ್ವರ' ವಚನದಲ್ಲಿ ವಿಶೇಷವಾಗಿ ಮಾಡಲ್ಪಟ್ಟಿರುತ್ತದೆ. ಅದನ್ನು ವಾಚಕರು ನೋಡಬೇಕು. ಅವರು ಅದನ್ನು ನೋಡಿದ ಕೂಡಲೆ ಅವುಗಳ ಪರಸ್ಪರ ಸಂಬಂಧವನ್ನು ಅರಿಯದೆ ಗೊಂದಲದಲ್ಲಿ ಬೀಳಬಹುದು. ಆದರೆ ಹೀಗಾಗಲುಕಾರಣವಿಲ್ಲ. ಅವೆಲ್ಲವುಗಳು ಕೆಲವು ತತ್ವಗಳನ್ನನುಸರಿಸಿಯೇ ಮಾಡಲ್ಪಟ್ಟಿರುತ್ತವೆ. ಈ ಸಂಗತಿಯು ನಾನು ಮಾಡಿದ ಕೆಳಗಿನ ವಿವರಣೆಯಿಂದ ವಾಚಕರಿಗೆ ಸ್ಪಷ್ಟವಾಗಬಹುದೆಂದು ನಂಬಿದ್ದೇನೆ.

ಮೊದಲಿಗೆ ವೇಧಾದೀಕ್ಷೆ, ಮಂತ್ರದೀಕ್ಷೆ ಮತ್ತು ಕ್ರಿಯಾದೀಕ್ಷೆ ಈ ಮೂರುದೀಕ್ಷೆಗಳನ್ನು ವಿಚಾರಿಸುವಾ. ಈ ಮೂರು ದೀಕ್ಷೆಗಳಿಂದ ಮನುಷ್ಯನ ಮೂರೂ ಶರೀರಗಳಲ್ಲಿ ಲಿಂಗವು ಸಂಬಂಧಿಸಲ್ಪಡುತ್ತದೆ. ಮನುಷ್ಯನಿಗೆ ಮೂರು ಶರೀರಗಳಿವೆ ಎಂದು ಸಾಂಖ್ಯಶಾಸ್ತ್ರಕ್ಕನುಸಾರವಾಗಿ ವೀರಶೈವರೂ ತಿಳಿದಿದ್ದಾರೆ. ಇವುಗಳಲ್ಲಿ ಯಾವದು ಬಾಹ್ಯಕ್ರಿಯೆಗಳಿಗೆ ಸಂಬಂಧಿಸಿದ್ದೋ ಅದು ಸ್ಥೂಲಶರೀರವು. ಯಾವದು ಮನುಷ್ಯನ ಅಂತರಿಂದ್ರಿಯಗಳಿಗೆ ಸಂಬಂಧಿಸಿದ್ದೋ ಅದು ಸೂಕ್ಷ್ಮಶರೀರವು ಮತ್ತು ಇವೆರಡೂ ಶರೀರಗಳಿಗೆ ಚೈತನ್ಯಕೊಡುವಂಥ ಮೂಲ ಶರೀರವು ಕಾರಣಶರೀರವು. ಈ ಮೂರು ಶರೀರಗಳು ಪರಸ್ಪರ ಸಂಬಂಧವುಳ್ಳವುಗಳಾಗಿದ್ದು, ಅವು ಒಂದನ್ನೊಂದು ಬಿಟ್ಟು ತಮ್ಮ ಕಾರ್ಯಗಳನ್ನು ಮಾಡಲಾರವು. ಆದ್ದರಿಂದ ಈ ಮೂರು ಶರೀರಗಳನ್ನು ಲಿಂಗಮುಖ ಮಾಡದ ಹೊರ್ತು ಲಿಂಗದ ಅರಿವು ಶಿಷ್ಯನಿಗೆ ಆಗುವದು ಅಶಕ್ಯವಿರುತ್ತದೆ. ಆದ್ದರಿಂದ ದೀಕ್ಷಾಕಾಲವಲ್ಲಿ

ಈಮೂರೂ ಶರೀರಗಳಿಗೂ ಲಿಂಗಸಂಬಂಧವನ್ನುಂಟು ಮಾಡುವದು ಅತ್ಯಾವಶ್ಯಕವು.

ಹೀಗೆ ಲಿಂಗಸಂಬಂಧವನ್ನು ಮಾಡುವ ವಿವರವು ತೋಂಟದಾರ್ಯರು ಕೆಳಗೆ ಕಾಣಿಸಿದ ವಚನದಲ್ಲಿ ಬಹು ಸರಸವಾಗಿ ವರ್ಣಿಸಿದ್ದಾರೆ. ಆ ವಚನವು ಯಾವದೆಂದರೆ— "ವೇಧಾದೀಕ್ಷೆ, ಮಂತ್ರದೀಕ್ಷೆ, ಕ್ರಿಯಾದೀಕ್ಷೆ" ಎಂಬ ದೀಕ್ಷಾತ್ರಯಗಳಿಂದ ತನುತ್ರಯಂಗಳ ಪೂರ್ವಾಶ್ರಯಂಗಳ ಕಳೆದು ಲಿಂಗತ್ರಯಂಗಳ ಸಂಬಂಧಿಸುವನನೆಂತೆಂದೊಡೆ, ವೇಧಾದೀಕ್ಷೆ ಎಂದು ಶ್ರೀ ಗುರು ತನ್ನ ಹಸ್ತ ಶಿಷ್ಯಮಸ್ತಕದಲ್ಲಿ ಸಂಯೋಗ ಮಾಡಿದನು. ಮಂತ್ರದೀಕ್ಷೆ ಎಂದು ಶ್ರೀಗುರು ಪ್ರಣವ ಪಂಚಾಕ್ಷರಿಯ ಮಂತ್ರವ ಕರ್ಣದಲ್ಲಿ ಉಪದೇಶಿಸಿದನು. ಕ್ರಿಯಾದೀಕ್ಷೆ ಎಂದು ಆ ಮಂತ್ರಸ್ವರೂಪವನೇ ಇಷ್ಟಲಿಂಗಸ್ವರೂಪವನೆ ಮಾಡಿ ಕರಸ್ಥಲದಲ್ಲಿ ಸಂಬಂಧಿಸಿದನು. ಇದು ಕಾರಣ ವೇಧಾದೀಕ್ಷೆಯಿಂದ ಕಾರಣ ತನುವಿನ ಪೂರ್ವಾಶ್ರಯುವ ಕಳೆದು ಭಾವಲಿಂಗ ಸಂಬಂಧವಾಯಿತು. ಮಂತ್ರದೀಕ್ಷೆಯಿಂದ ಸೂಕ್ಷ್ಮ ತನುವಿನ ಪೂರ್ವಾಶ್ರಯುವನಳಿದು ಪ್ರಾಣಲಿಂಗ ಸಂಬಂಧವಾಯಿತ್ತು. ಕ್ರಿಯಾದೀಕ್ಷೆಯಿಂದ ಸ್ಥೂಲತನುವಿನ ಪೂರ್ವಾಶ್ರಯುವನಳಿದು ಇಷ್ಟಲಿಂಗ ಸಂಬಂಧವಾಯಿತ್ತು. ಅಂಗತ್ರಯದಲ್ಲಿ ಲಿಂಗತ್ರಯ ಧರಿಸಿದೆನಯ್ಯ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ"

ಈ ವಚನದಲ್ಲಿ ಈ ಮೂರೂ ಶರೀರಗಳಲ್ಲಿ ಲಿಂಗಧಾರಣೆಯನ್ನು ಹ್ಯಾಗೆ ಮಾಡಬೇಕೆಂದು ವಿವರಿಸಲ್ಪಟ್ಟಿದೆ. ಬಾಹ್ಯ ಲಿಂಗಧಾರಣೆಯು ದೃಷ್ಟಿಗೆಗೋಚರವಾಗಿರುತ್ತದೆ. ಆದರೆ ಉಳಿದ ಎರಡು ಶರೀರಗಳ ಲಿಂಗಧಾರಣೆಯು ಹಾಗೆ ಗೋಚರವಿರದ್ದರಿಂದ ಇದರ ನಿಜಸ್ಥಿತಿಯು ಅದರ ಅನುಭವವಿಲ್ಲದವರಿಗೆ ತಿಳಿಯುವದು ದುಸ್ತರವು. ಈ ಲಿಂಗಧಾರಣೆಯಲ್ಲಿ ಯೋಗಶಾಸ್ತ್ರದ ತತ್ವಗಳು ಅಡಕವಾಗಿರುತ್ತವೆ. ಈ ತತ್ವಗಳು ಸಾಧಕರಿಗೆ ಅನುಭವದಿಂದಲೇ ಕಾಣಬೇಕೇ ಹೊರ್ತು, ಕೇಳಿ ಹೇಳಿ ವಿಚಾರಮಾತ್ರದಿಂದ ತಿಳಿಯುವದು ಶಕ್ಯವಲ್ಲ. ಆದರೂ ಅವುಗಳ ವಿವರವು ಧರ್ಮಶಾಸ್ತ್ರಕಾರರಿಂದ ಅಲ್ಲಲ್ಲಿ ವರ್ಣಿಸಲ್ಪಟ್ಟಿರುತ್ತದೆ. ಗುರುವಿನ ಹಸ್ತ ಮಸ್ತಕ ಸಂಯೋಗವೇ ವೇಧಾದೀಕ್ಷೆ ಎಂದು ಹೇಳಲ್ಪಟ್ಟಿರುತ್ತದೆ. ಕಾರಣ ಶರೀರವು ಇದರಿಂದ ಚಲನೆ ಹೊಂದಿ, ಅಲ್ಲಿ ಲಿಂಗವು ಪ್ರಜ್ವಲಿಸಲ್ಪಡುತ್ತದೆ. ಈ ಸ್ಥಿತಿಯುಂಟಾದ ಕೂಡಲೇ ಆ ಶರೀರದ ಪೂರ್ವಾಶ್ರಯವು ನಷ್ಟವಾಗಿ ಭಾವಲಿಂಗವು ಸ್ಥಾಪ್ಯವಾಗುತ್ತದೆ. ಗುರುಶಿಷ್ಯರ ಲೈಂಗಿಕ ಗುಣ

ಗಳು ಸರಿಯಾಗಿದ್ದರೆ, ಗುರುವಿನ ಹಸ್ತಸ್ಪರ್ಶದಿಂದ ಅವನ ಚೈತನ್ಯವು ಶಿಷ್ಯನಲ್ಲಿ ತಲೆದೋರಿ ಅವರಿಬ್ಬರಲ್ಲಿ ಸಾಮರಸ್ಯವು ಉತ್ಪನ್ನವಾಗುವದು ಶಕ್ಯವೆಂದು ಯೋಗಶಾಸ್ತ್ರದ ವಿಚಾರಗಳಿವೆ. ಈ ವಿಚಾರಗಳಿಗೆ ಅನುಸರಿಸಿ ಗುರುವಿನಿಂದ ಈ ವೇಧಾದೀಕ್ಷೆಯು ಮಾಡಲ್ಪಟ್ಟಿದೆ.

ಈ ಮೇರೆಗೆ ವೇಧಾದೀಕ್ಷೆಯಿಂದ ಕಾರಣ ಶರೀರದಲ್ಲಿ ಭಾವಲಿಂಗವು ಸ್ಥಾಪ್ಯವಾದ ಬಳಿಕ ಅದನ್ನು ಮಧ್ಯಶರೀರವಾದ ಸೂಕ್ಷ್ಮ ಶರೀರಕ್ಕೆ ತರವ ಕ್ರಿಯೆಯೇ ಮಂತ್ರದೀಕ್ಷೆ ಎನಿಸುವದು. ಈ ಕಾರ್ಯವು ಮಂತ್ರದ ಸಹಾಯದಿಂದ ಜರಗಿಸಲ್ಪಡುತ್ತದೆ. ಗುರುವು ಮಂತ್ರವನ್ನು ಕಿವಿಯೊಳಗಿಂದ ಉಪದೇಶಿಸತಕ್ಕದ್ದು ಮತ್ತು ಶಿಷ್ಯನು ಅದನ್ನು ಮನಸ್ಸಿನಿಂದ ಗ್ರಹಣ ಮಾಡಿ, ಅದನ್ನು ಒಳಕೊಳ್ಳತಕ್ಕದ್ದು. ಇದರಿಂದ ಅವನ ಭಾವಲಿಂಗವು ಸೂಕ್ಷ್ಮ ಶರೀರವನ್ನು ಆವರಿಸಿ, ಅದು ಸೂಕ್ಷ್ಮಲಿಂಗ ಅಥವಾ ಪ್ರಾಣಲಿಂಗವೆನಿಸಿಕೊಳ್ಳುವದು. ಹೀಗೆ ಸೂಕ್ಷ್ಮ ಶರೀರದಲ್ಲಿ ಮಂತ್ರದಿಂದ ಪ್ರಾಣಲಿಂಗ ಸ್ಥಾಪನೆಯಕ್ರಮವೇ ಮಂತ್ರದೀಕ್ಷೆ ಎನಿಸುವದು.

ಮುಂದೆ ಸೂಕ್ಷ್ಮಶರೀರವನ್ನು ಆವರಿಸಿದ ಮಂತ್ರರೂಪವಾದ ಈ ಪ್ರಾಣಲಿಂಗವನ್ನು ಬಾಹ್ಯದಲ್ಲಿ ಹೊರಪಡಿಸಿ ಶಿಷ್ಯನ ಹಸ್ತದಲ್ಲಿರುವ ಇಷ್ಟಲಿಂಗಕ್ಕೆ ಸಂಬಂಧಿಸುವ ಕ್ರಮವೇ ಕ್ರಿಯಾದೀಕ್ಷೆ ಎಂದೆನಿಸಿಕೊಳ್ಳುವದು. ಹೀಗೆ ಒಳಗಿನ ಸೂಕ್ಷ್ಮಲಿಂಗಕ್ಕೂ ಹೊರಗಿನ ಇಷ್ಟಲಿಂಗಕ್ಕೂ ಸಂಬಂಧಿಸುವ ಕ್ರಮದಲ್ಲಿ ಶಿಷ್ಯನ ಚಕ್ಷುವೇ ಮಹತ್ವದ್ದದೆ. ಶಿಷ್ಯನು ತನ್ನ ಚಕ್ಷುವಿನಿಂದ ಸ್ಥೂಲಲಿಂಗವನ್ನು ದೃಢ ಮತ್ತು ಏಕಾಗ್ರ ಚಿತ್ತದಿಂದನಿಟ್ಟಿಸಿ ಅದು ತನ್ನ ಪ್ರಾಣಲಿಂಗವೆಂದು ಭಾವಿಸುವದರಿಂದಲೇ ಈ ಎರಡೂ ಲಿಂಗಗಳು ಪರಸ್ಪರ ಸಂಬಂಧವನ್ನು ಹೊಂದಿ, ಆ ಸ್ಥೂಲ ಲಿಂಗದಲ್ಲಿ ಪ್ರಾಣದ ಕಳೆಯು ವೇಧಿಸಿಕೊಂಡು ಅದು ಇಷ್ಟಲಿಂಗವೆಂಬ ನಾಮವುಳ್ಳದ್ದಾಗುತ್ತದೆ. ಇದಕ್ಕೆ ಕ್ರಿಯಾದೀಕ್ಷೆ ಎಂದು ಹೇಳಲ್ಪಡುತ್ತದೆ.

ಈ ತತ್ವಗಳು ಮೇಲ್ಕಂಡ ವಚನದಲ್ಲಿ ಸಂಕ್ಷೇಪವಾಗಿ ವಿವರಿಸಲ್ಪಟ್ಟಿರುತ್ತದೆ. ಇದೊಂದು ಭಾವನಾ ಪ್ರಧಾನವಾದ ಧಾರ್ಮಿಕ ಕ್ರಿಯೆ ಇರುತ್ತದೆ. ಯಾವ ಧರ್ಮದಲ್ಲಿಯೂ ಕೂಡ ಅದರ ಬಾಹ್ಯಾ ಚರಣೆಗಳು ಭಾವನಾಮಯವಾಗಿರುತ್ತವೆ. ಭಾವನೆ ಇಲ್ಲದೆ ಹೋದರೆ, ಆಚರಣೆಗಳಲ್ಲಿ ಸತ್ವವೂ ಮಹತ್ವವೂ ಏನೂ ಉಳಿಯಲಾರವು. ವೀರಶೈವನು ದೀಕ್ಷೆಯನ್ನು ಹೊಂದುವ ಕಾಲಕ್ಕೆ ಈ ಮೂರೂ ಲಿಂಗಗನ್ನು ಒಳಕೊಳ್ಳುವ ಕ್ರಮ

ವನ್ನು ಅರಿತು ಕೊಂಡು ಆ ವಿಧಿಯನ್ನು ನೆರವೇರಿಸಿದ್ದಾದರೆ, ಅದರ ಸುಪ ರಿಣಾಮುಗಳು ಅವನ ಯಾವತ್ತು ಅಂತರಂಗ ಮತ್ತು ಬಹಿರಂಗವ್ಯಾಪಾ ರಗಳಲ್ಲಿ ದೃಗ್ಗೋಚರವಾಗಹತ್ತುತ್ತವೆ.

ವೀರಶೈವ ಧರ್ಮಶಾಸ್ತ್ರಕಾರರು ಮೇಲ್ಕಂಡ ರೀತಿಯಾಗಿ ಮೂರು ಲಿಂಗಗಳನ್ನು ಸ್ಥಾಪಿಸುವ ರೀತಿಯನ್ನು ಹೇಳಿ ಹಾಗೆಯೇ ಬಿಟ್ಟಿಲ್ಲ. ಈ ತರದ ಕ್ರಮುಗಳನ್ನು ಹೇಳಿ ಕೊಡುವದರಿಂದ ಮತ್ತು ಅದನ್ನು ಕೇಳಿ ಕೊಂಡು ಆಯಾ ಲಿಂಗಗಳು ತನ್ನಲ್ಲಿ ಬಂದವೆಂದು ಭಾವಿಸುವದರಿಂದ ಮಾತ್ರ ತಾನು ನಿಜವಾಗಿ ಲಿಂಗವುಳ್ಳವನಾದೆನೆಂದು ಭಾವಿಸುವದು ಬಹಳ ತಪ್ಪುಳ್ಳದ್ದದೆ. ಇದರಿಂದ ಮಾತ್ರ ಅವನು ಲಿಂಗಿಯಾಗಲಾರನು. ಈ ವಿಧಾ ನವನ್ನು ಹೊಂದಿದ ಬಳಿಕ, ಲಿಂಗವನ್ನು ತನ್ನ ಆಚಣೆಯಲ್ಲಿ ತರಲು ಯತ್ನಿ ಸಬೇಕು. ಈ ತರದ ಆಚಣೆಗಳಿಂದಲೇ ಅವನ ಮೂರೂ ಶರೀರಗಳಲ್ಲಿ ಮೂರು ಲಿಂಗಗಳು ದೃಢವಾಗುತ್ತ ಹೋಗುತ್ತವೆ. ಆ ಆಚರಣೆಗಳು ಅತ್ಯಂತ ಮಹತ್ವವಾದವುಗಳಿದ್ದು ಅವುಗಳನ್ನು ಪ್ರತಿಯೊಬ್ಬ ಲಿಂಗಿಯು ಪರಿಪಾಲಿಸತಕ್ಕದ್ದು. ಅವುಗಳ ವಿವರವು ೨೧ ದೀಕ್ಷೆಗಳಲ್ಲಿ ಮಾಡಲ್ಪಟ್ಟಿ ರುತ್ತದೆ.

**ಕ್ರಿಯಾದೀಕ್ಷೆ**:-ಕ್ರಿಯಾ ದೀಕ್ಷೆಯಲ್ಲಿ ಏಳು ದೀಕ್ಷೆಗಳು ಇರುತ್ತವೆ. ಅವುಯಾವವೆಂದರೆ, ಆಜ್ಞಾ, ಉಪಮಾ, ಸ್ವಸ್ತಿಕಾರೊಹಣ, ಕಲಶಾಭಿಷೇಕ ವಿಭೂತಿಪಟ್ಟ, ಲಿಂಗಾಯತ, ಮತ್ತು ಲಿಂಗ ಸ್ವಾಯತ.

ಈ ದೀಕ್ಷೆಗಳಲ್ಲಿ ಮೊದಲನೆಯ ಎರಡು ದೀಕ್ಷೆಗಳಾದ ಆಜ್ಞಾ ಮತ್ತು ಉಪಮಾ ಇವುಗಳಲ್ಲಿ ಗುರುವು ಶಿಷ್ಯನಿಗೆ ತಕ್ಕ ಬೋಧೆಯನ್ನು ಮಾಡುವ ದೇ ಮುಖ್ಯವಾಗಿರುತ್ತದೆ. ಶಿಷ್ಯನ ಮನಸ್ಸನ್ನು ಪರಮಾತ್ಮನತ್ತ ಮೊದಲು ಒಯ್ಯದ ಹೊರ್ತು, ಲಿಂಗಧಾರಣೆಯು ಅಶಕ್ಯವಾದದ್ದು. ಆದ್ದರಿಂದ ಆಜ್ಞಾ ದೀಕ್ಷೆಯಲ್ಲಿ ಗುರುವು ಶಿಷ್ಯನಿಗೆ ಜಡಮರ್ತ್ಯನಂತೆ ದುಷ್ಕರ್ಮಗ ಳನ್ನು ಆಚರಿಸ ಬೇಡವೆಂದು ಆಜ್ಞೆಯನ್ನು ಕೊಡುತ್ತಾನೆ. ಉಪಮಾ ದೀಕ್ಷೆ ಯಲ್ಲಿ ಪರಮಾತ್ಮನೆಂಬ ಶ್ರೇಷ್ಠ ವಸ್ತುವು ಅಷ್ಟಾವರಣ ಸ್ವರೂಪವಾಗಿ ಶಿಷ್ಯನ ಶರೀರವೆಲ್ಲ ಆವರಿಸಿರುತ್ತಾನೆಂದು ಹೇಳಿ, ಅವುಗಳನ್ನು ಅನುಸರಿಸ ಬೇಕೆಂದು ಬೋಧಿಸುತ್ತಾನೆ.

ಹೀಗೆ ಗುರುವು ಈ ಎರಡು ದೀಕ್ಷೆಗಳಲ್ಲಿ ಶಿಷ್ಯನು ಆಚರಿಸತಕ್ಕ ಸನ್ಮಾರ್ಗವನ್ನು ಬೋಧಿಸಿ ಮುಂದಿನ ದೀಕ್ಷಾ ಕ್ರಮುಗಳನ್ನು ನೆರವೇರಿಸು

ತ್ತಾನೆ. ಈ ಕ್ರಮಗಳಲ್ಲಿ ಮೂರು ವಿಭಾಗಗಳು ಮಾಡಲ್ಪಟ್ಟಿವೆ. ಅವು ಯಾವವೆಂದರೆ:--ಸ್ವಸ್ತಿಕಾರೋಹಣ, ಕಲಶಾಭಿಷೇಕ, ಮತ್ತು ವಿಭೂತಿ ಪಟ್ಟ. ಇವುಗಳ ವರ್ಣನೆಯನ್ನು ನಾನು ಈ ಸಂಚಿಕೆಯಲ್ಲಿ ಕೊಟ್ಟ ಸಂಗಮೇಶ್ವರ ವಚನದಲ್ಲಿ ವಾಚಕರು ನೋಡ ಬೇಕು. ಈ ಮೂರೂ ದೀಕ್ಷೆಗಳಲ್ಲಿ ಗುರುವು ಶಿಷ್ಯನನ್ನು ಲಿಂಗಧಾರಣ ವಿಧಿಗೆ ಪಾತ್ರಗೊಳಿಸುತ್ತಾನೆ. ಇವು ಕೇವಲ ವಿಧಿಗಳು ಇರುತ್ತವೆ.

ಹೀಗೆ ಐದು ದೀಕ್ಷೆಗಳಾದ ಬಳಿಕ ಲಿಂಗಾಯತ ಮತ್ತು ಲಿಂಗಸ್ವಾಯತ ಎಂಬ ದೀಕ್ಷೆಗಳು ಬರುತ್ತವೆ. ಲಿಂಗಾಯತ ದೀಕ್ಷೆಯಲ್ಲಿ ಗುರುವು ಶಿಷ್ಯನ ಕರಸ್ಥಲದಲ್ಲಿ ಪ್ರಾಣಲಿಂಗ ಕಳಾ ಚೈತನ್ಯ ಮೂರ್ತಿಯಾದ ಲಿಂಗದೇವನನ್ನು ಸ್ಥಾಪಿಸಿ ಅದನ್ನು ನಿಮಿಷಾರ್ಧವೂ ಅಗಲಬೇಡವೆಂದು ಗುರುವು ಶಿಷ್ಯನಿಗೆ ಬೋಧಿಸುತ್ತಾನೆ. ಈ ಸ್ಥಿತಿಯು ಉಂಟಾದ ಕೂಡಲೇ ಶಿಷ್ಯನ ಕುಂಡಲಿಯು ಜಾಗ್ರತವಾಗಹತ್ತುತ್ತದೆ. ಲಿಂಗಾಯತ ದೀಕ್ಷೆಯಿಂದ ಹೀಗೆ ಪ್ರಜ್ವಲಿಸಲ್ಪಟ್ಟ ಈ ಲಿಂಗವನ್ನು ಶಿಷ್ಯನು ತನ್ನ ಕರಣಾದಿಗಳಲ್ಲಿ ವ್ಯಾಪೃತ ಮಾಡುವದೇ ಲಿಂಗ ಸ್ವಾಯತ ದೀಕ್ಷೆ. ಎಂದರೆ ಲಿಂಗಾಯತ ದೀಕ್ಷೆಯಲ್ಲಿ ಉದ್ಭವಿಸಿದ ಲಿಂಗ ಕಳೆಯನ್ನು ಮತ್ತಿಷ್ಟು ಹೆಚ್ಚಿಗೆ ಒಳ ಹೊರಗೂ ದೃಢ ಪಡಿಸುವದೇ ಲಿಂಗಸ್ವಾಯತ ದೀಕ್ಷೆಯು. ಹೀಗೆ ಇದು ದೃಢಗೊಳ್ಳಬೇಕಾದರೆ ದಾಸೋಹಂಭಾವದಿಂದ ಅರ್ಪಣ ಭಾವಯುಕ್ತನಾಗಿ ಪ್ರಸಾದ ಸೇವನೆಯಿಂದ ಈ ಲಿಂಗ ಸ್ವಾಯತತ್ವವನ್ನು ತನ್ನಲ್ಲಿ ಉಂಟು ಮಾಡಿಕೊಳ್ಳತಕ್ಕದ್ದು.

ಈ ರೀತಿಯಾಗಿ ಕ್ರಿಯಾ ದೀಕ್ಷೆಯ ಏಳು ಭಾಗಗಳು ಇರುತ್ತವೆ. ಈ ದೀಕ್ಷೆಗಳಲ್ಲಿ ಶಿಷ್ಯನಲ್ಲಿ ಕ್ರಿಯೆಯೇ ಪ್ರಧಾನವಾಗಿದೆ. ಆದ್ದರಿಂದ ಇದು ಕ್ರಿಯಾ ದೀಕ್ಷೆ ಎಂದು ಹೇಳಲ್ಪಟ್ಟಿರುತ್ತದೆ.

**ಮಂತ್ರದೀಕ್ಷೆ**:-ಮಂತ್ರ ದೀಕ್ಷೆಯಲ್ಲಿಯೂ ೭ ವಿಧಗಳು ಇರುತ್ತವೆ. ಅವುಯಾವವೆಂದರೆ:— ಸಮಯ, ನಿಃಸಂಸಾರ, ನಿರ್ವಾಣ, ತತ್ವ, ಅಧ್ಯಾತ್ಮ, ಅನುಗ್ರಹ, ಸತ್ಯಶುದ್ಧ.

ಸಮಯ, ನಿಃಸಂಸಾರ, ಮತ್ತು ನಿರ್ವಾಣ ಈ ದೀಕ್ಷೆಗಳಲ್ಲಿ ಶಿಷ್ಯನು ಜಗತ್ತಿನಲ್ಲಿ ನಡೆಯುತ್ತಲಿರುವ ದುಷ್ಕರ್ಮಗಳಿಂದ ತನ್ನನ್ನು ದೂರ ಮಾಡಿಕೊಳ್ಳುವದೇ ಮುಖ್ಯವಾಗಿರುತ್ತದೆ. ಈ ದೀಕ್ಷೆಗಳ ಪ್ರಭಾವದಿಂದ ಅವನು ತನ್ನ ಮನಸ್ಸನ್ನು ಬಿಗಿ ಹಿಡಿದು ಸನ್ಮಾರ್ಗಾಚರಣೆಯಲ್ಲಿಯೇ ಸದಾ ಮಗ್ನ

ನಾಗಿರುವದು ಅತ್ಯಾವಶ್ಯಕವು ಇದು ಪ್ರಾಣಲಿಂಗವನ್ನು ತನ್ನ ಸೂಕ್ಷ್ಮ ಶರೀರದಲ್ಲಿ ದೃಢಪಡಿಸಲಿಕ್ಕೆ ಪ್ರಥಮ ಮಾರ್ಗವಾಗಿರುತ್ತದೆ.

ಸಮಯದೀಕ್ಷೆಯಲ್ಲಿ ವೀರಶೈವನು ತನ್ನ ಸಮಯ ಅಂದರೆ ತನ್ನ ಆಚರಣೆಗಾಗಿ ಧರ್ಮಶಾಸ್ತ್ರಕಾರರು ಯಾವಮಾರ್ಗವನ್ನು ಗೊತ್ತುಪಡಿಸಿರುವರೋ ಅದರಂತೆಯೇ ಸದಾ ನಡೆದು ಪರಿಶುದ್ಧನಾಗಿ ವರ್ತಿಸತಕ್ಕದ್ದು. ಈ ಪ್ರಕಾರದ ಆಚರಣೆಯಿಂದಲೇ ಅವನ ಮುಂದಿನ ದೀಕ್ಷೆಯಾದ ನಿಃಸಂಸಾರವು ಒದಗುತ್ತದೆ. ನಿಃಸಂಸಾರವೆಂದರೆ, ಯಾವ ವ್ಯವಹರಣೆಯಿಂದ ಮನಸ್ಸು ಮಲಿನವಾಗಿ ಪರಮಾತ್ಮನತ್ತ ಹರಿಯುವದಿಲ್ಲವೋ ಅದನ್ನು ಬಿಟ್ಟುಕೊಡುವದೇ ಇರುತ್ತದೆ. ಈ ನಿಃಸಂಸಾರದ ಪರಮಾವಧಿ ಸ್ಥಿತಿಯೇ ನಿರ್ವಾಣದೀಕ್ಷೆಯಾಗಿರುತ್ತದೆ. ಈ ದೀಕ್ಷೆಯಿಂದ ಶಿಷ್ಯನು ತನ್ನ ಮನಸ್ಸಿನ ಶುದ್ಧತೆಯನ್ನು ಅತ್ಯಂತವಾಗಿ ಬೆಳಸುತ್ತಾನೆ.

ಈ ಮೂರು ದೀಕ್ಷೆಗಳಾದತರುವಾಯ ತತ್ವದೀಕ್ಷೆ, ಅಧ್ಯಾತ್ಮದೀಕ್ಷೆ, ಮತ್ತು ಅನುಗ್ರಹ ದೀಕ್ಷೆ, ಎಂಬವು ಬರುತ್ತವೆ.

ತತ್ವದೀಕ್ಷೆಯಲ್ಲಿ ಶಿಷ್ಯನ ಶರೀರದಲ್ಲಿರುವ ತತ್ವಗಳ ಜ್ಞಾನವು ಮಾಡಿಕೊಡಲ್ಪಟ್ಟು, ಅವುಗಳನ್ನು ಪ್ರಣವಾಕ್ಷರಗಳಿಂದ ಹ್ಯಾಗೆ ನಿವೃತ್ತಿ ಮಾಡಬೇಕೆಂಬದರ ಕ್ರಮವು ಅರುಹಲ್ಪಡುವದು.

ಅಧ್ಯಾತ್ಮ ದೀಕ್ಷೆಯಲ್ಲಿ ಶರೀರದಲ್ಲಿರುವ ಚಕ್ರಗಳ ಜ್ಞಾನವೂ ಅವುಗಳಲ್ಲಿ ಆಯಾ ಲಿಂಗಗಳು ಹ್ಯಾಗೆ ನೆಲಿಸಿರುವವೆಂಬದರ ಬಗೆಯೂ ಉಪದೇಶಿಸಲ್ಪಡುವವು. ಅನುಗ್ರಹ ದೀಕ್ಷೆಯಲ್ಲಿ ಸಕೀಲಗಳ ಜ್ಞಾನವು ಮಾಡಿಕೊಡಲ್ಪಡುವದು.

ಈ ಮೇರೆಗೆ ಪೂರ್ವಸಿದ್ಧತೆಗಳಾದ ಬಳಿಕ ಶಿಷ್ಯನಿಗೆ ಸತ್ಯ ಶುದ್ಧ ದೀಕ್ಷೆಯು ಅನುಗ್ರಹಿಸಲ್ಪಡುವದು. ಇದರಿಂದ ಶಿಷ್ಯನ ಮನ ಮತ್ತು ಪ್ರಾಣಗಳು ಲಿಂಗಮಯವಾಗುವವು. ಇದು ಪ್ರಾಣಲಿಂಗವು, ಲಿಂಗವು ಪ್ರಾಣದಲ್ಲಿ ಸ್ಥಾಪ್ಯವಾಗುವ ರೀತಿಯು.

ಈ ಏಳು ದೀಕ್ಷೆಗಳಿಂದ ಶಿಷ್ಯನ ಸೂಕ್ಷ್ಮ ಶರೀರವು ಮಂತ್ರಮಯವಾಗುತ್ತದೆ. ಇದರಿಂದ ಅವನ ಮೊದಲಿನ ಪ್ರಾಣನ ಗುಣಗಳು ನಷ್ಟಹೊಂದಿ ಪ್ರಾಣಲಿಂಗವು ಅವನಲ್ಲಿ ಧೃಢವಾಗುತ್ತದೆ.

**ವೇಧಾದೀಕ್ಷೆ**:–ಇದೇಮೇರೆಗೆ ವೇಧಾದೀಕ್ಷೆಯಲ್ಲಿಯೂ ೭ ದೀಕ್ಷೆಗಳು ಇರುವವು. ಅವು ಯಾವವೆಂದರೆ:– ಏಕಾಗ್ರ, ದೃಢವ್ರತ, ಪಂಚೇಂದ್ರಿಯಾ

ರ್ಪಿತ, ಅಹಿಂಸಾ, ಲಿಂಗನಿಷ್ಠಾ, ಮನೋರ್ಲಯ, ಮತ್ತು ಸದ್ಯನ್ಮುಕ್ತಿ.

ಈ ಎಲ್ಲ ದೀಕ್ಷೆಗಳು ಶಿಷ್ಯನ ಕಾರಣಶರೀರದ ಮೇಲೆ ಅತ್ಯಂತವಾಗಿ ಪರಿಣಾಮ ಮಾಡುತ್ತವೆ. ಇವುಗಳಲ್ಲಿ ಮೊದಲನೆಯದಾದ ಏಕಾಗ್ರದೀಕ್ಷೆಯಲ್ಲಿ ಶಿಷ್ಯನು ಭವಿಮಾರ್ಗವನ್ನು ಬಿಟ್ಟುಕೊಟ್ಟು ಭಕ್ತಮಾರ್ಗವನ್ನು ಏಕಮನಸ್ಸಿನಿಂದ ಅನುಸರಿಸುತ್ತಾನೆ. ದೃಢವ್ರತ ದೀಕ್ಷೆಯಿಂದ ಶಿಷ್ಯನು ತನ್ನ ಆಚರಣೆಗಳನ್ನು ಎಂಥ ಕಷ್ಟಗಳು ಬಂದರೂ ಕೂಡ ಅವುಗಳನ್ನು ಬಿಡಲಾರನು. ಪಂಚೇಂದ್ರಿಯಾರ್ಪಿತದಲ್ಲಿ ಮನುಷ್ಯನು ತನ್ನ ಕರಣಂಗಳಿಗೆ ಸಂಬಂಧಪಟ್ಟ ಪದಾರ್ಥಗಳನ್ನು ಲಿಂಗಾರ್ಪಿತ ಭಾವದಿಂದ ಸ್ವೀಕರಿಸುತ್ತಾನೆ.

ಅಹಿಂಸಾ ದೀಕ್ಷೆಯಲ್ಲಿ, ಶಿಷ್ಯನು ಸರ್ವಪ್ರಾಣಿಗಳನ್ನು ತನ್ನಂತೆಯೇ ಭಾವಿಸಿ, ಅವುಗಳನ್ನು ಪ್ರೀತಿಸುವದೇ ಮುಖ್ಯವಾಗಿರುತ್ತದೆ. ಲಿಂಗನಿಷ್ಠೆಯಲ್ಲಿ ತನ್ನ ವಿಶ್ವಕುಟುಂಬಿಯಾದ ಮನಸ್ಸನ್ನು ಲಿಂಗದಲ್ಲಿ ದೃಢಪಡಿಸುತ್ತಾನೆ.

ಮನೋರ್ಲಯದೀಕ್ಷೆಯಲ್ಲಿ ನಿಃಕಲ ಪರಶಿವ ಲಿಂಗದಲ್ಲಿ ತನ್ನ ಮನಸ್ಸನ್ನು ಮುಳುಗಿಸುವದೇ ಮುಖ್ಯ ಕಾರ್ಯವಿರುತ್ತದೆ. ಮತ್ತು ಸದ್ಯನ್ಮುಕ್ತಿಯಲ್ಲಿ ಯಾವತ್ತು ಭ್ರಾಂತುಗಳನ್ನು ಬಿಟ್ಟುಕೊಟ್ಟು ನಿಃಕಲ ಪರತತ್ವಮೂರ್ತಿಯೇ ತಾನಾಗಿ ವ್ಯವಹರಿಸುತ್ತಾನೆ.

ಈ ಮೇರೆಗೆ ಶಿಷ್ಯನು ೨೧ ದೀಕ್ಷೆಗಳ ಜ್ಞಾನವನ್ನು ಅರಿತು ಮೂರು ಶರೀರಗಳಲ್ಲಿಯ ಪೂರ್ವಾಶ್ರಯಗಳನ್ನು ಕಳೆದು ಇಷ್ಟ ಪ್ರಾಣಭಾವವೆಂಬ ಲಿಂಗಗಳನ್ನು ತನ್ನಲ್ಲಿ ನೆಲೆಗೊಳಿಸತಕ್ಕದ್ದು. ಈ ಪ್ರಕಾರ ನೆಲೆಗೊಳಿಸುವದೇ ಕ್ರಿಯಾ, ಮಂತ್ರ, ವೇಧಾ ದೀಕ್ಷೆಗಳಾಗಿರುವವು.

ಈ ಮೇರೆಗೆ ವೀರಶೈವರಲ್ಲಿ ದೀಕ್ಷೆ ಎಂದರೆ ಏನೋ ಒಂದು ಚಿನ್ಹವನ್ನು ಹ್ಯಾಗೋ ಏನೋ ಕಟ್ಟಿಕೊಂಡು ಲಿಂಗಾಯತರೆನ್ನಿಸಿಕೊಳ್ಳುವದು ಅಲ್ಲ. ಅದರಲ್ಲಿ ಆತ್ಮಸುಧಾರಣೆಯ ಅಂಕುರಗಳು ಬೇರೂರಿರುತ್ತವೆ. ಆ ಅಂಕುರಗಳನ್ನು ಹ್ಯಾಗೆ ಬೆಳೆಯಿಸಬೇಕೆಂಬದರ ಜ್ಞಾನವನ್ನು ಶಿಷ್ಯನು ಗುರುವಿನಿಂದ ಅರಿತುಕೊಂಡು ಹಾಗೆ ಆಚರಿಸುವದು ಆತನ ಕರ್ತವ್ಯವು

ಸಂಕ್ಷೇಪವಾಗಿ ವಿವರಿಸಬೇಕಾದರೆ, ಕ್ರಿಯಾದೀಕ್ಷೆಯಲ್ಲಿ ಗುರುವಿನ ಆಜ್ಞೆಯನ್ನು ಮನ್ನಿಸಿ, ಲಿಂಗಧಾರಣೆಯ ಯುಕ್ತ ವಿಧಿಗಳನ್ನು ಹೊಂದಿ, ಲಿಂಗವನ್ನು ತನ್ನ ಪ್ರಾಣವೆಂದು ತಿಳಿದು ಆಚರಿಸತಕ್ಕದ್ದು.

[೧] ಆಜ್ಞಾ, ಉಪಮಾ [೨] ಸ್ವಸ್ತಿಕಾ, ಕಲಶಾಭಿಷೇಕ, ವಿಭೂತಿಪಟ್ಟ, [೩] ಲಿಂಗಾಯತ, ಲಿಂಗಸ್ವಾಯತ.

ಮಂತ್ರದೀಕ್ಷೆಯಲ್ಲಿ ಭಕ್ತನು ಸಂಸಾರದ ದುಷ್ಟ ವ್ಯಾಪಾರಗಳನು ಬಿಟ್ಟುಕೊಟ್ಟು, ತತ್ವಗಳ, ಚಕ್ರಗಳ, ಸಕೀಲಗಳ ಜ್ಞಾನವನ್ನು ಮಾಡಿ ಕೊಂಡು ಸತ್ಯಶುದ್ಧನಾಗಿ ಆಚರಿಸತಕ್ಕದ್ದು.

[೧] ಸಮಯ, ನಿಃಸಂಸಾರ, ನಿರ್ವಾಣ [೨] ತತ್ವ, ಅಧ್ಯಾತ್ಮ, ಅನುಗ್ರಹ [೩] ಸತ್ಯಶುದ್ಧ

ವೇಧಾದೀಕ್ಷೆಯಲ್ಲಿ ಮನಸ್ಸನ್ನು ಏಕಾಗ್ರಗೊಳಿಸಿ ಪರಮಾತ್ಮನಿಗೆ ತನ್ನನ್ನು ಅರ್ಪಿಸಿ, ಅಹಿಂಸಾಧರ್ಮವನ್ನು ಆಚರಿಸುತ್ತ ಮನಸ್ಸನ್ನು ಲಿಂಗದಲ್ಲಿ ನಿಲಿಸಿ, ಸದ್ಯನ್ಮುಕ್ತನಾಗಿವ್ಯವಹರಿಸತಕ್ಕದ್ದು.

[೧] ಏಕಾಗ್ರ, ದೃಢವ್ರತ [೨] ಪಂಚೇಂದ್ರಿಯಾರ್ಪಿತ [೩] ಅಹಿಂಸಾ, [೪] ಲಿಂಗನಿಷ್ಠೆ, ಮನೋರ್ಲಯ [೫] ಸದ್ಯನ್ಮುಕ್ತಿ.

ಈ ಮೇರೆಗೆ ಲಿಂಗಧಾರಣೆಯಲ್ಲಿ ೨೧ ದೀಕ್ಷೆಗಳು ಅಡಕವಾಗಿವೆ. ಈ ದೀಕ್ಷೆಗಳ ಮರ್ಮವನ್ನು ಅರಿತು ಆಚರಿಸುವದು ಪ್ರತಿಯೊಬ್ಬ ವೀರಶೈವನ ಕರ್ತವ್ಯವು.

ಎಷ್ಟೋ ಜನರು ಪ್ರತಿವರುಷ ಒಂದೊಂದು ದೀಕ್ಷೆಯನ್ನು ಮಾಡಿಕೊಳ್ಳುತ್ತ ೨೧ ದೀಕ್ಷೆಗಳನ್ನು ಹೊಂದಿ ಮುಕ್ತರಾಗಬೇಕೆಂದು ತಿಳಿದು ಹಾಗೆ ಬಹು ಹಣವ್ಯಯ ಮಾಡಿದ ಉದಾಹರಣೆಗಳು ಅನೇಕಉಂಟು. ಆದರೆ ಇದು ಕ್ರಮವಲ್ಲ. ದೀಕ್ಷೆಯು ಒಂದೇ ಇರುತ್ತದೆ. ಆ ದೀಕ್ಷೆಯಲ್ಲಿ ಶಿಷ್ಯನಿಗೆ ಮಾಡತಕ್ಕ ಕ್ರಿಯೆಗಳಲ್ಲಿ ಮತ್ತು ಉಪದೇಶಗಳಲ್ಲಿ ೨೧ ಭಾಗಗಳನ್ನು ವೀರಶೈವ ಧರ್ಮಶಾಸ್ತ್ರಕಾರರು ಮಾಡಿದ್ದಾರೆ. ಅವುಗಳಂತೆ ವರ್ತಿಸಿದ್ದಾದರೆ, ಶಿಷ್ಯನ ಮೂರೂ ಶರೀರಗಳಲ್ಲಿ ಲೈಂಗಿಕ ಗುಣಗಳು ಬೆಳೆಯುತ್ತ ಹೋಗುತ್ತವೆ. ಈ ಉದ್ದೇಶವು ಸಫಲವಾಗಬೇಕೆಂದು ದೀಕ್ಷಾವಿಧಿಯು ವೀರಶೈವರಲ್ಲಿ ಜರಗಿಸಲ್ಪಡುತ್ತದೆ.

# ಯೋಗ.

(ಲೇಖಕ:— ಶ್ರೀ ಮಡಿವಾಳಪ್ಪ ಹೆಡ್ಡಮಾಸ್ತರ ಸಾಸನೂರ ಜಿ॥ ವಿಜಾಪುರ.)

'ಯೋಗ' ವೆಂಬುದು ಧರ್ಮದ ಅನುಭವಾತ್ಮಕ ಭಾಗವನ್ನು ಸೂಚಿಸುವದೊಂದು ಸಂಸ್ಕೃತಶಬ್ದವು. ಸಂಪೂರ್ಣ ಆರೋಗ್ಯ ಮತ್ತು ನೈತಿಕ ಆತ್ಮಿಕ, ಪೂರ್ಣತೆಗಳನ್ನು ನಾವು ಸಾಧಿಸಬೇಕಾದರೆ, ಅದು ನಮ್ಮ ನೈತಿಕ ಹಾಗು ಶಾರೀರಿಕ ಪ್ರಕೃತಿಯನ್ನವಲಂಬಿಸಿರುತ್ತದೆ. ಈ ಪ್ರಕೃತಿಯ ನಿಯಮುಗಳನ್ನು ಅನುಸರಿಸುವಂತೆ ನಮ್ಮನ್ನು ಮುಂದು ಮಾಡುವದೇ ಯೋಗದ ಮೊದಲನೆಯ ಸಂಬಂಧ. 'ಯೋಗ' ಶಬ್ದವು ಪಾಶ್ಚಾತ್ಯರಾಷ್ಟ್ರಗಳಲ್ಲಿ ಬಹುತಪ್ಪಾದ ಅರ್ಥದಲ್ಲಿ ಉಪಯೋಗಿಸಲ್ಪಡುತ್ತದೆ. ಎಷ್ಟೋ ಲೇಖಕರು ಇದನ್ನು ಗಾರುಡಿಗತನ, ಸುಷುಪ್ತಿವಿದ್ಯೆ, ಹಿಪ್ನಾಟಿಝುಮ್ ಕಪಟತಂತ್ರಗಳೇ ಮೊದಲಾದ ತೀರ ತಪ್ಪಾದ ಅರ್ಥಗಳಲ್ಲಿ ಉಪಯೋಗಿಸಿದ್ದಾರೆ. ಯೋಗಮಾಡುವವನು ಯೋಗಿಯು; ಆದರೆ 'ಯೋಗ'ವೆಂಬ ಶಬ್ದವನ್ನು ಕೇಳಿದೊಡನೆ ಅವರಿಗೆ ಯಾವನೊಬ್ಬ ಗಾರುಡಿಗನ, ತಂತ್ರಗಾರನ, ಫಕೀರನ, ಅಥವಾ ಜಾದು ಸಾಧನೆ ಮಾಡುವವನ ನೆನಪಾಗುತ್ತದೆ. ಆದರೆ ಭಾರತೀಯರ ಧರ್ಮ ಗ್ರಂಥಗಳನ್ನು ಉದಾಹರಣಾರ್ಥ-ಭಗವದ್ಗೀತೆಯನ್ನು ಅಭ್ಯಾಸಮಾಡಿದ ಪ್ರತಿಯೊಬ್ಬನಿಗೆ ಅದರಲ್ಲಿಯ ಪ್ರತಿಯೊಂದು ಅಧ್ಯಾಯವು ಇಂಥ ಗಾರುಡಿಗತನವನ್ನು ಸಮರ್ಥಿಸದೆ, ಅದು ಅಂತಿಮ ಸತ್ಯವನ್ನು ತಿಳಿಸುವದಕ್ಕಾಗಿಯೂ, ಅತ್ಯುಚ್ಚ ಜ್ಞಾನಲಾಭಕ್ಕೋಸ್ಕರವಾಗಿಯೂ, ಇರುವದೆಂದು, ಹಾಗು 'ಯೋಗಿ'ಯೆಂದರೆ ಬೇರೆಬೇರೆ ಸಾಧನೆಗಳಿಂದ ಧರ್ಮದ ಉಚ್ಚತಮ ಆದರ್ಶವನ್ನು ಮುಟ್ಟಿದವನಿರುವನೆಂದು ಹೊಳೆಯದೆ ಇರಲಾರದು. ಭಗವದ್ಗೀತೆಯಂತೆ ಆತ್ಮಾ ಹಾಗೂ ಪರಮಾತ್ಮನ ಐಕ್ಯವೇ ಉಚ್ಚತಮ ಆದರ್ಶವು. ವೀರಶೈವರಲ್ಲಿ ಶಿವಯೋಗದ ಉದ್ದೇಶವಾದರೂ ಅದೇ ಇರುತ್ತದೆ.

'ಯುಜ್' ಅಂದರೆ ಕೂಡಿಸು ಎಂಬ ಸಂಸ್ಕೃತ ಧಾತುವಿನಿಂದ ಈ ಶಬ್ದವು ಬಂದಿದೆ. ಇಂಗ್ಲಿಷ ಭಾಷೆಯಲ್ಲಿಯ 'Yoke' ಎಂಬ ಶಬ್ದವಾದರೂ, ಇದೇ ಧಾತುವಿನಿಂದ ಬಂದಿದೆ. 'ಯುಜ್' ಧಾತುವಿನ ಅರ್ಥವು,

ಒಂದನ್ನು ಮತ್ತೊಂದಕ್ಕೆ ಕೂಡಿಸೋಣವೆಂದಾಗುತ್ತದೆ. 'ಲಕ್ಷ್ಯ' ವಸ್ತುವಿನಂತೆ ಯೋಗಾಭ್ಯಾಸಕ್ಕೆ ಬೇಕಾಗುವ ಶ್ರಮವಾದರೂ, ಮಾನಸಿಕ ಅಥವಾ ಶಾರೀರಿಕವೆಂದು ಇಬ್ಬಗೆಯಾಗಿರುವದು. ಪೂರ್ಣ ಆರೋಗ್ಯಸಾಧನೆಯೇ ನಮ್ಮ ಗುರಿಯಾಗಿದ್ದರೆ ಎಷ್ಟೋ ಸಾಧನೆಗಳಿಂದ ಇದನ್ನು ಸಾಧಿಸುವ ಮಾನಸಿಕ ಮತ್ತು ಶಾರೀರಿಕ ಯತ್ನಗಳಿಗೆ ಯೋಗವೆನ್ನುತ್ತೇವೆ. ಇದರಂತೆಯೇ ಮಾನಸಿಕ ಶಕ್ತಿಗಳ ಬೆಳೆವಣಿಗೆಯೇ ಉದ್ದೇಶವಿದ್ದರೂ ಅದಕ್ಕೆ ಬೇಕಾಗುವ ಹೆಣಗಾಟಗಳಿಗೆ ಯೋಗವೆನ್ನುತ್ತೇವೆ. ಆತ್ಮಸಂಯಮನ, ಈಶ್ವರನೊಡನೆ ಆತ್ಮನಸಂಯೋಗ, ಆಧ್ಯಾತ್ಮಿಕ ಪೂರ್ಣತೆಗಳ ಸಿದ್ಧಿಗೋಸುಗ ಅವಶ್ಯವಾದ ನೈತಿಕ ಶಿಕ್ಷಣವೆಂಬೀ ಅರ್ಥದಲ್ಲಿ ಸಹ 'ಯೋಗ' ಶಬ್ದವು ಉಪಯೋಗಿಸಲ್ಪಡುತ್ತದೆ. ಯೋಗಶಾಸ್ತ್ರದ ಭಿನ್ನ ಬಿನ್ನ ತರಹಗಳನ್ನೊಳಗೊಂಡ ಮತ್ತು ಯೋಗಸಾಧನೆಯಿಂದ ಸಾಧ್ಯವಾದ ಅನೇಕ ಆದರ್ಶಗಳಿಂದ ತುಂಬಿದ ಎಷ್ಟೋ ಪುಸ್ತಕಗಳು ರಚಿಸಲ್ಪಟ್ಟಿರುತ್ತವೆ.

ಯೋಗದ ಹಾದಿಯನ್ನು ಹಿಡಿಯಲಿಚ್ಛಿಸುವ ಪ್ರತಿಯೊಬ್ಬನಿಗೆ ತಾಳ್ಮೆ ಮತ್ತು ದೃಢ ಸಂಕಲ್ಪಗಳು ಅತ್ಯವಶ್ಯವಾದವುಗಳು. ತಾಳ್ಮೆಯಿಲ್ಲದವರು, ಸತ್ಯಜ್ಞಾನವನ್ನು ಸಾಧಿಸಿಕೊಳ್ಳಲರಿಯರು. ಶೋಧಕ ಬುದ್ಧಿಯಿಂದ ಅಥವಾ ಕ್ಷಣಿಕ ಉತ್ಸಾಹದಿಂದ ಪ್ರೇರಿತರಾದವರು ಒಳ್ಳೆ ಪರಿಣಾಮಗಳನ್ನು ಕಾಣಲಾರರು. ಈ ತಪ್ಪು ಅವರದೇ ಇರುವದು. ಅದನ್ನು ಗುರುಗಳ ತಲೆಯ ಮೇಲೆ ಹೊರಿಸಲಾಗದು. ಆದೇ ನಿಯಮಗಳನ್ನು ಒಳ್ಳೇ ತಿಳುವಳಿಕೆಯಿಂದ ಮತ್ತು ಯೋಗ್ಯರೀತಿಯಿಂದ ಮನಮುಟ್ಟಿ ಮಾಡಿದರೆ ಅವರಿಂದ ಅಚ್ಚರಿಗೊಳ್ಳುವ ಪರಿಣಾಮಗಳು ಕಂಡುಬರುವವು. ಶಾರೀರಿಕ ಮತ್ತು ಮಾನಸಿಕ ಆಚರಣೆಗಳಲ್ಲಿ ಹಾದಿತೋರಿಸುವಂಥ ಸಜೀವ ಶಿಕ್ಷಕನ ಶಿಕ್ಷಣವನ್ನು ಅನುಸರಿಸುವ ಪ್ರತಿಯೊಬ್ಬ ವಿದ್ಯಾರ್ಥಿಗೆ ಒಳ್ಳೇ ಪರಿಣಾಮಗಳು ಕಂಡುಬರುತ್ತವೆ. ಯೋಗಾಭ್ಯಾಸ ಮಾಡಲಿಚ್ಛಿಸುವವರನ್ನು ಮೂರು ಭಾಗಗಳಾಗಿ ವಿಭಾಗಿಸಬಹುದು.

೧ ಹುಟ್ಟುಯೋಗಿಗಳು:— ಹಿಂದಿನ ಜನ್ಮದಲ್ಲಿ ಯೋಗವನ್ನಾಚರಿಸಿ, ಈಗ ಜನ್ಮವೆತ್ತಿದ ಕೆಲವರು, ಬಾಲ್ಯದಿಂದಲೇ ಅಮಾನುಷ ಕೃತಿಗಳನ್ನು ಹೊರಗೆಡಹುತ್ತಾರೆ. ಅವರ ಸ್ವಾಭಾವಿಕ ಬಲವು ಶುದ್ಧಾಚರಣೆಯ ಕಡೆಗೆ ಇರುತ್ತದೆ. ಯಾಕಂದರೆ ಯೋಗ್ಯ ಚರಿತಾರ್ಥ ಮತ್ತು ನಿ

ದೋರ್ಷ ವಿಚಾರಗಳೇ ಅವರಲ್ಲಿ ಹೆಚ್ಚಳವನ್ನು ಪಡೆದಿದ್ದು, ಮನಸ್ಸನ್ನು ಅಂಕೆಯಲ್ಲಿಟ್ಟುಕೊಂಡಿರುವರು. ವಿಷಯ ಸುಖಗಳು ಮತ್ತು ಸಾಧಾರಣ ಜನರ ಮನಸ್ಸನ್ನು ಮರುಳುಗೊಳಿಸುವ ವಿಷಯಗಳು ಅವರಲ್ಲಿ ಎಡೆಗೊಂಡಿರುವದಿಲ್ಲ. ಜೀವಿತದ ಎಲ್ಲ ಸುಖಸಂಪತ್ತಿನಿಂದ ಸುತುಗಟ್ಟಲ್ಪಟ್ಟಿದ್ದರೂ ಅವರು, ಗುರುತಿಲ್ಲದ ನಾಡಿನಲ್ಲಿ ಪರಕೀಯರಿದ್ದಂತೆ ಇರುತ್ತಾರೆ. ಇಂಥ ವ್ಯಕ್ತಿಗಳ ಮಾನಸಿಕ ಸ್ಥಿತಿಯನ್ನು ಕಂಡುಹಿಡಿಯುವದು ಕಷ್ಟದಮಾತು. ಅವರನ್ನು ವೈದ್ಯರಿಡೆಗೆ ಕರೆದೊಯ್ದು ಹೆಚ್ಚಿನ ಔಷಧೋಪಚಾರಗಳನ್ನು ಮಾಡಿಸಿದರೆ ಏನೂ ಗುಣತೋರದೆ, ಅದಕ್ಕೆ ವಿಪರೀತವಾಗಿ ಕೆಡಕು ಪರಿಣಾಮವೇ ಕಂಡು ಬರುವದು. ಆಕರ್ಷಣ ಶಕ್ತಿಯಿಂದ ಅವರು ಒಂದಿಲ್ಲೊಂದು ದಿನ ಯಾವನೊಬ್ಬಯೋಗಿಯ ಸಹವಾಸವನ್ನು ಪಡೆಯುವರು ತಮ್ಮ ಆಂತರಿಕ ಭಾವನೆಯು ಹಂಬಲಿಸುತ್ತಿದ್ದುದನ್ನು ಅವನಲ್ಲಿ ಕಂಡು ಹಿಡಿದು, ಸುಖ ಸಮಾಧಾನವನ್ನು ಹೊಂದುವರು. ಆ ಯೋಗಿಯ ಶಿಕ್ಷಣವು ಅವರ ಮನಸಿನಮೇಲೆ ಅಚ್ಚೊತ್ತಿದಂತೆ ಆಗುತ್ತದೆ. ಆ ಯೋಗಿಯ ಮೇಲ್ವಿಚಾರಣೆಯಿಂದ ತಮ್ಮ ಯೋಗಾಭ್ಯಾಸವನ್ನು ಪ್ರಾರಂಭಿಸುತ್ತಾರೆ. ಈ ಅಧ್ಯಯನವು ಅವರಿಗೆ ಸುಲಭವೂ ಸ್ವಾಭಾವಿಕವೂ ಆಗಿ ತೋರಿ ಬೇಗನೆ ಅತ್ಯುತ್ತಮ ಸಿದ್ಧಿಗಳನ್ನು ಹೊಂದುವರು. ಈ ಬಗೆಯಾಗಿ ಅವರು ತಮ್ಮ ಪೂರ್ವಜನ್ಮದಲ್ಲಿಯೋಗವನ್ನು ಎಲ್ಲಿಗೆ ಬಿಟ್ಟಿದ್ದರೋ ಅಲ್ಲಿಂದಲೇ ಬಾಲ್ಯದಿಂದ ಆರಂಭಮಾಡುತ್ತಾರೆ. ಹಾದಿಯಲ್ಲಿ ತಮಗಡರುವ ಎಡರುಗಳನ್ನು ಎದೆಗೊಟ್ಟುಕಾದಿ, ಮನಮುಟ್ಟಿದುಡಿದು, ತೀವ್ರವಾಗಿಯೂ, ನಿಯಮಿತವಾಗಿಯೂ ಆಧ್ಯಾತ್ಮಿಕ ಜೀವನದಮೇಲು ಗುರಿಯನ್ನುಮುಟ್ಟುವರು. ಜಗತ್ತಿನಲ್ಲಿ ಯಾವದೂ ಅವರನ್ನು ತಡೆಯದು. ಯಾಕಂದರೆ ಜ್ಞಾನಾಭಿಲಾಷೆಯೇ ಅವರಲ್ಲಿಅಷ್ಟುದಟ್ಟವಾಗಿರುವದು

೨ ಅರ್ಧ ಪ್ರಬುದ್ಧ ಆತ್ಮಗಳು:— ಮುಂದಿನ ಅನುಭವದ ಹಂಬಲದಿಂದ ಸತ್ಯಮಾರ್ಗಶೋಧನೆಗೋಸುಗ ಇವರು ಎಷ್ಟೋ ಬಗೆಯಾಗಿ ಹೆಣಗಾಡುವರು. ಅವರುಪ್ರತಿಯೊಂದು ಮೆಟ್ಟಲನ್ನು ಶೋಧಕ ಬುದ್ಧಿಯಿಂದ ನಿರೀಕ್ಷಿಸಿ, ಸತತ ಪ್ರಯೋಗ ಮಾಡುವದರಲ್ಲಿಯೇ ಬಹು ಶಕ್ತಿಯನ್ನೂ ಎಷ್ಟೋ ವೇಳೆಯನ್ನೂ ವೆಚ್ಚಮಾಡುತ್ತಾರೆ. ಈ ಬಗೆಯಾಗಿ ಪೂರ್ವದಲ್ಲಿ ಪಡೆದ ಸಂಸ್ಕಾರದಿಂದೊಡಗೂಡಿದ ಇಂಥ ಅರ್ಧ ಪ್ರಬುದ್ಧರು ದೈವಯೋಗದಿಂದ ಯೋಗಿಗಳ ಸಹವಾಸವನ್ನು ಹೊಂದಿದರೆ ದ

ಥನಿಶ್ಚಯ ಹಾಗು ತಿಳುವಳಿಕೆಗಳಿಂದ ಈ ಜನ್ಮದಲ್ಲಿಯೇ ಸಿದ್ಧಿಯನ್ನು ಪಡೆಯುವರು. ಆದರೆ ಮೊದಲನೆಯ ತರಗತಿಯವರಿಗಿಂತ ಇವರು ಸಾವಕಾಶವಾಗಿ ಮುಂದುವರಿಯುವರು.

೩. ಸತ್ಯಶೋಧನೆಯ ಕಾರ್ಯವನ್ನು ಹಾಗು ಯೋಗಾಚರಣೆಯನ್ನು ಈ ಜನ್ಮದಲ್ಲಿಯೇ ಮೊದಲುಮಾಡುವ ಅಜಾಗ್ರತರು ಈ ವರ್ಗದಲ್ಲಿ ಸೇರುತ್ತಾರೆ. ಅವರು ಬಾಲ್ಯದಿಂದಲೂ ನಿರ್ವಿರೋಧವಾಗಿ ವಿಷಯವಾಸನೆಯಿಂದ ಜಗ್ಗಲ್ಪಡುತ್ತಾರೆ. ಅವರು ಯೋಗಾಚರಣೆಯನ್ನು ಮಾಡಹತ್ತಿದರೆ, ಅದರ ನಿಯಮಗಳನ್ನು ಅನುಸರಿಸುವದು ಕಷ್ಟವಾಗಿ ಹಲವು ಎಡರುಗಳಿಗೀಡಾಗುವರು. ಅವರ ಪರಿಸ್ಥಿತಿಯು ಸಹ ಸಾಧನೆಗೆ ಅನುಕೂಲವಾಗಿರುವದಿಲ್ಲ. ಹೀಗಾಗಿ ಅವರು ಎಷ್ಟು ಹೆಣಗಾಡಿದರೂ ಕೊನೆಗಾಣುವದು ದುಸ್ತರವಾಗಿರುವದು. ಅವರ ದೇಹಸ್ಥಿತಿಯಾದರೂ ಒಳ್ಳೇದಾಗಿರುವದಿಲ್ಲ. ಅವರ ಮನಸ್ಸೂ ಚಂಚಲವಾಗಿರುವದು ಅವರು ಎಷ್ಟೋ ಆಧಿ-ವ್ಯಾಧಿಗಳಿಂದ ಬಳಲುತ್ತಿರುವರು. ಅವರಲ್ಲಿ ದೃಢಸಂಕಲ್ಪವಿರುವದಿಲ್ಲ. ಇಂದ್ರಿಯನಿಗ್ರಹವಂತೂ ಅವರಿಗೆ ಅಸಂಭವವೇ. ಅವರು ಪರಿಸ್ಥಿತಿಗನುಸರಿಸಿ ತಮ್ಮ ಜೀವನಗತಿಯನ್ನು ಸಹ ಹೆಚ್ಚುಕಡಿಮೆ ಮಾಡಬೇಕಾಗುವದು. ಈ ಎಲ್ಲ ಪ್ರತಿಬಂಧಗಳಿಗೆ ಅವರು ಎದೆಗೊಡಬೇಕಾಗುವದರಿಂದ, ಬಹು ಕಾಲದವರೆಗೆ ಆಚರಣೆ ಮಾಡಿದ ಮೇಲೆ ಸ್ವಲ್ಪ ಪರಿಣಾಮವು ಕಂಡುಬರುತ್ತದೆ. ಆದರೂ ಇಂಥ ಜನರು ಸಾವಕಾಶವಾಗಿ ನಿಯಮಿತವಾದ ಹಠಯೋಗಾಭ್ಯಾಸದಿಂದ ತಮ್ಮ ಇಚ್ಛಾಶಕ್ತಿಯನ್ನು ಬೆಳಿಸಿದರೆ, ಪ್ರಾಣಾಯಾಮ ಮಾಡಿ ತಮಗೊದಗುವ ಸಂಕಟಗಳನ್ನು ದೂರಮಾಡಿದರೆ ಈ ಜನ್ಮದಲ್ಲಿಯೇ ಅವರು ತಮ್ಮ ಶಾರೀರಿಕಆರೋಗ್ಯವನ್ನು ತಮಗೆ ಸರಿದೋರಿದಂತೆ ತಿರುವಬಲ್ಲರು. ಮತ್ತು ಅಲ್ಪ-ಸ್ವಲ್ಪ ಯೌಗಿಕ ಶಕ್ತಿಯನ್ನು ದೊರಕಿಸಬಲ್ಲರು. "ಹಠಯೋಗ" ವು ಬಹುತರ ಇಂಥ ಜನರಿಗೇ ಉಪಯೋಗವುಳ್ಳದ್ದಾಗಿರುತ್ತದೆ. ಇವರು ಪ್ರಾಣಾಯಾಮ ಸಾಧನೆಯಿಂದ ತಮ್ಮ ಅಂಕೆಯಲ್ಲಿಟ್ಟುಕೊಳ್ಳಬಲ್ಲರು. ಬರಬರುತ್ತ ಇವರು ರಾಜಯೋಗಾಭ್ಯಾಸಕ್ಕೆ ಯೋಗ್ಯವಾದ ಕ್ಷೇತ್ರವನ್ನು ಉಂಟುಮಾಡಿಕೊಳ್ಳುವರು. ರಾಜಯೋಗಾಭ್ಯಾಸದಿಂದ ಅವರ ಆತ್ಮನಲ್ಲಿ ಅಡಗಿಕೊಂಡಿದ್ದ ಅನೇಕ ಅದ್ಭುತಶಕ್ತಿಗಳು ಬೈಲಿಗೆ ಬರುವವು.

ಉಳಿದ ಎಲ್ಲ ಶಾಸ್ತ್ರಗಳಂತೆ ಯೋಗಶಾಸ್ತ್ರವು ಸಹ ಅನುಭವದ ಆ

ಧಾರದ ಮೇಲೆ ಕಟ್ಟಲ್ಪಟ್ಟದ್ದೆಂದು ನಮಗೆ ಕಂಡುಬರುತ್ತದೆ. ಅವರು ಉಪಯೋಗಿಸಿದಂಥ ಬಗೆಯಾದರೂ ಪ್ರಕೃತಿಯ ಧರ್ಮಗಳ ಶೋಧನೆಯಲ್ಲಿ ಆಧುನಿಕ ವೈಜ್ಞಾನಿಕರು ಉಪಯೋಗಿಸುವಂತಹ, ಅಂದರೆ ನಿರೀಕ್ಷಣ ಆ ಮೇಲೆ ಪ್ರಯೋಗ, ವೆಂಬ ಈ ರೀತಿಯು ಸಂಪೂರ್ಣವಾಗಿ ಹೊಸದೆಂದು ಪಾಶ್ಚಿಮಾತ್ಯರು ತಿಳಿಯುತ್ತಾರೆ. ಆದರೆ ಸತ್ಯತಃ ಬಹುಕಾಲದಹಿಂದೆಯೇ ಭರತಖಂಡದ ಋಷಿವರ್ಯರು, ಅದನ್ನು ಕಂಡುಹಿಡಿದದ್ದಲ್ಲದೆ, ಪ್ರಚಾರದಲ್ಲಿ ಸಹ ತಂದರು. ಸೂಕ್ಷ್ಮನಿರೀಕ್ಷಣ ಸತತ ಪ್ರಯೋಗಗಳಿಂದ ಸೃಷ್ಟಿಯ ಸೂಕ್ಷ್ಮಶಕ್ತಿಗಳನ್ನೂ ಶಾರೀರಿಕ, ಮಾನಸಿಕ, ಮತ್ತು ಆತ್ಮಿಕ ನಿಯಮಗಳನ್ನೂ ಹುಡುಕಿ ತೆಗೆದರು. ಈ ಪ್ರಕಾರ ತಮ್ಮ ಅನುಭವ ಹಾಗು ನಿರೀಕ್ಷಣೆಗಳಿಂದ ದೊರಕಿಸಿದ ಸತ್ಯಗಳನ್ನು ಅವರು ಗ್ರಂಥರೂಪವಾಗಿ ಬರೆದಿಟ್ಟರು; ಸಮಾಜಕ್ಕೆ ತಿಳಿಹೇಳಿದರು. ಮತ್ತು ಶಿಷ್ಯವೃಂದಕ್ಕೆ ಮನವರಿಕೆ ಮಾಡಿಕೊಟ್ಟರು. ಆತ್ಮನ ಅಥವಾ ಪರಮಾತ್ಮನ ವಿಷಯಕ್ಕೆ ಏನೊಂದು ಊಹಿಸುವ ಪೂರ್ವದಲ್ಲಿ ಅದರ ಅರಿವನ್ನು ಅವರು ಮಾಡಿಕೊಂಡಿರುತ್ತಿದ್ದರು. ಸಾಧಕನಿಗೆ ಏನೊಂದು ಹೇಳುವ ಮೊದಲು ತಾವು ಸ್ವತಃ ಅದನ್ನು ಸಾಧಿಸಿ ನೋಡುತ್ತಿದ್ದರು. ಮತ್ತು ಸಾಧನೆಯಿಂದ ನಿಯಮಿತ ಪರಿಣಾಮಗಳನ್ನು ಕಂಡು ಹಿಡಿಯುತ್ತಿದ್ದರು. ಧರ್ಮವೆಂಬುದು ಇವೆಲ್ಲವನ್ನು ಒಳಕೊಂಡಿತ್ತು. ಯಾಕಂದರೆ ಭರತಖಂಡದಲ್ಲಿ ಧರ್ಮವು ಯಾವ ಕಾಲದಲ್ಲಿಯೂ ವ್ಯವಹಾರದಿಂದ ಬೇರೆಯಾಗಿಲ್ಲ. ಆತ್ಮಿಕ ಸುಧಾರಣೆಗೋಸುಗ ವ್ಯಕ್ತಿಯ ದಿನದ ವ್ಯವಹಾರಗಳಲ್ಲಿ ಉಪಯೋಗಿಸುವ ನಿಯಮಬದ್ಧತ್ವವೇ ಯೋಗವೆಂಬ ಹೆಸರನ್ನು ಹೊಂದಿದೆ. ಆದ್ದರಿಂದ ಅದರಲ್ಲಿ ನೈತಿಕ, ಧಾರ್ಮಿಕ, ವ್ಯವಹಾರಿಕ ಶ್ರೇಷ್ಠ ಆಚರಣೆಗಳು ಕೂಡಿವೆ. ಈ ದೃಷ್ಟಿಯಿಂದ ಯೋಗವು ಪೂರ್ವಕಾಲದಲ್ಲಿ ಆಚರಿಸಲ್ಪಟ್ಟದ್ದರಿಂದಲೇ ನಮ್ಮ ದೇಶವು ಆಗ ಶ್ರೇಷ್ಠಸ್ಥಿತಿಯನ್ನು ಹೊಂದಿತು.

# ಶಿವಯೋಗಾಚರಣೆ.

ಲೇಖಕ:- ಶ್ರೀಯುತ ಮುರಿಗೆಪ್ಪ ಗುರುಸಾತಪ್ಪ ಕಡಿ ಹುನಗುಂದ
ಇವರು ಕಳುಹಿಸಿದ ಒಂದು ಹಳೇ ಗ್ರಂಥದಿಂದ

ಆದಿ ಶ್ರೀಪರಶಿವನ- ಪಾದವನು ಮರೆದು ಮನ।
ಹೋದ ಪರಿಯಲ್ಲಿ ನಡೆದು ನುಡಿದಾಡುವ।
ಕ್ರೋಧಿಗೆಲ್ಲಿಯದು ಶಿವಯೋಗ ॥೧॥
ಲಿಂಗಪೂಜೆಯನೊಲ್ಲ- ದಂಗ ಶೃಂಗರದೊಳಗೆ।
ಹಿಂಗದೆ ಹೊತ್ತುಗಳೆದು ಲಿಂಗವ ಮರೆದ।
ಭಂಗಗೆಲ್ಲಿಯದೋ ಶಿವಯೋಗ ॥೨॥
ಗಡ್ಡ ಮಂಡೆಯ ಬೆಳಸಿ-ದೊಡ್ಡ ಪಾಗುವಸುತ್ತಿ।
ಅಡ್ಡ ನೆರೆತೋರೆ ಧರಣಿಯೊಳು ತಿರಿದುಂಬ।
ಹೆಡ್ಡಗೆಲ್ಲಿಯದೊ ಶಿವಯೋಗ ॥೩॥
ಮಂಡೆಯ ಬೋಳಿಸಿಕೊಂಡು-ಕಂಡಕಂಡಲಿ ತಿರಿದುಂಡು॥
ಕಂಡಕಂಡವರ ಜರಿದು ಅಂಜಿಸಿಕೊಂಬ।
ಭಂಡಗೆಲ್ಲಿಯದೊ ಶಿವಯೋಗ ॥೪॥
ಒರಿಸಿ ದುರ್ಲಿಪಿಯ ತನು- ಕರದೊಳಿಷ್ಟವ ಕೊಟ್ಟ॥
ಪರಮ ಶ್ರೀಗುರುವ ನರನೆಂದು ಭಾವಿಸುವ।
ನರಕಿಗೆಲ್ಲಿಯದೊ ಶಿವಯೋಗ ॥೫॥
ತನ್ನೊಳಗೆ ಮಾಯೆ ಸಂ-ಪೂರ್ಣವಾಗಿರುತಿದ್ದು।
ಮನ್ನೆಯರ ಮೇಲೆ ಮಾಯಿಕವ ಕಲ್ಪಿಪ।
ಕುನ್ನಿಗೆಲ್ಲಿಯದೊ ಶಿವಯೋಗ ॥೬॥
ಏಣಾಂಕಧರ ತನ್ನ-ಪ್ರಾಣವೆಂದು ತಿಳಿಯದೆ।
ಪ್ರಾಣವೇ ಹೇಮ ಕಾಮಿನಿಯರೆಂದೆಂಬ।
ಕೋಣಗೆಲ್ಲಿಯದೊ ಶಿವಯೋಗ ॥೭॥
ಇಷ್ಟಲಿಂಗವ ಗಳದಿ-ಕಟ್ಟಿಕೊಂಡಿರುತಿರ್ದು
ಸೃಷ್ಟಿಯೊಳಗಿರುವ ಪರದೈವಕೆರಗುವ।

ಭ್ರಷ್ಟಗೆಲ್ಲಿಯದೊ ಶಿವಯೋಗ ॥೮॥
ಕೊಡುವವರ ಹೊಗಳುತ್ತ - ಕೊಡದವರ ಬೊಗಳುತ್ತ।
ಪೊಡವಿಯೊಳು ಶ್ರೇಷ್ಠ ಒಡೆಯರೆಂದೆನಿಸುವ।
ಹುಡುಗಗೆಲ್ಲಿಯದೊ ಶಿವಯೋಗ ॥೯॥
ಅನ್ನ ವಸ್ತ್ರಂಗಳಿಗೆ-ಅನ್ಯರನು ಬೋಧಿಸುತ।
ತನ್ನದುರ್ಘಟವ ಸಂತವಿಡು ತಿರುತಿಹ।
ಚುನ್ನಗೆಲ್ಲಿಯದೊ ಶಿವಯೋಗ ॥೧೦॥
ಒಡೆಯರಿಹ ಮನೆಯುಮುಂ-ಗಡೆಗೆ ಭಿಕ್ಷಾಯೆನಲು।
ಮುಡಿವಾಗಿ ನೋಡಿ ಭೂತಹೊಡೆದಂತಿರುವ।
ಬಡುಕಗೆಲ್ಲಿಯದೊ ಶಿವಯೋಗ ॥೧೧॥
ಬೆಚ್ಚಾದೆ ಬೆದರಾದೆ-ನೀಚಮಾನಿನಿಯರಾ।
ಉಚ್ಚೆಯಾ ಬಚ್ಚಲೊಳು ಬಿದ್ದು ಹೊರಳುವ।
ಹುಚ್ಚಗೆಲ್ಲಿಯದೊ ಶಿವಯೋಗ ॥೧೨॥
ಜಡೆಯ ಮುಡಿಯನೆ ತಾಳ್ದು-ಮಡದಿಯರ ಕಾಲಡಿಯು।
ಬುಡಬುಡನೆ ಹೊರಳಿ ಕಪಿಯಾಟವಾಡುವ।
ಜಡಗೆಲ್ಲಿಯದೊ ಶಿವಯೋಗ ॥೧೩॥
ಎಲ್ಲ ಶಬ್ದಂಗಳನು-ಬಲ್ಲೆನೆಂದೆನುತಲಿ।
ಎಲ್ಲರ ನುಡಿಯ ಕಟ್ಟಿ ತನ್ನೊಳು ಮೆರೆವ।
ಖುಲ್ಲಗೆಲ್ಲಿಯದೊ ಶಿವಯೋಗ ॥೧೪॥
ಮಾಹೇಶ್ವರರ ಮುಂದೆ-ತಾ ಹಿಡಿದ ವ್ರತವನ್ನು।
ವಾಹಿಯುಲಿ ಬಿಟ್ಟು ತನ್ನಸುವ ಹೊರೆವ ಸಂ।
ದೇಹಿಗೆಲ್ಲಿಯದೊ ಶಿವಯೋಗ ॥೧೫॥
ಅಮ್ಮ ಅಕ್ಕಾ ಎಂದು-ನೇಮದೊಳು ಕರೆವಾತ।
ಅಮ್ಮನನ ಸಲೆಯಪ್ಪಿ ಕೆಮ್ಮನೆ ಕೆಡುತಿಹ।
ತಿಮ್ಮಗೆಲ್ಲಿಯದೊ ಶಿವಯೋಗ ॥೧೬॥
ರೂಪೇಂದ್ರಿಯಂಗಳಿಗೆ-ತಾ ಪರಿದು ವಿಷಯದೊಳು।
ಆ ಪರಶಿವನ ನೆನೆಹ ಮನಕೆ ತಾರದ।
ಪಾಪಿಗೆಲ್ಲಿಯದೊ ಶಿವಯೋಗ ॥೧೭॥
ಕ್ರೂರವಿಷಯುಗಳೆಂಬ-ವಾರುಧಿಯ ನಡುವಿದ್ದ

ಸಾರಶರಣರನು ಸಳಿದಾಡುತಿಹ ಸಂ।
ಸಾರಿಗೆಲ್ಲಿಯದೊ ಶಿವಯೋಗ ॥೧೮॥
ದೇಶದೇಶವ ತಿರುಗಿ-ಹೇಸದೆಲ್ಲರ ಬೇಡಿ।
ಕಾಸಗಂಟಿಕ್ಕಿ ತಾ ವಿರಕ್ತನು ಯೆಂಬ।
ಹೇಸಿಗೆಲ್ಲಿಯದೊ ಶಿವಯೋಗ ॥೧೯॥
ಎಲ್ಲಾ ಪುರಾತನರು-ಸೊಲ್ಲಿದವಚನಗಳೊಳು।
ಅಲ್ಲಿಗೊಂದೊಂದು ಕಲಿತೆಲ್ಲರ ಪಳಿವ।
ಪುಳುವಿಗೆಲ್ಲಿಯದೊ ಶಿವಯೋಗ ॥೨೦॥
ಮುಂದೆ ಶರಣು ಮಾಡಿ-ಹಿಂದಿರುಗಿ ನಿಂದಿಸಿಯರ।
ವಿಂದ ಸಖನ ತನುಜಗೆ ವಶವಾಗಿರುವ।
ಹಂದಿಗೆಲ್ಲಿಯದೊ ಶಿವಯೋಗ ॥೨೧॥
ಭೂತೇಶನವರುಗಳ-ಜಾತಿಸೂತಕವೆತ್ತಿ।
ಖ್ಯಾತಿಯಿಂ ನುಡಿದು ಕರ್ಪುರಕೇಡಾಗುವ।
ಪಾತಕನಿಗುಂಟೆ ಶಿವಯೋಗ ॥೨೨॥
ಮೃಡನಿತ್ತ ದ್ರವ್ಯವನು-ಮೃಡಗರ್ಪಿಸದೆಕೊಂಡು।
ಒಡಲನನುಗಾಲ ಪೊರೆದು ಜೀವಿಸುತಿಹ।
ತುಡಗಗೆಲ್ಲಿಯದೊ ಶಿವಯೋಗ ॥೨೩॥
ತನು ಗುಣಂಗಳ ಕೆಡದೆ-ಮನಗುಣಂಗಳ ಬಿಡದೆ।
ಅನುಭಾವಿ ಎಂದು ಸರ್ವರೊಳು ಗುಸುರುವ।
ಬಿನುಗಗೆಲ್ಲಿಯದೊ ಶಿವಯೋಗ ॥೨೪॥
ಅಸಮ ಶ್ರೀಗುರುವಿನಾ-ಎಸೆವ ಕರದೊಳುಪುಟ್ಟಿ।
ವಸುಧಿಯೊಳು ಪಿತನ ಪೆಸರನ್ನು ಪೇಳುವ॥
ಹುಸಿಕಗೆಲ್ಲಿಯದೊ ಶಿವಯೋಗ ॥೨೫॥
ಕರಣಾದಿ ಗುಣಗಳನು-ಪರಿದು ಈಡಾಡದೆ।
ಚರಲಿಂಗವೆಂದು ಧರೆಯೊಳು ಚರಿಸುತಿಹ।
ದುರುಳಗೆಲ್ಲಿಯದೊ ಶಿವಯೋಗ ॥೨೯॥
ಹರನವಂ ಶಿಕರಾದ-ಚರಲಿಂಗಮೂರ್ತಿಗಳ।
ಪರಿತೋಷದಿಂದ ಶಿವನೆಂದು ನಂಬದ।
ಮರುಳಗೆಲ್ಲಿಯದೊ ಶಿವಯೋಗ ॥೨೭॥

ಮದಗಳೆಂಟರ ನೆಲೆಯ-ಹದವುಜತ್ತದೆ ನಾನೆ।
ಸದುಗುಣಿಯೆಂದು ಜಗದೊಳು ಸಲೆತಿರುಗುವ।
ಮದಡಗೆಲ್ಲಿಯದೊ ಶಿವಯೋಗ ॥೨೮॥
ಸಟೆಯುನ್ನು ಬಳಸುತ್ತ-ದಿಟವನತಿಗಳೆವುತ್ತ।
ನಿಟಲಾಕ್ಷ ನಡಿಯ ನಂಬಿನಂಬದೆ ಬರಿಯ।
ಕುಟಿಲಗೆಲ್ಲಿಯದೊ ಶಿವಯೋಗ ॥೨೯॥
ಆಚಾರ ತಪ್ಪಿ ಮೇಲಾ-ಚಾರವನು ಪಿಡಿದು।
ನೀಚರಂದದೊಳು ಘಟವ ರಕ್ಷಿಸುತಿಪ್ಪ ರ।
ಕೂಚಗೆಲ್ಲಿಯದೊ ಶಿವಯೋಗ ॥೩೦॥
ಆಶೆಯು ಒಳಗಿರುತಿರಲು-ನಿರಾಕನಂದದೊಳು।
ವೇಷವನು ತಾಳಿಬಕನಂತೆ ಚರಿಸುವ।
ದೋಷಿಗೆಲ್ಲಿಯದೊ ಶಿವಯೋಗ ॥೩೧॥
ಕರಮನಂಗಳ ಮೇಲೆ-ಹರತಾನೆ ನೆಲಿಸಿರಲು।
ದೊರಕೊಳ್ಳದೆನಗೆ ಶಿವ ಕೃಪೆಯೆಂದೆಂಬ।
ಕುರುಬಗೆಲ್ಲಿಯದೊ ಶಿವಯೋಗ ॥೩೨॥
ಎಲ್ಲರೊಳಗೆ ಬಿನ್ನಹ-ವಿಲ್ಲದೊಲ್ಲೆನು ಎಂದು।
ಎಲ್ಲರ ತೊಲಗಿ ಮೆಲ್ಲನಾಗಿ ಬೇಡುವ।
ಖುಲ್ಲಗೆಲ್ಲಿಯದೊ ಶಿವಯೋಗ ॥೩೩॥
ಅಂಗಗುಣಗಳ ತಿಳಿದು-ಸಂಗವ ದೆಡೆಯಲ್ಲಿಹ।
ಲಿಂಗದಲಿ ಮನವ ನಿಲಿಸಿ ಸತ್ಯದೊಳಿರೆ।
ಹಿಂಗದಿಹುದು ಆ ಶಿವಯೋಗ ॥೩೪॥
ವಿದ್ಯೆಬುದ್ಧಿಗಳನ್ನು-ಪೊರ್ದಿಸಿದ ಗುರುವಿಗು
ಪದ್ರವನು ಮಾಡಿ ತನ್ನನೆ ಮೆರೆಯುತಿಹ ।
ಕ್ಷುದ್ರಗೆಲ್ಲಿಯದೊ ಶಿವಯೋಗ ॥೩೫॥
ಅಂದಿನಾ ಶರಣರಿಗೆ-ಇಂದಿನವರಾರು ಸರಿ।
ಎಂದು ಸಂತೋಷದಿಂದ ನಂಬದೆ ಇಹ।
ಮಂದಮತಿಗುಂಟೆ ಶಿವಯೋಗ ॥೩೬॥
ಅಂಗದವ ಗುಣವಿರುತ-ಲಿಂಗಕ್ಕೆ ಸಹಭೋಜ।
ನಂಗಳ ಮಾಡಿ ಲಿಂಗಾಂಗಿಯೆಂಬ ಭವ।

ಭಂಗಿಗೆಲ್ಲಿಯದೊ ಶಿವಯೋಗ ॥೩೭॥
ಕರುಣದಿಂ ಗುರುವಿತ್ತ-ಪರಮಲಿಂಗವ ಹೃದಯ।
ಸರಸಿಜದೊಳಗೆ ನೆಲೆಗೊಳಿಸಿ ನೆನೆಯಲು।
ದೊರೆಕೊಂಬುದವಗೆ ಶಿವಯೋಗ ॥೩೮॥
ಸತ್ತು ಚಿತ್ತಾನಂದವೆ-ಕರ್ತು ಶಿವಲಿಂಗವೆಂ।
ಬರ್ಥವ ತಿಳಿದು ಅರ್ಥಿಯಿಂದ ಜಪಿಸಲು।
ಹತ್ತೆ ಸಾರುವದು ಶಿವಯೋಗ ॥೩೯॥
ಆರಿಂದಲಾದೆನಾ-ನಾರಿಂದ ಬೆಳೆದೆ ನಾ।
ನಾರಿಂದಲೆನಗೆ ಐಕ್ಯವೆಂದರಿಯದ।
ಚೋರಗೆಲ್ಲಿಯದೊ ಶಿವಯೋಗ ॥೪೦॥
ಶರಿರವಾಸನೆಯೊಳಗೆ- ಧರೆ ಹೇಮ ಕಾಮಿನಿಯ।
ಸ್ಮರಿಸುತ್ತ ಮನದಿ ಪ್ರಣವಾಕ್ಷರವ ಮರೆವ।
ನರಕಿಗೆಲ್ಲಿಯದೊ ಶಿವಯೋಗ ॥೪೧॥
ತನುವ ಮಹ ಗುರುವಿಂಗೆ-ಮನವ ಘನಲಿಂಗಕ್ಕೆ।
ಮನಶುದ್ಧದಿಂದ ಧನವ ಜಂಗಮಕಿತ್ತ।
ಅನಘನಿಗೆ ಉಂಟು ಶಿವಯೋಗ ॥೪೨॥
ಅಂಗಲಿಂಗದ ಭೇದ-ದಿಂಗಿತವ ನೆರೆತಿಳಿದು।
ಮಾಂಗಲ್ಯನಾಗಿ ನಿರವಯದಿ ಮನನಿಂದ।
ಲಿಂಗೈಕ್ಯಗುಂಟು ಶಿವಯೋಗ ॥೪೩॥
ಜೀವಭಾವವ ತೊರೆದು-ದೇವರ ದೇವನನು।
ಸಾವಧಾನದೊಳ ಭಜಿಸುವ ಮಹಿಮನಿಗೆ।
ಆವಾಗಳುಂಟು ಶಿವಯೋಗ ॥೪೪॥
ಗುರು ಚನ್ನಬಸವೇಶ-ಚರಣಗಳ ಸಲೆ ನೆನೆವ।
ವರತ್ರಿವಿಡಿಯಾರ್ಥವ ಪೇಳಿ ಕೇಳ್ವರ।
ದೊರವುದಂತವರ್ಗೆ ಶಿವಯೋಗ ॥೪೫॥

**ಇಂತೀ ಶಿವಯೋಗಾಚರಣೆ ತ್ರಿವಿಡಿ**

**ಸಮಾಪ್ತ**

1-4



ಬದಾಮಿ ಹತ್ತರ ಇರುವ ಪಟ್ಟದಕಲ್ಲಿನಲ್ಲಿಯ ವಿರೂಪಾಕ್ಷ ದೇವಾಲಯದೊಳಗಿನ
ಪರಮಾತ್ಮನ ತಾಂಡವನೃತ್ಯದ ಮೂರ್ತಿಯು.

# ತಾಂಡವನೃತ್ಯ

ಲೇಖಕ:- ಶ್ರೀಯುತ ಮಡಿವಾಳಪ್ಪ ನೀಲಪ್ಪ ಮಿಣಜಿಗಿ ವಿಜಾಪುರ
(ವಿದ್ಯಾರ್ಥಿ ಸ್ಕೂಲ ಆಫ್ ಆರ್ಟ್ಸ)

ನಾವು ಇಲ್ಲಿ ಕೊಟ್ಟ ಚಿತ್ರವು ಪರಮಾತ್ಮನ ತಾಂಡವನೃತ್ಯವನ್ನು ತೋರಿಸುತ್ತದೆ. ಈ ಚಿತ್ರವು ಬದಾಮಿ ಹತ್ತರವಿರುವ ಪಟ್ಟದಕಲ್ಲಿನಲ್ಲಿಯ ವಿರೂಪಾಕ್ಷ ದೇವಾಲಯದಲ್ಲಿ ಕಲ್ಲಿನ ಮೇಲೆ ಕೊರೆದದ್ದಿರುತ್ತದೆ. ಪಟ್ಟದ ಕಲ್ಲು ಮತ್ತು ಅದಕ್ಕೆ ೬ ಮೈಲುಗಳ ಮೇಲೆ ಇರುವ ಐಹೊಳೆಯು ಕರ್ನಾಟಕದಲ್ಲಿ ಐತಿಹಾಸಿಕ ಪ್ರಸಿದ್ಧಸ್ಥಾನಗಳು. ಇಲ್ಲಿಯೇ ಚಾಲುಕ್ಯರು ಮೊದಲಿಗೆ ರಾಜ್ಯವಾಳುತ್ತಿದ್ದರು. ಇವರು ಪಟ್ಟದಕಲ್ಲಿನಲ್ಲಿ ರಾಜ್ಯಾರೋಹಣ ಹೊಂದುತ್ತಿದ್ದದರಿಂದ ಆ ಸ್ಥಳಕ್ಕೆ ಪಟ್ಟದಕಲ್ಲು ಎಂಬ ಹೆಸರು ಬಂದದಹಾಗೆ ತೋರುತ್ತದೆ. ಈ ಯಾವತ್ತು ಸ್ಥಳಗಳಲ್ಲಿ ಬಹು ಸುಂದರವಾದ ಕಟ್ಟಡಗಳು ಇನ್ನೂ ಇರುತ್ತವೆ. ಇವು ಬಹು ಪುರಾತನ ಕಾಲದವು. ಪೂರ್ವದ ಚಾಲುಕ್ಯರಾಜರು ದೇವಾಲಯಗಳನ್ನು ಕಟ್ಟಿಸುತ್ತಿದ್ದ ರೀತಿಯನ್ನು ಇಲ್ಲಿ ಕಂಡುಹಿಡಿಯಬಹುದು. ಈ ದೇವಾಲಯಗಳು ಬಹುತರವಾಗಿ ೬ ನೇ ಶತಮಾನದಿಂದ ೮ ನೇ ಶತಮಾನದವರಗಿನವು ಇರುತ್ತವೆ ಪಟ್ಟದಕಲ್ಲಿನ ದೇವಾಲಯಗಳಲ್ಲಿ ವಿರೂಪಾಕ್ಷನ ಗುಡಿಯು ಬಹಳ ದೊಡ್ಡದೂ ಸುಂದರವೂ ಇರುತ್ತದೆ. ಇದು ೮ ನೇ ಶತಮಾನದಲ್ಲಿ ಕಟ್ಟಲ್ಪಟ್ಟಿರುತ್ತದೆ.

ಇಲ್ಲಿ ತೋರಿಸಿದ ಪರಮಾತ್ಮನ ಚಿತ್ರವು ಎಷ್ಟು ಸುಂದರವಾಗಿರುತ್ತದೆಂಬದನ್ನು ವಾಚಕರು ಕೂಡಲೆ ಕಂಡುಹಿಡಿಯಬಹುದು. ಪಾಶ್ಚಿಮಾತ್ಯರು ತಮ್ಮ ಮೂರ್ತಿಗಳಲ್ಲಿ ದೃಶ್ಯಜಗತ್ತಿನ ಸೌಂದರ್ಯದ ರೀತಿಗಳನ್ನು ತೋರಿಸುವದುಂಟು. ಆದರೆ ಹಿಂದೂಜನರು ತಮ್ಮವುಗಳಲ್ಲಿ ಧಾರ್ಮಿಕ ಸೌಂದರ್ಯದ ರೀತಿಗಳನ್ನು ತೋರಿಸುವದುಂಟು. ಪಾಶ್ಚಿಮಾತ್ಯರಿಂದ ನಿರ್ಮಿಸಲ್ಪಟ್ಟ ವಿಗ್ರಹಗಳು ಅತ್ಯಂತ ಸೌಂದರ್ಯಯುಕ್ತ ಸ್ತ್ರೀ ಪುರುಷರಂತೆ ಇರಬಹುದು. ಆದರೆ ಅವುಗಳು ಮನುಷ್ಯನ ಮನಸ್ಸನ್ನು ವಿಷಯಾಸಕ್ತತೆಗೆ ಹರಿಯುವಂತೆ ಮಾಡುತ್ತವೆ. ಒಂದು ಪ್ರದರ್ಶನಾಲಯದಲ್ಲಿಯ ಅವರ ಮೂರ್ತಿಗಳನ್ನು ನೋಡಿದರೆ, ಇದೇ ಪರಿಣಾಮವು ಮನಸ್ಸಿನ ಮೇಲೆ ಆಗುತ್ತದೆ. ಆದರೆ ಹಿಂದೂ ದೇವಾಲಯಗಳಲ್ಲಿ ಕಾಣುವ

ಮೂರ್ತಿಗಳು ಈ ಭಾವನೆಯನ್ನು ಎಂದೂ ಹುಟ್ಟಿಸಲಾರವು. ಅವುಗಳ ಮುಖಮುದ್ರೆಗಳಲ್ಲಿ ಒಂದುತರದ ಭವ್ಯ ಧಾರ್ಮಿಕ ತೇಜಸ್ಸು ಮೂಡಿರುತ್ತದೆ. ಈ ಸಂಗತಿಯನ್ನು ಇಲ್ಲಿ ಕೊಟ್ಟ ಮೂರ್ತಿಯಲ್ಲಿ ಬಹುಸ್ಪಷ್ಟವಾಗಿ ಕಾಣಬಹುದು.

ತಾಂಡವನೃತ್ಯವು ಪರಮೇಶ್ವರನ ಲೀಲೆಗಳಲ್ಲಿ ಒಂದಾಗಿದೆ. ಈ ಯಾವತ್ತು ಲೀಲೆಗಳಲ್ಲಿ ಧಾರ್ಮಿಕ ಗರ್ಭಿತಾರ್ಥವಿರುತ್ತದೆ. ಇವುಗಳಲ್ಲಿ ಪರಮಾತ್ಮನಿಗೂ ಜಗತ್ತಿಗೂ ಇರುವ ಸಂಬಂಧವು ಬಹುತರವಾಗಿ ತೋರಿಸಲ್ಪಟ್ಟಿರುತ್ತದೆ. ತಾಂಡವನೃತ್ಯವಾದರೂ ಹೀಗೆಯೇ ಇರುತ್ತದೆ ಇದು ಜಗತ್ತಿನ ರಚನೆಯ ಕ್ರಮವನ್ನು ಅರುಹುತ್ತದೆ. ಈ ನೃತ್ಯವನ್ನು ಮಾಡುತ್ತಿರುವ ಪರಮಾತ್ಮನಿಗೆ ನಟರಾಜನೆಂಬ ಹೆಸರೂ ಇರುತ್ತದೆ.

ನಾವು ಇಲ್ಲಿ ಕೊಟ್ಟ ಚಿತ್ರದಲ್ಲಿ ಪರಮಾತ್ಮನು ಒಬ್ಬ ಸಣ್ಣ ಬಾಲಕನ ಮೇಲೆ ನಿಂತುಕೊಂಡು ನರ್ತನವನ್ನು ಮಾಡುತ್ತಿರುವ ಹಾಗೆ ತೋರಿಬರುತ್ತದೆ. ಈ ಬಗ್ಗೆ ಪೌರಾಣಿಕ ಕಥೆಯು ಕೆಳಗೆ ಬರೆದ ಮೇರೆಗೆ ಇದೆ. ಪರಮಾತ್ಮನು ಒಬ್ಬ ಭಸ್ಮಧಾರಿಯಾದ ಯೋಗಿಯು ಇದ್ದಾನೆಂದುಎಲ್ಲರೂ ಬಲ್ಲರು. ಇವನ ಶುದ್ಧಾಚರಣೆ ಮತ್ತು ತಪಸ್ಸಿನ ಮಹಿಮೆಯನ್ನು ನೋಡಿ ಉಳಿದ ಋಷಿಗಳು ಅಸೂಯೆಯನ್ನು ತಾಳಿ ಅವನನ್ನು ನಾಶಮಾಡಲಿಕ್ಕೆ ಪ್ರಯತ್ನಿಸಹತ್ತಿದರು. ಅವರು ಒಂದು ಹೋಮಕುಂಡವನ್ನು ರಚಿಸಿ, ತಮ್ಮ ಮಂತ್ರಬಲದಿಂದ ಅದರೊಳಗಿಂದ ಒಂದು ಕ್ರೂರ ಹುಲಿಯನ್ನು ಹುಟ್ಟಿಸಿ, ಅದನ್ನು ಪರಮೇಶ್ವರನ ಮೇಲೆ ಪೊಡಲು ಬಿಟ್ಟರು. ಆದರೆ ಪರಮೇಶ್ವರನು ಅವನ್ನು ತನ್ನ ಸತ್ವಬಲದಿಂದ ಹಿಡಿದು ತನ್ನ ಕಿರುಬೆರಳಿನ ಉಗುರಿನಿಂದ ಅದರ ಚರ್ಮವನ್ನು ಕಿತ್ತುಅದನ್ನು ತನ್ನ ನಡುವಿಗೆ ಸುತ್ತಿಕೊಂಡನು. ಹೀಗೆ ತಮ್ಮ ಪ್ರಯತ್ನವು ನಿಷ್ಫಲವಾಗಲಾಗಿ, ಋಷಿಗಳು ಒಂದು ಭಯಂಕರ ಸರ್ಪವನ್ನು ರಚಿಸಿ ಅದನ್ನು ಪರಮೇಶ್ವರನ ಮೈಮೇಲೆ ಬಿಟ್ಟರು. ಹ್ಯಾಗೆ ಹುಲಿಯು ಶಾರೀರಿಕ ಸಾಮರ್ಥ್ಯದಲ್ಲಿ ಮಿಗಿಲಾದದ್ದೋ ಹಾಗೆ ಸರ್ಪವು ಕಾಪಟ್ಯದಲ್ಲಿ ಪ್ರಸಿದ್ಧವು. ಅದು ಕತ್ತಲೊಳಗೆ ಸಂದುಗೊಂದಿಗಳಲ್ಲಿ ಸದ್ದಿಲ್ಲದೆ ಡೊಂಕುಡೊಂಕಾಗಿ ಹರಿಯುತ್ತ ಯಾರಿಗೂ ತಿಳಿಯದಂತೆ ಸಂಚರಿಸಿ, ಸೂಕ್ಷ್ಮ ಘಾಯಮಾಡಿ, ಭಯಂಕರವಾದ ವಿಷವನ್ನು ಮಯ್ಯಲ್ಲಿ ಪ್ರಯೋಗಮಾಡುವದುಂಟು. ಇದು ಕಪಟಿಗಳ ಚಿನ್ಹವು. ಇಂಥ ಕಾಪಟ್ಯವುಳ್ಳ ಈ ಮಹಾಸರ್ಪವು ಮೈಮೇಲೆ ಬರ

ಲು. ಪರಮಾತ್ಮನು ಪರಮಜ್ಞಾನಿಯಾದ್ದರಿಂದ ಅದನ್ನು ಕಂಡುಹಿಡಿದು ತನ್ನ ಕೊರಳಿನಲ್ಲಿ ಲೀಲೆಯಿಂದ ಹಾಕಿಕೊಂಡನು. ಹೀಗೆ ಪರಮಾತ್ಮನು ವ್ಯಾಘ್ರಾಂಬರನೂ, ಸರ್ಪಭೂಷಣನೂ ಆದನು. ಋಷಿಗಳು ತಮ್ಮ ಈ ಎರಡೂ ಪ್ರಯತ್ನಗಳು ನಿಷ್ಫಲವಾಗಲಾಗಿ ಕಡೇ ಪ್ರಯತ್ನವೆಂದು, ಬಾಲಕನೂ ಕ್ರೂರನೂ ಆದ ತ್ರಿಪುರನೆಂಬ ಹೆಸರಿನ ರಾಕ್ಷಸನನ್ನು ಅಗ್ನಿಕುಂಡದಿಂದ ನಿರ್ಮಿಸಿ ಪರಮಾತ್ಮನ ಮೇಲೆಬಿಟ್ಟರು. ಈ ರಾಕ್ಷಸನು ದುಷ್ಟತನ ಮತ್ತು ಅಜ್ಞಾನದ ಗುರ್ತು ಇದೆ. ಇಂಥ ರಾಕ್ಷಸನು ಮೈಮೇಲೆ ಬರಲಾಗಿ ಪರಮೇಶ್ವರನು ಅವನನ್ನು ನೆಲಕ್ಕೆ ಹಾಕಿ ತುಳಿದು ಅವನ ಮೇಲೆ ನೃತ್ಯವನ್ನು ಮಾಡತೊಡಗಿದನು. ಈ ಸಂಗತಿಯೇ ಈ ಚಿತ್ರವಲ್ಲಿ ತೋರಿಸಲ್ಪಟ್ಟಿದೆ.

ಮೇಲ್ಕಂಡ ಕಥೆಯಿಂದ ಪ್ರಪಂಚದಲ್ಲಿ ಒಳಿತು ಮತ್ತು ಕೆಡಕು ಇವುಗಳಲ್ಲಿ ಯಾವಾಗಲೂ ಹೋರಾಟವು ನಡೆಯುತ್ತದೆಂದು ತೋರಿಸಲ್ಪಟ್ಟಿದೆ. ಪರಮಾತ್ಮನು ಒಳಿತಾದದ್ದರ ಗುರ್ತು. ಕೆಡಕು ಎಂಬದು ಹುಲಿಯ ಹಾಗೆ ಬಾಹ್ಯ ಶಕ್ತಿಯಿಂದ ಮನುಷ್ಯನನ್ನು ಪೀಡಿಸುವುದುಂಟು. ಒಮ್ಮೊಮ್ಮೆ ಸರ್ಪನಂತೆ ಕಾಪಟ್ಯದಿಂದ ಬಾಧೆ ಪಡಿಸಲೂ ಬಹುದು. ಇಷ್ಟೇ ಅಲ್ಲ ಬಾಲಕನಂತೆ ಬುದ್ಧಿ ಭ್ರಂಶವನ್ನು ಮಾಡಿ ತೊಂದರೆ ಗೊಳಿಸಬಹುದು- ಆದರೆ ಇವೆಲ್ಲವುಗಳನ್ನು ಒಳಿತೆಂಬುದು ಧರ್ಮವೆಂಬ ಶಸ್ತ್ರದಿಂದ ಕೊಲ್ಲುವದು. ನಂದಿಯು ಈ ಧರ್ಮಸ್ವರೂಪನು. ಈ ನಂದಿಯನ್ನೇ ಪರಮಾತ್ಮನು ತನ್ನ ಆಧಾರವಾಗಿಟ್ಟು ಕೊಂಡಿದ್ದಾನೆ. ಈ ಚಿತ್ರದಲ್ಲಿ ಪರಮಾತ್ಮನು ನಂದೀಧ್ವಜವನ್ನು ಒಂದು ಕೈಯ್ಯಲ್ಲಿ ಹಿಡಿದುಕೋಡು ಅದನ್ನು ತ್ರಿಪುರನ ತಲೆಯ ಮೇಲಿಟ್ಟಿದ್ದನ್ನು ವಾಚಕರು ನೋಡ ಬಹುದು. ಕೆಲವು ವಿಗ್ರಹಗಳಲ್ಲಿ ಈ. ನಂದೀ ಧ್ವಜದ ಬದಲು ಅಗ್ನಿಯನ್ನು ಹಿಡಿದ ಹಾಗೆ ತೋರಿಸಲ್ಪಟ್ಟಿರುತ್ತವೆ ಅಗ್ನಿಯಾದರೂ ಶುದ್ಧತೆಯ ಚಿನ್ಹವು. ಈ ಪ್ರಕಾರ ಪರಮಾತ್ಮನು ಕೆಟ್ಟದ್ದನ್ನು ಧರ್ಮ ಅಥವಾ ಶುದ್ಧ ನಡತೆಯಿಂದ ಸಂಹರಿಸಿ ಭವದಲ್ಲಿ ಕುಣಿದಾಡುತ್ತಾನೆ-

ಈ ಪ್ರಕಾರ ತಾಂಡವ ನೃತ್ಯವನ್ನು ಪರಮಾತ್ಮನು ಜಗತ್ತಿನ ಸಂಹಾರ ಮತ್ತು ಸೃಷ್ಟಿಯ ಕಾಲಗಳಲ್ಲಿ ಮಾಡುತ್ತಾನೆ. ಆಗ ಕೆಟ್ಟದ್ದು ಸಂಹರಿಸಲ್ಪಡುತ್ತದೆ. ಆ ಸಮಯದಲ್ಲಿ ಉತ್ಪನ್ನವಾದ ಆನಂದವೇ ಚಿತ್ ಶಕ್ತಿಯು. ಈ ಶಕ್ತಿಯಿಂದಲೇ ಸೃಷ್ಟಿಯ ಉಗಮವು ಮತ್ತು ಲಯವು ತಾಂಡವ ನೃತ್ಯವು

ಈ ಶಕ್ತಿಯು ವ್ಯವಹರಣೆಯ ದ್ಯೋತಕವು. ಆ ಕಾಲಕ್ಕೆ ಪರಮಾತ್ಮನ ಕೈಯ್ಯಲ್ಲಿ ಒಂದು ಡಮರುಗ ವಿರುತ್ತದೆ. ಅದು ಚಿತ್ರದಲ್ಲಿ ತೋರಿಸಲ್ಪಟ್ಟಿದೆ. ಅದನ್ನು ಪರಮಾತ್ಮನು ನುಡಿಸುತ್ತ ಕುಣಿಯುತ್ತಾನೆ. ಈ ಡಮರುಗದನಾದವೇ ಶಕ್ತಿಯನ್ನು ಹುಟ್ಟಿಸಿ ಜಗತ್ತಿನಲ್ಲೆಲ್ಲ ತುಂಬುತ್ತದೆ. ಪರಮಾತ್ಮನ ಚಿತ್‌ಶಕ್ತಿಯಲ್ಲಿ ಚಿನ್ನಾದ, ಚಿದ್ಬಿಂದು, ಚಿತ್ಕಲೆಗಳು ಹುಟ್ಟಿ ಇವುಗಳೂ ಮೂಲ ಚಿತ್ತೂ ಕೂಡಿ ಓಂಕಾರ ನಾದವು ಉಂಟಾಗುತ್ತದೆ. ಈ ಓಂಕಾರ ನಾದವೇ ಪರಮಾತ್ಮನ ಡಮರುಗದ ನಾದವು. ಇದು ಜಗತ್ತನ್ನೆಲ್ಲ ಓಂ ಓಂ ಓಂ ಎಂದು ವ್ಯಾಪಿಸಿ ಅದರ ಪ್ರವೃತ್ತಿಗೆ ಕಾರಣ ವಾಗುತ್ತದೆ. ಹೀಗೆ ಪರಮಾತ್ಮನು ಈ ನಾದವನ್ನು ನುಡಿಸುತ್ತ ಭವವನ್ನು ತುಳಿಯುತ್ತ ಚಿತ್ರ ವಿಚಿತ್ರವಾಗಿ ಜಗತ್ತಿನಲ್ಲೆಲ್ಲ ಕುಣಿಯುತ್ತಾನೆ. ಈ ಕುಣಿದಾಟವೇ ಜಗತ್ ಸೃಷ್ಟಿಗೆ ಕಾರಣವು. ಮತ್ತು ಇದೇ ಕಟ್ಟಕಡೆಗೆ ಸೃಷ್ಟಿಯ ಅಂತ್ಯಕ್ಕೆ ಕಾರಣವು. ತಾಂಡವ ನೃತ್ಯವು ಈ ಸುಂದರವಾದ ವಿಚಾರಗಳ ದ್ಯೋತಕವಾಗಿದೆ.

# ಕೆಳದಿ ಮತ್ತು ಸ್ವಾದಿ ರಾಜ್ಯಗಳು.

(ಲೇಖಕ:- ರಾ॥ ಸಾ॥ ಫ. ಗು. ಹಳಕಟ್ಟಿ ಬಿ. ಎ. ಎಲ್ ಎಲ್ ಬಿ, )

ಈಗಿನ ಕಾಲಕ್ಕೆ ಕಾರವಾರ ಮತ್ತು ಮಂಗಳೂರ ಜಿಲ್ಲೆಗಳು ಅರಣ್ಯದಿಂದ ತುಂಬಿಕೊಂಡು ಯಾವದೊಂದು ತರದ ವ್ಯಾಪಾರೋದ್ಯೋಗಳು ಇಲ್ಲದೆ ಒಕ್ಕಲತನವು ಹಾಳುಬಿದ್ದು ಹಿಂದುಸ್ಥಾನದ ಬಡ ಜಿಲ್ಲೆಗಳಲ್ಲಿ ಎಣಿಸಲ್ಪಟ್ಟಿರುತ್ತವೆ. ಈ ಕಾರಣ ಅಲ್ಲಿಯ ಜನರು ಉದರನಿಮಿತ್ತವಾಗಿ ಸ್ವದೇಶವನ್ನು ಬಿಟ್ಟುಕೊಟ್ಟು ಪರ ಪ್ರಾಂತಗಳಿಗೆ ಹೋಗಬೇಕಾಗಿರುತ್ತದೆ. ಅದರೆ ಈ ಕ್ಲೇಶಕರವಾದ ಸ್ಥಿತಿಯು ಇಂಗ್ಲಿಷರು ಈ ಪ್ರದೇಶಗಳಿಗೆ ಬರುವ ಪೂರ್ವದಲ್ಲಿ ಇರಲಿಲ್ಲ. ಈ ಜಿಲ್ಲೆಗಳು ಆ ಕಾಲಕ್ಕೆ ಒಕ್ಕಲುತನ, ವ್ಯಾಪಾರ ಕೈಗಾರಿಕೆಗಳಿಂದ ತುಂಬಿಕೊಂಡು ಅತ್ಯಂತ ಅಭಿವೃದ್ಧಿ ಸ್ಥಿತಿಯಲ್ಲಿದ್ದವು. ಈ ಪ್ರದೇಶಗಳಲ್ಲಿ ಅತ್ಯಂತ ಬೆಲೆಯುಳ್ಳ ತೋಟದ ಜೀನಸುಗಳು ಬೆಳೆ

ಯುತ್ತಿದ್ದು ಒಕ್ಕಲಿಗರು ಸುಖಿಯಾಗಿದ್ದರು. ಕರ್ನಾಟಕದ ವ್ಯಾಪಾರವೆಲ್ಲ ಈ ಜಿಲ್ಹೆಗಳ ಬಂದರಗಳೊಳಗಿಂದ ಹಾಯ್ದು ಪರದೇಶಗಳಿಗೆ ಸಾಗುತ್ತಿದ್ದದರಿಂದ ಧನ ಕನಕ ಸಂಪತ್ತಿನಿಂದ ಹೆಸರಾದ ಅನೇಕ ವ್ಯಾಪಾರೀ ಪಟ್ಟಣಗಳು ಉದ್ಭವಿಸಿದ್ದವು. ಈ ಸ್ಥಿತಿಯು ಈ ಜಿಲ್ಹೆಗಳಿಗೆ ಬಿದನೂರ ಮತ್ತು ಸ್ವಾದಿ ಅರಸರು ಆಳುತ್ತಿದ್ದಾಗ ಪ್ರಾಪ್ತವಾಗಿತ್ತು. ಆದರೆ ಆ ರಾಜ್ಯಗಳು ನಾಶವಾದ ಕೊಡಲೆ, ಈ ಪ್ರದೇಶಗಳ ವೈಭವವು ಸಂಪೂರ್ಣವಾಗಿ ಮುಗ್ಗಿಹೋಯಿತು. ಈ ಸ್ಥಿತಿಯು ಈಗ್ಗೆಯೂ ಹಾಗೆಯೇ ಇದ್ದದ್ದನ್ನು ನಾವು ಕಾಣುತ್ತೇವೆ. ಇದರಿಂದ ಈ ಜಿಲ್ಹೆಗಳಿಗಷ್ಟೇ ಅಲ್ಲ, ಇಡೀ ಕರ್ನಾಟಕಕ್ಕೂ ಸಾಂಪತ್ತಿಕ ಹಾನಿಯು ಉಂಟಾಗಿರುತ್ತದೆ.

## ವಿಜಯನಗರದ ಕಾಲ.

ವಿಜಯನಗರದ ಅರಸರು ಆಳುತ್ತಿದ್ದಾಗ ಈ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಹೆಗಳು ಅವರ ಅಂಕಿತದಲ್ಲಿಯೇ ಇದ್ದವು ಆಗ ಇವುಗಳ ದಕ್ಷಿಣ ಭಾಗವನ್ನು ಕೊಡಗು ಸೀಮೆಯು ವರೆಗೆ ಕೆಳದಿ ಅಥವಾ ಬಿದನೂರಿನ ಅರಸರು ವಿಜಯುಗನರದ ಭೂಪತಿಗಳ ಮಾಂಡಲಿಕರಾಗಿ ಆಳುತ್ತಿದ್ದರು. ಮತ್ತು ಉತ್ತರ ಭಾಗವನ್ನು ಗೋವೆಯ ಪ್ರಾಂತದವರೆಗೆ ಸ್ವಾದಿಯ ಅರಸರು ಆಳುತ್ತಿದ್ದರು. ಕೆಳದಿಯ ಅರಸರ ಪೂರ್ವಜರಲ್ಲಿ ಸದಾಶಿವರಾಯ, ಸಂಕಣ್ಣನಾಯಿಕ ಮೊದಲಾದ ಶೂರ ಪುರುಷರು ಜನಿಸಿ, ಅವರು ಮುಸಲ್ಮಾನರ ಕೂಡ ಬಹು ಕಲಿತನದಿಂದ ಕಾದಾಡಿ, ವಿಜಯನಗರದ ಅರಸರಿಗೆ ಅತ್ಯಂತ ಸಹಾಯಕರಾಗಿದ್ದರು. ಸ್ವಾದಿ ಅರಸರ ಪೂರ್ವಜನಾದ ಅರಸಪ್ಪ ನಾಯಿಕನು ವಿಜಯನಗರದ ಮಹಾ ಪ್ರತಾಪಶಾಲಿ ರಾಜನಾದ ಕೃಷ್ಣರಾಜನ ಸಹೋದರಿಯ ಮಗನಾಗಿದ್ದನು. ಕೃಷ್ಣರಾಜನು ತನಗೆ ಮಕ್ಕಳಿಲ್ಲದಾಗ ಈತನನ್ನೇ ರಾಜ್ಯಕ್ಕೆ ಪಟ್ಟಗಟ್ಟುವೆನೆಂದು ಆತನಿಗೆ ವಚನಕೊಟ್ಟಿದ್ದನು. ಆದರೆ ಆತನಿಗೆ ಮುಂದೆ ಮಕ್ಕಳುಗಳಾಗಲು ಅರಸಪ್ಪ ನಾಯಿಕನಿಗೆ ಸ್ವಾದಿಯ ಪ್ರಾಂತದ ಆಧಿಪತ್ಯವು ಕೊಡಲ್ಪಟ್ಟಿತು. ಈ ಎರಡೂ ಅರಸು ಮನೆತನಗಳಲ್ಲಿ ಶೂರರೂ ಧಾರ್ಮಿಕರೂ ವಿದ್ವಾಂಸರೂ ಆದ ಅನೇಕ ರಾಜರು ಆಗಿ ಹೋದರು. ಕೆಳದಿಯ ರಾಜರಲ್ಲಿ ಸದಾಶಿವರಾಯ (೧೫೧೪---೧೫೪೬) ಸಂಕಣ್ಣನಾಯಿ

ಕ (೧೫೪೬—೧೫೫೮) ವೆಂಕಟಪ್ಪ ನಾಯಕ (೧೫೮೩—೧೬೩೦) ಶಿವಪ್ಪ ನಾಯಕ (೧೬೪೮—೧೬೭೦) ಚನ್ನಮ್ಮಾಜಿ (೧೬೭೨—೧೬೯೮) ಬಸವಪ್ಪ ನಾಯಕ (೧೬೯೮—೧೭೧೫) ಇವರು ಅತ್ಯಂತ ಪ್ರಸಿದ್ಧಿಯನ್ನು ಹೊಂದಿದರು. ಸ್ವಾದಿ ಅರಸರಲ್ಲಿ ಸದಾಶಿವರಾಯ (೧೬೭೪—೧೬೯೭) ಮತ್ತು ಬಸವರಾಜ (೧೬೯೭—೧೭೪೫) ಇವರು ಅತ್ಯಂತ ಶೂರರೂ ಬಲಾಢ್ಯರೂ ಆಗಿದ್ದರು. ಈ ರಾಜ್ಯಗಳಲ್ಲಿ ಇಕ್ಕೇರಿ ರಾಜ್ಯದ ವಿಸ್ತಾರವು ಈಗಿನ ಮೈಸೂರಿನ ಉತ್ತರ ಮೂಲೆ, ಇಡೀ ಮಂಗಳೂರ ಜಿಲ್ಹೆ, ಮತ್ತು ಕಾರವಾರ ಜಿಲ್ಹೆ ಮಿರ್ಜಾನ ಹೊಳೆಯವರೆಗೆ ಮತ್ತು ಪೂರ್ವಕ್ಕೆ ಘಟ್ಟಗಳನ್ನು ದಾಟಿ ಧಾರವಾಡ ಜಿಲ್ಹೆಯಲ್ಲಿ ಸವಣೂರ ಮತ್ತು ರಾಣೆಬಿನ್ನೂರ ಈ ವರೆಗೂ ಹಬ್ಬಿತ್ತು. ಸ್ವಾದಿಯ ರಾಜ್ಯವು ಕಾರವಾರ ಜಿಲ್ಹೆಯಲ್ಲಿ ಈಗಿನ ಶಿರಶಿ, ಯಲ್ಲಾಪುರ, ಹಳ್ಳಿಯಾಳ, ಸುಪಾ, ಕಾರವಾರ ತಾಲೂಕಗಳು ಮತ್ತು ದಕ್ಷಿಣಕ್ಕೆ ಮಿರ್ಜಾನಹೊಳೆ ಮತ್ತು ಉತ್ತರಕ್ಕೆ ಗೋವಾಂತಿಕ ಸೀಮೆ, ಈ ವರೆಗೆ ಪಸರಿಸಿತ್ತು. ಈ ರಾಜ್ಯಗಳಲ್ಲದೆ ಈ ಪ್ರದೇಶಗಳಲ್ಲಿ ಕಾರ್ಕಳ, ಗೆರಸೊಪ್ಪೆ, ಮತ್ತು ಬೀಳಗಿ ಎಂಬ ಸಣ್ಣ ರಾಜ್ಯಗಳಿದ್ದು ಅವುಗಳ ರಾಜರು ಕೆಳದಿ ಅಥವಾ ಸ್ವಾದಿ ಅರಸರ ಮಾಂಡಲಿಕರಾಗಿ ಆಳುತ್ತಿದ್ದರು. ಕೆಲವು ಕಾಲ ಕಾರ್ಕಳದ ಭೈರಸುಒಡೆಯರು ಅತ್ಯಂತ ಬಲಿಷ್ಠರಾಗಿದ್ದರು. ಆದರೆ ಅವರು ಕಡೆಗೆ ಕೆಳದಿಯ ವೆಂಕಟಪ್ಪ ನಾಯಕನಿಂದ ಜಯಿಸಲ್ಪಟ್ಟು ಅವರ ರಾಜ್ಯವು ಕೆಳದಿಯಲ್ಲಿ ಶೇರಿಸಲ್ಪಟ್ಟಿತು. ಈ ಮೇರೆಗೆ ಈ ಎರಡೂ ರಾಜ್ಯಗಳು ಹೈದರನಿಂದ ಗೆಲ್ಲಲ್ಪಡುವವರೆಗೂ ಈ ಸೀಮೆಯಲ್ಲಿ ಅತ್ಯಂತ ವೈಭವದಿಂದ ರಾಜ್ಯವಾಳಿದವು.

ವಿಜಯನಗರದ ರಾಜ್ಯವು ಹಾಳಾದ ಬಳಿಕ ಮುಸಲ್ಮಾನರ ಹಾವಳಿಗಳು ದಕ್ಷಿಣ ದೇಶದಲ್ಲೆಲ್ಲ ಪಸರಿಸಿದವು. ಆಗ ದೇಶದ ತುಂಬ ಸಣ್ಣಸಣ್ಣ ಪಾಳೆಯಗಾರರು ಉತ್ಪನ್ನರಾಗಿ ಕೊಲೆ ಸುಲಿಗೆಗಳು ನಿರಾತಂಕವಾಗಿ ಸಾಗಿದವು. ಯಾವ ಕರ್ನಾಟಕವು ವಿಜಯನಗರ ಭೂಪತಿಗಳ ಕಾಲದಲ್ಲಿ ಅತ್ಯಂತ ವೈಭವದಿಂದ ಮೆರೆಯುತ್ತ ಬಂದಿತ್ತೋ ಆ ದೇಶಕ್ಕೆ ಈ ಕಾಲಕ್ಕೆ ಅತ್ಯಂತ ಕನಿಕರ ಸ್ಥಿತಿಯು ಪ್ರಾಪ್ತವಾಯಿತು. ಮತ್ತು ಕರ್ನಾಟಕದ ಸಂಸ್ಕೃತಿಯು ನಾಶವಾಗುವ ಪ್ರಸಂಗವು ಒದಗಿ ಬಂದಿತು. ಮುಂದೆ ಕೆಲವು ಕಾಲದ ಮೇಲೆ ವಿಜಾಪುರ ಆದಿಲಶಾಹಿಯು ನಷ್ಟವಾಗಲಾಗಿ, ಮೊಗಲರ ದಾಳಿಗಳು ಇಮ್ಮಡಿಯಾಗಿ ದೇಶದಲ್ಲಿ ಹೆಚ್ಚಿದವು. ಔರಂಗಜೇಬನು ಸತ್ತ ತರು

ವಾಯು ಸಹ ದೇಶಕ್ಕೆ ಶಾಂತತೆಯು ಉತ್ಪನ್ನವಾಗಲಿಲ್ಲ. ಆಗ ಮೊಗಲ ರಿಗಿಂತಲೂ ದಾರುಣವಾದ ಮರಾಟರ ದಾಳಿಗಳು ಕರ್ನಾಟಕವನ್ನು ಕಂಗೆಡಿಸಹತ್ತಿದವು. ಈ ಸ್ಥಿತಿಯಲ್ಲಿ ಕರ್ನಾಟಕದ ಗತಿ ಏನಾಗಿರಬಹು ದೆಂಬದನ್ನು ವಾಚಕರು ಊಹಿಸಬಹುದು. ಕರ್ನಾಟಕದ ಅವನತಿಯು ಕಾಲವು ಅಂದಿನಿಂದಲೇ ಪ್ರಾರಂಭವಾಯಿತು ಎಂದು ಹೇಳಬಹುದು.

ಆದರೆ ಇದಕ್ಕೆ ಅಪವಾದಾತ್ಮಕವಾಗಿ ಮಂಗಳೂರ ಮತ್ತು ಕಾರವಾರ ಜಿಲ್ಹೆಗಳು ಮಾತ್ರ ಉಳಿದವು. ಆ ಕಾಲದಲ್ಲಿ ಸ್ವಾದಿಯ ಮತ್ತು ಕೆಳದಿಯ ವೀರಶೈವ ರಾಜರು ಈ ಸೀಮೆಯಲ್ಲಿ ರಾಜ್ಯವಾಳಿ ಸುಖಶಾಂತಿಗಳನ್ನು ನೆಲೆಗೊಳಿಸಿದರು. ಆದರಿಂದ ಈ ಪ್ರದೇಶಗಳು ಅತ್ಯಂತ ಊರ್ಜಿತಾವ ಸ್ಥೆಗೆ ಬಂದವು. ಮತ್ತು ಇದರ ಪರಿಣಾಮವು ಈ ಭಾಗದಲ್ಲಷ್ಟೇ ಅಲ್ಲ, ಅವರ ರಾಜ್ಯಗಳಿಗೆ ಹೊರಗಿದ್ದ ಕರ್ನಾಟಕದ ಭಾಗಗಳ ಮೇಲೆಯೂ ಸಹ ಒದಗಿ ಕರ್ನಾಟಕದ ಸಂಸ್ಕೃತಿ ಮತ್ತು ಸಂಪತ್ತು ಇವುಗಳು ಬಹಳ ಅಂಶದಿಂದ ಉಳಿಯಲಿಕ್ಕೆ ಕಾರಣವಾಯಿತು.

## ರಾಜಕೀಯ ಧೋರಣೆ.

ಕೆಳದಿಯ ರಾಜರ ರಾಜಧಾನಿ ಶಹರಗಳು ಅನುಕ್ರಮವಾಗಿ ಇಕ್ಕೇರಿ, ಕೆಳದಿ, ಮತ್ತು ಬಿದನೂರ ಇವು ಇದ್ದವು. ಈ ಪಟ್ಟಣಗಳು ಗಟ್ಟದದು ರ್ಗಮ ಪ್ರದೇಶಗಳಲ್ಲಿದ್ದು ಪರ ಚಕ್ರಗಳ ದಾಳಿಗಳಿಗೆ ದೂರಾಗಿದ್ದವು. ಕೆಲವು ಸಾರೆ ನೊಗಲ ಮತ್ತು ಮರಾಟರ ದಾಳಿಗಳು ಈ ರಾಜ್ಯಗಳ ಮೇಲೆ ಬಂದೊದಗಿದವು. ಆದರೆ ಅವುಗಳಿಗೆ ಯಾವ ತರದ ಜಯವು ಬರಲಿಲ್ಲ. ದಕ್ಷಿಣಕ್ಕೆ ಮೈಸೂರ ಅರಸರು ಇದ್ದು ಅವರು ಕೆಳದಿಯ ರಾಜ ರನ್ನು ಗೆಲ್ಲುವಷ್ಟು ಪ್ರಬಲರು ಆಗಿರಲಿಲ್ಲ. ಮತ್ತೊಂದು ಕಡೆಗೆ ಶೂರರಾದ ಕೊಡಗರಿದ್ದರು. ಅವರ ಮೇಲೆ ಕೆಳದಿಯ ಅರಸರ ಸಂಬಂಧಿಕರೇ ರಾಜ್ಯ ವಾಳುತ್ತಿದ್ದದರಿಂದ ಅವರಿಂದಲಾದರೂ ಇವರಿಗೆ ಹಾನಿಯು ತಟ್ಟಲಿಲ್ಲ. ಹೀಗೆ ಬಲಾಢ್ಯ ಪರಚಕ್ರಗಳ ದಾಳಿಯು ಇವರ ರಾಜ್ಯದಲ್ಲಿ ಸಂಘಟಿಸಲಿಲ್ಲ ಆದರೆ ಸ್ವಾದಿಯ ಅರಸರ ಮೇಲೆ ಬಲಾಢ್ಯರಾದ ವಿಜಾಪುರ ಬಾದಶಹ ಮತ್ತು ಮರಾಟರ ಮತ್ತು ಪೋರ್ತುಗೀಜರ ದಾಳಿಗಳು ಮೇಲಿಂದ ಮೇಲೆ ಬಂದು ಬೀಳುತ್ತಿದ್ದವು. ಆದರೆ ಆಗ ಸದಾಶಿವ ನಾಯಿಕನೂ, ಅವನ ಮಗನಾದ ಬಸವರಾಜನೂ ಅತ್ಯಂತ ಶೂರ ಪುರುಷರಾಗಿದ್ದರು.

ಇವರಾರೂ ಇವರ ದಾಳಿಗಳಿಗೆ ಸಡ್ಡೆ ಮಾಡಲಿಲ್ಲ. ಕೆಳದಿಯ ಶಿವಪ್ಪ ನಾಯಕನ ಕಾಲಕ್ಕೆ ಆತನ ದಂಡು ೫೦,೦೦೦ವರೆಗೆ ಇತ್ತೆಂದು ಲಿಯು ನೋಡೆರ್ಲೋ ಪೀಜ ಎಂಬ ಪ್ರವಾಸಿಯು ಬರೆದಿದ್ದಾನೆ. ಮತ್ತು .ಸ್ವಾದಿಯ ಅರಸನ ಹತ್ತರ ೩೦೦೦ ರಾವುತರೂ, ೧೨೦೦೦ ಕಾಲಾಳುಗಳೂ ಇದ್ದ ರೆಂದು ಫ್ರಾಯರ ಎಂಬ ಪ್ರವಾಸಿಯು ಬರೆದಿದ್ದಾನೆ. ಹೀಗೆ ಈ ಉಭಯ ರಾಜರು ಸ್ವಸಂರಕ್ಷಣೆ ಮಾಡಿ ಕೊಳ್ಳಲಿಕ್ಕೆ ಸಮರ್ಥರಾಗಿದ್ದರು ಆ ಮೇರೆಗೆ ಇವರು ಆ ಬಿಕ್ಕಟ್ಟಿನ ಕಾಲದಲ್ಲಿ ಪರ ಚಕ್ರಗಳ ದಾಳಿಗಳನ್ನು ಎದುರಿಸಲು ಸಮರ್ಥರಾಗಿದ್ದರು. ಹೀಗೆ ಅವರು ಸಮರ್ಥರಾಗಿದ್ದರೂ ಅವರು ತಮ್ಮ ಹದ್ದಿಯನ್ನು ದಾಟಿ ಪರರಾಜರನ್ನು ಕೆಣಕಲಿಕ್ಕೆಯತ್ನಿಸಲಿಲ್ಲ. ಅವರು ಪ್ರಜಾನುರಾಗಿಗಳಾಗಿ ಶಾಂತತೆಯಿಂದ ರಾಜ್ಯವನ್ನು ಆಳಿದರು.

ತಾಳೀಕೋಟೆಯ ಯುದ್ಧದಲ್ಲಿ ವಿಜಯ ನಗರವು ಹಾಳಾದ ಬಳಿಕ ಕೆಳದಿಯಲ್ಲಿ ರಾಮರಾಜನು (೧೫೭೧-೧೫೮೩) ಆಳುತ್ತಿದ್ದ ಅವನು ತನ್ನ ರಾಜ್ಯದ ಸುರಕ್ಷತೆಗೋಸ್ಕರ ಪ್ರಯತ್ನಿಸುವದು ಅವನ ಮೊದಲಿನ ಕಾರ್ಯವಾಯಿತು. ಆದ್ದರಿಂದ ಅವನು ತನ್ನ ರಾಜ್ಯದಲ್ಲಿ ಕೋಟೆಕೊತ್ತಲು ಗಳನ್ನು ತಕ್ಕ ಸ್ಥಳಗಳಲ್ಲಿ ಕಟ್ಟಿಸಲು ಉದ್ಯುಕ್ತನಾದನು. ಅವನು ಬಗ್ಗ ವಾಡಿ, ಹೊಸಂಗಡಿ, ಮೊಳಕಾಡು, ಹೊಳೆಯ ಬೈರೂರು, ಈ ಸ್ಥಳಗಳಲ್ಲಿ ಕೋಟೆಗಳನ್ನು ಕಟ್ಟಿಸಿದ್ದಲ್ಲದೆ, ಮಂಗಳೂರಜಿಲ್ಹೆಯಲ್ಲಿಯ ಬಹುತರ ಎಲ್ಲ ಕೋಟೆಗಳನ್ನು ಸುಧಾರಿಸಿದನು. ರಾಣೀ ಚನ್ನಮ್ಮಾಜಿಯು ತನ್ನ ಹೆಸ ರಿನಿಂದ ಚನ್ನಗಿರಿ ದುರ್ಗವೆಂಬ ಬಲವಾದ ಕೋಟೆಯನ್ನು ಕಟ್ಟಿಸಿದಳು- ಇದೇ ಮೇರೆಗೆ ಬೇರೆ ಬೇರೆ ರಾಜರೂ ರಾಜ್ಯದ ಸುರಕ್ಷತೆ ಗೋಸ್ಕರ ಅಲ್ಲಲ್ಲಿ ದುರ್ಗಗಳನ್ನು ಕಟ್ಟಿಸಿದರು. ಅವರುಬಂದರ ಸ್ಥಳಗಳನ್ನು ವಿಶೇ ಷವಾಗಿ ಭದ್ರಗೊಳಿಸಿದರು. ಸ್ವಾದಿಯ ಅರಸನಾದ ಬಸವರಾಜನು ೧೭೧೫ ರಲ್ಲಿ ಕಾರವಾರದ ಹತ್ತರ ಇರುವ ಸದಾಶಿವ ಗಡವನ್ನು ಕಟ್ಟಿಸಿ ದನು. ಮತ್ತು ಇದರ ಸಮೀಪಕ್ಕೇರುವ ಕೂರ್ಮಗಡವೂ ಅವನಿಂದ ಕಟ್ಟಿಸ ಲ್ಪಟ್ಟಿತು. ಈ ರಾಜರು ಈ ಕ್ರಮವನ್ನು ಅನುಸರಿಸಿದ್ದರಿಂದ ಬಲಾಢ್ಯರಾದ ಪರಚಕ್ರಗಳು ದಾಳಿಗಳ ಎಂದೂ ಇವರ ಮೇಲೆ ಸಫಲ ಹೊಂದಲಿಲ್ಲ. ರಾಣಿ ಚನ್ನಮ್ಮಾಜಿಯು ರಾಜಾರಾಮನಿಗೆ ಆಶ್ರಯ ಕೊಟ್ಟ ತಪ್ಪಿಗಾಗಿಮೊಗಲರ ಸೈನ್ಯವು ಆಕೆಯ ಮೇಲೇರಿ ಬರಲು, ಅವರನ್ನು ಆಕೆಯು ಪರಾಭವ ಮಾಡುವಷ್ಟು ಸಮರ್ಥಳಾದಳು. ಸಂಭಾಜಿಯ ದಾಳಿಗಳು ೧೬೮೧ರಿಂದ

೧೬೮೫ರ ವರೆಗೆ ಸ್ವಾದಿಯು ಅರಸರ ಮೇಲೆ ಎರಡು ಮೂರು ಸಾರೆ ಮಾಡ ಲ್ಪಟ್ಟವು. ಒಂದರಲ್ಲಿ ಸ್ವತಃ ಸಂಭಾಜಿಯೇ ತನ್ನ ಸೈನ್ಯವನ್ನು ತೆಗೆದು ಕೊಂಡು ಅವರ ರಾಜವನ್ನು ನುಗ್ಗಿದನು. ಆದರೆ ಅವುಗಳೆಲ್ಲ ಸಂಪೂರ್ಣ ವಾಗಿ ನಿಷ್ಫಲವಾದವೆಂದು ಆರ್ಮ್ ಎಂಬ ಇತಿಹಾಸಕಾರನು ಬರೆದಿದ್ದಾನೆ. ಈ ಮೇರೆಗೆ ಈ ವೀರಶೈವ ರಾಜರು ಯುದ್ಧಗಳಲ್ಲಿ ಜಯ ಹೊಂದಿದರೂ ಕಾರಣವಿಲ್ಲದೆ ತಮ್ಮ ಪ್ರದೇಶವನ್ನು ಬಿಟ್ಟುಕೊಟ್ಟು ಪರನಾಡುಗಳ ಮೇಲೆ ಬಂದು ಬೀಳಲಿಕ್ಕೆ ಯತ್ನಿಸಿದ್ದು ಇತಿಹಾಸದಲ್ಲಿ ಕಂಡು ಬರುವದಿಲ್ಲ. ಹೀಗೆ ಇವರು ೧೬ನೇ ಶತಮಾನದ ಮಧ್ಯದಿಂದ ೧೮ನೇ ಶತಮಾನದ ಮಧ್ಯದ ವರೆಗೂ ಅಂದರೆ ಸುಮಾರು ಇನ್ನೂರು ವರ್ಷಗಳ ವರೆಗೆ ಕಾರ ವಾರ ಮತ್ತು ಮಂಗಳೂರ ಜಿಲ್ಹೆಗಳಲ್ಲಿ ಸ್ಥಿರವಾಗಿ ರಾಜ್ಯವಾಳಿದರು.

## ವ್ಯಾಪಾರದ ಅಭಿವೃದ್ಧಿ.

ಹೀಗೆ ಈ ರಾಜ್ಯಗಳು ಶಾಂತತೆಯಿಂದ ರಾಜ್ಯವಾಳುವ ಧೋರಣ ವನ್ನು ಸ್ವೀಕರಿಸಿದ್ದರಿಂದ ಆಗ ಇಡೀ ಕರ್ನಾಟಕದ ವ್ಯಾಪಾರವು ಹೆಚ್ಚಲು ಅನುಕೂಲವಾಯಿತು. ವಿಜಯ ನಗರದ ಅರಸರುಗಳ ಕಾಲದಲ್ಲಿ ಪರದೇ ಶದೊಡನೆ ವ್ಯಾಪಾರವು ಕರ್ನಾಟಕದ ಬಂದರಗಳೊಳಗಿಂದ ಬಹು ಭರ ದಿಂದ ಸಾಗುತ್ತಿತ್ತು. ಮುಂದೆ ಆ ಮಹತ್ತಾದ ರಾಜ್ಯವು ನಷ್ಟವಾದ ಬಳಿಕ ಸಹ ಈವೀರಶೈವ ರಾಜರುಗಳು ಕರ್ನಾಟಕದ ವ್ಯಾಪಾರವು ಅವ್ಯಾಹ ತವಾಗಿ ನಡೆಯುವಂತೆ ವ್ಯವಸ್ಥೆ ಮಾಡಿದರು. ಆದ್ದರಿಂದ ಕರ್ನಾಟಕದ ಉಳಿದ ಭಾಗಗಳಲ್ಲಿ ಅವ್ಯವಸ್ಥೆಯು ಇದ್ದರೂ ಈ ಬಂದರಗಳೊಳಗಿಂದ ಯುರೋಪ ಖಂಡಕ್ಕೂ ಹಿಂದುಸ್ಥಾನದ ಬೇರೆ ಬೇರ ಭಾಗಗಳಿಗೂ ದೊಡ್ಡ ವ್ಯಾಪಾರವು ಸಾಗಹತ್ತಿತು. ಕೆಳದಿ ರಾಜರ ವ್ಯಾಪಾರಿ ಬಂದರುಗಳು ಹೊನ್ನಾವರ, ಬಾರ್ಕೂಲೂರ, ಮಂಗಳೂರ, ಭಟಕಳ, ಚಂದಾ ವರ, ಕಲ್ಯಾಣಪುರ ಮತ್ತು ಮಿರ್ಜಾನ ಇವು ಮುಖ್ಯವಾಗಿದ್ದವು. ಸ್ವಾದಿ ಅರಸರ ಬಂದರಗಳು, ಅಂಕೋಲಾ, ಕಾರವಾರ, ಕದರಿ, ಇವುಗಳು ಮುಖ್ಯವಾಗಿದ್ದವು. ವ್ಯಾಪಾರಕ್ಕೆ ತೊಂದರೆಯಾಗಬಾರದೆಂದು ಈ ರಾಜರು ತಮ್ಮ ರಾಜ್ಯದ ಕಾಡು ಪ್ರದೇಶಗಳೊಳಗಿಂದ ತಮ್ಮ ಬಂದರ ಸ್ಥಳಗಳ ವರೆಗೂ ದೊಡ್ಡ ದೊಡ್ಡ ರಸ್ತೆಗಳನ್ನು ಮಾಡಿಸಿದ್ದರು. ಫ್ರಾಯರ ಎಂಬ ಪ್ರವಾಸಿಯು ೧೬೭೩ ರಲ್ಲಿ ಕೆಳಧಿಯ ರಾಜ್ಯದಲ್ಲಿ ಬಂದಿದ್ದು, ಅವನು

“ಇಲ್ಲಿಯ ಜನರು ಇಕ್ಕಟ್ಟಾದ ದಾರಿಗಳಿಂದ ಪ್ರವಾಸ ಮಾಡದೆ ದೊಡ್ಡ ದೊಡ್ಡ ಮಾರ್ಗಗಳಿಂದ ದಾರಿ ತೋರಿಸುವವರ ಸಹಾಯವಿಲ್ಲದೆ ಪ್ರವಾಸ ಮಾಡಲು ಅನುಕೂಲತೆಗಳಿವೆ” ಎಂದು ಬರೆದಿದ್ದಾನೆ. ೧೭೨೦ ರಲ್ಲಿ ಹೆಮಿಲ್‌ಟನ್ ಎಂಬ ಪ್ರವಾಸಿಯಾದರೂ “ಈ ರಾಜ್ಯಗಳಲ್ಲಿ ಅತ್ಯುತ್ತಮವಾದ ವ್ಯಾಪಾರಕ್ಕೆ ಅನುಕೂಲವಾದ ದೊಡ್ಡ ಮಾರ್ಗಗಳು ಇವೆ” ಎಂದು ಬರೆದಿದ್ದಾನೆ. ಇದರಿಂದ ಕರ್ನಾಟಕದ ಫಲಪ್ರದವಾದ ಸೀಮೆಯಿಂದ ವ್ಯಾಪಾರವು ಈ ಉಭಯ ಕನ್ನಡ ಜಿಲ್ಲೆಗಳೊಳಗಿಂದ ಅವ್ಯಾಹತವಾಗಿ ನಡೆಯಹತ್ತಿತು. ಕಬ್ಬಿಣ ಮತ್ತು ಅಕ್ಕಿ ಈ ಸರಕುಗಳು ಭಟಕಳ ಮತ್ತು ಮಿರ್ಜಾನ ಬಂದರಗಳೊಳಗಿಂದ ಹಾಯ್ದು ಹಿಂದುಸ್ಥಾನದ ಬೇರೆ ಬೇರೆ ಪ್ರದೇಶಗಳಿಗೆ ಹೋಗುತ್ತಿದ್ದವು. ಮತ್ತು ಸಕ್ಕರಿ ನಾನಾತರದ ಔಷಧೀ ಪದಾರ್ಥಗಳು ಲವಂಗ, ಸುಂಠಿ ಮುಂತಾದ ಮಸಾಲೆಯ ಸಾಮಾನುಗಳು ಯುರೋಪಖಂಡಕ್ಕೆ ಈ ರಾಜರ ಎಲ್ಲ ಬಂದರಗಳೊಳಗಿಂದ ಹೇರಳವಾಗಿ ಹೋಗುತ್ತಿದ್ದವು. ತಾಮ್ರ ಮತ್ತು ಪಾದರಸ ಇವುಗಳು ಯುರೋಪದಿಂದ ಹಿಂದುಸ್ಥಾನಕ್ಕೆ ಬರುತ್ತಿದ್ದವು. ಮಲಬಾರದ ಬಂದರಗಳಿಂದ ತೆಂಗಿನಕಾಯಿ ಎಣ್ಣೆ ಇಂಥ ಜೀನಸುಗಳು ಈ ಬಂದರಗಳೊಳಗೆ ಬರುತ್ತಿದ್ದವು. ಕೆಳದಿ ರಾಜರು ತಮ್ಮದೊಂದು ಸ್ವತಂತ್ರ ವ್ಯಾಪಾರಿ ಹಡಗು ಪಡೆಯನ್ನು ಇಟ್ಟಿದ್ದರು. ಅವರ ಹಡಗಗಳು ವ್ಯಾಪಾರಕ್ಕೋಸ್ಕರ ಹಿಂದುಸ್ಥಾನದ ಬೇರೆಬೇರೆ ಬಂದರಗಳಿಗಷ್ಟೇ ಅಲ್ಲ, ಪರ್ಶಿಯನ್ ಆಖಾತದ ವರೆಗೂ ಮುಖ್ಯವಾಗಿ ಕುದುರೆಗಳ ವ್ಯಾಪಾರಕ್ಕೆ ಹೋಗುತ್ತಿದ್ದವು. ಈ ಸಂಗತಿಯು ೧೭೧೪ ರಲ್ಲಿ ಕೆಳದಿ ಬಸವಪ್ಪ ನಾಯಿಕ ಮತ್ತು ಪೋರ್ತುಗೀಜ ಇವರ ನಡುವೆ ಆದ ಒಪ್ಪಂದದಿಂದ ಗೊತ್ತಾಗುತ್ತದೆ. ಈ ಮೇರೆಗೆ ಈ ವೀರಶೈವ ರಾಜರು ವ್ಯಾಪಾರಕ್ಕೆ ಉತ್ತೇಜನ ಕೊಡುತ್ತಿದ್ದದರಿಂದ ಅನೇಕ ಯುರೋಪಿಯನ್ ವ್ಯಾಪಾರಿಗಳು ಕರ್ನಾಟಕದ ಬಂದರಗಳಲ್ಲಿ ತಮ್ಮ ಅಂಗಡಿಗಳನ್ನು ಸ್ಥಾಪಿಸಿದರು. ಇಂಗ್ಲೀಷರೂ, ಪೋರ್ತುಗೀಜರೂ ಈ ರಾಜರೊಡನೆ ಮೇಲಿಂದ ಮೇಲೆ ವ್ಯಾಪಾರೀ ಒಪ್ಪಂದಗಳನ್ನು ಮಾಡಿಕೊಂಡು, ಈ ಬಂದರಗಳಲ್ಲಿ ತಮ್ಮ ಅಂಗಡಿಗಳನ್ನು ಇಟ್ಟಿದ್ದರು. ಇಂಗ್ಲೀಷರು ಕಾರವಾರದಲ್ಲಿ ತಮ್ಮದೊಂದು ದೊಡ್ಡ ಅಂಗಡಿಯನ್ನು ಸ್ಥಾಪಿಸಿದರು. ಇವರು ಹುಬ್ಬಳ್ಳಿ, ಮೊದಲಾದ ಸ್ಥಲಗಳಲ್ಲಿ ಐವತ್ತುಸಾವಿರ ನೇಯಿಕಾರರ ಮಗ್ಗಗಳನ್ನು ಹಿಡಿದು ಅಲ್ಲಿ ಆದ ಬಟ್ಟೆಗಳನ್ನು ಯುರೋಪಖಂಡಕ್ಕೆ ಸಾಗಿ

ಸುತ್ತಿದ್ದರು. ಅವರು ಪಲ್ಯಾಳದಲ್ಲಿ ತಮ್ಮ ಅಂಗಡಿಯ ಶಾಖೆಯನ್ನು ಇಟ್ಟಿದ್ದರು. ಬ್ರೂಸಿಸ್ ಎಂಬ ಇತಿಹಾಸಕಾರನು ಕಾರವಾರ ಬಂದರದಿಂದ ಹೋಗುತ್ತಿದ್ದಷ್ಟು ಉತ್ತಮವಾದ ಅರಿವೆಯು ಯುರೋಪಖಂಡಕ್ಕೆ ಯಾವ ಬಂದರದಿಂದಲೂ ಹೋಗುತ್ತಿರಲಿಲ್ಲವೆಂದು ತನ್ನ ಗ್ರಂಥದಲ್ಲಿ ಬರೆದಿದ್ದಾನೆ. ಈ ಸಂಗತಿಗಳ ಮೇಲಿಂದ ಎಂಥ ಪ್ರಚಂಡವಾದ ವ್ಯಾಪಾರವು ಈ ವೀರಶೈವ ರಾಜರುಗಳ ಬಂದರುಗಳೊಳಗಿಂದ ಮೊದಲಿಗೆ ಸಾಗುತ್ತಿತ್ತು ಎಂಬುದನ್ನು ನಾವು ತರ್ಕಿಸಬಹುದು. ಆಗ ಇಲ್ಲಿ ಬಂದ ಯುರೋಪಿಯನ್ ಪ್ರವಾಸಿಗಳು ಹ್ಯಾಗೆ ಫ್ಲಾರೆನ್ಸದ ಅರಸರು ವ್ಯಾಪಾರೋದ್ಯೋಗಳಲ್ಲಿ ತೊಡಗಿರುವರೋ ಹಾಗೆಯೇ ಈ ಅರಸರಾದರೂ ತೊಡಗಿದ್ದಾರೆಂದು ಅವರನ್ನು ಬಣ್ಣಿಸಿ, ನುಡಿದಿರುವರು. ಆ ಕಾಲಕ್ಕೆ ಇವರ ರಾಜ್ಯದಲ್ಲಿ ಬ್ರಾಹ್ಮಣರು, ಮಠಸ್ಥರು ಸಹ ನೂರಾರು ಹೇರಿನ ಎತ್ತುಗಳನ್ನು ಇಟ್ಟುಕೊಂಡು ಘನತರವಾದ ವ್ಯಾಪಾರದಲ್ಲಿ ತೊಡಗಿರುತ್ತಿದ್ದರು. ಇದರಿಂದ ಸಹಜಿಕವಾಗಿಯೇ ದೇಶದಲ್ಲೆಲ್ಲ ಸಂಪತ್ತು ಮಿತಿಮಿಾರಿ ಬೆಳೆಯಿತು. ಇಕ್ಕೇರಿ ವರಹಗಳೆಂಬ ಬಂಗಾರದ ನಾಣ್ಯಗಳು ಇಡೀ ಕನ್ನಡ ಜಿಲ್ಹೆಗಳಲ್ಲಷ್ಟೇ ಅಲ್ಲ, ಮೈಸೂರ ಮತ್ತು ಧಾರವಾಡ ಸೀಮೆಗಳಲ್ಲಿ ಅಪಾರವಾಗಿ ನಡೆಯುತ್ತಿದ್ದವು. ಈ ರಾಜ್ಯಗಳ ಸಂಪತ್ತಿಯನ್ನು ನೋಡಿ ಮಾರಾಟರೂ, ಮುಸಲ್ಮಾನರೂ ಈ ಪ್ರಾಂತವನ್ನು ನುಗ್ಗಿ ಸೂರೆಮಾಡಲಿಕ್ಕೆ ಮೇಲಿಂದ ಮೇಲೆ ಪ್ರಯತ್ನಿಸುತ್ತಿದ್ದರು. ಇದರ ಮೇಲಿಂದ ಈ ಪ್ರದೇಶಗಳು ಆಗಿನ ಕಾಲಕ್ಕೆ ಪರರಾಜರ ಕಣ್ಣಿಗೆ ಎಷ್ಟು ಮಾತ್ಸರ್ಯಕ್ಕೆ ಕಾರಣವಾಗಿದ್ದವೆಂಬದು ಗೊತ್ತಾಗುತ್ತದೆ. ಶಿವಾಜಿಯೂ, ಸಂಭಾಜಿಯೂ ನಾಲ್ಕೈದು ಸಾರೆ ಹುಬ್ಬಳ್ಳಿಯನ್ನೂ ಕರ್ನಾಟಕದ ಬಂದರಗಳನ್ನೂ ಈ ಕಾಲಕ್ಕೆ ಸುಲಿಯಲಿಕ್ಕೆ ಯತ್ನಿಸಿದರು. ಆದರೆ ಅವೆಲ್ಲವುಗಳಿಂದ ಯಾವ ಮಹತ್ವದ ಅಹಿತ ಪರಿಣಾಮಗಳು ಈ ರಾಜ್ಯಗಳ ಮೇಲೆ ಒದಗಲಿಲ್ಲ. ಇದರ ಶ್ರೇಯಸ್ಸೆಲ್ಲ ಈ ವೀರಶೈವ ರಾಜರು ಕೈಕೊಂಡ ರಾಜ್ಯ ಪದ್ಧತಿಯ ಕಡೆಗೆ ಇರುತ್ತದೆಂದು ನಿರ್ವಿವಾದವಾಗಿ ನಾವು ಹೇಳಬಹುದು.

## ಒಕ್ಕಲುತನ ಸುಧಾರಣೆ

ಈ ರಾಜರ ಆಶ್ರಯದಿಂದ ಈ ಎರಡೂ ಜಿಲ್ಹೆಗಳಲ್ಲಿ ಒಕ್ಕಲುತನವಾ

ದರೂ ಅತ್ಯಂತ ಊರ್ಜಿತಾವಸ್ಥೆಗೆ ಬಂದಿತು. ಈ ಭಾಗದಲ್ಲಿ ಸುಂಠಿ, ಮೆಣಸು ಅನೇಕ ತರದ ಮಸಾಲೆಯ ಜಿನಸುಗಳು ಕಬ್ಬು, ಎಲೆ, ಅಡಿಕೆ ಇಂಥ ಕಿಮ್ಮತ್ತಿನ ಜಿನಸುಗಳು ಹೇರಳವಾಗಿ ಬೆಳೆಯುತ್ತಿದ್ದವು. ಇವುಗಳನ್ನು ಬೆಳೆಯತಕ್ಕ ತೋಟಗಳು ಈ ದೇಶದಲ್ಲಿ ಅಸಂಖ್ಯವಾಗಿದ್ದವು ಗೆಂಸೊಪ್ಪೆಯ ಸೀಮೆಯಲ್ಲಿ ಸುಂಠಿ ಬಹಳ ಬೆಳೆಯುತ್ತಿದ್ದು, ಅಲ್ಲಿ ಆಳುತ್ತಿದ್ದ ರಾಣಿಗೆ "ಸುಂಠಿಯ ರಾಣಿ" ಎಂಬ ಹೆಸರು ಯುರೋಪಖಂಡದಲ್ಲಿ ಉಂಟಾಗಿತ್ತು. ಅದರಂತೆಯೆ ಸ್ವಾದಿಯಪ್ರಾಂತದಲ್ಲಿಯೂ ಸುಂಠಿಯು ಹೆಚ್ಚಾಗಿ ಬೆಳೆಯುತ್ತಿತ್ತು. ಫ್ರಾಯರ್ ಎಂಬ ಪ್ರವಾಸಿಯು "ಸ್ವಾದಿಯ ಸುತ್ತುಮುತ್ತಲೂ ಬೆಳೆಯುತ್ತಿರುವ ಸುಂಠಿಯಷ್ಟು ಉತ್ತಮವೂ ಕಿಮ್ಮತ್ತಿನದೂ ಪೃಥ್ವಿಯಲ್ಲಿ ಎಲ್ಲಿಯೂ ಇಲ್ಲ" ಎಂದು ೧೬೭೭ ರಲ್ಲಿ ಬರೆದಿರುವನು ಈ ಸುಂಠಿಯು ಬೆಳೆಯುತ್ತಿದ್ದ ಪ್ರದೇಶದಿಂದ ಅರಸನಿಗೆ ಮೂವತ್ತುಲಕ್ಷ ಹೊನ್ನು ಉತ್ಪನ್ನವಾಗುತ್ತಿತ್ತು ಎಂದು ಇದೇ ಪ್ರವಾಸಿಯು ಬರೆದಿರುವನು. ಇವರ ಮೇಲಿಂದ ಅದನ್ನು ಬೆಳೆಯುವ ರೈತರಿಗೆ ಎಷ್ಟು ಲಾಭವು ಆಗುತ್ತಿರಬಹುದೆಂಬದನ್ನು ವಾಚಕರು ತಾವೇ ತರ್ಕಿಸಬಹುದು. ಹೆಮಿಲ್ಟನ್ ಎಂಬ ಪ್ರವಾಸಿಯು ೧೭೨೦ ರಲ್ಲಿ ಈ ಸ್ವಾದಿಯ ಪ್ರಾಂತದ ಬಗ್ಗೆ "ಇಲ್ಲಿಯ ಯಾವತ್ತೂ ಕಂದರಗಳು ನಾನಾಬಗೆಯ ಧಾನ್ಯಗಳಿಂದ ತುಂಬಿ ಹೋಗಿವೆ. ಮತ್ತು ಇಲ್ಲಿ ಬೆಳೆಯುತ್ತಿದ್ದ ಶುಂಠಿಯಷ್ಟು ಉತ್ತಮವಾದ ಶುಂಠಿಯು ಹಿಂದುಸ್ಥಾನದಲ್ಲಿ ಎಲ್ಲಿಯೂ ಬೆಳೆಯುವದಿಲ್ಲ" ಎಂದು ಬರೆದಿದ್ದಾನೆ. ಅದೇ ಮೇರೆಗೆ ೧೬೬೦ ರಲ್ಲಿ ಬ್ಯಾಲ್ಡಿಯಸ್ ಎಂಬ ಪ್ರವಾಸಿಯು "ಕೆನರಾ ದೇಶವು ಅಕ್ಕಿ ಮತ್ತು ಬೇರೆ ಧಾನ್ಯಗಳಿಂದ ತುಂಬಿಕೊಂಡಿರುತ್ತದೆ. ಬೇಕಾದಂಥ ಕೆಲಸಮಾಡಲು ಸಮರ್ಥರಾದ ಆರೋಗ್ಯವುಳ್ಳ ದೃಢಕಾಯರಾದ ಜನರಿಂದ ಈ ಪ್ರದೇಶವು ತುಂಬಿರುತ್ತದೆ" ಎಂದು ಬರೆದಿದ್ದಾನೆ. ಈ ಸಂಗತಿಗಳ ಮೇಲಿಂದ ಈ ಪ್ರಾಂತದ ಆಗಿನ ಒಕ್ಕಲುತನದ ಸ್ಥಿತಿಯಾದರೂ ಎಷ್ಟು ಊರ್ಜಿತಾವಸ್ಥೆಯಲ್ಲಿ ಇತ್ತು ಮತ್ತು ಒಕ್ಕಲಿಗರು ಎಷ್ಟು ಸುಖಿಯಾಗಿದ್ದರು ಎಂಬದನ್ನು ವಾಚಕರು ತಾವಾಗಿಯೇ ಊಹಿಸಬಹುದು.

## ದೊಡ್ಡ ಪಟ್ಟಣಗಳ ಪ್ರಾದುರ್ಭಾವವು.

ಈ ವೀರಶೈವರಾಜರ ಪೋಷಣೆಯಿಂದ ವ್ಯಾಪಾರ ಒಕ್ಕಲತನವು

ಬೆಳೆದದ್ದರಿಂದ ಸ್ವಾಭಾವಿಕವಾಗಿ ಈ ಪ್ರದೇಶಗಳಲ್ಲಿ ದೊಡ್ಡ ದೊಡ್ಡ ಪಟ್ಟಣಗಳು ಉದ್ಭವಿಸಿದವು. ಕಾರವಾರ ಮತ್ತು ಮಂಗಳೂರ ಜಿಲ್ಹೆಗಳಲ್ಲಿ ಸಾಂಪ್ರತ ಕಾಲಕ್ಕೆ ದೊಡ್ಡ ಪಟ್ಟಣಗಳೇ ಇಲ್ಲ. ಭಯಂಕರವಾದ ಅರಣ್ಯವು ಮಾತ್ರ ಗ್ರಾಮಗಳನ್ನು ಸುತ್ತಿಕೊಂಡು, ಘೋರ್ಗರೆಯುತ್ತದೆ. ಇಲ್ಲಿ ಯಾವ ತರದ ಕಲಾ ಕೌಶಲ್ಯಗಳು ಇರುವದಿಲ್ಲ. ಆದರೆ ಈ ಸ್ಥಿತಿಯು ಮೊದಲಿನ ಕಾಲದಲ್ಲಿ ಇರಲಿಲ್ಲ. ಸ್ವಾದಿಯ ರಾಜ್ಯದಲ್ಲಿ ಹಲ್ಯಾಳ, ಸಾಂಬ್ರಾಣಿ ಕಾರವಾರ, ಅಂಕೋಲಾ, ಮಿರ್ಜಾನ ಇವು ದೊಡ್ಡ ಪಟ್ಟಣಗಳಾಗಿದ್ದವು. ಇಟಲಿಯ ಪ್ರವಾಸಿಯಾದ ಗ್ಯಾಮಿಲಿಯು ೧೬೯೫ ರಲ್ಲಿ ಸ್ವಾದಿರಾಜ್ಯದಲ್ಲಿ ಪ್ರವಾಸಮಾಡಿದ್ದು ಅವನು "ಅರಸನು ಈಗ ಸಾವಸ್ರಾಣಿಯಲ್ಲಿ ವಾಸಿಸುತ್ತಾನೆ. ಇಲ್ಲಿ ದೊಡ್ಡ ವ್ಯಾಪಾರವು ಇದೆ. ಈ ಗ್ರಾಮದಿಂದ ಅವನಿಗೆ ಮೂರು ಲಕ್ಷ ರೂಪಾಯಿಗಳ ಉತ್ಪನ್ನವು ಆಗುತ್ತದೆ" ಎಂದು ಬರೆದಿದ್ದಾನೆ ಇದರಿಂದ ಈ ಗ್ರಾಮವು ಮೊದಲಿಗೆ ಎಷ್ಟು ಊರ್ಜಿತಾವಸ್ಥೆಯಲ್ಲಿ ಇರಬಹುದೆಂಬದನ್ನು ವಾಚಕರು ತರ್ಕಿಸಬಹುದು. ಇದೇ ಮೇರೆಗೆ ಕೆಳದಿಯ ರಾಜ್ಯದಲ್ಲಿ ಅನೇಕ ದೊಡ್ಡ ಶಹರಗಳು ಉತ್ಪನ್ನವಾಗಿದ್ದವು. ಅವುಗಳಲ್ಲಿ ಬಿದನೂರ ರಾಜಧಾನಿಯೇ ಅತ್ಯಂತ ಪ್ರಸಿದ್ಧವು. ಅದು ಒಂದು ವಿಸ್ತ್ರತವಾದ ಪಟ್ಟಣವಾಗಿತ್ತು. ಅದರ ಸುತ್ತಳತೆಯು ೮ ಮೈಲು ಇದ್ದು ಅಲ್ಲಿ ಶ್ರೀಮಂತರ ಸುಂದರವಾದ ಭವನಗಳು ಅಸಂಖ್ಯಾತವಾಗಿದ್ದವು. ಇರಾಣದ ರಾಯಭಾರಿಯಾದ ಅಬ್ದುಲ್ ರಝಾಕ್ಕನು "ಬಿದನೂರು ರಾಜಮಂದಿರಗಳಂಥ ಮನೆಗಳಿಂದಲೂ, ದೇವಕನ್ನಿಕೆಯರಂಥ ಸ್ತ್ರೀಯರಿಂದಲೂ, ತುಂಬಿಕೊಂಡಿದೆ" ಎಂದು ಬರೆದಿದ್ದಾನೆ. ಇದೇಮೇರೆಗೆ ಇಕ್ಕೇರಿಯಾದರೂ ದೊಡ್ಡ ಪಟ್ಟಣವಾಗಿತ್ತು. ಈ ಪಟ್ಟಣದ ಬಗ್ಗೆ ಡಿಲಾವೆಲ್ ಎಂಬ ಪ್ರವಾಸಿಯು "ಇದಕ್ಕೆ ಮೂರುಸುತ್ತಿನ ಕೋಟೆಯು ಇದ್ದು, ಅದು ಒಂದು ಸುಂದರವಾದ ಮೈದಾನಿನಲ್ಲಿ ಇದೆ. ಪಟ್ಟಣವು ಬಹಳ ದೊಡ್ಡದದೆ. ಅದು ಅನೇಕ ಗಿಡಗಳಿಂದ ಆಚ್ಛಾದಿತವಾಗಿ ದೊಡ್ಡ ರಾಜ ಮಾರ್ಗಗಳಿಂದಲೂ ಸರೋವರಗಳಿಂದಲೂ, ಗಿಡಗಳ ತೋಪುಗಳಿಂದಲೂ ತುಂಬಿ ಹೋಗಿದೆ" ಎಂದು ಬರೆದಿದ್ದಾನೆ. ಅದೇ ಮೇರೆಗೆ ಭಟಕಳ, ಹೊನ್ನಾವರ, ಮಂಗಳೂರ ಮೊದಲಾದ ಅನೇಕ ಗ್ರಾಮಗಳು ಕೆಳದಿಯ ಅರಸರ ಕಾಲಕ್ಕೆ ಶ್ರೀಮಂತರಿಂದ ತುಂಬಿದ ದೊಡ್ಡ ಪಟ್ಟಣಗಳಾಗಿದ್ದವು. ಅವುಗಳ ವೈಭವವನ್ನು ಯುರೋಪಿಯನ್ ಪ್ರವಾಸಿಗರು ತಮ್ಮ ಲೇಖಗಳಲ್ಲಿ ಬರೆದಿದ್ದು, ಅವೆಲ್ಲವುಗಳನು

ಇಲ್ಲಿ ಕೊಟ್ಟು ವಾಚಕರ ಮನಸ್ಸನ್ನು ನಾನು ಬೇಸರಗೊಳಿಸುವದಿಲ್ಲ. ಆ ಕಾಲಕ್ಕೆ ರಾಜ್ಯವಲ್ಲಿ ಒಕ್ಕಲತನ ವ್ಯಾಪಾರಗಳು ಹೆಚ್ಚಾಗಿ ಬೆಳೆದದ್ದರಿಂದ ಪಟ್ಟಣಗಳ ಸ್ಥಿತಿಯಾವರೂ ಮೇಲ್ಮೆಯನ್ನು ಹೊಂದುವದು ಸಹಜಕವೇ ಸರಿ. ಆದರೆ ಮುಂದೆ ಹೈದರನು ಇವೆರಡೂ ರಾಜ್ಯಗಳನ್ನು ಲಯ ಮಾಡಿದ ಬಳಿಕ ಈ ಯಾವತ್ತೂ ಪಟ್ಟಣಗಳು ಕುಗ್ಗಹತ್ತಿದವು. ಆ ಮೇಲೆ ಬ್ರಿಟಿಶ್ ರಾಜ್ಯವು ಸ್ಥಾಪಿಸಲ್ಪಟ್ಟಬಳಿಕ ಅವರು ರಾಜ್ಯಕಾರಭಾರವನಾಡುವ ಧೋರಣವೇ ಬೇರೆ ಯಾದ್ದರಿಂದ ಈ ಪಟ್ಟಣಗಳು ಮತ್ತಿಷ್ಟು ಹಾಳಾಗುತ್ತ ಹೋಗಿ ಅವುಗಳ ಅವಶೇಷಗಳು ಮಾತ್ರ ನಮ್ಮ ಕಣ್ಣಿಗೆ ಈಗ ಗೋಚರವಾಗುತ್ತವೆ.

## ಯುರೋಪಿಯನ್ ವ್ಯಾಪಾರಿಗಳು.

ರಾಜ್ಯಕಾರಭಾರದಲ್ಲಿ ಕೆಳದಿ ಮತ್ತು ಸ್ವಾದಿ ಅರಸರು ಸ್ವೀಕರಿಸಿದ ಧೋರಣದಿಂದ ದೇಶದಲ್ಲಿ ವ್ಯಾಪಾರೋದ್ಯೋಗಗಳು ಬೆಳೆಯಹತ್ತಲು ಯುರೋಪಿಯನ್ ರಾಷ್ಟ್ರಗಳು ಈ ವೀರಶೈವ ರಾಜರ ಸಖ್ಯತ್ವವನ್ನು ಬೇಸಬೇಕೆಂದು ಕೋರಿ, ಅವರೊಡನೆ ಒಪ್ಪಂದವನ್ನು ಮಾಡಿಕೊಂಡು ಅವರ ರಾಜ್ಯದಲ್ಲಿ ವ್ಯಾಪಾರ ಮಾಡಲು ಇಚ್ಛಿಸುತ್ತಿದ್ದರು. ಅವರೊಡನೆ ಈ ವೀರಶೈವ ರಾಜರು ಯಾವಧೋರಣದಿಂದ ವರ್ತಿಸುತ್ತಿದ್ದರೆಂಬದನ್ನು ತಿಳಿಯುವದು ಬಹಳ ಮಹತ್ವದ್ದದೆ. ಆದ್ದರಿಂದ ಈ ವಿಷಯವನ್ನು ಕುರಿತು ಸ್ವಲ್ಪದರಲ್ಲಿ ವಿವರಿಸುತ್ತೇನೆ.

ಈ ಕಾಲಕ್ಕೆ ಯುರೋಪಿಯನ್ ವ್ಯಾಪಾರಸ್ತರಲ್ಲಿ ಪೋರ್ತುಗೀಜರೇ ಮುಖ್ಯರಾಗಿದ್ದರು. ಇವರು ವಿಜಯನಗರದ ಅರಸರುಗಳ ಕಾಲಕ್ಕೆ ಅನೇಕ ವ್ಯಾಪಾರೀ ಹಕ್ಕುಗಳನ್ನು ಪಡೆದುಕೊಂಡು ಗೋವೆಯ ಸುತ್ತುಮುತ್ತಲಿನ ಪ್ರದೇಶವನ್ನು ತಮ್ಮ ಆಧೀನ ಮಾಡಿಕೊಂಡು ಆ ಭಾಗದಲ್ಲಿ ಅರಸರುಗಳಂತೆ ಆಳುತ್ತಿದ್ದರು. ವಿಜಯನಗರದ ರಾಜ್ಯವು ನಷ್ಟವಾದಬಳಿಕ ಇಂಗ್ಲಿಷ ಮತ್ತು ಡಚ್ಚ ವ್ಯಾಪಾರಸ್ತರೂ ಕೆಳದೀ ಮತ್ತು ಸ್ವಾದೀ ಅರಸರೊಡನೆ ವ್ಯಾಪಾರೀ ಒಪ್ಪಂದುಗಳನ್ನು ಮಾಡಿಕೊಂಡು, ಅವರ ಬಂದರಗಳಲ್ಲಿ ತಮ್ಮ ಅಂಗಡಿಗಳನ್ನು ಹಾಕಲಿಕ್ಕೆ ಯತ್ನಿಸಹತ್ತಿದರು. ಆದರೆ ಈ ರಾಜರು ಈ ಯುರೋಪಿಯನ್ ವ್ಯಾಪಾರಸ್ತರೊಡನೆ ಎಂದೂ ಒತ್ತಿಸಪಟ್ಟು ನಡೆಯು

ತ್ತ ಬಂದಹಾಗೆ ತೋರಲಿಲ್ಲ. ಅವರ ರಾಜ್ಯದಲ್ಲಿ ಅರಬರೂ ಮುಸಲ್ಮಾನರೂ ನಿರಾತಂಕವಾಗಿ ವ್ಯಾಪಾರಮಾಡಲು ಅನುಕೂಲತೆಗಳಿರುತ್ತಿದ್ದವು. ಆದರೆ ಈ ಯುರೋಪಿಯನ್ ವ್ಯಾಪಾರಸ್ಥರ ಕೂಡ ಯುದ್ಧದ ಹಡಗಗಳೂ ಶಸ್ತ್ರಾಸ್ತ್ರ ಸಮೇತರಾದ ದಂಡಾಳುಗಳೂ ಇರುತ್ತಿದ್ದರಿಂದ ಅವರೊಡನೆ ಈ ರಾಜರು ತಕ್ಕ ಒಪ್ಪಂದಗಳನ್ನು ಮಾಡಿಕೊಂಡು ಅವರಿಗೆ ತಮ್ಮ ರಾಜ್ಯದಲ್ಲಿ ಕಾಲಿಡಲು ಅಪ್ಪಣೆ ಕೊಡುತ್ತಿದ್ದರು. ಮತ್ತು ಅವರು ಒಂದುವೇಳೆ ವಿರೋಧವಾಗಿ ವರ್ತಿಸಿದರೆ ಅವರಿಗೆ ತಕ್ಕಶಾಸನಮಾಡಲೂ ಹಿಂದೆಗೆಯುತ್ತಿದ್ದಿಲ್ಲ ಇದರಿಂದ ಆ ಕಾಲಕ್ಕೆ ಈ ವ್ಯಾಪಾರಿಗಳೊಡನೆ ಒಮ್ಮೊಮ್ಮೆ ಯುದ್ಧಮಾಡುವ ಪ್ರಸಂಗಗಳೂ ಬರುತ್ತಿದ್ದವು.

ವಿಜಯನಗರದ ಅಂತ್ಯಕಾಲದಲ್ಲಿ ಪೋರ್ತುಗೀಜರು. ಅತ್ಯಂತ ಬಲಾಢ್ಯರಾಗಿದ್ದರು. ಆಗ ಅವರು ಕೆಳದಿಯ ರಾಜ್ಯದಲ್ಲಿದ್ದ ಹೊನ್ನಾವರದಲ್ಲಿ ತಮ್ಮ ಅಂಗಡಿಯನ್ನು ಇಟ್ಟಿದ್ದರು. ಮತ್ತು ಆ ಕೋಟೆಯೂ ಇವರ ದಂಡಾಳುಗಳ ಕಯ್ಯಲ್ಲಿ ಇತ್ತು. ಆ ಕಾಲಕ್ಕೆ ಕೆಳದಿಯಲ್ಲಿ ವೆಂಕಟಪ್ಪನಾಯಕನು ಆಳುತ್ತಿದ್ದನು. ಅವನಿಗೆ ವಿರೋಧವಾಗಿ ಈ ಪೋರ್ತುಗೀಜರು ವರ್ತಿಸಿದ್ದರಿಂದ ಅವರ ಮೇಲೆ ದಂಡೆತ್ತಿಹೋಗಿ. ವೆಂಕಟಪ್ಪನಾಯಕನು ಯುದ್ಧದಲ್ಲಿ ಸೋಲಿಸಿದ್ದನು. ಈ ರಾಜನು ಸ್ವತಂತ್ರನಾಗಿ ಸುತ್ತಲೂ ತನ್ನ ರಾಜ್ಯವನ್ನು ಬೆಳಿಸಿದ್ದನು. ಇದರಿಂದ ಅವನೊಡನೆ ಪೋರ್ತುಗೀಜರು ಒಂದು ವ್ಯಾಪಾರೀ ಒಪ್ಪಂದವನ್ನು ಮಾಡಬೇಣಿಸಿ, ೧೬೨೩ ರಲ್ಲಿ ತಮ್ಮದೊಂದು ರಾಯಭಾರವನ್ನು ಅವನ ಕಡೆಗೆ ಕಳಿಸಿದರು. ಇವರು ಆಗ ಆತನಿದ್ದ ಸ್ಥಳವಾದ ಇಕ್ಕೇರಿಗೆ ಹೋಗಲಾಗಿ, ತಮ್ಮೊಡನೆ ಸರಕುಗಳನ್ನು ಒಯ್ಯಲು ಹಡಗುಗಳನ್ನು ತಾರದೆ ಇದ್ದವರಿಂದ ಅವರನ್ನು ಕಾಣಲಿಕ್ಕೆ ಅರಸನು ಅಲ್ಲಗಳೆದನು. ಆದ್ದರಿಂದ ಪೋರ್ತುಗೀಜರು ಹಾಗೆಯೇ ಹಿಂದಿರುಗಿ ಬರಬೇಕಾಯಿತು! ಆದರೆ ೧೬೩೧ ರಲ್ಲಿ ವೀರಭದ್ರನಾಯಕನ ಕಾಲಕ್ಕೆ ಅವನ ಕಡೆಯಿಂದ ಪೋರ್ತುಗೀಜರು ವ್ಯಾಪಾರೀ ಹಕ್ಕುಗಳನ್ನು ಪಡೆದುಕೊಂಡು ಹೊನ್ನಾವರದಲ್ಲಿ ನಿಂತುಕೊಂಡು ವ್ಯಾಪಾರಮಾಡತೊಡಗಿದರು. ಈ ಪ್ರಕಾರ ಅವರು ಕೆಳದಿಯ ರಾಜ್ಯದಲ್ಲಿ ೧೬೫೩ ರವರೆಗೆ ತಮ್ಮ ವ್ಯವಹಾರ ಸಾಗಿಸಿದರು. ಆದರೆ ಈ ಕಾಲಕ್ಕೆ ಅವರು ಕೆಳದಿಯ ರಾಜ್ಯದ ವ್ಯಾಪಾರವನ್ನು ಗೋವೆಗೆ ತಿರುಗಿಸುವ ಪ್ರಯತ್ನ ನಡಿಸಿದ್ದರಿಂದಲೂ ಅವರ ರಾಜ್ಯದಲ್ಲಿ ಜನರನ್ನು ಕ್ರಿಸ್ತೀಧರ್ಮಕ್ಕೆ ಮತಾಂ

ತರ ಮಾಡುವ ಕಾರ್ಯವನ್ನು ಕೈಕೊಂಡಿದ್ದರಿಂದಲೂ ಆಗಿನ ಕೆಳದಿಯ ರಾಜನಾದ ಶಿವಪ್ಪನಾಯಕನು ಪೋರ್ತುಗೀಜರ ಠಾಣ್ಯಗಳನ್ನು ಕಿತ್ತುಹಾಕಿ ಅವರನ್ನು ತನ್ನ ರಾಜ್ಯವನ್ನು ಬಿಟ್ಟು ಹೊರಗೆ ಹಾಕಿದನು!

ಇದೇ ಕಾಲಕ್ಕೆ ಇಂಗ್ಲಿಷರೂ ಕರ್ನಾಟಕದ ಬಂದರಗಳಲ್ಲಿ ಕಾಲೂರಿ ನಿಲ್ಲಲಿಕ್ಕೆ ಯತ್ನಿಸಹತ್ತಿದರು. ಅವರು ೧೬೩೮ ರಲ್ಲಿ ಆಗ ಸ್ವಾದಿಯ ರಾಜ್ಯದಲ್ಲಿದ್ದ ಕಾರವಾರದಲ್ಲಿಯೂ ಕೆಳದಿಯ ರಾಜ್ಯದಲ್ಲಿದ್ದ ಭಟಕಳದಲ್ಲಿಯೂ ತಮ್ಮ ಅಂಗಡಿಗಳನ್ನು ಸ್ಥಾಪಿಸಿದರು. ಈ ಅಂಗಡಿಗಳು ೧೬೬೫ ರ ವರೆಗೆ ವ್ಯಾಪಾರಮಾಡುತ್ತ ಊರ್ಜಿತಸ್ಥಿತಿಗೆ ಬಂದವು. ಆದರೆ ಆ ವರುಷ ಶಿವಾಜಿಯ ದೌಡುಗಳು ಈ ಭಾಗದಲ್ಲಿ ಆದ್ದರಿಂದ ಇವರ ಅಂಗಡಿಗಳು ಅವರ ದಂಡಾಳುಗಳಿಂದ ಸುಲಿಯಲ್ಪಟ್ಟವು. ಇದರಿಂದ ಅವರಿಗೆ ಹಾನಿಯುಂಟಾಯಿತು. ಆದರೂ ಮುಂದೆ ಈ ಅಂಗಡಿಗಳು ಪುನಃ ಭರಭರಾಟೆಯ ಸಿತಿಗೆ ಬಂದವು. ಆದರೆ ೧೬೭೦ ರಲ್ಲಿ ಭಟಕಳದಲ್ಲಿದ್ದ ಅವರ ಅಂಗಡಿಯಲ್ಲಿ ಅವರದೊಂದು ನಾಯಿಯು ಒಂದು ಆಕಳವನ್ನು ಕೊಲ್ಲಲು ಜನರು ಸಿಟ್ಟಿಗೆದ್ದು, ಇಂಗ್ಲಿಷರ ವಖಾರದ ಮೇಲೆ ಹಲ್ಲೆಯನ್ನು ಮಾಡಿ ಅಲ್ಲಿದ್ದವರನ್ನೆಲ್ಲ ಕೊಂದು, ಅವರ ಅಂಗಡಿಯನ್ನೆ ಆ ಬಂದರದಿಂದ ಕಿತ್ತುಹಾಕಿದರು! ಇದರಿಂದ ಇಂಗ್ಲಿಷರಿಗೆ ಕೆಳದಿಯ ರಾಜ್ಯಕ್ಕೆ ಶರಣು ಹೊಡೆಯಬೇಕಾಯಿತು. ಈ ಸಂಧಿಯನ್ನು ಸಾಧಿಸಿ ಪೋರ್ತುಗೀಜರು ಮರುವರುಷ ಕೆಳದಿಯ ರಾಜರೊಡನೆ ಮತ್ತೊಂದು ವ್ಯಾಪಾರೀ ತಹನಾಮೆಯನ್ನು ಮಾಡಿಕೊಂಡರು. ಇದರಿಂದ ಅವರು ಬಾರ್ಕಾಲೂರ, ಹೊನ್ನಾವರ ಮತ್ತು ಮಂಗಳೂರ ಈ ಸ್ಥಳಗಳಲ್ಲಿ ತಮ್ಮ ಅಂಗಡಿಗಳನ್ನು ಸ್ಥಾಪಿಸುವ ಹಕ್ಕನ್ನು ಪಡೆದರು. ಮತ್ತು ಅವರು ಅಲ್ಲಿಯೇ ವ್ಯಾಪಾರ ಮಾಡುತ್ತ ಬಂದರು. ಮುಂದೆ ೧೭೦೭ ರಲ್ಲಿ ಬೇರೆ ಕೆಲವು ಸ್ಥಳಗಳಲ್ಲಿ ಅಂದರೆ ಮಿರ್ಜಾನ, ಚಂದಾವರ, ಭಟಕಳ ಈ ಸ್ಥಳಗಳಲ್ಲಿಯೂ ಕೂಡ ತಮ್ಮ ಅಂಗಡಿಗಳನ್ನು ಸ್ಥಾಪಿಸಲು ಕೆಳದಿಯ ರಾಜರಿಂದ ಸಮ್ಮತಿಯನ್ನು ಪಡೆದರು.

ಇಂಗ್ಲಿಷರು ಕೆಳದಿಯ ರಾಜ್ಯದಿಂದ ಹೊರಗೆ ಹಾಕಲ್ಪಟ್ಟ ಬಳಿಕ ಸ್ವಾದಿಯ ರಾಜ್ಯದಲ್ಲಿಯೇ ಹೆಚ್ಚಾಗಿ ತಮ್ಮ ವ್ಯಾಪಾರವನ್ನು ಸಾಗಿಸಿದರು. ಒಳಗಿನ ಕರ್ನಾಟಕ ಭಾಗದೊಡನೆ ಅವರು ಆಗ ಮಾಡುತ್ತಿದ್ದ ವ್ಯಾಪಾರವು ಬಹು ದೊಡ್ಡದಾಗಿತ್ತು. ಆದರೆ ೧೭೧೫ ರಲ್ಲಿ ಅವರಿಗೂ ಸ್ವಾದಿಯ

ರಾಜನಾದ ಬಸವಲಿಂಗ ರಾಜನಿಗೂ ಮನಸ್ತಾಪವು ಉಂಟಾಯಿತು. ಅದರಿಂದ ಇಂಗ್ಲಿಷರು ಕಾರವಾರದಿಂದ ತಮ್ಮ ಅಂಗಡಿಯನ್ನೇ ಕೀಳುವ ಪ್ರಸಂಗವು ಬಂದಿತು. ಇಂಗ್ಲಿಷರು ಒಡೆದು ಬಂದ ಒಂದು ಹಡಗವನ್ನು ತಮ್ಮ ವಶಮಾಡಿಕೊಂಡಿದ್ದರು. ಇದಕ್ಕೆ ಬಸವಲಿಂಗರಾಜನು ಸಮ್ಮತಿಸದೆ ಆ ಹಡಗವನ್ನು ತನ್ನ ವಶಕ್ಕೆ ಕೊಡಲು ಇಂಗ್ಲಿಷರಿಗೆ ಕೇಳಿದನು. ಅದಕ್ಕೆ ಅವರು ಒಪ್ಪಲಿಲ್ಲ. ಇವರಿಂದ ಬಸವಲಿಂಗರಾಜನು ಅವರ ವಖಾರವನ್ನು ಮುತ್ತಿದನು. ಆಗಿನ ಇವರ ವಖಾರಗಳೆಂದರೆ ಕೋಟೆಗಳಂತೆ ಇರುತ್ತಿದ್ದವು. ಮುತ್ತಿಗೆಯು ಸಾಗಿರಲಾಗಿ ಒಬ್ಬ ಮುಸಲ್ಮಾನನ ಮಧ್ಯಸ್ತಿಕೆಯಿಂದ ಬಸವರಾಜನು ಮುತ್ತಿಗೆಯನ್ನು ಎಬ್ಬಿಸಿದನು. ಆದರೆ ಬಸವರಾಜನು ಇಂಗ್ಲಿಷರೊಡನೆ ವೈರಭಾವದಿಂದಲೇ ವರ್ತಿಸ ಹತ್ತಿದನು. ಇದರಿಂದ ಇಂಗ್ಲಿಷರು ಕಾರವಾರದ ತಮ್ಮ ಅಂಗಡಿಯನ್ನೇ ಕಿತ್ತುಕೊಂಡು ಹೋಗಬೇಕಾಯಿತು!

ಇತ್ತ ಪೋರ್ತಗೀಜರು ಕೆಳದಿಯ ರಾಜನೊಡನೆ ೧೭೦೭ ರಲ್ಲಿ ಒಡಂಬಡಿಕೆ ಮಾಡಿಕೊಂಡಿದ್ದರೂ ೧೭೧೩ ರಲ್ಲಿ ಬಸವಪ್ಪ ನಾಯಕನೊಡನೆ ಅವರು ಜಗಳ ತೆಗೆದರು. ಕೆಳದಿಯ ಹಡಗಪಡೆಯವರು ತಮ್ಮ ಪಾಸು ಇಲ್ಲದೆ ಪರದೇಶಗಳಲ್ಲಿ ವ್ಯಾಪಾರ ಮಾಡಕೂಡದೆಂಬ ಒಂದು ನೆವತೆಗೆದು ಪೋರ್ತಗೀಜರು ಅಕಸ್ಮಾತ್ತಾಗಿ ತಮ್ಮ ಯುದ್ಧದ ಹಡಗಗಳನ್ನು ತೆಗೆದುಕೊಂಡು ಬಂದು ಕೆಳದಿ ರಾಜರ ಬಂದರಗಳಲ್ಲಿಯ ಅವರ ಹಡಗುಗಳನ್ನು ನಾಶಮಾಡುತ್ತ ಹೊರಟರು. ಅವರು ಕುಮಟೆಯಲ್ಲಿಯ ಅವರ ೧೧ ಹಡಗಗಳನ್ನು ಸುಟ್ಟರು. ಮತ್ತು ಬಾರ್ಕಾಲೂರಲ್ಲಿಯ ೧೦ ಹಡಗಗಳನ್ನು ಸುಟ್ಟರು. ಮತ್ತು ಆ ಕೋಟೆಯನ್ನು ಹಿಡಿದುಕೊಂಡರು. ಆದರೆ ಬಸವಪ್ಪ ನಾಯಕನು ಪ್ರತೀಕಾರವಾಗಿ ಏನು ಮಾಡಿದನೆಂಬದರ ವಿವರವು ನಮಗೆ ತಿಳಿದಿಲ್ಲ. ಆದರೆ ಕಡೆಗೆ ಉಭಯ ಪಕ್ಷಗಳಲ್ಲಿ ಒಪ್ಪಂದವಾಗಿ, ಇದರಿಂದ ಕೆಳದಿಯ ಹಡಗುಗಳಲ್ಲಿ ಎರಡು ಹಡಗುಗಳು ಇರಾಣ ಆಖಾತಕ್ಕೆ ಹೋಗಬಹುದೆಂತಲೂ ಮಂಗಳೂರಲ್ಲಿ ಮಾತ್ರ ಪೋರ್ತಗೀಜರು ಅಂಗಡಿಯನ್ನು ಇಡಬೇಕೆಂತಲೂ, ಕ್ರಿಶ್ಚನ್ನರಿಲ್ಲದ ಸ್ಥಳಗಳಲ್ಲಿ ಪೋರ್ತಗೀಜರು ತಮ್ಮ ಚರ್ಚಗಳನ್ನು ಎಂದೂ ಕಟ್ಟಕೂಡದೆಂತಲೂ, ಅವರು ಯಾರನ್ನೂ ಬಲಾತ್ಕಾರದಿಂದ ಕ್ರಿಸ್ತರನ್ನು ಮಾಡಕೂಡದೆಂತಲೂ, ಕೆಳದಿಯ ರಾಜರು ಪೋರ್ತುಗೀಜರ ಮುಖಾಂತರವಾಗಿಯೇ ತಮ್ಮ ವ್ಯಾಪಾರೀ

ಜೀನಸಗಳನ್ನು ಕಳಿಸಬೇಕೆಂತಲೂ, ಕೆಳದಿಯ ರಾಜರು ಮಿಶನರಿಗಳಿಗೆ ಉಪದ್ರವ ಕೊಡಬಾರದೆಂತಲೂ ಉಭಯ ಪಕ್ಷಗಳ ನಡುವೆ ಶರ್ತುಗಳು ಆದವೆಂದು ಪೋರ್ತಗೀಜ ಗ್ರಂಥಕಾರರಿಂದ ತಿಳಿದು ಬರುತ್ತದೆ.

ಇಂಗ್ಲಿಷರು ಸ್ವಾದಿಯ ಬಸವರಾಜನು ಇರುವ ವರೆಗೂ ಕಾರವಾರದಲ್ಲಿ ತಮ್ಮ ಅಂಗಡಿಯನ್ನು ಇಡಲು ಶಕ್ಯವಾಗಲಿಲ್ಲ. ಆದರೆ ಅವನ ತರುವಾಯ ಅವರೂ ಪೋರ್ತಗೀಜರೂ ಸ್ವಾದಿಯ ರಾಜ್ಯದ ಬಂದರುಗಳಲ್ಲಿ ಪುನಃ ತಮ್ಮ ಅಂಗಡಿಗಳನ್ನು ಸ್ಥಾಪಿಸಿದರು. ಈ ಕಾಲಕ್ಕೆ ಮರಾಟರ ದಾಳಿಗಳು ಸ್ವಾದಿಯ ರಾಜ್ಯದ ಮೇಲೆ ಆಗಿಂದಾಗ್ಗೆ ಬಂದು ಬೀಳುತ್ತಿದ್ದವು. ಅವುಗಳಲ್ಲೊಂದರಲ್ಲಿ ಸ್ವಾದಿಯ ರಾಜರು ಪೋರ್ತಗೀಜರ ಸಹಾಯವನ್ನು ಹೊಂದಿದರು. ಪೋರ್ತಗೀಜ ಮತ್ತು ಇಂಗ್ಲಿಷ ಇವರ ನಡುವೆ ಯಾವಾಗಲೂ ವ್ಯಾಪಾರೀಮೇಲಾಟಗಳು ನಡೆಯುತ್ತಿದ್ದವು. ಆದರೆ ಸ್ವಾದಿ ಮತ್ತು ಕೆಳದಿಯ ರಾಜ್ಯಗಳು ಹಾಳಾಗುವ ವರೆಗೂ ಅಂದರೆ ೧೭೬೦ರ ವರೆಗೆ ಅವರಿಗೂ ಈ ಯುರೋಪಿಯನ್ ವ್ಯಾಪಾರಸ್ಥರಿಗೂ ವಿಶೇಷ ತೊಂದರೆಯ ಸಂಗತಿಗಳ ಸಂಭವಿಸಿದ ಹಾಗೆ ತೋರಿಬರುವದಿಲ್ಲ. ಉಭಯ ಪಕ್ಷದವರೂ ಸಮಾಧಾನ ರೀತಿಯಿಂದ ತಮ್ಮ ಉದ್ಯೋಗಗಳನ್ನು ಮಾಡುತ್ತ ಬಂದ ಹಾಗೆ ತೋರುತ್ತದೆ.

ಮೇಲ್ಕಂಡ ಸಂಗತಿಗಳ ಮೇಲಿಂದ ಈ ಯುರೋಪಿಯನ್ ವ್ಯಾಪಾರಸ್ಥರು ಮೊಟ್ಟ ಮೊದಲು ಹಿಂದುಸ್ಥಾನಕ್ಕೆ ಬಂದ ಕಾಲಕ್ಕೆ ಹ್ಯಾಗೆ ವರ್ತಿಸುತ್ತಿದ್ದರೆಂಬದನ್ನು ಕಂಡು ಹಿಡಿಯುವದು ಬಹು ಬೋಧಪ್ರದವಾಗಿರುತ್ತದೆ. ಇವರ ಮೂಲ ಉದ್ದೇಶವು ತಮ್ಮ ವ್ಯಾಪಾರ ಬೆಳಿಸುವದಿದ್ದರೂ ಅವರು ಈ ದೇಶದ ಅರಸರ ರಾಜಕೀಯ ಕಾರಭಾರಗಳಲ್ಲಿ ಅನುಮಾನವಿಲ್ಲದೆ ಕೈಹಾಕುತ್ತಿದ್ದರು. ಅವರ ಹತ್ತರ ಯಾವಾಗಲೂ ಯುದ್ಧದಲ್ಲಿ ನುರಿತ ದಂಡಾಳುಗಳೂ ಯುದ್ಧದ ಹಡಗುಪಡೆಗಳೂ ಇರುತ್ತಿದ್ದವು. ಪ್ರಸಂಗಬಂದರೆ ಯುದ್ಧ ಮಾಡಲು ಅವರು ಸಿದ್ಧರಿರುತ್ತಿದ್ದರು. ಮತ್ತು ಹಿಂದೀ ರಾಜರೊಡನೆ ಒಪ್ಪಂದ ಮಾಡಿಕೊಂಡು ಕೋಟೆಕೊತ್ತಲಗಳನ್ನು ಕಟ್ಟಿಕೊಂಡು ಪ್ರದೇಶಗಳನ್ನು ಸಹ ಆಕ್ರಮಿಸಲಿಕ್ಕೆ ಮುಂದಾಗುತ್ತಿದ್ದರು. ಇವರಲ್ಲಿ ಪೋರ್ತಗೀಜರು ಧರ್ಮಾಂಧರಾಗಿ ಜನರನ್ನು ಕ್ರಿಸ್ತೀ ಧರ್ಮಕ್ಕೆ ಬಲಾತ್ಕಾರದಿಂದ ಸಹ ಧರ್ಮಾಂತರಮಾಡಲಿಕ್ಕೆ ಹಿಂದುಮುಂದೆ ನೋಡುತ್ತಿದ್ದಿಲ್ಲ. ಈ ಮೇರೆಗೆ ಈ ಯುರೋಪಿಯನ್ ವ್ಯಾಪಾರಸ್ಥರ ಪದ್ಧತಿಯಾ

ಗಿತ್ತು. ಈ ಯುರೋಪಿಯನ್ ವ್ಯಾಪಾರಿಗಳು ಕರ್ನಾಟಕದ ಬಂದರಗಳಂತೆಯೇ ಸುರತ, ಮದ್ರಾಸ, ಮತ್ತು ಕಲಕತ್ತೆಯಲ್ಲಿಯೂ ತಮ್ಮ ಅಂಗಡಿಗಳನ್ನು ಆಗ ಸ್ಥಾಪಿಸಿದ್ದರು. ಮದ್ರಾಸ ಮತ್ತು ಕಲಕತ್ತೆಯ ಅಂಗಡಿಯವರು ತಮ್ಮ ಸಮೀಪವಿದ್ದ ಆಗಿನ ಹಿಂದೀ ರಾಜರ ರಾಜ್ಯ ಕಾರಭಾರದಲ್ಲಿ ಕೈಹಾಕಿ ಹ್ಯಾಗೆ ಅವರ ರಾಜ್ಯಗಳನ್ನು ಸೆಳೆದುಕೊಂಡರೆಂಬದನ್ನು ಹಿಂದುಸ್ತಾನ ದೇಶದ ಇತಿಹಾಸವನ್ನು ಕಲಿತ ಪ್ರತಿಯೊಬ್ಬ ವಿದ್ಯಾರ್ಥಿಗೂ ಗೊತ್ತು ಇದೆ. ಇದೇ ಕಾಯಕವನ್ನು ಈ ಯುರೋಪಿಯನ್ ವ್ಯಾಪಾರಸ್ತರು ಕೆಳದೀ ಮತ್ತು ಸ್ವಾದಿಯ ರಾಜರ ಕೂಡ ಪ್ರಾರಂಭಿಸಿದ್ದರು. ಆದರೆ ಈ ರಾಜರು ಬಲಾಢ್ಯರೂ ಬಹಳ ಜಾಣರೂ ಆಗಿದ್ದರು. ಆದ್ದರಿಂದ ಇವರು ಈ ಯುರೋಪಿಯನ್ ವ್ಯಾಪಾರಸ್ತರ ಜಾಲಕ್ಕೆ ಒಳಗಾಗಲಿಲ್ಲ. ಮತ್ತು ಅವರು ಅವರ ಮಹತ್ವಾಕಾಂಕ್ಷೆಗಳಿಗೆ ಏನೂ ಸಂಧಿಯನ್ನು ತಮ್ಮ ರಾಜ್ಯದಲ್ಲಿ ಕೊಡ ಲಿಲ್ಲ. ಇಷ್ಟೇ ಅಲ್ಲ, ತಮ್ಮ ಸಾಮರ್ಥ್ಯದಿಂದ ಅವರನ್ನು ಚನ್ನಾಗಿ ತಮ್ಮ ಆಧೀನದಲ್ಲಿ ಇಟ್ಟುಕೊಂಡಿದ್ದರು. ಆದರೆ ಈ ವ್ಯಾಪಾರಿಗಳ ಕಡೆಯಿಂದ ತಾವು ಮಾತ್ರ ಸಂಪೂರ್ಣವಾಗಿ ವ್ಯಾಪಾರದ ಲಾಭವನ್ನು ಪಡೆದುಕೊಂಡು ತಮ್ಮ ದೇಶದ ವ್ಯಾಪಾರೋದ್ಯೋಗಗಳನ್ನು ಅತ್ಯಂತ ಅಭಿವೃದ್ಧಿಯ ಸ್ಥಿತಿಗೆ ತಂದು ಕೊಂಡರು. ಒಂದು ವೇಳೆ ಈ ರಾಜರು ಅರ್ಕಾಟದ ಮಹಮ್ಮದಅಲ್ಲಿ ಅಥವಾ ಮಿರ್ಜಾಫರನಂಥ ಅದೂರದರ್ಶಿ ಮತ್ತು ಹೇಡಿಗಳಾದ ರಾಜರು ಆಗಿದ್ದರೆ, ಕರ್ನಾಟಕವು ಎಂದೋ ಈ ಪಾಶ್ಚಿಮಾತ್ಯರಾಷ್ಟ್ರದವರ ಅಂಕಿತವಾಗುವ ಪ್ರಸಂಗವು ಒದಗುತ್ತಿತ್ತು. ಆದರೆ ಸ್ವಾದಿಯ ಮತ್ತು ಕೆಳದಿಯ ರಾಜರು ತಮ್ಮ ಜಾಣತನದ ರಾಜ್ಯಕಾರಭಾರದಿಂದ ಈ ಯುರೋಪಿಯನ್ ವ್ಯಾಪಾರಸ್ಥರ ಬೇಳೆಯನ್ನು ತಮ್ಮ ರಾಜ್ಯದಲ್ಲಿ ಏನೂ ಬೇಯಗೊಡಲಿಲ್ಲ. ಈ ಸಂಗತಿಯನ್ನು ಪ್ರತಿಯೊಬ್ಬ ಕರ್ನಾಟಕಸ್ತನು ಲಕ್ಷಿಸತಕ್ಕದ್ದಾಗಿದೆ.

ಈ ಮೇರೆಗೆ ನಾನು ಈ ವೀರಶೈವ ರಾಜರು ಯಾವ ತರದ ರಾಜಕೀಯ ಧೋರಣವುಳ್ಳವರಾಗಿದ್ದರು, ಅವರು ವ್ಯಾಪಾರ, ಒಕ್ಕಲತನಗಳಿಗೆ ಹ್ಯಾಗೆ ಸಹಾಯಮಾಡಿದರು, ಮತ್ತು ಇದರಿಂದ ಕರ್ನಾಟಕವು ಹ್ಯಾಗೆ ಸಂಪತ್ತಿನಲ್ಲಿ ಅಭಿವೃದ್ಧಿಯನ್ನು ಹೊಂದಿತು, ಈ ವಿಷಯವಾಗಿ ಈ ಲೇಖದಲ್ಲಿ ವಿವೇಚಿಸಿದ್ದೇನೆ. ಇದರಂತೆಯೇ ಈ ರಾಜರು ವಾಙ್ಮಯ ಮತ್ತು ಅಂತಸ್ಥರಾಜ್ಯ

ಕಾರಭಾರ ಇವುಗಳಲ್ಲಿ ಅತ್ಯಂತ ಸುಧಾರಣೆಯನ್ನು ಮಾಡಿದ್ದಾರೆ. ಇದರ ವಿವರಣೆಯನ್ನು ನಾನು ಶಿವಾನುಭವದ ಮುಂದಿನ ಸಂಚಿಕೆಯಲ್ಲಿ ಮಾಡುವೆನು.

---

# ಮೋಹತ್ಯಾಗ

(ಲೀ. ಲ. ಅ. ಶಿರಹಟ್ಟಿ ಮಾಸ್ತರ ವಿಜಾಪುರ)

---

## (ವಾರ್ಧಿಕ ಷಟ್ಪದಿ)

ಅಡಿಗಡಿಗೆ ಬಂದೊದಗುತಿಹ ಕ್ರೂರ ಸಂಸಾರ-।
ದೆಡರುಗಳ ನೊಡನೊಡನೆ ಯೆಡಹುತ್ತ ಮುಗ್ಗುತ್ತ ।
ಕಡು ಸುಖವ ಪಡೆಯಲೆಂದೇ ಮತ್ತೆ ನಿಶ್ಚಯಿಸಿ ಬಲು ಕಷ್ಟ ಪಡುತಿರಲ್ಕೆ ॥
ಕಡೆಗೆ ಸುಖ ಲೇಶವನು ಕಾಣದಾನೊಂದುದಿನ ।
ಕಡುನೊಂದು ಮಿಗಿಬೆಂದು ಬಸವಳಿದು ಬಿಸುಸುಯ್ದು ।
ನಡುರಾತ್ರಿಯಲಿ ತೊಲಗಿ ಮಂದಿರವ ನಡೆದೆ ನಾನಂತರಂಗದ ಶಾಂತಿಗೆ॥೧॥

ಲೌಕಿಕದ ಹಂಗನುಳಿದಿರ್ಪ ನಾನಿರುಳೊಳೇ-।
ಕಾಕಿಯಾಗಿರ್ದೊಡಂ ಬದಿಗಾಯ್ತು ಕಾನನದ ।
ಭೀಕರತೆ; ಸೃಷ್ಟಿ ಸೌಂದರ್ಯಮಂ ಸ್ಪಷ್ಟವಾಗೀಕ್ಷಿಸುತ ನಡೆದಿರಲ್ಕೆ ॥
ಆಕಾಶದಲಿ ಹೊಳೆವ ತಾರಾಗಣದಿ ಶೋಭಿ-।
ಪಾ ಕುಮುದಪತಿಯಮೃತ ಕಿರಣಂಗಳಿಂ ಮನವ ।
ನಾಕರ್ಷಿಸುವ ತೆರದೆ ತಿರೆ ಬೆಳಗುತಿರೆ ಕಂಡೆನೇ ವೇಳ್ಪಿನಾ ಶೋಭೆಯಂ ॥೨॥

ಘನತರಾಮೋದವಂ ಬೀರ್ವ ಪೂರ್ಣೇಂದುವಿನ ।
ತನಿಗಂಪು ರಾತ್ರಿವಧುವಿನ ಶೋಭಿಸುವ ಬಿಳ್ಪು ।
ವನದೊಳಿಹ ತರುಲತಾಳಿಗಳಪೂಗಂಪು ಸಲೆ ಮೋದವನು ಪಸರಿಸುತಿರೆ॥
ಮನದ ದುಗುಡವು ತೊಲಗಿತೊಂದರಕ್ಷಣದಿ ನ-।
ನ್ನನೆ ನಾನು ಮರೆದು ತಿರುತಿರುಗಿ ದಿಶೆದಿಶೆಗಳಂ ।
ಮನದಣಿಯೆ ನೋಡಿ ಹರುಷದೊಳಿರಲು ಕಂಡೆನೊಂದಾಶ್ಚರ್ಯಮಂ ಮುಗಿಲೊಳು॥೩॥

ಪಡುವಣಾದ್ರಿಯೊಳೊಂದು ನಕ್ಷತ್ರಮಣಿ ಹೊಳೆದು ।
ಕಡುಕಾಂತಿಯಿಂ ಮೆರೆಯುತಿರಲದಂ ಕಂಡು ಮನ ।
ಬಿಡದೆ ಹರಿಯುತಿರಲ್ಕೆ ತತ್‍ಕ್ಷಣದಿ ಕಡುಪಾತಕಿಯು ಪತಿತನಪ್ಪಂದದೆ॥
ಪೊಡವಿಗಭಿಮುಖವಾಗಿ ತತ್‍ಪ್ರಕಾಶವ ತೊಲಗಿ ।
ಕಡುಬೇಗದಿಂದುರುಳಿತಾ ತಾರೆ ನೋಡಿನಾಂ ।
ನಡುಗಿದೆನು ಮೇಣ್ ನುಡಿದೆನೀ ನುಡಿಗಳಂ ನಿಂದು ನೆರೆಯರಿವು ಮರವಾಗಲು ॥೪॥

ಎಲೆ ಮರುಳೆ ಜಡಮತಿಯ ತಾರೆ, ನಿಜದಾಣಮಂ ।
ತೊಲಗಿ ಧರೆಗೈತಂದೆಯೇಕೆ? ನೀಂ ಮೇಲಿರುವ ।
ಲಲಿತಸೊಗಸಿನ ಸುಗ್ಗಿಯಾಗಿರುವ ಸಗ್ಗಮಂ ಬಿಟ್ಟ ನಿನಗೇನೆಂಬೆನು ॥
ಹೊಳೆವ ಹರಳಂತೆ ಕಂಗೊಳಿಪ ನೀನಿಳೆಗಿಳಿಯೆ ।
ಶಿಲೆಯಾದೆಯೆಂಥ ದುರ್ದೈವಿಯಾಕಾಶದಿಂ ।
ನೆಲವೆಷ್ಟು ದೂರಿರ್ಪುದೆಂಬುದಂ ಬಲ್ಲೆಯಾ? ನಿನಗರಿವುಮರವಾದುದೇ ॥೫॥

ಒಪ್ಪುವೀಮನೆ ತೊಳಗುತಿಹ ಮಣಿಮಯದ ಗೋವು ।
ಉಪ್ಪರಿಗೆಗಳ ಮಂದಿರಂಗಳಂ ನೋಡಿಮನ ।
ವೊಪ್ಪಲೀಸುಖವಾಸದಾಶೆಯಿಂ ನೀಂ ಬಂದೆಯಾದೊಡಾಕಲ್ಪನೆಯೊಳು ॥
ತಪ್ಪಿದಲೆ ಮಂದಿರಗಳಿವು ಗೂಗೆಕಾಗೆಹುಳ ।
ಹುಪ್ಪಡಿಗಳಾವಾಸಮಾದಪವು ದೈವದಿಂ ।
ಮುಪ್ಪಡಿಸಿಮುರಿದು ಧರೆಗೊರಗಿಹವೊಂದುದಿನ ನಿಜಮಲ್ಲವೀವಾಸವು ॥೬॥

ಧನಧಾನ್ಯ ಸಂಪದಗಳಿಂ ಸುತರುಸತಿಯರಿಂ ।
ಘನವಿಲಾಸೋಪಭೋಗಂಗಳಂ ಭೋಗಿಸುಪ
ಧನಯುತರ ಮೇಲ್ಮೆಯಂ ನೋಡಿಮೋದಿಸಲೈದೆಯಾದೊಡೀಧನವಂತರು॥
ಎನಿತು ಮಾತ್ರಾಧಾರಮಿಲ್ಲದುದರಂಭರಣೆ ।
ಗನವರತ ಮರುಮರುಗಿ ಬೀದಿಯೊಳಗಲೆವ ಬಡ ।
ಜನರಿಗಿನಿತುಂ ಕರುಣದಿಂ ಸಹಾಯವ ನೀಡರಕಟ ಸುಡಲಿವರ ಬಾಳು॥೭॥

ಸಿರಿವಂತರಾದೊಡಂ ಕೆಲರು ಸುತರಿಲ್ಲೆಂದು ।
ಮರುಗುವರು; ತನ್ನಿನಿಯಳನುಕೂಲಮಿಲ್ಲೆಂದು ।
ಕೊರಗುವರು ಕೆಲರು; ಕೆಲರಾರೋಗ್ಯಕೊರತೆಯಿಂ ಸೊರಗುವರು ಸತತ ಕೆಲರು ॥

ಸಿರಿವೃದ್ಧಿಯಪ್ಪುದೆಂತೆಂದು ನೆರೆಚಿಂತಿಪರು ।
ಪರರವಿತ್ತಾಪಹಾರವನೆಂತು ಗೈಯ್ವೆನೆಂ ।
ದುರಿಯುವರು ಕೆಲರು; ಧನರಕ್ಷಣೆಗೆ ಬಳಲುವರು ಕೆಲರು; ನೋಡೀಬಗೆ॥
ಯನು ॥೮॥

ಬಂಧುಬಳಗಗಳಿಂದೆ ಬಗೆಬಗೆಯ ಸಂಪದಗ ।
ಳಿಂದೆ ಹಿತರಿಂದೆ ನಲಿವೀಜನರ ಕೆಳೆಗೂಡ ।
ಲೆಂದೈದೆಯಾದೊಡೀಮಾನವರು ಬಾಹ್ಯಾಂತರಂಗಸ್ಥಿತಿಯು ಗೆಳೆಯನ ॥
ಅಂದವರಿರ್ಪನ್ನೆಗಂ ಮೋದದಿಂದವನೊಡನೆ ।
ಸಂದು ಬಳಿಕವನಿಗಾಪತ್ತುಬರೆ, ದೂರಾಗಿ ।
ಕುಂದುಗಳ ಬೀರಿ ದೂಷಣೆಗೆ ಗುರಿಮಾಳ್ಪರಾತನನಿವರ ಕೆಳೆಗೂಡದು ॥೯॥

ಅಧಿಕಾರವಂ ವಹಿಸಿ ವಿಖ್ಯಾತರೆಂದೆಣಿಸಿ ।
ಪದವಿಗಳ ನೆರೆಧರಿಸಿ ಮತ್ತೆ ಕೇವಲ ಸಮಾ ।
ಜದಸೇವೆಮಾಳ್ಪ ಮುಂದಾಳುಗಳನೋಡೆಲೈತಂದೆಯಾ? ಪ್ರಮುಖರವರು॥
ಒದವಿದಧಿಕಾರದಿಂ ಸ್ವಾರ್ಥವನೆ ಸಾಧಿಸುತ ।
ಮುದಮತ್ಸರಂಗೂಡಿ ತಮ್ಮ ದೊಡ್ಡಸ್ತಿಕೆಯು ।
ಮುದದಿತೋರ್ಪಡಿಸುತ್ತ ಮೆರೆವಡಾಂಭಿಕರೀಮಹಾಶಯರನೆಳೆಸಲ್ಲದು॥೧೦

ಧರೆಯೊಳಿಹ ಬಗೆಗೊಳ್ವ ಕುಸುಮಗಳ ಕಾಂತಿನವ ।
ಪರಿಮಳಗಳಿಗೆ ಮೆಚ್ಚಿ ಬಂದೆಯಾದೊಡೆ, ಮನೋ- ।
ಹರಗುಲಾಬಿಯು ನರರ ಮರುಗಿಸುವ ಮುಳ್ಳಬಳಿಯಲ್ಲಿಹುದುನಂದದಿಂ॥
ನರುಗಂಪು ಕಡುಗಾಂತಿಯಿಂದೆಸೆವ ಕೇದಗೆಯು ।
ಗರಿಯುಗ್ರಪ್ರಾಣಾಪಹಾರಪ್ರವೀಣಮಾ- ।
ದುರುಗದಾವಾಸಮಾಗಿಹುದಿವುಗಳಂ ಬಯಸಿದೇಕೆ? ನೀಂ ಬಿಡುಮೋಹವಾ
॥೧೧॥

ಧರೆಯೊಳಿಹ ರಮಣಿಯರ ಮೈಯ್ಯಸೊಬಗಿಗೆ ಸೋತು ।
ಧರೆಗಿಳಿದೆಯಾ? ಬೇಗದಿಂ ಕೆಡುವದೈ ನಾರಿ- ।
ಯರ ಬೆಡಗು; ಹರೆಯದಾರಮಣಿಯರ ಕಣ್ಗಾಂತಿಕಡೆತನಕಕಾಲೂರದು॥
ಅರೆವಿರಿದ ನವಗುಲಾಬಿಯ ಪಕಳೆಯಂತಿರದೆ ।
ಮಿರುಗುವಾ ತರುಣಿಯ ಕಪೋಲಗಳು ಮುಪ್ಪಡಸೆ ।
ನೆರೆಜೋಲ್ದುಮರವಿಂದದಂತೆಸೆವ ಮುಖಮುಂದಗೆಡುವುದಂ ನೀಂಬಲ್ಲೆಯಾ?
॥೧೨॥

ಬಲುಘೋರ ಯಾತನೆಗಳೈತರ್ಪವೀಭವದಿ- ।
ಯಲಸಿಕೆ ವಿಯೋಗಾಪಹಾರಚ್ಯುತಿಯು ಪಲವು ।
ಬಲುಭಂಗಮವಮಾನ ಹೇಸಿಕೆ ತಿರಸ್ಕಾರ ಸತತ ಬಾಧಿಸುತಿರ್ಪವು ॥
ಎಲೆ ಮರುಳೆ! ನೋಡತ್ತ ನಿನ್ನಂಥ ನಕ್ಷತ್ರ ।
ಗಳು ಪಲವು ಪರಮಪ್ರಕಾಶದೊಳು ನೆರವೆರೆದು ।
ತಳೆದಿಹವು ನಿಜಸುಖವ ದುರ್ದೈವಿ ನೀನೆಕೆ ಮರ್ತ್ಯಲೋಕಕೆ ಬಂದೆಯೋ?
॥೧೩॥

ಅನಿತರೊಳಗುದ್ಭವಿಸಿ ಬೆಳಗುತಿರೆ ಮೂಡಣದೊ- ।
ಳಿನನು ತತ್ತೇಜದಿಂ ತಮವೋಸರಿಸಿದಂತೆ ।
ಘನತರಾತ್ಮಜ್ಯೋತಿ ಬೆಳಗೆ ಭವಭ್ರಾಂತಿ ಬದಿಗಾಗಲಾನಾರೆಂಬುದು ॥
ನನಗರಿಕೆಯಾಗಲದರಿಂಕೂಡೆ ಮನದಿ ಕಡೆ- ।
ಗಣಿಸಿ ಬಿಟ್ಟೆ ಭವಾನುಭವವ ಶಿವಾನುಭವ
ವನು ಪಡೆಗು ಮೆಂದು **ಮೋಹತ್ಯಾಗ** ಮೆಂಬುದೊಂದೇ ವ್ರತವ ಕೈಗೊಂ
ಡೆನು ॥೧೪॥

---

# ನಿಷ್ಠೀ ವೀರಪ್ಪ

(ಲೇಖಕ:- ಶ್ರೀ. ಕೃಷ್ಣರಾವ ಕಪಟ್ರಾಳ್, ವಕೀಲ ಗುಲಬುರ್ಗಾ)

ಕರ್ನಾಟಕದಲ್ಲಿ ರಾಜ್ಯಕಾರಭಾರ ಕುಶಲರೆಂದೆಣಿಸಿಕೊಂಡವರಲ್ಲಿ ನಿಷ್ಠೀವೀರಪ್ಪನವರು ಒಬ್ಬರಾಗಿದ್ದಾರೆ. ಕರ್ನಾಟಕದ ಅನೇಕ ವಿಭೂತಿಗಳ ಹೆಸರುಗಳನ್ನು ನಮ್ಮ ಕರ್ನಾಟಕಸ್ತರು ಏನೂ ಅರಿಯದೆ ಇರುವದು ಅವರ ದುರ್ದೈವವಾಗಿದೆ. ಇದರಿಂದ ತಮ್ಮ ಮಹತ್ವವನ್ನು ತಾವರಿಯದೆ ಸ್ವಾಭಿಮಾನ ದೇಶಾಭಿಮಾನ ರಹಿತರಾಗಿ ಕರ್ನಾಟಕಸ್ಥರು ಇನ್ನೂ ಉಳಿಯುವ ಕಾಲವು ಅವರಿಗೆ ಬಂದೊದಗಿದೆ. ಆದ್ದರಿಂದ ನಮ್ಮ ಕರ್ನಾಟಕದಲ್ಲಿ ಆಗಿ ಹೋದ ಮಹಾ ಪುರುಷರ ಚರಿತ್ರೆಗಳನ್ನು ನಾವು ಸಂಶೋಧಿಸುವದು ನಮ್ಮ ಆದ್ಯ ಕರ್ತವ್ಯವಾಗಿದೆ. ಈ ಲೇಖದಲ್ಲಿ ನಾನು ಸುರಪುರ ಸಂಸ್ಥಾ

ನದಲ್ಲಿ ಮಂತ್ರಿ ಪದದ ಮೇಲೆ ಆರೂಢನಾಗಿ ಅನೇಕ ರಾಜ್ಯ ಸುಧಾರಣಾ ಕಾರ್ಯಗಳನ್ನು ಮಾಡಿಹೋದ ನಿಷ್ಠೀ ವೀರಪ್ಪನ ಚರಿತ್ರೆಯನ್ನು ಕೊಡಲು ಎಣಿಸಿದ್ದೇನೆ.

ನಿಷ್ಠೀ ವೀರಪ್ಪನು ಒಬ್ಬ ವೀರಶೈವನು. ಇವನ ಮನೆತದವರಲ್ಲಿ ಹಲವರು ಸುರಪುರ ಸಂಸ್ಥಾನದಲ್ಲಿ ಮಂತ್ರಿಪದವನ್ನು ವಹಿಸಿದ್ದರು. ಇವರಲ್ಲಿ ಕಲ್ಲಪ್ಪ ಮತ್ತು ವೀರಪ್ಪ ಇವರು ಮುಖ್ಯರಿರುತ್ತಾರೆ. ಇವರಲ್ಲಿ ನಿಷ್ಠೀ ವೀರಪ್ಪನೇ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದನು.

ನಿಜಾಮು ಕರ್ನಾಟಕದ ಕೃಷ್ಣಾ ಮತ್ತು ಭೀಮಾ ಹೊಳೆಗಳ ಪ್ರದೇಶಕ್ಕೆ "ಸಗರಗಡ್ಡಿ ಅಥವಾ ಸಗರನಾಡು" ಎಂಬ ಹೆಸರು ಇರುತ್ತದೆ. ಇದು ಅತ್ಯಂತ ಪ್ರಸಿದ್ಧವಾದ ನಾಡು ಇರುತ್ತದೆ. ಇಲ್ಲಿ ಅನೇಕ ಸಾಧು ಸತ್ಪುರುಷರೂ ಕವಿಗಳೂ ಆಗಿ ಹೋಗಿರುತ್ತಾರೆ- ಅದರಂತೆಯೇ ಅನೇಕ ಪ್ರಸಿದ್ಧರಾದ ವೈದ್ಯರೂ ಗವಾಯಿಗಳೂ ಆಗಿರುತ್ತಾರೆ. ಜಯಮಿನಿ ಭಾರತವನ್ನು ಬರೆದ ಲಕ್ಷ್ಮೀಶ ಕವಿಯು ಸುರಪುರದವನು. ಈ ಭಾಗವನ್ನು ಸುರಪುರದ ಬೇಡರರಸರುಗಳು ೧೬೪೮ ರಿಂದ ೧೮೫೮ ರವರೆಗೆ ಸುಮಾರು ೨೦೦ ವರ್ಷಗಳ ವರೆಗೆ ಆಳಿದರು. ಈ ಸುರಪುರ ಧೊರೆಗಳು ವಿಜಾಪುರ ಆದಿಲ್‌ಶಾಹಿ ಬಾದಶಹರಿಗೆ ಅವರ ಯುದ್ಧಗಳಲ್ಲಿ ಅತ್ಯಂತ ಸಹಾಯಕರಾಗಿದ್ದರು. ಇವರು ಶೌರ್ಯ ಧೈರ್ಯಾದಿಗಳಲ್ಲಿ ಅತ್ಯಂತ ಮಿಗಿಲಾದವರು. ಈ ಬೇಡ ಅರಸರು ಈ ಸಗರ ನಾಡನ್ನಷ್ಟೇ ಅಲ್ಲ, ವಿಜಾಪುರ, ಬೀದರ, ರಾಯಚೂರ ಪ್ರಾಂತಗಳಲ್ಲಿ ಅನೇಕ ಗ್ರಾಮಗಳ ಮೇಲೆ ತಮ್ಮ ಸರದೇಶ ಮುಖಿ ಮತ್ತು ಸರಪರದೇಶಗತಿ ಸ್ವಾಮಿತ್ವವನ್ನು ಕೂಡ್ರಿಸಿ ಬಹಳ ಪ್ರಬಲರಾಗಿದ್ದರು. ಈ ಅರಸರಲ್ಲಿ ಮೂರನೇ ಪಾಮನಾಯಕನು ೧೭೫೪ ರಿಂದ೧೭೭೪ ರ ವರೆಗೆ ಮತ್ತು ಹಿರೇವೆಂಕಟಪ್ಪ ನಾಯಕನು ೧೭೭೪ರಿಂದ ೧೮೦೨ ರ ವರೆಗೆ ಆಳಿದರು. ಇವರ ಕಾಲಕ್ಕೆಯೇ ನಾನು ಮೇಲೆ ಹೇಳಿದ ಉಭಯ ಮಂತ್ರಿಗಳು ತಮ್ಮ ದಿವಾಣಗಿರಿಯನ್ನು ಮಾಡಿದರು- ಇವರಲ್ಲಿ ನಿಷ್ಠೀ ವೀರಪ್ಪನೇ ಬಹಳ ಪ್ರಸಿದ್ಧನಾಗಿ ರಾಜ್ಯದಲ್ಲಿ ಸುವ್ಯವಸ್ಥೆಯನ್ನು ನೆಲೆಗೊಳಿಸಿ, ಬಹಳ ಜಾಣತನದಿಂದ ರಾಜ್ಯವಾಳಿದನು. ಇವನುಮಾಡಿದ ಮಹತ್ಕಾರ್ಯಗಳನ್ನು ನಾನು ಕೆಳಗೆ ವಿವರಿಸಿದ್ದೇನೆ.

**ಕಂದಾಯ ಪದ್ಧತಿ-** ನಿಷ್ಠೀ ವೀರಪ್ಪನ ಪೂರ್ವದಲ್ಲಿ ಭೂಮಿಯ ಅಳತೆಯ ಲೆಖ್ಖವು ಸರಿಯಾಗಿರಲಿಲ್ಲ. ಭೂಮಿಯ ಅಳತೆಯು ಧಾನ್ಯದ

ಮೇಲೆ ಅವಲಂಬಿಸಿತ್ತು. ಉದಾ:- ಒಕ್ಕಳದ ಭೂಮಿ, ಇಕ್ಕಳದ ಭೂಮಿ, ಕೂರಿಗೆ ಜಮೀನು ಇತ್ಯಾದಿ. ಒಕ್ಕಳ ಭೂಮಿ ಎಂದರೆ ಒಕ್ಕಳ ಜೋಳವನ್ನು ಬಿತ್ತುವಷ್ಟು ಭೂಮಿ. ಆದರೆ ಈ ಒಕ್ಕಳದ ಮಾನವು ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆಯಾಗಿದ್ದಿತು. ಇದರಿಂದ ಗ್ರಾಮುಗಳಿಂದ ಸರಿಯಾಗಿ ಕಂದಾಯವು ಸರಕಾರಕ್ಕೆ ಬರುತ್ತಿರಲಿಲ್ಲ. ಈ ಪದ್ಧತಿಯನ್ನು ನಿಷ್ಕೀವೀರಪ್ಪನು ತಪ್ಪಿಸಿ ಬೇರೊಂದು ಅಳತೆ ಮಾಡುವ ಪದ್ಧತಿಯನ್ನು ಹಾಕಿ ರಾಜ್ಯದೊಳಗಿನ ಎಲ್ಲ ಭೂಮಿಯನ್ನು ಅಳಿಯಿಸಿದನು. ಅವನು ಅಳತೆಯನ್ನು ಕೆಳಗೆ ಬರೆವಮೇರೆಗೆ ಗೊತ್ತುಪಡಿಸಿದನು. ಅದು ಹ್ಯಾಗೆಂದರೆ, ೫ ಮೊಳಾ + ೫ ಮುಷ್ಟಿ = ೧ ಮಾರು. ೨೦ ಮಾರು = ೧ ಬಿಘೆ. ೧೦೦ ಬಿಘೆ = ೧ ಚಾಉರ, ಎಂದು ಗೊತ್ತು ಪಡಿಸಿದನು. ಜನರ ಮೊಳಗಳು ಹೆಚ್ಚು ಕಡಿಮೆ ಇರುತ್ತವೆ. ಆದಕಾರಣ ಐದುಜನರು ಕೂಡಿ ತಮ್ಮ ತಮ್ಮ ಕೈಯ್ಯಿಂದ ಒಂದೊಂದು ಮೊಳ ಮತ್ತು ಒಂದೊಂದು ಮುಷ್ಟಿ ಈ ರೀತಿಯಾಗಿ ಅಳೆದರೆ ಅದು ಒಂದು "ಪಂಚರ ಮಾರು" ಆಯಿತು ಎಂದು ಗೊತ್ತುಪಡಿಸಿದನು. ಈ ಮಾರಿನಿಂದ ಪ್ರತಿಯೊಂದು ಹಳ್ಳಿಯಲ್ಲಿ ಒಂದು ಚಚ್ಚೌಕು ಕಟ್ಟೆಯನ್ನು ಅಳತೆಗೋಸ್ಕರ ಕಟ್ಟಿಸಿದನು. ಇದಕ್ಕೆ ಬಿಘೇದಕಟ್ಟೆ ಎಂಬ ಹೆಸರು. ಇದು ಒಂದು ಬಿಘೇ ಅಳತೆಯಷ್ಟು ಇರುತ್ತಿತ್ತು. ಈ ಬಿಘೇದ ಅಳತಿಯಿಂದ ವೀರಪ್ಪನು ತನ್ನ ರಾಜ್ಯದ ಯಾವತ್ತು ಭೂಮಿಯನ್ನು ಅಳಿಸಿದನು. ಮತ್ತು ಗ್ರಾಮದಲ್ಲಿ ಭೂಮಿಯಹದ್ದು ಅಥವಾ ಅಳತೆಯ ವಿಷಯವಾಗಿ ವ್ಯಾಜ್ಯಗಳು ಬಂದಲ್ಲಿ ತಮ್ಮ ಗ್ರಾಮದಲ್ಲಿದ್ದ ಇಂಥ ಬಿಘೇದ ಕಟ್ಟೆಯ ಅಳತೆಯಿಂದ ಪಂಚರು ನಿರ್ಣಯಿಸಬೇಕೆಂದು ಗೊತ್ತುಪಡಿಸಿದನು.

ನಿಷ್ಕೀ ವೀರಪ್ಪನು ಭೂಮಿಗೆ ಕಂದಾಯ ಕೂಡ್ರಿಸುವಲ್ಲಿ ಭೂಮಿಯ ಫಲದ್ರುಪತೆಯನ್ನು ನೋಡಿ ಕೂಡ್ರಿಸಿದನು. ಅವನು ಸಾಮಾನ್ಯವಾಗಿ ಭೂಮಿಯಲ್ಲಿ ಮಸಬು, ಮೊರಡಿ, ಮತ್ತು ಎರಿ ಎಂದು ಮೂರು ವರ್ಗಗಳನು ಮಾಡಿ ಆ ಪ್ರಕಾರ ಸರಿಯಾಗಿ ತರಮು ಹಾಕಿದನು. ಉಳಿದ ಭೂಮಿಗಳಿಗೆ ಅವುಗಳ ಯೋಗ್ಯತೆಯ ಪ್ರಕಾರ ತರಮು ಕಟ್ಟಿದನು. ಈ ಪ್ರಕಾರ ವೀರಪ್ಪನು ದೇಶದಲ್ಲಿ ಜಮಾಬಂದಿಯನ್ನು ಗೊತ್ತುಪಡಿಸಿದನು. ಇದಕ್ಕೆ "ನಿಷ್ಕೀ ವೀರಪ್ಪನ ಸಂಚಣಿ" ಎಂಬ ಹೆಸರು ಇರುತ್ತದೆ. ಇದು ನಿಜಾಮ ಇಲಾಖೆಯ ಸರಕಾರೀ ದಪ್ತರುಗಳಲ್ಲಿ ಇನ್ನೂ ಉಪಲಬ್ಧವಿರುತ್ತದೆ.

**ಗೋಡೇಕಾರ ನಿರ್ಬಂಧನೆಃ—** ರಾಜ್ಯಕಾರಭಾರದಲ್ಲಿ ಪ್ರವೀಣ ರಾದ ಜನರು ಶಿಗುವ ಸಲುವಾಗಿ ನಿಸ್ಸೀ ವೀರಪ್ಪನು ಒಂದು ಯೋಜನೆ ಯನ್ನು ಮಾಡಿ ಆ ಪ್ರಕಾರ ಅಧಿಕಾರಿಗಳನ್ನು ನಿಯಮಿಸಿಕೊಳ್ಳುತ್ತಿದ್ದನು. ಇದಕ್ಕೆ "ಗೋಡೇಕಾರ ನಿರ್ಬಂಧನೆ" ಎಂಬ ಹೆಸರು. ಸುರಪುರಪಟ್ಟಣದಲ್ಲಿ ಗೋಡೇಕಾರರನ್ನು ಅವರ ವಿದ್ಯೆಯಲ್ಲಿ ಪರೀಕ್ಷಿಸಿ ಇಂತಿಂಥ ಜನರು ಇಂತಿಂಥ ಉದ್ಯೋಗ ಮಾಡತಕ್ಕದ್ದು, ಉಳಿದವರು ಅವರ ಕೈಕೆಳಗೆ ಬೇರೆಬೇರೆ ಕೆಲ ಸ ಮಾಡತಕ್ಕದ್ದು, ಎಂದು ನಿಯೋಜಿಸಿದನು. ಈ ಮೇರೆಗೆ ಅವನು ತನ್ನ ರಾಜ್ಯದಲ್ಲಿ ಯೋಗ್ಯಅಧಿಕಾರಿಗಳನ್ನು ನೇಮಿಸಿಕೊಳ್ಳುವ ವ್ಯವಸ್ಥೆಯನ್ನು ಮಾಡಿದನು. ಇದೊಂದು ಆತನ ರಾಜ್ಯಶಾಸನ ಪದ್ಧತಿ ಎಂದು ಹೇಳ ಬಹುದು.

**ಜಕಾತಿಯ ಪದ್ಧತಿಃ**—ಅವನು ಜಕಾತಿಯ ಪದ್ಧತಿಯನ್ನೂ ವ್ಯವ ಸ್ಥೆಗೊಳಿಸಿದನು. ಮೊದಲಿಗೆ ಬೇರೆ ಬೇರೆ ಜೀನಸುಗಳ ಮೇಲೆ ಅನಿಯಮಿ ತದರದಿಂದ ಜಕಾತಿಯು ಎತ್ತಲ್ಪಡುತ್ತಿತ್ತು. ಇದರಿಂದ ಜನರಿಗೆ ಬಹಳ ಅನ್ಯಾಯವಾಗುತ್ತಿತ್ತು. ಆದರೆ ಅವನು ಯಾವ ಜೀನಸುಗಳ ಮೇಲೆ ಎಷ್ಟೆಷ್ಟು ದರದಿಂದ ಜಕಾತಿಯನ್ನು ಎತ್ತ ಬೇಕೆಂಬದನ್ನು ಗೊತ್ತು ಪಡಿಸಿ, ಅದನ್ನು ಹರಾಜು ಮಾಡುವನು. ಇದರಿಂದ ಜನರಿಗೆ ಆಗುವ ಅನ್ಯಾಯುಗ ಳನ್ನು ತಪ್ಪಿಸಿದ್ದಲ್ಲದೆ, ಸಂಸ್ಥಾನಕ್ಕೂ ಉತ್ಪನ್ನವು ಬರಹತ್ತಿತು. ಜಕಾತಿಯ ದರಗಳು ಕೆಳಗೆ ಬರೆದ ಪ್ರಕಾರ ಗೊತ್ತು ಪಡಿಸಿದನು.

೧. ಪಲ್ಲೆಕಾಯಿ, ಮಣ ೧ಕ್ಕೆ ೪ ಸೇರು ೨. ಹಣ್ಣು ಹಂಪಲಗಳು ಎತ್ತಿನ ಒಜ್ಜೆಗೆ ೧ ರೂಪಾಯಿ ೩. ಧಾನ್ಯಗಳು ಎತ್ತಿಗೆ ೬ ಶೇರು ೪. ಕಿರಾಣೀ ಜೀನಸುಗಳು ಎತ್ತಿಗೆ ೧೨ ಆಣೆ ೫. ಚಿಂಚ ಅಮರಾಯಿ, ಅರ್ಧ ಸರಕಾರಕ್ಕೆ ಅರ್ಧ ಮಾಲಕರಿಗೆ ೬. ಕೈಗಾರಿಕೆಯವರಿಗೆ—ಅಕ್ಕಸಾಲಿಗರು ವರ್ಷಕ್ಕೆ ೬ ರೂ॥, ಕಂಬಾರರು ೪ ರೂ॥ ಕಂಚಗಾರರು ೨ ರೂ॥ ಬಡಿಗ ೩ ರೂ॥ ಪಿಂಜಾರ ೧ ರೂ॥, ಹೂಗಾರ ೩ ರೂ॥ ಗಂಧದ ಎಣ್ಣೆ ಮಾರುವ ವರು ೩ ರೂ॥ ಬಳಿಗಾರರು ೬ ರೂ॥, ಮಿಠಾಯಿಗಾರು ೬ ರೂ॥ ಮಗ್ಗಕ್ಕೆ ೩ ರೂ॥, ಕುಂಬಾರ, ೧ ರೂ॥ ಅಗಸ ೧ ರೂ॥, ನಾದಿಗ ೧ ರೂ॥ ಚಿನಿವಾರ ೧ ರೂ॥ ಈ ಪ್ರಕಾರ ದರಗಳನ್ನು ಗೊತ್ತು ಪಡಿಸಿದನು.

ಮೇಲ್ಕಂಡ ತೆರಿಗೆಗಳು ಈಗಿನ ಕಾಲಕ್ಕೆ ಬಹಳ ಜುಲುಮೆಯವುಗ ಳೆಂದು ತೋರಬಹುದು. ಆದರೆ ಕೆಳಗೆ ಕಾಣಿಸಿದ ಮೇರೆಗೆ, ಇವುಗಳ ವಿನಿ

ಯೋಗದ ಬಗ್ಗೆ ನಿಷ್ಕೀ ವೀರಪ್ಪನು ವ್ಯವಸ್ಥೆಯನ್ನು ಮಾಡಿದ್ದರಿಂದ, ಅವುಗಳು ಜನರಿಗೆ ಅಷ್ಟು ಭಾರವಾಗಿ ತೋರುತ್ತಿದ್ದಿಲ್ಲ.

ಪಲ್ಲೀಕಾಯಿಗಳಿಂದ ೪ ಶೇರು ಕರ ಎತ್ತುತ್ತಿದ್ದು ಅದರಲ್ಲಿ ಸರಕಾರಕ್ಕೆ ೧ ಶೇರು ಪಟ್ಟಣ ಶೆಟ್ಟಿಗೆ ೧ ಶೇರು ತಳವಾರನಿಗೆ ೧ ಶೇರು, ಚೋರಗಸ್ತಿಗೆ ೧ ಶೇರು ಈ ಪ್ರಕಾರ ಹೋಗಬೇಕೆಂದು ಗೊತ್ತು ಪಡಿಸಿದನು. ಇದರಂತೆಯೇ ಹಣ್ಣು ಹಂಪಲಗಳಿಂದ ಬಂದ ಜಕಾತಿಯು ಮೇಲ್ಕಂಡ ಅಧಿಕಾರಿಗಳಲ್ಲಿಯೇ ಭಾಗ ಮಾಡಲ್ಪಡುತ್ತಿತ್ತು. ಆದರೆ ಉಳಿದ ಬಾಬುಗಳು ಸರಕಾರಕ್ಕೆ ಹೋಗುತ್ತಿದ್ದವು, ಆಗಿನ ಕಾಲಕ್ಕೆ ಗ್ರಾಮುಗಳಲ್ಲಿ ಪಂಚಾಯತ ಪದ್ಧತಿಯು ಇದ್ದು ನ್ಯಾಯ ನಿರ್ಣಯವು ಶೆಟ್ಟರ ಕಡೆಗೆ, ಗ್ರಾಮ ಸುರಕ್ಷಿತೆಯು ತಳವಾರನ ಕಡೆಗೆ ಮತ್ತು ಗುನ್ಹೆ ತಪಾಸು ಮಾಡುವದು ಚೋರಗಸ್ತಿಯ ಕಡೆಗೆ ಇರುತ್ತಿದ್ದವು. ಮತ್ತು ಅವರು ಮಾಡುವ ಕಾರ್ಯಗಳಿಗೋಸ್ಕರ ಮೇಲೆ ಬರೆದ ಮೇರೆಗೆ ಕರಗಳ ಭಾಗಗಳು ಇವರಿಗೆ ಶಿಗುವಂತೆ ನಿಷ್ಕೀ ವೀರಪ್ಪನು ವ್ಯವಸ್ಥೆ ಮಾಡಿದ್ದನು. ಈಗಿನ ಕಾಲಕ್ಕೆ ಬ್ರಿಟಿಶ್ ಸರಕಾರದವರು ನ್ಯಾಯಖಾತೆ ಮತ್ತು ಪೋಲೀಸ ಖಾತೆ ಇವುಗಳನ್ನು ಸಂಪೂರ್ಣವಾಗಿ ತಮ್ಮ ಅಧೀನದಲ್ಲಿ ಇಟ್ಟು ಕೊಂಡಿರುತ್ತಾರೆ. ಆದರೆ ಇವೆರಡೂ ಖಾತೆಗಳು ನಮ್ಮ ಪೂರ್ವದ ರಾಜರುಗಳ ಕಾಲದಲ್ಲಿ ಪಂಚಾಯತಿಗಳ ಕಡೆಗೆ ಒಪ್ಪಿಸಲ್ಪಟ್ಟಿದ್ದವು. ಇದರಿಂದ ಯೋಗ್ಯ ನ್ಯಾಯವು ಆ ಕಾಲಕ್ಕೆ ದೊರೆಯುತ್ತಿತ್ತು. ಮತ್ತು ಈ ಅಧಿಕಾರಿಗಳ ಖರ್ಚಿಗೂ ಮೇಲೆ ಕಾಣಿಸಿದ ಪ್ರಕಾರ ವ್ಯವಸ್ಥೆಯು ಮಾಡಲ್ಪಡುತ್ತಿತ್ತು.

**ದರ್ಬಾರ ಪದ್ಧತಿಃ-** ಇದರಂತೆಯೇ ನಿಷ್ಕೀ ವೀರಪ್ಪನು ದರ್ಬಾರ ಪದ್ಧತಿಯನ್ನು ಗೊತ್ತು ಪಡಿಸಿದನು. ಅಂದರೆ ರಾಜನ ಅಂತಃಪುರದ ಖರ್ಚು ಸಂಸ್ಥಾನದ ಹಬ್ಬ ಹುಣ್ಣಿವೆಗಳ ಖರ್ಚು ಇವುಗಳನ್ನು ಗೊತ್ತು ಪಡಿಸಿ ರಾಜ್ಯದಲ್ಲಿಯ ದೊಡ್ಡ ಜನರ ಮಾನ ಮರ್ಯಾದೆಯ ಸ್ಥಾನಗಳನ್ನು ನಿರ್ಣಯಿಸಿದನು. ಇದರಿಂದ ಎಷ್ಟೋ ಬಗೆಯ ಅಂತಸ್ಥ ಕಲಹಗಳು ನಿಂತು ಹೋದವು-

**ಸಾರ್ವಜನಿಕ ಕಾರ್ಯಗಳುಃ-** ಇದರಂತೆಯೇ ನಿಷ್ಕೀ ವೀರಪ್ಪನು ಅನೇಕ ಲೋಕೋಪಯೋಗಿ ಕಟ್ಟಡಗಳನ್ನು ಕಟ್ಟಿಸಿದನು. ಕೆರೆಭಾವಿಗಳನ್ನು ಅನೇಕ ಗ್ರಾಮುಗಳಲ್ಲಿ ನಿರ್ಮಿಸಿದನು. ಹುಲ್ಲ ಕಲಗೇರಿ, ಡೊಣ್ಣೇಗೇರಿ, ಕರಿಗುಡ್ಡಕೇರಿ ಈ ಗ್ರಾಮುಗಳಲ್ಲಿಯ ಜನರಿಗೆ ತಾಪವಾಗಬಾರದೆಂದು

ಭಾವಿಗಳನ್ನೂ ಕುಂಟೆಗಳನ್ನೂ ಅಲ್ಲಿ ಕಟ್ಟಿಸಿ, ಸುತ್ತುಮುತ್ತು ಮಾವಿನ ತೋಪುಗಳನ್ನು ಹಚ್ಚಿಸಿದನು. ಇದಲ್ಲದೆ ಸಗರ, ಹಸನಾಪುರ, ಅಂತರ ಗಂಗಿ, ರುಕುಮಪೇಟೆ, ವೆಂಕಟಾಪುರ, ಸತ್ಯಮನಪೇಟೆ, ಹೆಬ್ಬಾಳ ಬಾಚಿ ಮಟ್ಟಿ ಮತ್ತು ವಜ್ಜಲದಲ್ಲಿ ಕೆರೆಗಳನ್ನು ಕಟ್ಟಿಸಿದನು. ಮತ್ತು ಭೈರಮೊ ರಡಿ ಎಂಬ ಹೆಸರಿನ ಹೊಸ ಗ್ರಾಮವನ್ನು ನಿರ್ಮಿಸಿದನು.

**ಕಾಲಿವೆಗಳು:**–ಸುರಪುರ ನಾಡಿನಲ್ಲಿ ಭೀಮಾ ಮತ್ತು ಕೃಷ್ಣಾ ಹೊಳೆಗಳು ಹರಿಯುತ್ತಿದ್ದು ಈ ಎರಡೂ ಹೊಳೆಗಳಿಂದ ಕಾಲುವೆಗಳನ್ನು ತೆಗೆಯುವ ಯೋಚನೆ ಮಾಡಿದನು. ಕೃಷ್ಣಾನದಿಯಿಂದ ಕೊಡೇಕಲ್ಲಿನ ಸಮೀಪದಲ್ಲಿ ನಾರಾಯಣ ಪುರದ ಸೀಮೆಯಿಂದ ಒಂದು ಕಾಲುವೆ ಯನ್ನು ಪ್ರಾರಂಭಿಸಿ ಅಲ್ಲಿಂದ ಮಾರನಾಳ, ಅಲ್ಲಿಂದ ಡೋಣಿಯ ನದಿ ಯ ಮೇಲೆ ಪೂಲು ಕಟ್ಟಿ, ಮುದಲಿಂಗನಹಾಳ, ಅಲ್ಲಿಂದ ಹುಣಸಿಗಿ, ಹೆಬ್ಬಾಳ, ಇಲ್ಲಿ ಪುನಃ ಪೂಲು ಕಟ್ಟಿ, ಅಲ್ಲಿಂದ ಬಾಚಿಮಟ್ಟಿ ಅಲ್ಲಿಂದ ಸುರಪುರದ ಕಂದಕದ ವರೆಗೂ ೧೦೫ ಹಳ್ಳಿಗಳ ಭೂಮಿಯು ತೊಯ್ಯು ವಂತೆ ಆರು ಲಕ್ಷ ರೂಪಾಯದ ಖರ್ಚಿನ ಅಂದಾಜು ಮಾಡಿ ಒಂದು ಕಾಲಿವೆಯ ಯೋಜನೆ ಮಾಡಿದನು. ಮತ್ತು ನಾರಾಯಣ ಪುರದ ಹತ್ತರ ಈ ಕಾರ್ಯವನ್ನು ಸಹ ಪ್ರಾರಂಭ ಮಾಡಿದನು. ಅದರಂತೆಯೇ ಭೀಮಾ ನದಿಯ ಕಾಲಿವೆಯನ್ನು ಸಿರಿವಾಳದ ಹತ್ತರ ಪ್ರಾರಂಭಿಸಿ ಬೆನಕನಹಳ್ಳಿ, ರಾಸ್ತಾಪುರ ಮಾರ್ಗದಿಂದ ಸುರಪುರದ ಕಂದಕದ ವರೆಗೂ ತಗೆಯಬೇ ಕೆಂದು ಯೋಚಿಸಿದನು. ಈ ಕಾಲಿವೆಯ ಖರ್ಚನ್ನು ಸಹ ವೀರಪ್ಪನು ಅಂ ದಾಜು ಮಾಡಿದ್ದನು. ಆದರೆ ಏನೋ ಕಾರಣದಿಂದ ಈ ಕಾರ್ಯಗಳು ಕೊನೆಗಾಣಲಿಲ್ಲ.

**ಲಷ್ಕರೀ ಖಾತೆ:**- ಇದರಂತೆಯೇ ರಾಜ್ಯದ ಲಷ್ಕರೀ ಖಾತೆಯನ್ನು ಸುಧಾರಿಸಿದನು. ಸುರಪುರ ಪಟ್ಟಣದ ಸುತ್ತುಮುತ್ತಲಿನ ಕೋಟೆ ಬುರು ಜುಗಳನ್ನು ಕಟ್ಟಿಸಿ ಸೈನಿಕರು ಕಾಯುವಂತೆ ವ್ಯವಸ್ಥೆ ಮಾಡಿದನು. ಝುಂ ಜೇಲ, ತೋಪುಗಳು, ತುಬಾಕಿಗಳು ಮದ್ದು ಗುಂಡು ಮುಂತಾದ ಯುದ ಸಾಮಗ್ರಿಗಳು ಇವುಗಳನ್ನು ಸಿದ್ಧಪಡಿಸಿದನು. ಚೋರಗಸ್ತಿ ಜನರ ಕಾರ್ಯ ಗಳನ್ನು ನಿರ್ಬಂಧಿಸಿದನು.

**ಧಾರ್ಮಿಕ ಖಾತೆ:**— ನಿಶ್ಚಿ ವೀರಪ್ಪನು ಅತ್ಯಂತ ಧಾರ್ಮಿಕ ಮನುಷ್ಯನಾಗಿದ್ದನು. ಅವನು ಸಂಸ್ಥಾನದಲ್ಲಿ ವೈದಿಕ ಬ್ರಾಹ್ಮಣರು, ಜಂಗ

ಮರು, ಯಾಚಕರು ಬಂದರೆ ಅವರಿಗೆ ಊಟದ ಸಲುವಾಗಿ ಇಂತಿಷ್ಟು ಕೊಡ ಬೇಕೆಂದು ಎಲ್ಲ ಗ್ರಾಮಸ್ಥರಿಗೆ ಹುಕುಮನ್ನು ಮಾಡಿದ್ದನು. ಇದರಂತೆ ಹಳ್ಳಿಗಳ ಲೆಕ್ಕ ಪ್ರತಗಳಲ್ಲಿ ಸರಕಾರೀ ಖರ್ಚು ಬಿದ್ದಿರುವದು ಕಂಡು ಬರುತ್ತದೆ.

ಈ ರೀತಿಯಾಗಿ ಮುಲ್ಕಿ, ಸೈನಿಕ, ಜಕಾತಿಮಹಾಲ, ಸಾರ್ವಜನಿಕ ಕಾರ್ಯ, ಪೋಲೀಸ, ನ್ಯಾಯಖಾತೆ, ಧರ್ಮಖಾತೆ, ದರ್ಬಾರೀ ಖಾತೆ ಈ ಮೇರೆಗೆ ಈಗಿನ ಆಧುನಿಕ ಖಾತೆಗಳಂತೆ ಎಲ್ಲ ಸಣ್ಣ ದೊಡ್ಡ ಖಾತೆಗಳನ್ನು ಇಟ್ಟು ನಿಷ್ಠೀ ವೀರಪ್ಪನು ಮಾಡಿಸುವ ವ್ಯವಸ್ಥೆಯನು ನೋಡಿದರೆ, ಈತನ ಅಪಾರ ಬುದ್ಧಿ ಸಾಮರ್ಥ್ಯ, ಕಾರ್ಯದಕ್ಷತೆ, ಚಾತುರ್ಯ ಮುಂತಾದ ಗುಣಗಳು ಯಾರನ್ನಾದರೂ ಆಶ್ಚರ್ಯವನ್ನುಂಟು ಮಾಡುತ್ತವೆ. ಈತನನ್ನು ರಾಜಾತೋಡರಮಲ್ಲನಿಗೆ ಹೋಲಿಸಬಹುದು. ಇಂದಿಗೂ ಬ್ರಾಹ್ಮಣ ಲಿಂಗಾಯತ ಮೊದಲ್ಗೊಂಡು ಹೊಲೆ ಹದಿನೆಂಟು ಜಾತಿಯವರೆಲ್ಲರೂ ಈತನಹೆಸರನ್ನು ಸ್ಮರಿಸುತ್ತಾರೆ. ಈತನು ಒಬ್ಬ ಮಹಾತ್ಮನು, ಒಬ್ಬ ವರದೀಪುರುಷನಿದ್ದನೆಂದು ಇಲ್ಲಿಯ ಭಾವಿಕರಾದ ಹಳಬರು ತಿಳಿಯುತ್ತಾರೆ. ಈಗ್ಗೆಯೂ “ ನಿಷ್ಠೀ ವೀರಪ್ಪನ ದುರಾಯಿ ” ಎಂದು ಯಾರಾದರೂ ಅವನ ಹೆಸರಿನಿಂದ ಆಣೆ ಇಟ್ಟರೆ, ಅದನ್ನು ಜನರು ಮೀರುವದಿಲ್ಲ. ಆತನ ಬುದ್ಧಿ ಸಾಮರ್ಥ್ಯ ಮತ್ತು ಸಮಯೋಚಿತತ್ವ ಇವುಗಳ ವಿಷಯವಾಗಿ ಹ್ಯಾಗೆ ಅಕಬರ ಬೀರಬಲ್ಲ ಮತ್ತು ತೆನ್ನಾಲಿ ರಾಮಕೃಷ್ಣರ ಕಥೆಗಳಿರುವವೋ ಹಾಗೆ ಜನರಲ್ಲಿ ಅನೇಕ ಕಥೆಗಳಿರುತ್ತವೆ. ಅವುಗಳನ್ನು ನಾವು ಇಲ್ಲಿ ವಿವರಿಸದೆ, ಈತನು ಮಾಡಿದ ಕೇವಲ ರಾಜ್ಯದಲ್ಲಿಯ ಸುಧಾರಣೆಗಳನ್ನಷ್ಟೇ ವಿವರಿಸಿರುವೆವು. ಇವುಗಳ ಮೇಲಿಂದ ಈತನು ಕರ್ನಾಟಕದ ಮಹಾ ಪುರುಷರಲ್ಲಿ ಒಬ್ಬನಾಗಿರುವನೆಂದು ನಾವು ನಿಃಸಂದೇಹವಾಗಿ ಹೇಳಬಹುದು.

ನಿಷ್ಠೀ ವೀರಪ್ಪನವರ ವಂಶಸ್ಥರಿಗೆ ಎರಡು ಗ್ರಾಮಗಳು ಜಹಾಗೀರ ಇದ್ದು ಅವರ ಮನೆತನಗಳು ಈಗ್ಗೆಯೂ ಸುರುಪುರದಲ್ಲಿ ಪ್ರಸಿದ್ಧವಾಗಿರ್ಪವವು.

# ಹರಳಯ್ಯ—ಮಧುವಯ್ಯ

( ಲೇಖಕಃ—ಶ್ರೀ ಮಡಿವಾಳಪ್ಪ ಮಿಣಜಿಗಿ ವಿಜಾಪುರ )

ಧರ್ಮದ ಪ್ರಸಾರ ಕಾಲದಲ್ಲಿ ಅದಕ್ಕೋಸ್ಕರ ಅನೇಕರು ತಮ್ಮ ಜೀವ ವನ್ನು ಕೊಟ್ಟವರುಂಟು. ಮತ್ತು ವಿರೋಧಿಗಳಿಂದ ನಾನಾಬಗೆಯಾಗಿ ಹಿಂಸಿ ಸಲ್ಪಟ್ಟವರುಂಟು. ಇವರ ಪಟ್ಟ ಯಾತನೆಗಳ ಇತಿಹಾಸವು ಯಾವಾ ಗಲೂ ಹೃದಯ ದ್ರಾವಕವಾಗಿರುತ್ತದೆ. ಇಂಥವರ ಕೃತಿಗಳಿಂದಲೇ ಧರ್ಮ ಮತ್ತು ಸಮಾಜ ಸುಧಾರಣೆಯು ಒದಗುತ್ತದೆ. ಬಸವೇಶ್ವರನ ಕಾಲದಲ್ಲಿ ಇಂಥ ಮಹಾತ್ಮರು ಅನೇಕರು ಆಗಿ ಹೋಗಿದ್ದಾರೆ. ಇವರಲ್ಲಿ ನಾವು ಹರ ಳಯ್ಯ ಮಧುವಯ್ಯಗಳನ್ನು ಗಣಿಸ ಬಹುದು.

ವೀರಶೈವ ಧರ್ಮದಲ್ಲಿ ನೀತಿ, ಸದಾಚಾರ, ಭಕ್ತಿ ಇವುಗಳಿಗೆ ಮಾತ್ರ ವಿಶೇಷ ಮಹತ್ವವು ಕೊಡಲ್ಪಟ್ಟಿರುವದೇ ಹೊರ್ತು, ಜಾತಿ ಮತ್ತು ಉಪ ಜೀವನದ ಹೋರೆ ಇವುಗಳಿಗೆ ಎಂದೂ ಮಹತ್ವವು ಕೊಡಲ್ಪಟ್ಟಿರುವದಿಲ್ಲ. ಅದು ಜಾತಿ ಭೇದವನ್ನು ಸಂಪೂರ್ಣವಾಗಿ ತಿರಸ್ಕರಿಸಿದೆ. ಆದರೆ ಹರಳಯ್ಯ ಮಧುವಯ್ಯಗಳು ಇದಕ್ಕೆ ವಿರೋಧವಾಗಿ ವರ್ತಿಸಿದ್ದರಿಂದ ಅವರು ಕಡು ತರವಾದ ಹಿಂಸೆಗೆ ಒಳಗಾದರು. ಈ ಹಿಂಸೆಯೇ ಆಗಿನ ಕಾಲಕ್ಕೆ ಒಂದು ಮಹತ್ವದ ರಾಜಕೀಯ ಮತ್ತು ಧಾರ್ಮಿಕ ಕ್ರಾಂತಿಯನ್ನು ಉಂಟು ಮಾಡ ಲಿಕ್ಕೆ ಪ್ರತ್ಯಕ್ಷ ಕಾರಣವಾಯಿತು. ಆದ್ದರಿಂದ ಈ ವಿಷಯದ ಅರಿವನ್ನು ಶಿವಾನುಭವದ ವಾಚಕರಿಗೆ ಮಾಡಿಕೊಡುವ ಉದ್ದೇಶದಿಂದ ನಾನು ಈ ಲೇಖವನ್ನು ಬರೆದಿದ್ದೇನೆ.

ಹರಳಯ್ಯನು ಕಾಯಕದಿಂದ ಒಬ್ಬ ಮಚ್ಚಿಗನು, ಅಂದರೆ ಒಬ್ಬ ಅಸ್ಪೃಶ್ಯನು. ಆದರೆ ಅವನು ಕೇವಲ ಶಿವಭಕ್ತನಾಗಿ ಧರ್ಮಾಚಾರದಲ್ಲಿ ಕಲ್ಯಾಣ ನಗರದಲ್ಲಿ ಅತ್ಯಂತ ಹೆಸರುವಾಸಿಯಾಗಿ ಭಕ್ತ ಶ್ರೇಷ್ಠನೆಂದೆನಿಸಿ ಕೊಳ್ಳುತ್ತಿದ್ದನು. ಮಧುವರಸನು ಒಬ್ಬ ಬ್ರಾಹ್ಮಣನು ಮತ್ತು ಬಿಜ್ಜಳನ ಗಜ ಸೈನ್ಯದ ಮೇಲೆ ಅಧಿಪತಿಯಾಗಿ ಒಬ್ಬ ದೊಡ್ಡ ಅಧಿಕಾರಿಯಾಗಿದ್ದನು. ಹೀಗಿರುತ್ತಿರಲು ಒಂದಾನೊಂದು ದಿನ ಬಸವೇಶ್ವರನು ಕಲ್ಯಾಣ ಪಟ್ಟಣದ ಬೀದಿಯಿಂದ ಹೋಗುತ್ತಿರುವಾಗ, ಇದಿರಿಗೆ ಹರಳಯ್ಯನು ಬರುವದನ್ನು ಕಂಡು ಆತನಿಗೆ ಬಸವೇಶ್ವರನುಃ—"ಎಲೈ ಹರಳಯ್ಯನೇ, ನಿನಗೆ ಮೂರು

ಜಾರಿ ಶರಣು" ಎಂದು ನುಡಿದು ಮುಂದೆ ಸಾಗಿದನು. ವೀರಶೈವರಲ್ಲಿ "ಶರಣು, ಶರಣು" ಎಂದು ಕಿಂಕರತ್ವ ಭಾವದಿಂದ ನುಡಿಯುವದೂ ಆಚರಿಸುವದೂ ಅವರ ಕರ್ತವ್ಯವಾಗಿದೆ. ಆ ಮೇರೆಗೆ ಬಸವೇಶ್ವರನು ತನಗೆ ವಂದಿಸಲು, ಅತ್ಯಂತ ಶ್ರೇಷ್ಠನೂ, ಪೂಜ್ಯನೂ, ಮಂತ್ರಿಪದಾರೂಢನೂ ಆದ ಆ ಮಹಾತ್ಮನು ಅಲ್ಪನಾದ ತನಗೆ ಹೀಗೆ ಕೈಂಕರ್ಯವೃತ್ತಿಯನ್ನು ತೋರಿಸಿದ್ದಕ್ಕೆ, ತಾನು ಹಿಂದಿನ ಜನ್ಮದಲ್ಲಿ ಏನೋ ಒಂದು ಮಹತ್ತರ ಪಾಪವನ್ನು ಮಾಡಿರ ಬಹುದೆಂದು ಹರಳಯ್ಯನು ಬಗೆದನು. ಆ ಮೇಲೆ ಹರಳಯ್ಯನು ಅತ್ಯಂತ ಖಿನ್ನ ಮನಸ್ಕನಾಗಿ ಮನೆಗೆ ಬಂದು ಆದ ಸಂಗತಿಯನ್ನು ತನ್ನ ಭಾರ್ಯೆಗೆ ವಿವರಿಸಿದನು. ಆ ಕಾಲಕ್ಕೆ ಈರ್ವರೂ ತಾವು ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವೇನೆಂಬುದನ್ನು ಚಿಂತಿಸಿ, ಕಡೆಗೆ ತಮ್ಮ ಉಭಯತರ ತೊಡೆಗಳ ಚರ್ಮವನ್ನು ಸುಲಿದುಕೊಂಡು ಅದರಿಂದ ಬಸವೇಶ್ವರನಿಗೆ ಒಂದು ಜೋಡನ್ನು ಮಾಡುವದೇ ಯೋಗ್ಯ ವಾದದ್ದೆಂದು ನಿರ್ಧರಿಸಿದರು. ಆ ಪ್ರಕಾರ ಉಭಯ ದಂಪತಿಗಳು ತಮ್ಮ ಶರೀರ ಭಾಗದ ಚರ್ಮವನ್ನು ಸುಲಿದು, ಅದರಿಂದ ಒಂದು ಜೋಡನ್ನು ಸಿದ್ಧಗೊಳಿಸಿದರು. ಅದನ್ನು ಹರಳಯ್ಯನು ತೆಗೆದುಕೊಂಡು ಬಸವೇಶ್ವರನ ಆಲಯಕ್ಕೆ ತೆರಳಿ ಹೆಬ್ಬಾಗಿಲಿನ ಮುಂದೆ ಬಂದು ನಿಂತು ಕೊಂಡನು. ಆಗ ಬಸವೇಶ್ವರನ ಮಂದಿರದಲ್ಲಿ ಪೂಜಾದಿ ಕಾರ್ಯಗಳು ವಿಶೇಷವಾಗಿ ನಡೆದಿದ್ದವು. ಆದರೆ ಹರಳಯ್ಯನು ತನ್ನ ಗೃಹಕ್ಕೆ ಬಂದಿರುವನೆಂಬದನ್ನು ತಿಳಿದ ಕೂಡಲೇ ಬಸವೇಶ್ವರನು ತನ್ನ ಪೂಜಾ ಕಾರ್ಯಗಳನ್ನು ಬಿಟ್ಟು ಕೊಟ್ಟು, ಅವನನ್ನು ಕಾಣಲು ಗೃಹದ್ವಾರಕ್ಕೆ ಬಂದನು. ಮತ್ತು ಹರಳಯ್ಯನನ್ನು ಮರ್ಯಾದೆಯಿಂದ ಕಂಡು ತನ್ನ ಸಭಾಗೃಹವಾದ ಶಿವಾನುಭವ ಮಂಟಪಕ್ಕೆ ಕರೆದೊಯ್ದನು. ಹರಳಯ್ಯನು ಅಲ್ಲಿಗೆ ಬಂದ ಬಳಿಕ ಆದ ಸಂಗತಿಗಳನ್ನು ವಿಸ್ತರಿಸಿ ತಾನು ನಿರ್ಮಿಸಿದ ಜೋಡನ್ನು ಬಸವೇಶ್ವರನ ಮುಂದಿಟ್ಟನು. ಆಗ ಬಸವೇಶ್ವರನು ಹರಳಯ್ಯನ ಈ ನಿಚ್ಚಟವಾದ ಭಕ್ತಿಗೆ ಚಕಿತನಾಗಿ ಆ ಜೋಡು ಪವಿತ್ರವಾದದ್ದು ಅದನ್ನು ತಾನು ಮೆಟ್ಟಲಾರೆನು ಎಂದು ಹೇಳಿ ಅದನ್ನು ಸ್ವೀಕರಿಸದೆ ಮರಳಿ ಅದನ್ನು ಹರಳಯ್ಯನಿಗೆ ಕೊಟ್ಟು ಅತ್ಯಂತ ಮನ್ನಣೆಯಿಂದ, ಅವನನ್ನು ಮನೆಗೆ ಕಳಿಸಿಕೊಟ್ಟನು.

ಆ ಮೇಲೆ ಹರಳಯ್ಯನು ಮನೆಗೆ ಬರುತ್ತಿರುವ ಸಮಯದಲ್ಲಿ ಮಧುವರಸನು ದಾರಿಯಲ್ಲಿ ಅವನನ್ನು ಕಂಡನು. ಆಗ ಅವನು ಹರಳಯ್ಯನ

ಕಯ್ಯಲ್ಲಿ ಇದ್ದ ಆ ಅತ್ಯುತ್ತಮವಾದ ಜೋಡನ್ನು ಕಂಡು ಅದನ್ನು ತನ ಗೆ ಕೊಡಲು ಕೇಳಿಕೊಂಡನು. ಆದರೆ ಪರಿಶುದ್ಧವಾದ ಆ ಜೋಡನ್ನು ಭವಿಯಾದ ಮಧುವರಸನಿಗೆ ಕೊಡಲು ಹರಳಯ್ಯನು ಒಪ್ಪಲಿಲ್ಲ. ಆಗ್ಗೆ ಮಧುವರಸನು ಬಲಾತ್ಕಾರದಿಂದ ಅದನ್ನು ಹರಳಯ್ಯನ ಕಯ್ಯಿಂದ ಕಸೆ ದುಕೊಂಡು ಹೋಗಿ ಅದನ್ನು ತಾನು ಉಪಯೋಗ ಮಾಡಿಕೊಳ್ಳಹತ್ತಿ ದನು.

ಆದರೆ ಆ ಜೋಡು ಸಮಾನ್ಯವಾದದ್ದೇ? ಮಧುವರಸನು ಅದನ್ನು ಉಪಯೋಗ ಮಾಡಹತ್ತಿದ ಕೆಲ ದಿನಗಳಲ್ಲಿಯೇ ಆವರ ಶರೀರದಲ್ಲಿ ವಿಪ ರೀತ ಬಾಧೆಯುಂಟಾಗಿ ತೊನ್ನಿನ ಮಹಾ ರೋಗವು ಪ್ರಾದುರ್ಭವಿಸಿತು. ಆಗ ಅವನ ಶರೀರದಲ್ಲಿ ನಾನಾವಿಧ ವೇದನೆಗಳು ಪ್ರಾಪ್ತವಾಗಿ ಅತ್ಯಂತ ಸಂಕಟಕ್ಕೆ ಗುರಿಯಾದನು. ತನ್ನ ರೋಗ ಬಾಧಾ ಪರಿಹಾರಕ್ಕೋಸ್ಕರ ಅನೇಕ ಚಿಕಿತ್ಸೆಗಳನ್ನು ಮಾಡಿದರೂ, ಅವುಗಳಿಂದ ಏನೂ ಪರಿಣಾಮ ವಾಗದೆ ಹೆಚ್ಚೆಚ್ಚು ಕ್ಲೇಶಪಡಹತ್ತಿದನು. ಹೀಗೆ ಅನೇಕ ದಿವಸಗಳು ಸಂದ ಲಾಗಿ ಮಧುವರಸನ ದಾಸಿಯೊಬ್ಬಳು ಹರಳಯ್ಯನ ಬಚ್ಚಲ ಗುಂಡಿಯ ನೀರನ್ನು ತೆಗೆದುಕೊಂಡು ಮಧುವರಸನ ಸ್ನಾನದ ನೀರಲ್ಲಿ ಬೆರಿಸಿದಳು. ಅದರಿಂದ ಮಧುವರಸನು ಸ್ನಾನ ಮಾಡಲಾಗಿ ಅವನು ಪಡುತ್ತಿದ್ದ ಮಹಾ ವ್ಯಥೆಯು ಕಡಿಮೆಯಾಗುತ್ತ ಹೋಗಿ ಸ್ವಲ್ಪ ದಿವಸಗಳಲ್ಲಿಯೇ ಗುಣ ಹೊಂದಿದನು. ಈ ಚಮತ್ಕಾರವು ಹ್ಯಾಗಾಯಿತೆಂಬುದನ್ನು ಅವನು ಶೋಧ ಮಾಡಲು, ತನ್ನ ದಾಸಿಯು ಹರಳಯ್ಯನ ಬಚ್ಚಲಗುಣಿಯ ನೀರನ್ನು ತನ್ನ ಸ್ನಾನದ ನೀರಿನಲ್ಲಿ ಬೆರಿಸಿದ್ದು ತಿಳಿಯಿತು. ಆಗ ತಾನು ಭಕ್ತಾ ಗ್ರಗಣ್ಯನಾದ ಹರಳಯ್ಯನಿಗೆ ಮಾಡಿದ ಅಪರಾಧವು ಸ್ಮರಣೆಗೆ ಬಂದಿತು. ಮತ್ತು ಅವನು ಅತ್ಯಂತ ಪಶ್ಚಾತ್ತಾಪವನ್ನು ಹೊಂದಿ ಶಿವಭಕ್ತಿಯೇ ಶ್ರೇಷ್ಠವಾದದ್ದೆಂದು ತಿಳಿದು, ವೀರಶೈವ ದೀಕ್ಷೆಯನ್ನು ಹೊಂದಿ, ಅದರಂತೆ ಆಚರಿಸಹತ್ತಿದನು. ಇಷ್ಟೇ ಅಲ್ಲ, ಹರಳಯ್ಯನಿಗೋಸ್ಕರ ತನ್ನಲ್ಲಿಪ್ಪ ಪೂಜ್ಯ ತೆಯನ್ನು ವ್ಯಕ್ತಪಡಿಸಲೋಸುಗ ಅವನ ಮಗನಿಗೆ ತನ್ನ ಮಗಳನ್ನು ಕೊಟ್ಟು ಲಗ್ನ ಸಮಾರಂಭವನ್ನು ಜರಗಿಸಿದನು.

ಮಧುವರಸನು ಬ್ರಾಹ್ಮಣನಾಗಿದ್ದು ಈ ಪ್ರಕಾರ ಒಬ್ಬ ಅಸ್ಪೃಶ್ಯನೊ ಡನೆ ಲಗ್ನ ಬೆಳಿಸಿದ್ದು ಆಗಿನ ಕಾಲಕ್ಕೆ ಬ್ರಾಹ್ಮಣ ಸಮಾಜದಲ್ಲಿ ಅತ್ಯಂತ ಕ್ಷೋಭವನ್ನುಂಟು ಮಾಡಿತು. ಅವರೆಲ್ಲರೂ ಅರಸನಾದ ಬಿಜ್ಜಳನ ಕಡೆಗೆ

ಹೋಗಿ ಬಸವೇಶ್ವರನು ನಡಿಸಿದ ಧರ್ಮಕೋಲಾಹಲದ ಬಗ್ಗೆಯೂ ಸೇನಾ ನಾಯಕನಾದ ಮತ್ತು ವರ್ಣಶ್ರೇಷ್ಠನಾದ ಮಧುವರಸನು ಹೀನ ಜಾತಿಯು ವನಾದ ಹರಳಯ್ಯನೊಡನೆ ಮಾಡಿದ ಅಕ್ರಮವರ್ತನೆಯ ಬಗ್ಗೆಯೂ ದೂರು ಹೇಳಿದರು. ಆಗ ಬಿಜ್ಜಳನು ಬಸವೇಶ್ವರನನ್ನು ಕರೆಯಿಸಿ, ಮಧುವರಸ ಹರಳಯ್ಯಗಳಲ್ಲಿ ನಡೆದ ವಿವಾಹವು ಯೋಗ್ಯವೋ ಹ್ಯಾಗೆ ಎಂಬದನ್ನು ವಿಚಾರಿಸಲು ಬಸವೇಶ್ವರನು ಆ ಉಭಯತರೂ ಶುದ್ಧ ಶಿವಾಚಾರಿಗಳು ಲಿಂಗಾಂಗಿಗಳು, ಆದ್ದರಿಂದ ಅವರಲ್ಲಿ ಜಾತಿ ಭೇದವನ್ನು ಎಂದಿಗೂ ನೋಡಲಾಗದು ಎಂದು ವಿವರಿಸಿ ಹೇಳಿದನು. ಆದರೆ ಬಿಜ್ಜಳನು ಅದಕ್ಕೆ ಒಪ್ಪದೆ ಮಧುವರಸ ಹರಳಯ್ಯಗಳನ್ನು ಕರೆ ಕಳುಹಿಸಿ, ಅವರು ಮಾಡಿದ ಅಪರಾಧಕ್ಕೋಸ್ಕರ ಅವರಿಬ್ಬರ ಕಣ್ಣುಗಳನ್ನು ಕೀಳಿಸಿದನು. ಕೆಲವು ಗ್ರಂಥಗಳಲ್ಲಿ ಅವರಿಬ್ಬರನ್ನು ಆನೆಯ ಕಾಲಿನಿಂದ ತುಳಿಸಿದನೆಂತಲೂ ಉಲ್ಲೇಖಿಸಲ್ಪಟ್ಟಿರುತ್ತದೆ.

ಈ ಮೇರೆಗೆ ಈ ಭಕ್ತಶ್ರೇಷ್ಠರು ನಿಷ್ಕಾರಣವಾಗಿ ಅತಿಕ್ರೂರತನದಿಂದ ಹಿಂಸಿಸಲ್ಪಡಲು ದೇಶದಲ್ಲಿದ್ದ ವೀರಶೈವರಲ್ಲಿ ಅತ್ಯಂತ ಕ್ಷೋಭವು ಉತ್ಪನ್ನವಾಯಿತು. ಆಗ ಬಸವೇಶ್ವರನು ಈ ಹಿಂಸೆಗೆ ಅತ್ಯಂತವಾಗಿ ಮನನೊಂದು ಈ ಕಲ್ಯಾಣ ಪಟ್ಟಣವು ಹಾಳಾಗಲೆಂದು ಶಪಿಸಿ, ಇನ್ನು ಮುಂದೆ ಇಲ್ಲಿ ಇರಲಾಗದೆಂದು ಬಗೆದು ತನ್ನ ಮಂತ್ರಿತ್ವವನ್ನು ತ್ಯಜಿಸಿ, ತನ್ನ ಗುರುವಾದ ಕೂಡಲ ಸಂಗಮನಾಥನಲ್ಲಿಗೆ ಬಂದು, ಅಲ್ಲಿ ಕಪ್ಪಡಿಯಲ್ಲಿ ಅಂತರ್ಧಾನನಾದನು.

ಈ ಮೇರೆಗೆ ಹರಳಯ್ಯ ಮಧುವಯ್ಯಗಳ ಹೃದಯ ದ್ರಾವಕ ಚರಿತ್ರೆ ಇದ್ದು, ಇದರಿಂದ ಆ ಕಾಲಕ್ಕೆ ವೀರಶೈವರು ಹ್ಯಾಗೆ ವರ್ತಿಸುತ್ತಿದ್ದರೆಂಬದು ವ್ಯಕ್ತವಾಗುತ್ತದೆ. ಅವರು ಪರಿಶುದ್ಧವಾದ ಧರ್ಮಾಚರಣೆ ಮತ್ತು ಭಕ್ತಿಗೆ ಅತ್ಯಂತ ಮಹತ್ವ ಕೊಡುತ್ತಿದ್ದರು. ಇದರಲ್ಲಿ ಅವರು ಜಾತಿ ಭೇದವನ್ನು ಎಂದೂ ಎಣಿಸಲಿಲ್ಲ. ಈ ಭಾಗವು ಆಗಿನ ಕಾಲಕ್ಕೆ ಬರೀ ಬಸವೇಶ್ವರನಲ್ಲಷ್ಟೇ ಅಲ್ಲ, ಇಡೀ ವೀರಶೈವ ಸಮಾಜದಲ್ಲಿ ದೃಢವಾಗಿ ನೆಲೆಗೊಂಡಿತ್ತು. ಆದ್ದರಿಂದಲೇ ಮಧುವರಸ ಹರಳಯ್ಯಗಳು ಘಾಸಿಸಲ್ಪಟ್ಟ ಬಳಿಕ ಅವರೆಲ್ಲರೂ ಬಿಜ್ಜಳನ ವಿರುದ್ಧ ಹೋರಾಡಲು ಸನ್ನದ್ಧರಾದರು. ಆಗಯಾರೊಬ್ಬರೂ ಜಾತಿ ವಿಷಯಕ ಪರಸ್ಪರ ಉಚ್ಚನೀಚ ಭಾವವನ್ನು ಪ್ರಕಟಿಸದೆ ಬಂಧು ಭಾವದಿಂದ ವರ್ತಿಸುತ್ತಿದ್ದದರಿಂದ, ಇಡೀ ವೀರಶೈವ

ಸಮಾಜದಲ್ಲಿ ಐಕ್ಯತೆಯು ನೆಲೆಗೊಂಡು ಅದು ಅತ್ಯಂತ ಸಾಮರ್ಥ್ಯವನೂ ತೇಜಸ್ಸನ್ನೂ ಹೊಂದಿತು.

ಧರ್ಮವು ಮನುಷ್ಯನ ಉದ್ಧಾರಕ್ಕೋಸ್ಕರವಾಗಿ ಇರುತ್ತದೆ. ಅದರಲ್ಲಿ ಎಂದಿಗೂ ಪಕ್ಷಪಾತವಿರಲಾರದು. ಸರ್ವರಲ್ಲಿಯೂ ದಯಾಂತಃಕರುಣವುಳ್ಳ ಪರಮಾತ್ಮನಲ್ಲಿ ಭೇದಭಾವವು ಹ್ಯಾಗೆ ಇರಬಹುದು? ಅಂದಬಳಿಕ ಅವನಿಂದ ಪ್ರಣೀತವಾದ ಧರ್ಮದಲ್ಲಿಯಾದರೂ ಭೇದಭಾವವು ಇರುವದು ಹ್ಯಾಗೆ ಶಕ್ಯವು? ಆದರೆ ಮನುಷ್ಯನು ಸ್ವಾರ್ಥತೆಯಿಂದ ಪ್ರೇರಿತನಾಗಿ ಅನೇಕ ಕೃತ್ರಿಮ ಭೇದಭಾವಗಳನ್ನು ಕಲ್ಪಿಸಿ, ಒಬ್ಬನು ನೀಚನು, ಮತ್ತೊಬ್ಬನು ಉತ್ತಮನು ಎಂದುಹೇಳಿ, ಧರ್ಮದ ಹೆಸರಿನಿಂದ ಎರಡನೆಯವರನ್ನು ಕೆಳಕ್ಕೆ ದಬ್ಬಿ, ತನ್ನನ್ನು ಶ್ರೇಷ್ಠನಾಗಿ ಎಣಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಇಂಥ ಪ್ರಯತ್ನಗಳಿಂದಲೇ ನಮ್ಮ ಹಿಂದೂಸಮಾಜದಲ್ಲಿ ನಾನಾತರದ ಜಾತಿಭೇದಗಳು ಉತ್ಪನ್ನವಾಗಿರುತ್ತವೆ. ಇದರಿಂದ ನಮ್ಮ ದೇಶವು ಒಡಕುಗಳಿಂದ ಭಿನ್ನಭಿನ್ನವಾಗಿರುತ್ತದೆ. ಜಾತಿ ಎಂಬುವಂಥ ಕಲ್ಪನೆಯು ಹಿಂದುಸ್ಥಾನದಲ್ಲಷ್ಟೇ ಹೊರ್ತು ಬೇರೆ ಯಾವ ದೇಶ ಅಥವಾ ಧರ್ಮದಲ್ಲಿ ಇದ್ದದ್ದು ಕಂಡು ಬರುವದಿಲ್ಲ. ಈ ಸ್ಥಿತಿಯು ವೇದಕಾಲದಲ್ಲಿಯೂ ಇರಲಿಲ್ಲ. ಸ್ಮೃತಿಗಳ ಕಾಲದಲ್ಲಿ ಇತ್ತೀಚೆಗೆ ತಲೆ ದೋರಿತು. ಈ ಜಾತಿ ವಿಷಯಕ ಭೇದ ಭಾವಗಳು ನಮ್ಮಲ್ಲಿ ಇನ್ನೂ ದೃಢತರವಾಗಿ ಬೇರೂರಿವೆ. ಇದರಿಂದ ನಮ್ಮಲ್ಲಿ ಏಕರಾಷ್ಟ್ರೀಯತ್ವದ ವಿಚಾರಗಳು ಪ್ರಸಾರ ಹೊಂದಲಿಕ್ಕೆ ಅತ್ಯಂತ ಆತಂಕವು ಒದಗಿರುತ್ತದೆ. ಆದ್ದರಿಂದ ಈ ಜಾತಿ ಭೇದವನ್ನು ಮುರಿಯುಲಿಕ್ಕೆ ಪ್ರಯತ್ನಿಸಿ ಕಷ್ಟ ಪಟ್ಟ ಬಸವೇಶ್ವರನಂಥ ಮಹಾತ್ಮರೇ ಹಿಂದೂ ಸಮಾಜದ ಪ್ರಗತಿಗೆ ಕಾರಣವಾಗಿರುವರೆಂದು ನಾವು ನಿಃಸ್ಸಂದೇಹವಾಗಿ ಹೇಳಬಹುದು.

ಮಧುವರಸನ ಗ್ರಾಮವು ಸೊಲ್ಲಾಪುರಕ್ಕೆ ಸಮೀಪವಾಗಿರುವ ಮಂಗಳವೇಢೆಯು ಇರುತ್ತದೆ. ಇವನಿಂದ ರಚಿತವಾದ ಒಂದು ವಚನವೂ ಇರುತ್ತದೆ. ಇದರ ಮುದ್ರಿಕೆಯು "ಅರ್ಕೇಶ್ವರಾ" ಎಂದು ಇದೆ. ಹರಳಯ್ಯನು ವಿಜಾಪುರ ಜಿಲ್ಹೆಯವನೆಂದು ತೋರುತ್ತದೆ. ಯಾಕಂದರೆ ವಿಜಾಪುರದಿಂದ ೨೦ ಮೈಲುಗಳ ಮೇಲೆ ಹರಳಯ್ಯನ ಗುಂಡ ಎಂಬ ಹೆಸರಿನ ಪ್ರಸಿದ್ಧ ಸ್ಥಾನವು ಇದೆ. ಇದು ಈ ಭಾಗದಲ್ಲಿ ಅತ್ಯಂತ ಪವಿತ್ರವಾದುದೆಂದು ತಿಳಿಯಲ್ಪಟ್ಟಿದೆ. ವಿಜಾಪುರ ಜಿಲ್ಹೆ ಮತ್ತು ಮಹಾರಾಷ್ಟ್ರ ಪ್ರಾಂತದ ಬಹುಜನ

ಅಸ್ಪೃಶ್ಯರು ಈಗ್ಗೆಯೂ ತಾವು ಹರಳಯ್ಯನ ಅನುಯಾಯಿಗಳೆಂದು ಹೇಳಿಕೊಂಡು ಕಪ್ಪು ಕಡಿ ತಿನ್ನದೆ ಬಹು ಶುದ್ಧವಾದ ಆಚರಣೆಯಿಂದ ವರ್ತಿಸುತ್ತಾರೆ.

---

## ಶಿವಾನುಭವವು ೧ನೇ ವರ್ಷದಲ್ಲಿ ಮಾಡಿದ ಕಾರ್ಯಗಳು.

ವಾಚಕರ ಕಯ್ಯಲ್ಲಿದ್ದ ಈ ಸಂಚಿಕೆಯು ಶಿವಾನುಭವದ ೧ನೇ ವರ್ಷದ ಕಡೆಯದಾಗಿದೆ. ಈ ಅವಧಿಯಲ್ಲಿ ಈ ಪತ್ರಿಕೆಯು ಎಷ್ಟರ ಮಟ್ಟಿಗೆ ಸಮಾಜ ಸೇವೆಯನ್ನು ಮಾಡಿರುತ್ತದೆಂಬದನ್ನು ವಿಚಾರ ಮಾಡುವ ಭಾರವು ವಾಚಕರ ಕಡೆಗೆ ಇದೆ. ಅವರೇ ಇದರ ಯೊಗ್ಯಾ ಯೊಗ್ಯತೆಯನ್ನು ಪರೀಕ್ಷಿಸುವವರು. ಆದರೂ ಈ ಪತ್ರಿಕೆಯು ಮಾಡಿದ ಕಾರ್ಯಗಳ ವಿವರ ಅಥವಾ ವರದಿಯನ್ನು ನಾವು ಮೊದಲಿಗೆ ಅವರೆದುರಿಗೆ ಇಡುವದು ನಮ್ಮ ಕರ್ತವ್ಯವಾಗಿದೆ. ಅದನ್ನು ನಾವು ಅವರ ಅವಗಾಹನೆಗೋಸ್ಕರ ಸಂಕ್ಷೇಪವಾಗಿ ಕೆಳಗೆ ವಿವರಿಸುತ್ತೇವೆ.

ಪತ್ರಿಕೆಯ ಉದ್ದೇಶಗಳನ್ನು ನಾವು ಶಿವಾನುಭವದ ೧ನೇ ಸಂಚಿಕೆಯ ಪ್ರಥಮ ಲೇಖದಲ್ಲಿಯೇ ವಿವರಿಸಿದ್ದೇವೆ. ಅದರಿಂದ (೧) ವೀರಶೈವ ಧರ್ಮ ಗ್ರಂಥಗಳನ್ನು ಪ್ರಕಟ ಪಡಿಸುವದು (೨) ವೀರಶೈವ ಸಮಾಜದ ಧಾರ್ಮಿಕ, ರಾಜಕೀಯ, ಸಾಮಾಜಿಕ ಇತಿಹಾಸವನ್ನು ಶೋಧಿಸುವದು ಮತ್ತು ಅದರಲ್ಲಿ ಆಗಿ ಹೋದ ಮಹಾ ಪುರುಷರ ಚರಿತ್ರೆಗಳನ್ನು ಬರೆಯಿಸುವುದು. (೩) ವೀರಶೈವ ಕಾವ್ಯಗಳನ್ನು ಅಚ್ಚು ಹಾಕುವದು (೪) ಸಂಸ್ಕೃತ ಧರ್ಮ ಗ್ರಂಥಗಳನ್ನು ಪ್ರಕಟಿಸುವದು (೫) ವೀರಶೈವ ಧರ್ಮದ ಮರ್ಮಗಳ ಬಗ್ಗೆ ಸುಲಭ ಭಾಷೆಯಲ್ಲಿ ಲೇಖಗಳನ್ನು ಪ್ರಸಿದ್ಧಿಸುವದು ಈ ಉದ್ದೇಶಗಳೇ ಮುಖ್ಯವಾಗಿರುತ್ತವೆಂಬದು ಕಂಡು ಬರುತ್ತದೆ. ಈ ಉದ್ದೇಶಗಳ ಬಗ್ಗೆ ಕೆಳಗೆ ಕಾಣಿಸಿದಂತೆ ಪ್ರಯತ್ನಗಳು ಶಿವಾನುಭವ ಪತ್ರಿಕೆಯ ದ್ವಾರಾ ಮಾಡಲ್ಪಟ್ಟವೆ.

೧ ಬಸವೇಶ್ವರನ ವಚನಗಳು ಸರಿಯಾಗಿ ಅಚ್ಚು ಹಾಕಲ್ಪಟ್ಟದ್ದವು ಈವರೆಗೆ ಉಪಲಬ್ಧವಿದ್ದಿಲ್ಲ. ಇವುಗಳು ಈ ಪತ್ರಿಕೆಯಲ್ಲಿ ಅಚ್ಚು ಹಾಕ

ಲ್ಪಟ್ಟವೆ. ಮಹಾದೇವಿಯಕ್ಕನ ವಚನಗಳು ಮೊದಲಿಗೆ ಎಲ್ಲಿಯೂ ಶಿಗು ತ್ತಿರಲಿಲ್ಲ. ಇವುಗಳನ್ನು ಬೇರೆ ಬೇರೆ ಗ್ರಂಥಗಳಿಂದ ಅತ್ಯಂತ ಶ್ರಮದಿಂದ ಆರಿಸಿ ತೆಗೆದು ಅವುಗಳು ಅಚ್ಚು ಹಾಕಲ್ಪಟ್ಟವೆ. ಅದರಂತೆಯೇ ಗಣದಾಸಿ ವೀರಣ್ಣನ ವಚನಗಳೂ, ಲಿಂಗಪೂಜೆಯ ಮರ್ಮದ ಸಂಬಂಧದ ವಚನ ಗಳೂ, ಸಂಗನ ಬಸವೇಶ್ವರನ ವಚನವೂ, ಏಕೋತ್ತರ ಶತಸ್ಥಲವೂ ಮುದ್ರಣ ಗೊಳಿಸಲ್ಪಟ್ಟವೆ. ಇವುಗಳಲ್ಲಿ ಕಡೆಯ ಎರಡು ಗ್ರಂಥಗಳು ೪ನೇ ಸಂಚಿಕೆಯಿಂದ ಪ್ರಾರಂಭಿಸಲ್ಪಟ್ಟವೆ. ಇವುಗಳಲ್ಲಿ ಬಸವೇಶ್ವರ ಮತ್ತು ಮಹಾದೇವಿಯಕ್ಕನ ವಚನಗಳು ಷಟ್‌ಸ್ಥಲಾತ್ಮಕವಾಗಿದ್ದು ಬಹಳ ಗಹನ ವಿಚಾರಗಳಿಂದ ತುಂಬಿದವು ಇರುತ್ತವೆ. ಆದರೆ ಉಳಿದ ವಚನಗಳು ಅಷ್ಟಾ ವರಣ ಮತ್ತು ಆಚಾರ ವಿಷಯಕವಾಗಿದ್ದು ಸುಲಭವಾಗಿರುತ್ತವೆ. ಇವುಗ ಳಲ್ಲಿ "ಏಕೋತ್ತರ ಶತಸ್ಥಲವು" ಬಹು ಸುಂದರವಾದ ಗ್ರಂಥವಿರುತ್ತದೆ. ಇದರಲ್ಲಿ ಈ ವರೆಗೆ ಯಾರಿಗೂ ಉಪಲಬ್ಧವಿಲ್ಲದ ಪುರಾತನ ಶಿವಶರಣರ ಹಾಡುಗಳು ಬಂದಿರುತ್ತವೆ. ಶಿವಶರಣರು ವಚನಗಳನ್ನು ರಚಿಸಿದ್ದು ಈವ ರೆಗೆ ಗೊತ್ತಿದ್ದು, ಅವರು ಪದಗಳನ್ನು ರಚಿಸಿದ್ದು ಗೊತ್ತಿರಲಿಲ್ಲ ಆದರೆ ಇವು ಗಳನ್ನು ಈ ಗ್ರಂಥದಲ್ಲಿ ಕಾಣಬಹುದು. ಹೊಸ ಶೋಧಗಳಲ್ಲಿ ಇದೊಂದಾ ಗಿದೆ. ಈ ಹಾಡುಗಳು ಎಷ್ಟು ಸುಗಮವೂ ಲಲಿತವೂ ಆಗಿರುತ್ತವೆಂಬ ದನ್ನು ವಾಚಕರೇ ವಿಚಾರಿಸತಕ್ಕದ್ದು. ಈ ಎಲ್ಲ ಗ್ರಂಥಗಳಲ್ಲಿ ಒಂದು ಮಾತ್ರ ಬಿಟ್ಟು ಉಳಿದ ಯಾವವೂ ಹಿಂದೆ ಎಂದಿಗೂ ಪ್ರಸಿದ್ಧವಾಗಿರಲಿಲ್ಲ.

೨ "ಮಹಿಮ್ನ ಸ್ತೋತ್ರ"ಕ್ಕೆ ಶ್ರೀ ಶಂಭುಲಿಂಗ ಸ್ವಾಮಿಗಳು ಹಿರೇ ಮಠ ವಿಜಾಪುರ ಇವರು ಟೀಕೆಯನ್ನು ಬರೆದಿದ್ದು ಅದು "ಶಿವಾನುಭವ ಗ್ರಂಥ ಮಾಲೆ"ಯಲ್ಲಿ ಸ್ವತಂತ್ರವಾಗಿ ಅಚ್ಚು ಹಾಕಲ್ಪಟ್ಟಿದೆ. ಸಂಸ್ಕೃತ ಗ್ರಂಥಗಳನ್ನು ಅಚ್ಚು ಹಾಕಿದ್ದು ಇದೊಂದೇ ಆಗಿದೆ.

೩ ವೀರಶೈವ ವಾಙ್ಮಯದಲ್ಲಿ ಅಸಂಖ್ಯ ಷಟ್‌ಪದಿಗಳೂ ರಗಳೆಗಳೂ ಸಾಂಗತ್ಯಗಳೂ, ತ್ರಿವಿಡಿಗಳೂ ಇರುತ್ತವೆ. ಇವುಗಳಲ್ಲಿ ನೈತಿಕ ಮತ್ತು ಆಚಾರ ವಿಷಯಗಳೂ, ಚರಿತ್ರೆಗಳೂ ಅಡಕವಾಗಿವೆ. ಇವುಗಳಲ್ಲಿ ಅನೇಕ ವುಗಳು ಬಹು ಮನೋಹರವೂ ಬೋಧಪ್ರದವೂ ಇರುತ್ತವೆ. ಶಿವಾನುಭ ವದ ಸಂಚಿಕೆಗಳಲ್ಲಿ ವೀರಶೈವ ರಗಳೆ ಎಂಬ ವೀರಶೈವಮತ ತತ್ವ ಬೋಧಕ ಕಾವ್ಯವಲ್ಲದೆ, ಮಹಾ ಪ್ರಸಿದ್ಧ ಕವಿಯಾದ ಲಕ್ಕಣ್ಣ ದಂಡೇಶನು ಬರೆದ ಗುಡ್ಡವ್ವೆಯ ಚರಿತ್ರೆ, ತೋಂಟದಾರ್ಯರ ರಗಳೆ ಶಿವಯೋಗಾಚರಣೆ

ಎಂಬ ಪದ್ಯಗಳೂ ಪ್ರಸಿದ್ಧಿಸಲ್ಪಟ್ಟಿವೆ. ಇವೆಲ್ಲವುಗಳು ವಿಶ್ವಸನೀಯವಾಗಿ ರುತ್ತವೆಂಬದನ್ನು ಶಿವಾನುಭವದ ವಾಚಕರು ಒಪ್ಪದೆ ಇರಲಾರರು.

೪ ಶಿವಾನುಭವದಲ್ಲಿ ಪ್ರಸಿದ್ಧಿಸಲ್ಪಟ್ಟಿರುವ ಗ್ರಂಥಗಳು ತಿಳಿಯಲಿಕ್ಕೆ ಕಠಿಣವಿದ್ದು, ಅವುಗಳಿಗೆ ಅರ್ಥಗಳನ್ನು ಬರೆಯು ಬೇಕೆಂದು ಅನೇಕರು ಸೂಚನೆಗಳನ್ನು ಮಾಡಿದ ಮೂಲಕ, ಮಹಾದೇವಿಯಕ್ಕನ ವಚನಗಳಲ್ಲಿ ಕಠಿಣ ಶಬ್ದಗಳಿಗೆ ಅರ್ಥವು ಬರೆಯಲ್ಪಟ್ಟಿದೆ. ಮತ್ತು ವರದಾನಿ ಗುಡ್ಡ ಮ್ಮೆಯ ಚರಿತ್ರೆಯು ಭಾವಾರ್ಥ ಮತ್ತು ಕಠಿಣ ಶಬ್ದಗಳ ಅರ್ಥ ಇವುಗ ಳಿಂದ ಕೂಡಿಕೊಂಡು ಸ್ವತಂತ್ರವಾಗಿ ಈಗ ಅಚ್ಚು ಹಾಕಲ್ಪಟ್ಟಿದೆ.

೫ ವೀರಶೈವ ಧಾರ್ಮಿಕ ಮಹಾ ಪುರುಷರ ಚರಿತ್ರೆಗಳನ್ನು ಸಂಶೋಧಿಸುವದಾದರೂ ಮಹತ್ವದ ಕಾರ್ಯವಾಗಿದೆ. ಆ ಮೇರೆಗೆ ಸಿದ್ಧ ರಾಮೇಶ, ಏಕಾಂತದ ರಾಮಯ್ಯ, ದೇವರ ದಾಸಿಮಯ್ಯ ಈ ಮಹಾ ಪುರುಷರಿಗೆ ಸಂಬಂಧಪಟ್ಟ ಶಿಲಾ ಲೇಖಗಳು ಶಿವಾನುಭವದ ವಾಚಕರ ನಿದರ್ಶನಕ್ಕೆ ತರಲ್ಪಟ್ಟಿವೆ. ಬಸವೇಶ್ವರನ ಕಾಲದ ಸಂಬಂಧವಾಗಿ ಎರಡು ಚರ್ಚಾತ್ಮಕ ಲೇಖಗಳು ಕೊಡಲ್ಪಟ್ಟಿವೆ. ಧಾರ್ಮಿಕ ಮಹಾ ಪುರುಷರು ಮಹಾತ್ಮಿಕರಿರುವದರಿಂದ ಅವರ ಚರಿತ್ರೆಗಳಲ್ಲಿ ಸಹಜಿಕವಾಗಿ ಅದ್ಭುತ ಭಾಗಗಳು ಬಹಳ ಇರುತ್ತವೆ. ಆದರೆ ಅವರ ಚರಿತ್ರೆಗಳಲ್ಲಿಯ ಐತಿಹಾಸಿಕ ಭಾಗಗಳನ್ನು ಶೋಧಿಸಿ ಅವುಗಳನ್ನು ಪ್ರಕಟಪಡಿಸುವದು ಅತ್ಯಂತ ಅವಶ್ಯ ವಿರುತ್ತದೆ. ಇದರಲ್ಲಿಯೇ ಈ ಕಾಲಕ್ಕೆ ಸಮಾಜದ ನಿಜವಾದ ಮಹತ್ವವು ಇದೆ ಈ ದೃಷ್ಟಿಯನ್ನಿಟ್ಟು ಈ ಧಾರ್ಮಿಕ ಮಹಾ ಪುರುಷರ ಚರಿತ್ರೆಗಳು ಶಿವಾ ನುಭವದಲ್ಲಿ ಚರ್ಚಿಸಲ್ಪಟ್ಟಿವೆ. ಹ್ಯಾಗೆ ಮೊದಲಿನ ಕಾಲಕ್ಕೆ ಧಾರ್ಮಿಕ ಮಹಾ ಪುರುಷರು ಹುಟ್ಟಿದರೋ ಅದೇ ಮೇರೆಗೆ ಕಾಲ ಕಾಲಕ್ಕೆ ಅವರು ನಮ್ಮ ಸಮಾಜದಲ್ಲಿ ಉತ್ಪನ್ನರಾಗುತ್ತ ಬಂದಿರುವರು. ಅವರ ಚರಿತ್ರೆಗಳೂ ಶಿವಾನುಭವದಲ್ಲಿ ಬಂದಿವೆ. ಗಲಗಲಿಯ ವೃಷಭಲಿಂಗ ಸ್ವಾಮಿಗಳು ಮತ್ತು ಕಡಕೋಳ ಮಡಿವಾಳಪ್ಪನವರು ಇವರ ವಿಶ್ವಸನೀಯ ಚರಿತ್ರೆಗಳು ಇದರಲ್ಲಿ ಕೊಡಲ್ಪಟ್ಟಿವೆ. ಅದೇ ಮೇರೆಗೆ ತೋಂಟದಾರ್ಯ, ವರದಾನಿ ಗುಡ್ಡಮ್ಮ, ಹರಳಯ್ಯ ಮಧುವರಸ ಇವರ ವೃತ್ತಾಂತಗಳೂ ಬಂದಿವೆ.

೬ ವೀರಶೈವ ಸಮಾಜದಲ್ಲಿ ಅನೇಕ ರಾಜ್ಯ ಸ್ಥಾಪಕರೂ ವೀರಪುರು ಷರೂ ಆಗಿ ಹೋಗಿದ್ದಾರೆ. ಅವರ ವಿಶ್ವಸನೀಯ ವೃತ್ತಾಂತಗಳು ಶಿವಾನು ಭವದಲ್ಲಿ ಬಂದಿವೆ. ೪ನೇ ಸಂಚಿಕೆಯಲ್ಲಿ ಕೆಳದೀ ಮತ್ತು ಸ್ವಾದೀ ಅರಸರು

ಕರ್ನಾಟಕದಲ್ಲಿ ಯಾವ ಮಹತ್ವದ ರಾಜಕೀಯ ಕಾರ್ಯ ಭಾಗವನು ಮಾಡಿದರು ಎಂಬವರ ಸವಿಸ್ತಾರ ವರ್ಣನೆಯು ಬಂದಿದೆ. ಇದು ಪೋರ್ತುಗೀಜ ಪ್ರವಾಸಿಕರು ಬರೆದ ವೃತ್ತಾಂತಗಳ ಆಧಾರದಿಂದಲೇ ಬರೆಯಲ್ಪಟ್ಟದೆ. ಅದೇ ಮೇರೆಗೆ ಕೆಳದಿಯ ಚನ್ನಮ್ಮಾಜಿ, ಮತ್ತು ಬೆಳವಡಿಯ ಮಲ್ಲಮ್ಮಾ ಬಾಯಿ ಇವರ ಚಿತ್ತವೇಧಕ ಚರಿತ್ರೆಗಳು ಬರೆಯಲ್ಪಟ್ಟಿವೆ. ಮತ್ತು ರಾಜ್ಯ ಕಾರಭಾರ ಧುರಂಧರ ನಿಷ್ಠೀ ವೀರಪ್ಪನ ಚರಿತ್ರೆಯೂ ೪ನೇ ಅಂಕದಲ್ಲಿ ಬಂದಿದೆ. ಈ ಐತಿಹಾಸಿಕ ಮಹಾ ಪುರುಷರ ಚರಿತ್ರೆಗಳಲ್ಲಿ ಅತಿಶಯೋಕ್ತಿಗಳು ಏನೂ ಇಲ್ಲದೆ ಆಧಾರಯುಕ್ತವಾಗಿ ವಿಶ್ವಸನೀಯ ವೃತ್ತಾಂತಗಳು ಮಾತ್ರ ಕೊಡಲ್ಪಟ್ಟಿವೆ. ಈ ಯಾವತ್ತರ ಅರಿವನ್ನು ಶಿವಾನುಭವವು ಕರ್ನಾಟಕಸ್ಥರಿಗೆ ಮೊದಲು ಮಾಡಿ ಕೊಟ್ಟಿರುತ್ತದೆ.

೭. ಶಿವಾನುಭವದ ತತ್ವಗಳು ಬಹು ಘನತರವಾದವುಗಳಿರುತ್ತವೆ. ಈ ಬಗ್ಗೆ ಪಂಡಿತರಿಂದ ಬರೆಯಲ್ಪಟ್ಟ ಅನೇಕ ಮಹತ್ವದ ಲೇಖಗಳು ಈ ಪತ್ರಿಕೆಯಲ್ಲಿ ಬಂದಿವೆ. ಅವೆಲ್ಲವೂ ಬಹು ಶ್ರಮದಿಂದಲೂ ಎಚ್ಚರದಿಂದಲೂ ಬರೆಯಲ್ಪಟ್ಟಿವೆ. ಈ ಕಾಲಕ್ಕೆ ವೀರಶೈವ ಮತತತ್ವಗಳ ಬಗ್ಗೆ ಸಮಾಜದಲ್ಲಿ ನಾನಾವಿಧ ವಿಚಾರಗಳು ತುಂಬಿಹೋಗಿವೆ. ಇದರಿಂದ ಕೆಲವು ಪಕ್ಷಗಳೂ ಉಂಟಾಗಿವೆ. ಆದ್ದರಿಂದ ಇಂಥ ಲೇಖಗಳನ್ನು ಆಧಾರಯುಕ್ತವಾಗಿ ಜಾಗ್ರತೆಯಿಂದ ಬರೆಯಬೇಕಾಗಿರುತ್ತದೆ. "೨೧ ದೀಕ್ಷೆಗಳು" ಮತ್ತು "ಲಿಂಗಪೂಜೆಯ ತತ್ವಗಳು" ಎಂಬ ಲೇಖಗಳು ಆಯಾ ಸಂಚಿಕೆಗಳಲ್ಲಿ ಬಂದ ವಚನಗಳ ಆಧಾರದಿಂದಲೇ ಬರೆಯಲ್ಪಟ್ಟಿವೆ. "ಲಿಂಗ ಹೋದರೆ ಆತ್ಮಘಾತ ಮಾಡಿಕೊಳ್ಳಬಹುದೊ" ಎಂಬ ಚರ್ಚಾತ್ಮಕ ವಿಷಯವು ಲಿಂಗವೆಂದರೇನು ಎಂಬ ವಿಷಯವು ಜನರಿಗೆ ತಿಳಿಯಬೇಕೆಂಬ ಉದ್ದೇಶವಾಗಿ ಮಿ॥ ಪಾವಟೆಯವರು ಬರೆದಿದ್ದಾರೆ. ಬಸವೇಶ್ವರನು ಅತ್ಯಂತ ನೈತಿಕಬುದ್ಧಿಯುಳ್ಳವನಿದ್ದನೆಂದು ತೋರಿಸಲು ಈ ಬಗ್ಗೆಯೂ ಒಂದು ಲೇಖವು ಕೊಡಲ್ಪಟ್ಟದೆ. ಇದೇ ಮೇರೆಗೆ ಶ್ರೀ ಶಂಭುಲಿಂಗ ಸ್ವಾಮಿಗಳು, ಮಿ॥ ಮುಧೋಳಕರ ಮೊದಲಾದ ಮಹನೀಯರು ಅನೇಕ ಮಹತ್ವದ ಧಾರ್ಮಿಕ ಲೇಖಗಳನ್ನು ಬರೆದಿದ್ದಾರೆ. ಇವೆಲ್ಲ ಲೇಖಗಳು ಎಷ್ಟು ಸಂಗ್ರಾಹ್ಯವಾಗಿರುತ್ತವೆಂಬದನ್ನು ಶಿವಾನುಭವದ ವಾಚಕರೇ ವಿಚಾರ ಮಾಡತಕ್ಕದ್ದು.

೮. ವೀರಶೈವ ಸಮಾಜಕ್ಕೆ ಸಂಬಂಧಪಟ್ಟ ಪೂಜ್ಯಸ್ಥಾನಗಳ ಚಿತ್ರಗಳನ್ನು ಪ್ರಸಿದ್ಧಿಸಿ, ಅವುಗಳ ಪ್ರತ್ಯಕ್ಷ ತಿಳುವಳಿಕೆಯನ್ನು ನಮ್ಮ ವಾಚಕರಿಗೆ ಮಾಡಿಕೊಡುವ ಹೊಸದೊಂದು ಕಾರ್ಯವನ್ನು ನಾವು ಕೈಕೊಂಡಿರುತ್ತೇವೆ. ಆ ಮೇರೆಗೆ ವದಾನಿ ಗುಡ್ಡಮ್ಮೆಯ ಚಿತ್ರವು ಶಿವಾನುಭವದಲ್ಲಿ ಕೊಡಲ್ಪಟ್ಟಿದೆ. ಅದರಂತೆಯೇ ೪ ನೇ ಸಂಚಿಕೆಯಲ್ಲಿ 'ತಾಂಡವ ನೃತ್ಯ' ಮತ್ತು "ಶರಣಯ್ಯ" ಈ ಚಿತ್ರಗಳು ಕೊಡಲ್ಪಟ್ಟಿವೆ. ಕರ್ನಾಟಕದಲ್ಲಿಯ ಕಲಾಕೋವಿದರಿಗೆ ಆಶ್ರಯ ಕೊಡುವದು ನಮ್ಮ ಕರ್ತವ್ಯವಾಗಿದೆ. ಕಡೆಯ ೨ ಚಿತ್ರಗಳನ್ನು ರಾ॥ ರಾ॥ ಮಡಿವಾಳಪ್ಪ ಮಿಣಜಿಗಿ ವಿಜಾಪುರ ಇವರು ತೆಗೆದು ನಮ್ಮ ಕಡೆಗೆ ಕಳಿಸಿದ್ದಾರೆ. ಇದಕ್ಕೆ ನಾವು ಅವರ ಆಭಾರಿಯಾಗಿದ್ದೇವೆ. ಅವರು ಚಿತ್ರದ ಕೆಲಸದಲ್ಲಿ ಬಹು ನಿಷ್ಣಾತರಿರುವರು. ಈ ಮೇರೆಗೆ ಕಲಾಕೌಶಲ್ಯದಲ್ಲಿ ಜಾಣ್ಮೆಯುಳ್ಳವರಿಗೂ ಕೆಲಮಟ್ಟಿಗೆ ಉತ್ತೇಜನ ಕೊಡುವ ಕಾರ್ಯವನ್ನು ಶಿವಾನುಭವವು ಮಾಡಿದೆ.

೯ ಶಿವಾನುಭವದಲ್ಲಿ ಪ್ರಕಟವಾದ ಮಹತ್ವದ ಗ್ರಂಥಗಳು ಎಲ್ಲರಿಗೂ ಸುಲಭ ಬೆಲೆಯಿಂದ ಸಿಗುವ ಏರ್ಪಾಡನ್ನೂ ನಾವು ಮಾಡಿದ್ದೇವೆ. ಈಗಿನ ಕಾಲಕ್ಕೆ ಇಂಥ ಸಣ್ಣ ಗ್ರಂಥಗಳನ್ನು ಪ್ರಸಿದ್ಧಿಸುವದು ಬಹಳ ಅವಶ್ಯವಾಗಿದೆ. ಈ ಮೇರೆಗೆ ನಾವು ಒಂದು ವರ್ಷದಲ್ಲಿಯೇ ೧೧ ಗ್ರಂಥಗಳನ್ನು ಪ್ರಸಿದ್ಧಿಸಿದ್ದೇವೆ.

೧೦ ಈ ಪತ್ರಿಕೆಯನ್ನು ನಾವು ಕೈಕೊಂಡಬಳಿಕ ಕೊಲ್ಹಾಪುರ, ಮಿರಜ, ಸಾಂಗಲಿ, ಮುಧೋಳ, ಜತ್ತ, ಸೊಲ್ಲಾಪುರ ತಾಲೂಕು, ಮತ್ತು ಇಡೀ ಕಲಬುರ್ಗಿ ಮತ್ತು ಬೀದರ ಜಿಲ್ಹೆಗಳು ಇವುಗಳಲ್ಲಿ ಐದಾರು ಲಕ್ಷ ವೀರಶೈವರ ದಟ್ಟ ವಸ್ತಿಯು ಇದ್ದರೂ, ಅಲ್ಲಿ ಕನ್ನಡ ಭಾಷೆಯನ್ನು ಕಲಿಯುವ ವ್ಯವಸ್ಥೆಯು ಏನೂ ಇಲ್ಲದ್ದರಿಂದ, ವೀರಶೈವ ಮತ ತತ್ವಗಳ ಜ್ಞಾನವೂ ಮತ್ತು ಕನ್ನಡ ವಾಙ್ಮಯದ ಅರಿಕೆಯೂ ಅವರಿಗೆ ಏನೂ ಇರುವದಿಲ್ಲ. ಇದರಿಂದ ಅವರ ಪ್ರಗತಿಗೆ ಎಂಥ ಭಯಂಕರ ಹಾನಿಯು ಉಂಟಾಗಿದೆ ಎಂಬದರ ಪ್ರತ್ಯಕ್ಷ ಪರಿಚಯವು ನಮಗೆ ಆಗಹತ್ತಿದೆ. ಇಷ್ಟು ದೊಡ್ಡ ಸಮಾಜವನ್ನು ಅಲಕ್ಷಿಸುವದು ನಮ್ಮ ಕರ್ತವ್ಯವಲ್ಲವೆಂದು ನಮಗೆ ಅನಿಸಹತ್ತಿದೆ. ಈ ಭಾಗಗಳಲ್ಲಿ ಮರಾಠೀ ಶಾಲೆಗಳು ಇರುವದರಿಂದ ಶಿವಾನುಭವವನ್ನು ಮಹಾರಾಷ್ಟ್ರ ಭಾಷೆಯಲ್ಲಿಯೂ ತೆಗೆಯುವ ವಿಚಾರವು ಬಂದಿರುತ್ತದೆ. ಇದಕ್ಕೆ ತಕ್ಕ ಜೋಡಣೆಯನ್ನೂ ಮಾಡಿದೆವು. ಆದರೆ ಇದಕ್ಕ

ಕೆಲವು ಅನಾನುಕೂಲತೆಗಳು ಬಂದದರಿಂದ ಈ ವಿಚಾರವನ್ನು ಸದ್ಯಕ್ಕೆ ಬಿಟ್ಟು, ಶಿವಾನುಭವದಲ್ಲಿ ಬಂದ ಧಾರ್ಮಿಕ ಮತ್ತು ಐತಿಹಾಸಿಕ ಲೇಖಗಳನ್ನು ಮರಾಠಿಯಲ್ಲಿ ಭಾಷಾಂತರಿಸಿ ಅವುಗಳನ್ನು ಪ್ರತ್ಯೇಕವಾಗಿ ಗ್ರಂಥ ರೂಪದಿಂದ ಪ್ರಸಿದ್ಧಿಸುವ ಕಾರ್ಯವನ್ನು ಕೈಕೊಂಡಿದ್ದೇವೆ. ಹೀಗೆ ಕೆಲವು ಗ್ರಂಥಗಳು ಬೇಗನೇ ಸ್ವತಂತ್ರವಾಗಿ ಮುದ್ರಿಸಲ್ಪಡುವವು. ಇದರಿಂದ ಈ ಭಾಗದಲ್ಲಿಯ ಜನರಿಗೆ ವೀರಶೈವ ಮತ ತತ್ವಗಳ ತಿಳುವಳಿಕೆ ಮತ್ತು ಕನ್ನಡ ಭಾಷೆಯ ಮಹತ್ವವು ಗೊತ್ತಾಗಿ, ಕರ್ನಾಟಕ ಏಕೀಕರಣ ಮತ್ತು ಕನ್ನಡ ಶಾಲೆಗಳನ್ನು ಸ್ಥಾಪಿಸುವ ಪ್ರಯತ್ನ ಇವುಗಳಿಗೆ ಕೆಲವಂಶದಿಂದಾದರೂ ಸಹಾಯವಾದೀತೆಂದು ಕೋರಿದ್ದೇನೆ.

ಈ ಮೇರೆಗೆ ಶಿವಾನುಭವವು ಮಾಡಿದ ಕಾರ್ಯದ ಒಂದು ವರ್ಷದ ವರದಿಯನ್ನು ತಮ್ಮೆಮರಿಗೆ ನಾನು ಇಟ್ಟಿದ್ದೇನೆ. ಈ ಯಾವತ್ತು ಕಾರ್ಯಗಳು ಸರಿಯಾಗಿ ಜರಗಿವೆಯೋ ಹ್ಯಾಗೆ ಎಂಬದರ ವಿಚಾರವನ್ನು ವಾಚಕರೇ ಮಾಡತಕ್ಕದ್ದು.

ಈ ಸಂದರ್ಭದಲ್ಲಿ ಶಿವಾನುಭವದ ಬಗ್ಗೆ ಬಂದ ಕೆಲವು ಆಕ್ಷೇಪಗಳನ್ನು ವಿವರಿಸುವದು ಅವಶ್ಯವಾಗಿರುತ್ತದೆ.

ಶಿವಾನುಭವದಲ್ಲಿ ಪ್ರಕಟವಾಗುವ ಗ್ರಂಥಗಳಲ್ಲಿ ತಪ್ಪುಗಳು ಇರುತ್ತವೆಂಬದು ಮೊದಲನೆಯ ಆಕ್ಷೇಪ ವಿರುತ್ತದೆ. ಇದು ನಿಜವಿರುತ್ತದೆ. ಒಂದು ಗ್ರಂಥದ ೨-೩ ಪ್ರತಿಗಳಿದ್ದರೆ, ಅವುಗಳ ಸಹಾಯದಿಂದ ಶುದ್ಧ ಪ್ರತಿಯನ್ನು ಸಿದ್ಧಗೊಳಿಸಲು ಅನುಕೂಲವಾಗುತ್ತದೆ. ಈ ಸೌಕರ್ಯಗಳು ನಮಲ್ಲಿ ಇಲ್ಲ. ಆದ್ದರಿಂದ ಅಸ್ಪಷ್ಟಾರ್ಥವುಳ್ಳ ಭಾಗಗಳನ್ನು ಹಾಗೆಯೇ ಅಚ್ಚು ಹಾಕಬೇಕಾಗಿರುತ್ತದೆ. ಇದಲ್ಲದೆ ಇಂಥ ಗ್ರಂಥಗಳ ಪ್ರೂಫು ತಪಾಸು ಮಾಡುವವರು ಬಲ್ಲವರಿರಬೇಕಾಗುತ್ತದೆ. ಅಂದರೆ ಮುದ್ರಣ ದೋಷಗಳು ಕಡಿಮೆಯಾಗುತ್ತವೆ. ನನ್ನ ಕಾರ್ಯ ಬಾಹುಳ್ಯದ ಮೂಲಕ ಈ ಎಲ್ಲ ಕೆಲಸಗಳನ್ನು ನಾನೊಬ್ಬನೇ ಮಾಡುವದು ಅಶಕ್ಯವಾಗಿರುತ್ತದೆ. ಆದ್ದರಿಂದ ಈ ದೋಷಗಳಿಗೋಸ್ಕರ ನಾನು ವಾಚಕರ ಕ್ಷಮಾಪಣೆ ಬೇಡಿಕೊಳ್ಳುತ್ತೇನೆ. ಮತ್ತು ಮುಂದೆ ಈ ಬಗ್ಗೆ ಯೋಗ್ಯ ವ್ಯವಸ್ಥೆ ಮಾಡಿ ಈ ದೋಷವು ನಿವಾರಣೆ ಯಾಗಲು ಆದಷ್ಟು ಯತ್ನಿಸುತ್ತೇವೆ.

ನಾನು ಶಿವಾನುಭವದಲ್ಲಿ ಬಸವೇಶ್ವರಾದಿ ವಚನಕಾರರ ಗ್ರಂಥಗಳನ್ನು ಪ್ರಕಟಿಸುತ್ತಿರುವದರಿಂದ, ನಾನು ಪಂಚಾಚಾರ್ಯರವಿರುದ್ಧ ವಿರು

ಕ್ತೀನೆಂಬ ತಿಳುವಳಿಕೆ ಕೆಲವರಲ್ಲಿ ಆಗಿದೆ. ಇದು ಸಮಾಜದಲ್ಲಿ ಈಗ ಉತ್ಪನ್ನ ವಾಗಿರುವ ಒಂದು ತರದ ಪಕ್ಷಭೇದದ ಪರಿಣಾಮ ಇರುತ್ತದೆ. ನಾನು ಯಾವ ಪಕ್ಷದವನೂ ಅಲ್ಲ. ಪಂಚಾಚಾರ್ಯರೂ ಬಸವಾದಿ ವಚನಕಾರರೂ ಗುರು ವರ್ಗದವರೂ ವಿರಕ್ತರೂ ನನಗೆ ಅತ್ಯಂತ ಪೂಜ್ಯರಿರುವರು. ವೀರಶೈವ ಮತತತ್ವಗಳ ಪ್ರಸಾರವೇ ನನ್ನ ಮುಖ್ಯ ಧ್ಯೇಯವಾಗಿದೆ. ಮೇಲ್ಕಂಡ ಯಾವತ್ತು ಮಹಾನುಭಾವರು ಧರ್ಮ ಪ್ರಸಾರ ಕಾರ್ಯದಲ್ಲಿ ಯಾವ ಯಾವ ಪ್ರಯತ್ನಗಳನ್ನು ಮಾಡಿದರೆಂಬದರ ವರ್ಣನೆಗಳು ಯಾವ ಪಕ್ಷ ಭೇದವಿಲ್ಲದೆ ಸರಿಯಾಗಿ ಶಿವಾನುಭವದ ಸಂಚಿಕೆಗಳಲ್ಲಿ ಬರುವವು.

ಶಿವಶರಣರ ಮಹಾತ್ಮ್ಯಗಳಿಗೆ ನಾನು ಶಿವಾನುಭವದಲ್ಲಿ ವಿಶೇಷ ಮಹತ್ವ ಸ್ಥಾನವನ್ನು ಕೊಟ್ಟಿರುವದಿಲ್ಲ. ಆದ್ದರಿಂದ, ನಾನು ಪ್ರಮಥರ ವಿರೋಧಿ ಇರುವೆನೆಂತಲೂ ಕೆಲವರು ನನಗೆ ಆಕ್ಷೇಪಿಸಿದ್ದಾರೆ. ಈ ತೆರದ ಆಕ್ಷೇಪಣೆಗಳು ಮುಖ್ಯವಾಗಿ ವಿರಕ್ತ ವರ್ಗದವರಿಂದ ನನ್ನ ಮೇಲೆ ಬಂದಿವೆ. ನಾನು ಶಿವಶರಣರ ವೃತ್ತಾಂತಗಳಲ್ಲಿ ಐತಿಹಾಸಿಕ ಭಾಗಕ್ಕೆ ಬಹಳ ಮಹತ್ವ ಕೊಟ್ಟಿರುತ್ತೇನೆ. ಆದ್ದರಿಂದ ಅವರು ದೊಡ್ಡ ಮನುಷ್ಯರು ಎಂಬ ದೃಷ್ಟಿಯನ್ನಿಟ್ಟು ಲೇಖಗಳನ್ನು ಬರೆಯಬೇಕಾಗುತ್ತದೆ. ಆದ್ದರಿಂದ ಈ ಆಕ್ಷೇಪಣೆಯು ಬರಲಿಕ್ಕೆ ಕಾರಣವಾಗಿದೆ. ಆದರೆ ಈಗಿನ ಕಾಲಕ್ಕೆ ಈ ದೃಷ್ಟಿಯಿಂದಲೆ ನಾವು ಮತತತ್ವಗಳ ವಿವರಣೆಗಳನ್ನು ಮತ್ತು ಧರ್ಮ ಸ್ಥಾಪಕರ ಚರಿತ್ರೆಗಳನ್ನು ಬರೆಯುವದು ಅವಶ್ಯವಿರುತ್ತದೆ. ಆದ್ದರಿಂದ ಈ ದೃಷ್ಟಿಯಿಂದ ಲೇಖಗಳು ಬರೆಯಲ್ಪಟ್ಟ ಮಾತ್ರದಿಂದ ನಾನು ಶಿವಶರಣರ ಮೇಲೆ ಭಕ್ತಿ ಇಲ್ಲದವನೆಂದು ಯಾರೂ ತಿಳಿಯಬಾರದೆಂದು ನನ್ನ ವಿನಂತಿ ಅದೆ.

ಶಿವಾನುಭವವು ತ್ರೈಮಾಸಿಕ ವಿದ್ದು ಇದನ್ನು ಮಾಸಿಕ ಮಾಡಬೇಕೆಂದು ಕೆಲವರ ಸೂಚನೆ ಇದೆ. ಮಾಸಿಕ ಮಾಡಿದರೆ ೪೮ ಪುಟಗಳನ್ನಿಡಬೇಕಾಗುತ್ತದೆ. ಹೀಗಾದರೆ ತ್ರೈಮಾಸಿಕದಲ್ಲಿ ಈಗ ಕಂಡು ಬರುವ ವೈಚಿತ್ರ್ಯವೂ ಸೌಂದರ್ಯವೂ ಇಷ್ಟು ಸಣ್ಣ ಪತ್ರಿಕೆಯಲ್ಲಿ ಬರಲಾರದು. ನಾವು ಕೈಕೊಂಡ ಕಾರ್ಯಕ್ಕೆ ದೊಡ್ಡ ಪತ್ರಿಕೆಯು ಅವಶ್ಯವು. ಆದರೆ ಪುಟಗಳನ್ನು ಹೆಚ್ಚಿಸಿದರೆ, ವರ್ಗಣೀ ಹೆಚ್ಚಿಗೆ ಮಾಡಬೇಕಾಗುತ್ತದೆ. ಹೀಗಾದರೆ ವಾಚನಾಭಿ ರುಚಿ ಇಲ್ಲದ ನಮ್ಮ ಸಮಾಜದಲ್ಲಿ ಪತ್ರಿಕೆಯ ವರ್ಗಣೀದಾರರು ಕಡಿಮೆಯಾಗುವರು. ಇದರಿಂದ ಪತ್ರಿಕೆಯನ್ನು ನಿಲ್ಲಿಸುವ ಪ್ರಸಂಗ

ಬರಬಹುದು. ಇದಲ್ಲದೆ ದೊಡ್ಡ ಪತ್ರಿಕೆ ನಡಿಯಬೇಕಾದರೆ ಅನೇಕ ಲೇಖಕರ ಆವಶ್ಯಕತೆ ಬಹಳವಿದೆ. ಆದರೆ ಇಂಥವರ ಸಂಖ್ಯೆಯು ವೀರಶೈವ ಸಮಾಜದಲ್ಲಿ ಬಹಳ ಕಡಿಮೆ. ಆದ್ದರಿಂದ ಇಷ್ಟು ಪುಟಗಳನ್ನು ತುಂಬುವ ಭಾರವು ನನ್ನ ಮೇಲೆ ಬೀಳುತ್ತದೆ ಇದು ಸದ್ಯಕ್ಕೆ ನನಗೆ ಅನಾನುಕೂಲವು. ಆದ್ದರಿಂದ ಯೋಗ್ಯ ಪರಿಸ್ಥಿತಿಯು ಒದಗುವವರೆಗೆ ಶಿವಾನುಭವವು ತ್ರೈಮಾಸಿಕವಾಗಿಯೇ ಉಳಿಯುವದು ಯೋಗ್ಯವೆಂದು ತೋರುತ್ತದೆ.

ಶಿವಾನುಭವದಲ್ಲಿ ವೀರಶೈವ ಮತತತ್ವಗಳ ವಿವೇಚನೆ, ಮತ್ತು ಏನಾದರೊಂದು ಶೋಧ ಈ ವಿಷಯಗಳುಳ್ಳ ಲೇಖಗಳಿಗೆ ಮಾತ್ರ ಸ್ಥಾನವು ಕೊಡಲ್ಪಡುವದು. ಆದ್ದರಿಂದ ಅನೇಕ ಲೇಖಗಳನ್ನು ನಾವು ತಿರಸ್ಕರಿಸುವ ಪ್ರಸಂಗವು ಬಂದಿರುತ್ತದೆ. ಇದಲ್ಲದೆ ವೀರಶೈವ ಸಮಾಜದ ಅಂತಸ್ಥ ಕಲಹ ಅಥವಾ ಇತರ ಸಮಾಜ ಮತ್ತು ಧರ್ಮಗಳ ದೂಷಣೆ ಇವುಗಳಿಗೂ ಶಿವಾನುಭವದಲ್ಲಿ ಇಂಬು ದೊರೆಯಲಾರದು. ಇದರಿಂದಲೂ ಕೆಲವು ಲೇಖಗಳಿಗೆ ಇಂಬುದೊರೆತಿಲ್ಲ. ಆದ್ದರಿಂದ ಈ ತೆರದ ಆಕ್ಷೇಪಗಳು ಬಂದಿವೆ. ಆದರೆ ಇವು ಸರಿಯಲ್ಲವೆಂಬುದು ಎಲ್ಲ ಸಮಂಜಸ ಬುದ್ಧಿಯುಳ್ಳ ಜನರಿಗೆ ತಿಳಿಯದೆ ಇರಲಾರದು. ಶಿವಾನುಭವವು ಒಂದು ಉಚ್ಚತಮ ಪತ್ರಿಕೆಯಾಗಬೇಕೆಂದು ನಮ್ಮ ಧ್ಯೇಯುವದೆ. ಆದ್ದರಿಂದ ಇದಕ್ಕನುಸಾರವಾಗಿ ಬರೆದ ಲೇಖಗಳಿಗೆ ಮಾತ್ರ ಶಿವಾನುಭವದಲ್ಲಿ ಇಂಬು ದೊರೆಯುವದು.

ಶಿವಾನುಭವಕ್ಕೆ ಈಗ ೬೦೦ ವರ್ಗಣೀದಾರರು ಮಾತ್ರ ಇದ್ದಾರೆ. ಈ ಸಂಖ್ಯೆಯು ಅತ್ಯಲ್ಪವಾಗಿದೆ. ಇಷ್ಟು ಜನ ವರ್ಗಣೀದಾರರಿಂದ ಈ ಪತ್ರಿಕೆಯನ್ನು ನಡಿಸುವದು ದುಸ್ತರವು. ಆದರೆ ಈ ವರ್ಷ ಕೆಲ ಮಹನೀಯರು ದೇಣಿಗೆಗಳನ್ನು ಕಳಿಸಿದ್ದರಿಂದಲೂ ಅನೇಕರು ಪೋಷಕರೂ ಆಶ್ರಯದಾತರೂ ಆದ್ದರಿಂದಲೂ ನಾವು ನಷ್ಟಕ್ಕೆ ಮಾತ್ರ ಪಾತ್ರರಾಗಿಲ್ಲ. ಇದೊಂದು ಆನಂದ ಪಡತಕ್ಕ ಸಂಗತಿಯೇ ಸರಿ. ಆದರೆ ವರ್ಗಣೀದಾರರು ಇಷ್ಟೇ ಉಳಿದರೆ ಅಥವಾ ಕಡಿಮೆಯಾದರೆ, ನಾವು ನಷ್ಟಕ್ಕೆ ಪಾತ್ರರಾಗಿ ಶಿವಾನುಭವವನ್ನು ನಿಲ್ಲಿಸುವ ಪ್ರಸಂಗವು ಬರುತ್ತದೆ. ಶಿವಾನುಭವವು ಮಾಡುತ್ತಿರುವ ಮಹತ್ತಾದ ಕಾರ್ಯಗಳನ್ನು ಲಕ್ಷಿಸಿದರೆ, ಈ ಪ್ರಸಂಗವು ಮುಂದೆ ಬರಲಿಕ್ಕಿಲ್ಲೆಂದು ನಾವು ಹಾರೈಸಿದ್ದೇವೆ. ಕರ್ನಾಟಕದ ಪ್ರತಿಯೊಂದು ಪತ್ರಿಕೆಯು ಆದರಂತೆ ಅನೇಕ ವಿದ್ವಜ್ಜನರೂ ವೀರಶೈವ ದೊಡ್ಡ ಮನು

ಷ್ಯರುಗಳೂ ನಾವು ಕೈಕೊಂಡ ಈ ಪ್ರಯತ್ನಕ್ಕೆ ಅತ್ಯಂತ ಸಹಾನುಭೂತಿಯನ್ನು ತೋರಿಸಿ ನಮಗೆ ಪ್ರೋತ್ಸಾಹಿಸುತ್ತಲಿದ್ದಾರೆ. ಇವರಿಗೆ ನಮ್ಮ ವಂದನೆಗಳು ಇವೆ. ಆದರೆ ನಮಗೆ ನಷ್ಟವು ಬಾರದಂತೆ ಪ್ರತ್ಯಕ್ಷ ಧನ ಸಹಾಯ ಮಾಡಿದ ಯಾವತ್ತರ ಆಭಾರವನ್ನು ಮನ್ನಿಸುವದು ನಮ್ಮ ಆದ್ಯ ಕರ್ತವ್ಯವಾಗಿದೆ. ಅವರ ಉಪಕಾರವನ್ನು ಎಷ್ಟು ಮನ್ನಿಸಿದರೂ ಕಡಿಮೆಯೇ ಸರಿ. ಅವರ ಹೆಸರುಗಳನ್ನು ನಾವು ಶಿವಾನುಭವದ ಸಂಚಿಕೆಗಳಲ್ಲಿ ಆಗಿಂದಾಗ್ಗೆ ಪ್ರಸಿದ್ಧಿಸುತ್ತ ಬಂದಿದ್ದೇವೆ. ಅವರೆಲ್ಲರು ಅಪ್ರಾರ್ಥಿತರಾಗಿ ಸ್ವಪ್ರೇರಣೆಯಿಂದ ಹೀಗೆ ಸಹಾಯ ಮಾಡಿದಾರೆ. ಇದು ಅವರಿಗೆ ಅತ್ಯಂತ ಭೂಷಣವಾಗಿದೆ. ಈ ಎಲ್ಲರ ಸಹಾಯದಿಂದ ಶಿವಾನುಭವವನ್ನು ನಡಿಸಲು ನಮಗೆ ಧೈರ್ಯವು ಉತ್ಪನ್ನವಾಗಿದೆ. ಆದರೆ ಶಿವಾನುಭವವು ಸ್ಥಿರಗೊಳ್ಳಬೇಕಾದರೆ ವರ್ಗಣೀದಾರರು ಹೆಚ್ಚಾಗುವದು ಅವಶ್ಯವು. ಬರೀ ದೇಣಗೆಗಳಿಂದ ನಡಿಯಲಾರದು. ಆದ್ದರಿಂದ ಎಲ್ಲ ಕಡೆಯ ಮಹನೀಯರು ಈ ಪತ್ರಿಕೆಗೆ ವರ್ಗಣೀದಾರರನ್ನು ಹೆಚ್ಚಿಸಲು ವಿಶೇಷ ಪ್ರಯತ್ನಿಸುವರೆಂದು ನಮ್ಮ ಸವಿನಯ ಪ್ರಾರ್ಥನೆ ಇದೆ.

ಈ ಪ್ರಕಾರ ಶಿವಾನುಭವವು ಒಂದು ವರ್ಷದಲ್ಲಿ ಮಾಡಿದ ಜನಸೇವೆಯ ವಿವರವನ್ನು ತಮ್ಮ ಮುಂದೆ ಇಟ್ಟಿದ್ದೇವೆ. ಮತ್ತು ಈ ಪ್ರಯತ್ನಗಳು ಮುಂದಿನ ವರ್ಷ ಇನ್ನೂ ಹೆಚ್ಚಾಗಿ ಬೆಳೆಯಲು ಸಹಾಯ ಮಾಡಲು ಮಹದಾಚಾರ್ಯರನ್ನೂ ಬಸವಾದಿ ಪ್ರಮಥರನ್ನೂ ಪುನಃಪೂರ್ವಕವಾಗಿ ಬೇಡಿಕೊಂಡು ಮುಂದಿನ ಹೆಜ್ಜೆಯನ್ನು ಇಡುತ್ತೇವೆ.

**ಸಂಪಾದಕ**

ಶ್ರೀ

# ತೋಂಟದಾರ್ಯರ ರಗಳೆ.


ಸಂಪಾದಕರು

**ರಾ॥ ಸಾ॥ ಫ. ಗು. ಹಳಕಟ್ಟಿ**

ಬಿ. ಏ. ಎಲ್ ಎಲ್, ಬಿ. ವಕೀಲ



**ವಿಜಾಪುರ.**

೧೯೩೬

**ಬೆಲೆ ೨ ಆಣೆ.**

# ಪ್ರಸ್ತಾವನೆ.

ತೋಂಟದ ಸಿದ್ಧಲಿಂಗೇಶ್ವರರು ಹದಿನೈದನೇ ಶತಮಾನದ ಮಧ್ಯದಲ್ಲಿ ಪ್ರಸಿದ್ಧಿಯನ್ನು ಹೊಂದಿದರೆಂದು ತೋರುತ್ತದೆ. ವಿಜಯನಗರದ ವಿರೂಪಾಕ್ಷರಾಜನು ೧೪೬೭ ರಿಂದ ೧೪೭೮ ರ ವರೆಗೆ ರಾಜ್ಯವಾಳಿದನು. ಈ ರಾಜನ ಕಾಲದಲ್ಲಿಯೇ ಇವರು ಇದ್ದರು. ವಿರೂಪಾಕ್ಷರಾಜನು ಪಟ್ಟವೇರುವ ಪೂರ್ವದಲ್ಲಿ ದೇಶದಲ್ಲಿ ಅನಾಯಕತನವು ಉಂಟಾಗಿತ್ತು. ಆಗ ಪಟ್ಟದ ಮೇಲೆ ಯಾರು ಕೂಡಬೇಕೆಂಬದರ ಬಗ್ಗೆ ರಾಜಮನೆತನದಲ್ಲಿ ಒಂದೇಸವನೆ ಕಲಹಗಳು ನಡೆದಿದ್ದವು. ಇದರಿಂದ ದೇಶದಲ್ಲಿ ಅಸ್ವಸ್ಥತೆಯು ಉಂಟಾಗಿ ಅನೀತಿ, ಅನಾಚಾರಗಳೇ ಅತ್ಯಂತವಾಗಿ ಹೆಚ್ಚಿದ್ದವು. ಈ ಸಮಯದಲ್ಲಿ ನಮ್ಮ ಚರಿತ್ರನಾಯಕರು ಉದ್ಭವಿಸಿದರು. ಇವರ ಜನನದ ಬಗ್ಗೆ ಕೆಳಗೆ ಬರೆದ ಮೇರೆಗೆ ವೀರಶೈವರಲ್ಲಿ ಆಖ್ಯಾಯಿಕೆಯು ಪ್ರಚಲಿತವಿರುತ್ತದೆ.

ಈ ಕಾಲದಲ್ಲಿ ಗೋಸಲ ಚನ್ನಬಸವೇಶ್ವರರು ಶೂನ್ಯಸಿಂಹಾಸನಾರೂಢರಾಗಿದ್ದರು. ಈ ಪೀಠಾಧಿಪತಿಗಳು ಈಗಿನಂತೆ ಚಿತ್ರಕಲ್‌ದುರ್ಗದಲ್ಲಿ ಇರದೆ, ಅವರು ಹರದನಹಳ್ಳಿಯಲ್ಲಿ ಆಗ ವಾಸವಾಗಿದ್ದರು. ಆ ಪ್ರಕಾರ ಗೋಸಲ ಚನ್ನಬಸವೇಶ್ವರರು ಹರದನಹಳ್ಳಿಯಲ್ಲಿ ಇರುತ್ತಿರುವಾಗ, ದೇಶದಲ್ಲೆಲ್ಲ ಅವ್ಯವಸ್ಥೆಯುಂಟಾಗಿ, ವೀರಶೈವಾಚಾರವು ಕುಂದುತ್ತಿರುವದನ್ನು ನೋಡಿ ನಾರದನು ಕೈಲಾಸಕ್ಕೆ ಹೋಗಿ ಪರಮೇಶ್ವರನಿಗೆ ಈ ಸಂಗತಿಯನ್ನು ಹೇಳಲಾಗಿ, ಪರಮೇಶ್ವರನು ಈ ಸಂಗತಿಯನ್ನು ಚಿತ್ತೈಸಿ, ಷಟ್‌ಸ್ಥಲವನ್ನು ಉದ್ಧರಿಸೆಂದು ತನ್ನ ಬದಿಯಲ್ಲಿದ್ದ ನಿರಂಜನ ಗಣೇಶ್ವರನಿಗೆ ಆಜ್ಞಾಪಿಸಿದನು. ಆಗ ನಿರಂಜನ ಗಣೇಶ್ವರನು ಇನ್ನು ಏಳುನೂರು ಗಣೇಶ್ವರರೊಡನೆ ಕೂಡಿಕೊಂಡು ಭೂಮಿಯಲ್ಲಿ ಅವತರಿಸಿದನು. ಆದರೆ ನಿರಂಜನ ಗಣೇಶ್ವರನು ಹೀಗೆ ಅವತರಿಸುವ ಕಾಲಕ್ಕೆ ಯೋನಿಜನಾಗಿ ಹುಟ್ಟದೆ ಎಂಟು ವರ್ಷದ ಬಾಲಕನ ವೇಷವನ್ನು ಧರಿಸಿ, ಹರದನಹಳ್ಳಿಯಲ್ಲಿ ವಾಸವಾಗಿದ್ದ ಗೋಸಲ ಚನ್ನಬಸವೇಶ್ವರ ಸ್ವಾಮಿಗಳವರ ಪಾದಸನ್ನಿಧಿಗೆ ಅಂತರಿಕ್ಷ ಮಾರ್ಗದಿಂದ ಸಾಕ್ಷಾತ್ತಾಗಿ ಇಳಿದು ಬಂದನು. ಮತ್ತು ಸ್ವಾಮಿ

ಗಳವರಿಗೆ ಸಾಷ್ಟಾಂಗವೆರಗಿ, ನೀವೆನ್ನ ಗುರುವಾಗಿ ಷಟ್‌ಸ್ಥಲ ಜ್ಞಾನೋ ಪದೇಶ ಮಾಡಲು ಬಿನ್ನೈಸಿಕೊಂಡನು. ಅದಕ್ಕೆ ಗುರುವರನು ಒಪ್ಪಿ ಆತನಿಗೆ ನಿರಾಭಾರಿ ವೀರಶೈವ ದೀಕ್ಷೆಯನ್ನಿತ್ತು ಅನಾದಿ ಸಿದ್ಧಲಿಂಗೇಶ ನೆಂಬ ನಾಮವನ್ನು ಕೊಟ್ಟನು. ಆ ಮೇಲೆ ಸಿದ್ಧಲಿಂಗ ದೇಶಿಕೇಂದ್ರರು ಹರದನಹಳ್ಳಿಯಲ್ಲಿಯೇ ಇರತೊಡಗಿದರು. ಅವರು ಮಹಿಮಾಪುರುಷರಾ ದ್ದರಿಂದ ಆ ಗ್ರಾಮದಲ್ಲಿ ಕಲ್ಲಬಸವಗೆ ಉಣಿಸುವದು, ದೀಪದ ಪ್ರಣತಿ ಯಲ್ಲಿ ಉದಕವನ್ನೆರೆದು ದೀಪವನ್ನು ಹಚ್ಚುವದು ಇವೇ ಮೊದಲಾದ ಮ ಹಿಮೆಗಳನ್ನು ಮಾಡಲು, ಈ ಮಹಾನುಭಾವರಿಂದ ಸೇವೆಯನ್ನು ಕೈ ಕೊಳ್ಳಕೂಡದೆಂದು ಚನ್ನಬಸವೇಶ್ವರರು ನಿಶ್ಚೈಸಿ, ತಮ್ಮ ಪಟ್ಟವನ್ನು ಸಿ ದ್ಧಲಿಂಗಯತಿವರರಿಗೆ ಕೊಟ್ಟು ತಾವು ಸಿದ್ಧಗಂಗೆ ಬೆಟ್ಟಕ್ಕೆ ಚಿತ್ತೈಸಿದರು. ಅಲ್ಲಿ ಕೆಲವು ಕಾಲವಿದ್ದು ಅಲ್ಲಿಂದ ಗುಬ್ಬಿಗೆ ದಯಮಾಡಿಸಿ, ಅಲ್ಲಿಯೇ ಅವರು ನಿರ್ವಯಲಾದರು. ತರುವಾಯ ಸಿದ್ಧಲಿಂಗಯತಿವರರು ಹರದ ನಹಳ್ಳಿಯಲ್ಲಿ ಇರುತ್ತಿರಲಾಗಿ ಶಿವನಪ್ಪಣೆಯಿಂದ ಏಳುನೂರು ಗಣವರರು ಮರ್ತ್ಯಲೋಕದಲ್ಲಿ ಬೇರೆಬೇರೆ ಕಡೆಗೆ ಉದ್ಭವಿಸಿ, ಸಿದ್ಧಲಿಂಗೇಶ್ವರರನ್ನು ಕೂಡಿಕೊಂಡರು. ಅವರಲ್ಲಿ ಮುಖ್ಯರು ಯಾರೆಂದರೆ ಘನಲಿಂಗದೇವರು, ಶಾಂತಮಲ್ಲಿಕಾರ್ಜುನ, ಬತ್ತಲೇಶ, ರಾಚವಟ್ಟೆದೇವರು, ಶಿವಪೂಜೆಯಾ ರ್ಯ, ಬೋಳಬಸವೇಶ, ಸಿದ್ಧನಂಜೇಶ್ವರ, ಇವರೇ ಮೊದಲಾದವರಿದ್ದ ರು. ಈ ಯಾವತ್ತು ಮಹಾತ್ಮರು ಕೂಡಿ, ಷಟ್‌ಸ್ಥಲ ಮಾರ್ಗವನ್ನು ದೇಶದಲ್ಲೆಲ್ಲ ಸ್ಥಾಪಿಸಲುದ್ಯುಕ್ತರಾದರು. ಅವರು ತೋಂಟದಾರ್ಯರ ಅ ಪ್ಪಣೆಯನ್ನು ಪಡೆದು ದೇಶದಲ್ಲೆಲ್ಲ ಬೋಧಿಸುತ್ತ ಅಲ್ಲಲ್ಲಿ ಮಠಗಳನ್ನು ಸ್ಥಾಪಿಸುತ್ತ ವೀರಶೈವಾಚಾರ ಮಾರ್ಗವನ್ನು ಪಸರಿಸಿದರು. ಈ ಸಂಗತಿ ಗಳ ಮೇಲಿಂದ ತೋಂಟದಾರ್ಯರು ವೀರಶೈವ ಮತೋದ್ಧಾರ ಕಾರ್ಯ ದಲ್ಲಿ ಆ ಕಾಲಕ್ಕೆ ಎಷ್ಟು ಮಹತ್ತರವಾದ ಕಾರ್ಯಗಳನ್ನು ಮಾಡಿದರೆಂ ಬದು ಸ್ಪಷ್ಟವಾಗುತ್ತದೆ.

ಈ ಮೇರೆಗೆ ಸಿದ್ಧಲಿಂಗೇಶ್ವರರು ಹರದನಹಳ್ಳಿಯಲ್ಲಿ ವಾಸಿಸಿದ್ದು ಆ ಮೇಲೆ ಭಕ್ತರನ್ನು ಉದ್ಧರಿಸುವದಕ್ಕೋಸ್ಕರ ಸ್ವತಃ ಸಹ ದೇಶಸಂ ಚಾರ ಮಾಡತೊಡಗಿದರು. ಮೊದಲು ಅವರು ಚೋಳ ದೇಶದ ಕಡೆಗೆ ಹೊರಟು ಕಂಚೀ, ಕಾಳಹಸ್ತಿ, ಚಿದಂಬರ ಮುಂತಾದ ಕ್ಷೇತ್ರಗಳಿಗೆ ಚಿ ತ್ತೈಸಿ, ಆ ಮೇಲೆ ತಿರುಣಾಮಲೆಗೆ ದಯಮಾಡಿಸಿದರು. ಆ ಮೇಲೆ ಉ

ತ್ತರಕ್ಕೆ ತೆರಳಿ ಕಾಶೀ, ಗಯೆ ಮುಂತಾದ ತೀರ್ಥಗಳಿಗೆ ಹೋಗಿ ಅಲ್ಲಿಂ
ದ ಮಹಾಬಳೇಶ್ವರ, ಅಲ್ಲಿಂದ ಈಗಿನ ಮಂಗಳೂರ ಜಿಲ್ಹೆಯಲ್ಲಿರುವ ಕಾ
ರ್ಕಳ, ಮೈಸೂರಪ್ರಾಂತದಲ್ಲಿ ಅನೇಕ ಸ್ಥಾನಗಳು, ಉರವಕೋಡೆ, ಬಿ
ದರಿ ಮೊದಲಾದ ಸ್ಥಲಗಳನ್ನು ಸಂದರ್ಶಿಸಿದರು. ಈ ಸ್ಥಾನಗಳಿಗೆ ಅವ
ರು ಹೋದಕಾಲಕ್ಕೆ ಅನೇಕ ಮಹತ್ವಗಳನ್ನು ಮಾಡಿ, ಬಹು ಜನರಿಗೆ
ವೀರಶೈವ ದೀಕ್ಷೆಯನ್ನು ಕೊಡಿಸಿದರು. ಈ ಕಾಲಕ್ಕೆ ಸ್ವಾಮಿಗಳವರು
೭೫ ಪವಾಡಗಳನ್ನು ಮಾಡಿದರೆಂದು ಐತಿಹ್ಯವವೆ. ಈ ಪವಾಡಗಳು ನಾ
ನು ಪ್ರಸಿದ್ಧಿಸಿದ ಈಗಿನ ರಗಳೆಯಲ್ಲಿ ಸಂಕ್ಷೇಪವಾಗಿ ವಿವರಿಸಲ್ಪಟ್ಟಿವೆ.
ಸ್ವಾಮಿಗಳವರು ಮೈಸೂರ ಸಂಸ್ಥಾನದಲ್ಲಿರುವ ಕಗ್ಗೆರೆ ಎಂಬ ಗ್ರಾಮದ
ಲ್ಲಿ ತೋಟದಲ್ಲಿ ಬಹಳ ಕಾಲವಿದ್ದರು. ಆಗ ಆ ಗ್ರಾಮವನ್ನು ಬೇಡರು
ಸುಲಿದು ಹಾಳುಮಾಡಲಾಗಿ, ಸ್ವಾಮಿಗಳವರು ಅದೇ ತೋಟದಲ್ಲಿ ತಪಸ್ಸು
ಮಾಡುತ್ತ ಇರತೊಡಗಿದರು. ಹೀಗೆ ಅನೇಕ ವರುಷಗಳು ಸಂದಿ ಹೋಗ
ಲಾಗಿ, ಅವರ ಮೈಮೇಲೆ ಹುತ್ತಗಳು ಬೆಳೆದವು. ಆ ಮೇಲೆ ಆ ಗ್ರಾ
ಮಕ್ಕೆ ಪುನಃ ಆ ಊರ ಜನರು ಬರಲಾಗಿ, ಅವರು ಸ್ವಾಮಿಗಳನ್ನು ಕಂ
ಡುಕೊಂಡು ಅವರನ್ನು ಸತ್ಕರಿಸಿದರು ಈ ತೋಟದಲ್ಲಿ ಸಿದ್ಧಲಿಂಗೇಶ್ವ
ರರು ಬಹಳ ದಿವಸವಿದ್ದದರಿಂದ, ಅವರಿಗೆ ತೋಂಟದಾರ್ಯ ಅಥವಾ
ತೋಂಟದ ಸಿದ್ಧಲಿಂಗ ಎಂಬ ಹೆಸರು ಉಂಟಾಗಿರುತ್ತದೆ. ಈ ಮೇರೆಗೆ
ಸ್ವಾಮಿಗಳು ಕಗ್ಗರೆಯಲ್ಲಿದ್ದು, ಆ ಮೇಲೆ ಅವರು ಎಡೆಯೂರಿಗೆ ದಯ
ಮಾಡಿಸಿ ಅಲ್ಲಿಯೂ ಅನೇಕ ಮಹಿಮೆಗಳನ್ನು ಮಾಡಿ, ಅದೇ ಸ್ಥಲದಲ್ಲಿ
ಕಡೆಗೆ ಬಯಲಾದರು.

ತೋಂಟದಾರ್ಯರು ವೀರಶೈವ ಸಮಾಜಕ್ಕೆ ಅವನತಿಯು ಪ್ರಾಪ್ತ
ವಾದ ಕಾಲಕ್ಕೆ ಉದಯಿಸಿದರು. ಮತ್ತು ದೇಶದಲ್ಲೆಲ್ಲ ಧರ್ಮಜಾಗ್ರತೆ
ಯನ್ನು ಉಂಟುಮಾಡಿದರು. ಈ ಕಾರ್ಯದಲ್ಲಿ ಅವರು ಅನೇಕ ಶಿಷ್ಯ
ರನ್ನು ಮಾಡಿಕೊಂಡು ವೀರಶೈವ ಮತತತ್ವಗಳನ್ನು ಜನರಿಗೆಲ್ಲ ಬೋಧಿ
ಸಿದರು. ಈ ಶಿಷ್ಯರಲ್ಲಿ ಅನೇಕರು ವಚನಕಾರರೂ ಗ್ರಂಥಕಾರರೂ ಆಗಿ
ಹೋಗಿರುವರು. ಸಿದ್ಧಲಿಂಗೇಶ್ವರರು ಒಂದು ವಚನ ಗ್ರಂಥವನ್ನು ಸಹ
ರಚಿಸಿದ್ದಾರೆ. ಅದರ ಮುದ್ರಿಕೆಯು ಮಹಾಲಿಂಗಗುರುಶಿವ ಸಿದ್ಧೇಶ್ವರಪ್ರಭು
ವೇ ಎಂದು ಇದೆ. ಅದು ವೀರಶೈವ ಮುಖ್ಯ ವಚನಗಳಲ್ಲಿ ಒಂದಾಗಿದೆ. ಈ
ಮೇರೆಗೆ ತೋಂಟದಾರ್ಯರು ಒಂದು ಕಾಲಕ್ಕೆ ಧಾರ್ಮಿಕ, ಮತ್ತು ಸಾ

ಮಾಜಿಕ ಮಹತ್ತರ ಸುಧಾರಣೆಯನ್ನು ಮಾಡಿ ಅತ್ಯಂತ ಹೆಸರುವಾಸಿ ಗಳಾಗಿದ್ದಾರೆ. ಇವರ ನೆನಪು ನಮ್ಮ ವಾಚಕರಿಗೆ ಉಳಿಯಬೇಕೆಂದು ನಾನು ಇವರ ರಗಳೆಯನ್ನು ಅಚ್ಚುಹಾಕಿದ್ದೇನೆ.

ವಿಜಾಪುರ.
ತಾ. ೧೩-೯-೨೬.

**ಫ. ಗು. ಹಳಕಟ್ಟಿ.**

# ತೋಂಟದಾರ್ಯರ ರಗಳೆ.

ಶ್ರೀಮದ್ಬೋಧ ಸುಖಾಬ್ಧಿ ವರ್ಧನ ವಿಧುಂ ಮುಕ್ತ್ಯಂಗನಾವಲ್ಲಭಂ ।
ಸೋಮಾದಿ ಪೃಥ್ವ್ಯಂತತತ್ವ ಸಿವಹಕ್ಕಾಧಾರ ರೂಪಂಪರಂ ॥
ಸೀಮಾತೀತ ಸುಕೀರ್ತಿಯುಕ್ತ ಮಮಲಂಭಕ್ತೇಷ್ಟದಂಸದ್ಗುಣೋ ।
ದ್ದಾಮಂತೋಂಟದ ಸಿದ್ಧಲಿಂಗ ನೊಲವಿಂರಕ್ಷಿಪ್ಪುದೆಮ್ಮಂಸದಾ ॥

॥ರಗಳೆ॥ ಶ್ರೀಮದಖಿಳ ತತ್ವಭುವನಜನನವಹುದರಿಂದಮುನ್ನ ।
ನಾಮರೂಪ ಕ್ರಿಯೆಗಳಿಲ್ಲದಿರ್ದು ಮೆರೆದ ಸಿದ್ಧಲಿಂಗ ॥೧॥
ಸೋಮಸೂರ್ಯ ಇಂದ್ರ ಹರಿವಿರಿಂಚಿ ರುದ್ರಈಶ್ವರನು ।
ಉಮೆಮಹೇಶರಿಂದ ಮುನ್ನ ತೋರಿಮೆರೆದ ಸಿದ್ಧಲಿಂಗ ॥೨॥
ವಿನುತಮಾಯೆ ರಂಜನೆಗಳಿಗಿಂದ ಮುನ್ನಲಾದಿನಿರಂ ।
ಜನನೆನಿಪ್ಪನಾಮದಿಂದಲಿರ್ದು ಮೆರೆದ ಸಿದ್ಧಲಿಂಗ ॥೩॥
ಅರಿವಿನಿಂದಲರಿವು ಮರವೆದೋರದಂದು ಜ್ಞಾನಾನಂದ ।
ನೆನಿಸಿ ಪೂರ್ಣಜ್ಞಾನರೂಪನಾಗಿ ಮೆರೆದ ಸಿದ್ಧಲಿಂಗ ॥೪॥
ದೇಹಗುಣವುಹುಟ್ಟದಂದು ನಿರ್ಮಲನುಮೆನಿಪ್ಪನಾಮ ।
ರೂಹುದೋರಿ ಶುದ್ಧಕಾಯನಾಗಿ ಮೆರೆದ ಸಿದ್ಧಲಿಂಗ ॥೫॥
ಸ್ನೇಹ ಮೋಹ ಭ್ರಾಂತು ಬೆಮೆಗಳಿಲ್ಲದಂದು ಭಕ್ತಕಾಯ ।
ಗೇಹವಾಗಿ ಜಗಕೆ ಕುರುಹುದೋರಿ ಮೆರೆದ ಸಿದ್ಧಲಿಂಗ ॥೬॥
ಸಕಲಲೋಕ ಜನಹಿತಾರ್ಥವಾಗಿ ಸರ್ವಜನರುಗಳಿಗೆ ।
ಮುಕುತಿಗೊಡುವೆನೆಂದು ಬಂದು ಚರಿಸಿಮೆರೆದ ಸಿದ್ಧಲಿಂಗ ॥೭॥
ಅಕುಟಿಲಾತ್ಮ ನಿನಗೆ ಗೋಣಿಖೇಡದಲ್ಲಿ ಕುಂಬಳೇಶ ।
ಭಕುತಿ ಮಾಡಲಲ್ಲಿ ಭಕ್ತಿಗೊಂಡು ಮೆರೆದಸಿದ್ಧಲಿಂಗ ॥೮॥
ಮಹಬಳೇಶ ಲಿಂಗದುತ್ತಮಾಂಗದಲ್ಲಿ ಗಂಗೆ ಬತ್ತೆ ।
ವಹಿಲದಿಂದ ಪಾದವಿಟ್ಟು ತೋರಿಮೆರೆದ ಸಿದ್ಧಲಿಂಗ ॥೧೦॥
ಕುಹಕಿದಾಸನೋರ್ವನುಳುವೆಯಲ್ಲಿ ಗ್ರಹವನೊಂದಬಿಡಲು ।
ಅಹಿತದಿಂದಲದಕೆ ಭೀತಿಗೊಳಿಸಿ ಮೆರೆದ ಸಿದ್ಧಲಿಂಗ ॥೧೧॥
ರಾ[illegible]ದಿಂದಕಾರಗಳದಿ ವಾದಿಸಲ್ಕೆ ಬಸವತಾನು ।

ಹೋಗಿ ಜೈನರುಗಳ ಬಾಧೆಗೊಳಿಸಿ ಮೆರೆದ ಸಿದ್ಧಲಿಂಗ ॥೧೨॥
ಗಾಳಿಪೂಜೆಯಲ್ಲಿ ಮಲ್ಲಿನಾಥಜಂಗಮಸ್ವರೂಪ ।
ತಾಳಿಬಂದು ನಿನಗೆ ಭಕ್ತಿಮಾಡಿ ಮೆರೆದ ಸಿದ್ಧಲಿಂಗ ॥೧೩॥
ನೀಲಕಂಠ ಕಾಶಿ ಗಯೆ ಪ್ರಯಾಗ ಕೊಲ್ಲಿಪಾಕಿಪರ್ವ ।
ಕಾಳಿಲಿಂಗಕ್ಷೇತ್ರದಲ್ಲಿ ಚರಿಸಿ ಮೆರೆದ ಸಿದ್ಧಲಿಂಗ ॥೧೪॥
ಶಬರರಪಡೆಬಂದು ಕಗ್ಗೆರೆಯನು ಸೂರೆಗೊಂಬರೆಂದು ।
ಶುಭದಿ ಭಕುತರುಗಳಕಡೆಗೆ ಕಳುಹಿ ಮೆರೆದ ಸಿದ್ಧಲಿಂಗ ॥೧೫॥
ಅಭವಧ್ಯಾನದಿಂದ ಕಗ್ಗೆರೆಯೊಳು ಹುತ್ತ ವೇಳೆ ಕುಳಿತು ।
ವಿಭವದಿಂದಲಾರುಮಾಸವಿದ್ದು ಮೆರೆದ ಸಿದ್ಧಲಿಂಗ ॥೧೬॥
ಕ್ರೂರಸರ್ಪರೂಪನಿಂದಲೀಶ ಬಂದು ಗ್ರಹವಕಾಯ್ದು ।
ಚೋರರೆಲ್ಲರುಗಳ ಭೀತಿಬಿಡಿಸಿ ಮೆರೆದ ಸಿದ್ಧಲಿಂಗ ॥೧೭॥
ಸೇರಿಭೂತವೆರಡು ಕಗ್ಗೆರೆಯೊಳು ನಿಮ್ಮ ಪೂಜಿಸಲ್ಕೆ ।
ಚಾರುಮೋಕ್ಷಪದವನವಕೆ ಕೊಟ್ಟು ಮೆರೆದ ಸಿದ್ಧಲಿಂಗ ॥೧೮॥
ಉರುಗನೊಂದು ಕಗ್ಗೆರೆಯೊಳು ನಿಮ್ಮ ಚರಣದಸ್ಟದಿಂದೆ ।
ಮರಣವೆಯಿದಿಲದಕೆ ಹರಣವಿತ್ತು ಮೆರೆದ ಸಿದ್ಧಲಿಂಗ ॥೧೯॥
ಮರಣದಿಂದೆಲುರಗಯೆಡೆಯೂರಿಂಗೆ ಹೋದಪಥದೊಳಿರಲು ।
ಹರಣಗೊಟ್ಟು ಶಾಂತಿಗುಣವನಿತ್ತು ಮೆರೆದ ಸಿದ್ಧಲಿಂಗ ॥೨೦॥
ಜಲವು ಬೇಸಗೆಯಲೆಡೆಯೂರೊಳಗಿರದಿರಲು ತೋರಿ ।
ಒಲಿದು ಜಲವನುಕ್ಕಿ ಸಲೆ ಪಸರಿಸಿ ಮೆರೆದ ಸಿದ್ಧಲಿಂಗ ॥೨೧॥
ಅಳಿಯೆ ಗ್ರಹದಹನದಿ ತನ್ನ ಶಿಶುಗಳಿಂದು ಬೆಕ್ಕುದುಃಖ ।
ಗೊಳಲೆಡೆಯೂರಲ್ಲಿ ಪ್ರಾಣವಿತ್ತು ಮೆರೆದ ಸಿದ್ಧಲಿಂಗ ॥೨೨॥
ಗಾಡಿಯಿಂದೆಡೆಯೂರಲ್ಲಿ ಸಿಡಿಲು ನಿಮ್ಮ ಪಾದವ ಪೂಜೆ ।
ಮಾಡಲದಕೆ ಮುಕ್ತಿಗೊಟ್ಟು ಕಳುಹಿ ಮರೆದ ಸಿದ್ಧಲಿಂಗ ॥೨೩॥
ರೂಢಿಯರಿಯೆ ಹೊಳಲು ಗಂಧದಲ್ಲಿ ಮಹಾದೇವಿ ಭಕ್ತಿ
ಮಾಡಲವಳ ಭಕ್ತಿ ಭಿಕ್ಷೆಗೊಂಡು ಮೆರೆದ ಸಿದ್ಧಲಿಂಗ ॥೨೪॥
ಮಳೆಯುಬರಲು ನಾಗಶರಧಿಯಲ್ಲಿ ಕಲ್ಲಿನಾಥ ತನ್ನ ।
ನಿಳಯದಲ್ಲಿ ಕದವ ತೆರೆಯೆ ಪೊಕ್ಕು ಮೆರೆದ ಸಿದ್ಧಲಿಂಗ ॥೨೫॥
ಸುಲಭದಿಂದ ಎನ್ನಗಲಕ್ಕೆ ಹೋಹಹಾದಿಯಲ್ಲಿ ನದಿಯು ।
ವ್ಯಳಲು ಗಾಬತೆರದಿ ಪಥವನೀಯೆ ಮೆರೆದ ಸಿದ್ಧಲಿಂಗ ॥೨೬॥

ವಿರತಿಗಾಣಲಿಂಪು ವ್ಯಾಘ್ರಪುರದ ಪಥವಿಹರನು ಶಬರ ।
ನಿರವಿನಿಂದಬರಲು ವಸನವಿತ್ತು ಮೆರೆದ ಸಿದ್ಧಲಿಂಗ ॥೨೭॥
ಜ್ವರದಬಾಧೆಯಿಂದ ವ್ಯಾಘ್ರಪುರವ ಮನುಜರೆಲ್ಲರಳಿವು ।
ತಿರಲು ಜ್ವರವಬಿಡಿಸಿಯವರ ಸಲಹಿ ಮೆರೆದ ಸಿದ್ಧಲಿಂಗ ॥೨೮॥
ಚಿತ್ರಕಾಯಪುರವ ಹೇಮಗಿರಿಯ ಗೋತ್ರಕಮಲ ಭೂಜ ।
ಪತ್ರಶತ ಸಮೇತ ಕುಸುಮವೀಯೆ ಮೆರೆದ ಸಿದ್ಧಲಿಂಗ ॥೨೯॥
ಮುತ್ತುಗೂಡಿ ಮೂಕುತಿಯನು ಮುಡಿಯಲಿಂಸಿ ಜ್ಯೋತಿಹಸ್ತ ।
ವೆತ್ತಿ ವ್ಯಾಘ್ರಪುರದಿ ಸುಸಂಭ್ರಮದಿ ಮೆರೆದ ಸಿದ್ಧಲಿಂಗ ॥೩೦॥
ಪುರುಷನೊಡನೆ ಗಮನವಪ್ಪ ಸತಿಯು ವಂದಿಸಲ್ಕೆ ವ್ಯಾಘ್ರ ।
ಪುರದಿಯವಳ ಪುರಷಗಸುವನಿತ್ತು ಮೆರೆದ ಸಿದ್ಧಲಿಂಗ ॥೩೧॥
ನಿರುತದಿಂದ ಮೊದೂರಿಂಗೆ ಹೋಹಪಥದಿ ಕಣ್ಣುಗೆಟ್ಟು ।
ಇರಲು ಚೋರರಿಂಗೆ ಕಂಗಳಿತ್ತು ಮೆರೆದ ಸಿದ್ಧಲಿಂಗ ॥೩೨॥
ಸುದತಿ ಹೆಬ್ಬೂರಲ್ಲಿರಂಭಫಲದ ಶೇಷವನ್ನು ಬಸವ ।
ನಿದಿರಿಲಿರಿಸಿ ಶಿಲೆಯಬಸವ ಸವಿಯೆ ಮೆರೆದ ಸಿದ್ಧಲಿಂಗ ॥೩೩॥
ಉದಕವಿಕ್ಷುದೋಟಕಿಲ್ಲದಿರಲು ಹೆಬ್ಬೂರಿನಲಿ ಓರ್ವ ।
ಮುದದಿನೆನೆದು ಅಗಿಯೆಜಲವ ತೋರಿ ಮೆರೆದ ಸಿದ್ಧಲಿಂಗ ॥೩೪॥
ಹೇರೂರಲ್ಲಿ ಜಂಬುನೇರಿಲೊಂದು ಪೂರ್ಣಫಲಗಳಿಂದ ।
ಸಾರಿಭಕ್ತಿ ಮಾಡಲೊಲಿದು ಸವಿದು ಮೆರೆದ ಸಿದ್ಧಲಿಂಗ ॥೩೫॥
ನಾರಿ ಭತ್ತಗುದಿಸುತಿರಲು ಹೊನ್ನುಡಿಕೆಯೊಳೊಡೆಯೆಘಟವು ।
ನೇರ್ತಾಗೆ ಕೂಡೆ ಆಣೆಯಿಡಲು ಮೆರೆದ ಸಿದ್ಧಲಿಂಗ ॥೩೬॥
ಚನ್ನಪಟ್ಟಣದಲಿ ದಾಸನೋರ್ವ ನೋಡಬಾರದೆಂದು ।
ತನ್ನ ಮೊಗವ ತಿರುಹಿಸ್ತಂಭವಿತ್ತು ಮೆರೆದ ಸಿದ್ಧಲಿಂಗ ॥೩೭॥
ನಿನ್ನ ಪಾದ ಜಲದ ಭಾಂಡಕಲುಕುಣಿಕೆಯೊಳೊಡದು ಅಲ್ಲಿ ।
ನನ್ನಿಯಿಂದ ಲಿಂಗರೂಪಿಲುದಿಸಿ ಮೆರೆದ ಸಿದ್ಧಲಿಂಗ ॥೩೮॥
ಸದನಕಿದಿರುದೋರುಬಾಳೆ ಗೊನೆ ಬಿಡಲ್ಕೆ ಆಣೆಯಿಡಲು ।
ಮುದದಿ ಹಂಚಿ ಹಟ್ಟಿಯಲ್ಲಿ ತಿರುಗಿಮೆರೆದ ಸಿದ್ಧಲಿಂಗ ॥೩೯॥
ಮುದದೊಳೋರ್ವದಾಸ ಲಿಂಗಪುರದಿ ನಿಂದಿಸಲ್ಕೆ ಹಲ್ಲು ।
ನುದುರುವಂತೆ ವಾಸುದೇವ ಹೊಡೆಯೆ ಮೆರೆದ ಸಿದ್ಧಲಿಂಗ ॥೪೦॥
ವೃಷಭಪುರದಿ ಮಿಾಸಲಾದ ಬದನೆಕಾಯನೋರ್ವನಾರಿ ।

ಒಸೆದು ಅಗ್ನಿಗಿಡಲು ಬೇಯದಿರಲು ಮೆರೆದ ಸಿದ್ಧಲಿಂಗ ॥೪೧॥
ಹುಸಿಯದವಳು ನಿಮಗೆ ಕಾಯ ತೋರೆ ಬಂಜೆ ನಿನಗೆ ಮುಂದೆ ;
ಶಿಸುಗಳಪ್ಪವೆಂದು ಮರಳಿಕೊಟ್ಟು ಮೆರೆದ ಸಿದ್ಧಲಿಂಗ ॥೪೨॥
ಜ್ವರದ ಭೀತಿಗಂಜಿ ವೃಷಭ ಪುರದಿ ಬಾಗಿಲಿಕ್ಕಿ ಭಕ್ತ ।
ರಿರಲು ಕವವ ತೆಗೆದು ತಳಿಗೆಗೊಡಿಸಿ ಮೆರೆದ ಸಿದ್ಧಲಿಂಗ ॥೪೩॥
ತರುಣಿಯೋರ್ವಳಿಲ್ಲವೆಂದು ರಾತ್ರಿಯಲ್ಲಿ ತಳಿಗೆಗೊಡದೆ ।
ಇರಲದೃಶ್ಯವಾಗೆ ಮರಳಿ ಕೊಡಿಸಿ ಮೆರೆದ ಸಿದ್ಧಲಿಂಗ ॥೪೪॥
ಮಲ್ಲಿಶೆಟ್ಟಿ ವೃಷಭ ಪುರದಿ ತೀರ್ಥವನ್ನು ವಾರಿ ಸೆಜ್ಜೆ ।
ಯಲ್ಲಿಲಿಂಗ ವಿಲ್ಲದಿರಲು ಕೊಟ್ಟು ಮೆರೆದ ಸಿದ್ಧಲಿಂಗ ॥೪೫॥
ಎಲ್ಲ ಭಕ್ತರುಗಳು ಕ್ಷೀರವಾರು ಕೊಳಗವನ್ನು ಶಿರದಿ ।
ನಿಲ್ಲದೊತ್ತಿರಂದ್ರ ಹೀರುತಿರಲು ಮೆರೆದ ಸಿದ್ಧಲಿಂಗ ॥೪೬॥
ವನಿತೆ ವೃಷಭ ಪುರದಿ ಶೇಷ ಕುಸುಮ ಗೊಡಲು ಸಾಕೆನಲ್ಕೆ ।
ಮಿನುಗುತಿರ್ಪ ಲಿಂಗ ಬಯಲನೆಯ್ದೆ ಮರೆದ ಸಿದ್ಧಲಿಂಗ ॥೪೭॥
ವಿನುತ ಭಸಿತ ಘಟಿಕೆಯ ತುಮುಕುರಲ್ಲಿ ವೈಷ್ಣವನಿಗೆ ಲಿಂಗ ।
ವೆನಿಸಿ ಕೊಟ್ಟು ಭಕ್ತರೂಪ ಮಾಡಿ ಮೆರೆದ ಸಿದ್ಧಲಿಂಗ ॥೪೮॥
ಮಲ್ಲಿಯೆಂಬಳಕ್ಕಿ ಯಾರು ಗೊಳಗ ಮಿರಲದರಲಿ ಪಡಿಯ ।
ನಿಲ್ಲದೊಂದ ತೆಗೆಯೆ ಬಯಲ ಮಾಡಿ ಮೆರೆದ ಸಿದ್ಧಲಿಂಗ ॥೪೯॥
ಬೆಲ್ಲ ನಾಲ್ಕು ನೂರು ಹರಕೆಯಲ್ಲಿ ನಂಟಗೆಂದು ಪೊಂವ ।
ಬೆಲ್ಲದೆಗೆಯಲೆಲ್ಲ ಬಯಲವಾಗೆ ಮೆರೆದ ಸಿದ್ಧಲಿಂಗ ॥೫೦॥
ಏಳುನೂರು ನಾರಿ ಕೇಳದಲ್ಲಿ ಯೊಂದು ಪ್ರಭುವಣಿಜ್ಯ ।
ಬಾಲಕಂಗೆ ಈಯಲುದಕ ಹಿಂಗೆ ಮೆರೆದ ಸಿದ್ದಲಿಂಗ ॥೫೧॥
ಚೌಳು ನೀರ ತೀರ್ಥವನ್ನು ಚರಕೆ ಕೊಟ್ಟು ಸ್ವಾದ ಜಲದಿ ।
ಬಾಲೆತೀರ್ಥವಡೆಯೆ ಬಯಲ ಮಾಡಿ ಮೆರೆದ ಸಿದ್ದಲಿಂಗ ॥೫೨॥
ಪ್ರಸವವೆರಡರೆಣಿಕೆಯಿಂದಲಿತ್ತು ಮುದ್ದವಣಿಜನರಸಿ ।
ಕುಸುಮ ವಿಸರ ವಿರಿಸಲೆರಡ ನಿರಿಸಿ ಮೆರೆದ ಸಿದ್ಧಲಿಂಗ ॥೫೩॥
ಮಿಸುಪನೆಲ್ಲವರೆಯ ಕಾಯ ಮೀಸಲಿರಿಸಿ ಭಕ್ತನೋರ್ವ ।
ನೊಸೆದು ಪಚನಗೆಯ್ಯೆ ಬೇಯದಿರಲು ಮೆರೆದ ಸಿದ್ಧಲಿಂಗ ॥೫೪॥
ಹೊಲದೊಳಿರ್ಪವರೆಯ ಕಾಯ ಹರಕೆದೆಗೆದು ಓರ್ವ ಪಚನ ।
ಗೊಳಿಸೆ ಪಾವಕಂಗೆಯಾಗ್ನೆಯಿತ್ತು ಮೆರೆದ ಸಿದ್ಧಲಿಂಗ ॥೫೫॥

ಹಲಗೆ ಶಿಪ್ಪಿಗೊಲಿದು ಅವನ ಗೃಹದಿ ಕುಳಿಶು ದ್ರೋಣ ಪುಷ್ಪ ।
ಮಳೆಯನೆಲ್ಲರರಿವತೆರದಿ ಕರಿಸಿ ಮೆರೆದ ಸಿದ್ಧಲಿಂಗ ॥೫೬॥
ಗೋಣಿಕಾರ ಕುಲದಿ ನಾರಿಹರವಿಕೆರೆಯೊಳೆಯ್ದುತಿರಲು ।
ಆಣೆಯಿಕ್ಕಲವನು ಮರಳಿ ಬರಿಸಿ ತೋರಿ ಮೆರೆದ ಸಿದ್ಧಲಿಂಗ ॥೫೭॥
ಪಾನಿದುಂಬಿಯೆತ್ತಿ ಬಾರದಿರಲು ಆಣೆಯಿಕ್ಕಿ ಸುಲಭ।
ಗಾಣಿಸಲ್ಕೆ ತಂದು ಪೂಜೆಮಾಡಿ ಮೆರೆದ ಸಿದ್ಧಲಿಂಗ ॥೫೮॥
ಪರುಷೆಯಲ್ಲಿ ಯೊಂವನಡ್ವ ಬೆದರಿ ಹೊರ ಬಿಸುಟ್ಟು ಓಡೆ ।
ತ್ವರಿತದಿಂದ ಆಣೆ ಇಡಲು ಬರಿಸಿ ಮೆರೆದ ಸಿದ್ಧಲಿಂಗ ॥೫೯॥
ಸ್ಥಿರದಿ ತುಮುಕುರಲ್ಲಿಯಿರ್ದ ರಾತ್ರಿಯಲ್ಲಿ ಕಣಿಯ ಕಲ್ಲೊ ।
ಳಿರುತಲವರು ಮಾಳ್ಪಭಕ್ತಿಗೊಂಡು ಮೆರೆದ ಸಿದ್ಧಲಿಂಗ ॥೬೦॥
ತಿಗುಳಗೋರ್ವಗೊಲಿದ ರಾತ್ರಿ ದೇವರಾಯ ಪತ್ತನದಲಿ ।
ಸೊಗಯಿಪಂತೆ ತೂಬನೆತ್ತಿ ಕೊಟ್ಟು ಮೆರೆದ ಸಿದ್ಧಲಿಂಗ ॥೬೧॥
ಬಗೆಯಲೊಂದು ರಾತ್ರಿಯಲ್ಲಿ ಗ್ರಾಮ ಮೂರರಲ್ಲಿಯಿರ್ದು ।
ಜಗಕೆ ಚೋದ್ಯವಾಗಿ ಮಹಿಮೆದೋರಿ ಮೆರೆದ ಸಿದ್ಧಲಿಂಗ ॥೬೨।
ಅಳಗೆಯೊಂದು ವೋದನವ ನ್ನೈನೂರ ಜಂಗಮಕ್ಕೆ ತೃಪ್ತಿ ।
ಗೊಳಿಸಿ ದೇವರಾಯ ಪತ್ತನದಲಿ ಮೆರೆದ ಸಿದ್ಧಲಿಂಗ ॥೬೩॥
ಮಳೆಯ ಬರಲು ದೇವರಾಯ ಪತ್ತನದಲಿ ಭಕ್ತ ಜನರು ।
ಸಲಿಸುವನ್ನ ನಿಲಿಸಿ ಮರಳಿ ಕರಿಸಿ ಮೆರೆದ ಸಿದ್ದಲಿಂಗ ॥೬೪॥
ಕಂಗಳುದಯ ಕಾಲದಿಂದಲಿಲ್ಲದವನು ನಿಮ್ಮ ಪದಯು ।
ಗಂಗಳೊತ್ತುಗೆಯ್ಯೆ ಕಂಗಳಿತ್ತು ಮೆರೆದ ಸಿದ್ಧಲಿಂಗ ॥೬೫॥
ಮಂಗವಾಡದಿಂದ ಪರ್ವಸೆಟ್ಟಿ ಲಿಂಗಯಮ್ಮ ಬರಲು ।
ಅಂಗಭಾವವಳಿದು ಹರಣವಿತ್ತು ಮೆರೆದ ಸಿದ್ಧಲಿಂಗ ॥೬೬॥
ತರುಣಿ ತಡೆಯಲಿರದೆ ರಾಯ ಮಾರ್ಗದಿಂದ ಮಲ್ಲಿಸೆಟ್ಟಿ ।
ಬರಲು ಮಹಿಷಿಯಳಿಯೆ ಪ್ರಾಣವಿತ್ತು ಮೆರೆದ ಸಿದ್ಧಲಿಂಗ ॥೬೭॥
ಬುರುಡು ಗುಂಪೆಯಿಂದ ಗಬ್ಬಿ ರಾಜ ಬರಲಿಕವನ ವಾಜಿ ।
ಮರಣವೆಯಿದಲದಕೆ ಹರಣವಿತ್ತು ಮೆರೆದ ಸಿದ್ಧಲಿಂಗ ॥೬೮॥
ಬಿಕ್ಷವೃತ್ತಿರಾಯನಿತ್ತ ಸ್ವರ್ಣಗಂತೆರನ್ನ ಮುಕುಟ ।
ಕಕ್ಷೆಯೊಳಗೆ ಚರನು ಬರಲಿ ಕಿತ್ತು ಮೆರೆದ ಸಿದ್ಧಲಿಂಗ ॥೬೯॥
ಅಕ್ಷಿಗರ್ವದಪ್ಪದಿಂದಲಳಿದ ಜಂಗಮಕ್ಕೆ ಸರ್ವ ।

ರೀಕ್ಷಿಸಲ್ಕೆ ವೊಲಿದು ಹರಣವಿತ್ತು ಮೆರೆದ ಸಿದ್ಧಲಿಂಗ ॥೨೦॥
ಚಕ್ಷುಹೀನ ಜಂಗಮಯ್ಯ ಕುಂತಳಾಖ್ಯ ದೇಶದಿಂದ ।
ವೀಕ್ಷಿಸಲ್ಕೆ ಬರಲು ಕಂಗಳಿತ್ತು ಮೆರೆದ ಸಿದ್ಧಲಿಂಗ ॥೨೧॥
ಅಕ್ಷಯಾಘ ಚರಿತ ಜೈನ ಚಿಕ್ಕನಿಂದಿಸಲ್ಕೆಯುಗ್ನಿ ।
ಭಕ್ಷಗೆಯ್ಯೆಗೃಹವ ಹಲುಕುರಲ್ಲಿ ಮೆರೆದ ಸಿದ್ಧಲಿಂಗ ॥೨೨॥
ಒಸೆದು ಮಜ್ಜನಕ್ಕೆ ಬೆಸುಗೆಯಲ್ಲಿ ಜಲವ ದಿಲ್ಲದಿರಲು ।
ಮಿಸುಪ ಕೂಪದಲ್ಲಿ ಗಂಗೆ ಬರಲು ಮೆರೆದ ಸಿದ್ಧಲಿಂಗ ॥೨೩॥
ಬಸವ ಕೇತ ಶರಧಿಯಲ್ಲಿ ಆರುದಿವಸ ಮೋಹಬಿಟ್ಟು
ಉಸಿಕನಿರಲು ಆಣೆಯನ್ನು ಬಿಡಿಸಿ ಮೆರೆದ ಸಿದ್ಧಲಿಂಗ ॥೨೪॥
ರಥವ ನಡರಿ ಕೇತ ಶರಧಿಯಲ್ಲಿ ನಡೆದು ಬರಲು ಮುರಿಯೆ ।
ಕ್ಷಿತಿಯೊಳಾಣೆಯಿಡಲು ನೇರಿತಾಗೆ ಮೆರೆದ ಸಿದ್ಧಲಿಂಗ ॥೨೫॥
ಸ್ತುತಿಸಿ ತಿಗುಳ ದೇಶದಿಂದ ಬಂದ ವೀರ ದೇಶಿಕಂಗೆ ।
ಹಿತವ ದಾದನಯನ ಚರಣವಿತ್ತು ಮೆರೆದ ಸಿದ್ಧಲಿಂಗ ॥೨೬॥
ಹೆಡ್ಡದ್ವಿಜ ನಮೋರ್ವನಿಂದಿಸಲ್ಕೆ ವಜ್ರದುಂಬಿನಿವಹ ।
ಚಡ್ಡಿಗೊಳ್ಳದವನ ಬಾಧೆಗೊಳಿಸಿ ಮೆರೆದ ಸಿದ್ಧಲಿಂಗ ॥೨೭॥
ಒಡ್ಡರೆಲ್ಲ ಕೋಡಿಹಳ್ಳಿಯಲ್ಲಿ ಪರ್ವವೆಸಗಿಯೆಡೆಯ ।
ದೊಡ್ಡಿತಾಗಿ ಯಿಡಲದೃಶ್ಯವೆನಿಸಿ ಮೆರೆದ ಸಿದ್ಧಲಿಂಗ ॥೨೮॥
ಮಡದಿ ಬೆಳ್ಳವೆ ಯಲಿಯಡುತ ಪಾಕಕೊಡನದೆಯ್ದೆ ।
ತಡಿಗೆ ಆಣೆಯಿಡಲು ನಡಿಸಿ ಬರಿಸಿ ಮೆರೆದ ಸಿದ್ಧಲಿಂಗ ॥೨೯॥
ಕಡಬದಲ್ಲಿ ಒಂದು ಗೃಹದಿ ಮೂರ್ತಿ ಗೊಂಡಿರಲ್ಕೆ ಭವಿಯು ।
ಒಡನೆ ಬರಲು ಕದವು ಮುದ್ರಿಸಲ್ಕೆ ಮೆರೆದ ಸಿದ್ಧಲಿಂಗ ॥೩೦॥
ವೇಪರಾಳಿಯಲ್ಲಿ ಲಿಂಗರೂಪಿನಿಂದಲುದಿಸಿ ಲೋಕ ।
ವ್ಯಾಪಿಪಂತೆ ಭರದಿ ಮಳೆಯ ಕರಿಸಿ ಮೆರೆದ ಸಿದ್ಧಲಿಂಗ ॥೩೧॥
ದೀಪಿಸುತ್ತಲುರುವ ಕೊಂಡೆಯಲ್ಲಿ ಲಿಂಗರೂಪಿನಿಂದ ।
ಸ್ಥಾಪ್ಯವಾಗಿ ಸರ್ವ ಜನಕೆ ತೋರಿ ಮೆರೆದ ಸಿದ್ಧಲಿಂಗ ॥೩೨॥
ಕುರುಬರೆಲ್ಲ ಕೂಡಿ ಬಿದಿರೆಯಲ್ಲಿ ಪರ್ವವೆಸಗಿ ಯೆಡೆಯ ।
ನಿರಿಸಿ ಬಯಲ ಮಾಡಿ ವರವನಿತ್ತು ಮೆರೆದ ಸಿದ್ಧಲಿಂಗ ॥೩೩॥
ಉರಗ ದಷ್ಟದಿಂದ ಚಿಕ್ಕಬಸವ ನಿಮ್ಮ ಆಣೆಯಿಡಲು ।
ಗರಳ ಇಳಿಹಿ ಮುಗುಳುರಲ್ಲಿ ಸಲಹಿ ಮೆರೆದ ಸಿದ್ಧಲಿಂಗ ॥೩೪॥

ಇಂತು ಎಪ್ಪತ್ತೈದು ಮುಖ್ಯವಾದನಂತ ಮಹಿಮೆ ದೋರಿ ।
ಚಿಂತಿತಾರ್ಥವಿತ್ತು ಜಗವ ಸಲಹಿ ಮೆರೆದ ಸಿದ್ಧಲಿಂಗ ||೮೫||
ಕಂತು ಕಾಲಮರಣಭಯವ ಪೂಜಿಸುತ್ತಲಿಪ್ಪ ಭಕ್ತ ।
ತಿಂಥಿಣಿಗವುಗಳನು ದೂರ ವೆನಿಸಿ ಮೆರೆದ ಸಿದ್ಧಲಿಂಗ ||೮೬||
ಸಕಲ ಜಗವ ನೆನಹು ಮಾತ್ರದಿಂದ ಸಲಹಿ ವೀರಶೈವ ।
ಯುಕುತರಿಂಗೆ ಜ್ಞಾನ ಬೋಧೆಯಿತ್ತು ಮೆರೆದ ಸಿದ್ಧಲಿಂಗ ||೮೭||
ಭಕುತ ಮೊದಲೆನಿಪ್ಪ ಆರುಸ್ಥಲ ಷಡುಸ್ಥಲ ಜ್ಞಾನರಪ್ಪ ।
ಮುಕುತಿವಾಂಛಿತರ್ಗೆ ಬೋಧಿಸುತ್ತ ಮೆರೆದ ಸಿದ್ಧಲಿಂಗ ||೮೮||
ಈಷಣತ್ರಯುಕ್ಕತಿತನೆನಿಸಿ ಮೆರೆದ ಸಿದ್ಧಲಿಂಗ ||೮೯||
ಕ್ಲೇಶ ಪಂಚಕಂಗಳನ್ನುದಹಿಸಿ ಮೆರೆದ ಸಿದ್ಧಲಿಂಗ ||೯೦||
ದೋಷ ಪಾಶಗಳನು ಹಿಟ್ಟುಗುಟ್ಟಿ ಮೆರೆದ ಸಿದ್ಧಲಿಂಗ ||೯೧||
ಈಂಭಾವದಲ್ಲಿ ಮನವ ಮುಟ್ಟಿ ಮೆರೆದ ಸಿದ್ಧಲಿಂಗ ||೯೨||
ಷಟ್‌ಸ್ಥಲಜ್ಞ ಸಿದ್ಧಲಿಂಗ । ಶರಣ ಸೂಜ್ಞ ಸಿದ್ಧಲಿಂಗ ||೯೩||
ಶಿಷ್ಯಪಾಲ ಸಿದ್ಧಲಿಂಗ । ಶಿವಗೆ ಮೂಲ ಸಿದ್ಧಲಿಂಗ ||೯೪||
ಮಂಗಲಾಂಗ ಸಿದ್ಧಲಿಂಗ । ಮಾಯಭಂಗ ಸಿದ್ಧಲಿಂಗ ||೯೫||
ಲಿಂಗಸಂಗ ಸಿದ್ಧಲಿಂಗ । ಲಿಖಿತಲಿಂಗ ಸಿದ್ಧಲಿಂಗ ||೯೬||
ಕರಣ ಹರಣ ಸಿದ್ಧಲಿಂಗ । ಕರುಣಾಭರಣ ಸಿದ್ಧಲಿಂಗ ||೯೭||
ಶರಣವರಣ ಸಿದ್ಧಲಿಂಗ । ಶರಣು ಶರಣು ಸಿದ್ಧಲಿಂಗ ||೯೮||

||ಕಂದ|| ಉತ್ಸಾಹವೆಸಗಿದಮನದಿಂ ।
ದುತ್ಸಾಹಜಗಕಾಗಲೆಂದು ಸಿದ್ಧೇಂದ್ರನ ಮಹಿ ||
ಮೋತ್ಸವರಗಳೆಯ ಶರಣ ।
ಗುರ್ತ್ಸಾಹವಪ್ಪಂತೆ ಪೇಳ್ದೆನುತ್ಸಾಹದಿಂದಂ ||೧||

ಈರಗಳೆಯೊಳಿಹುದರುವಿನ ।
ಸಾರಗಳೆಂದರಿದು ಸುಖಿಸಿ ಸಕಲ ಜನರೊಳಂ ||
ವೈರಗಳೆಲ್ಲವ ಬಿಡೆಭವ ।
ದೂರಗಳೆನಿಸುವವು ಸಿದ್ಧಲಿಂಗನ ಕೃಪೆಯಿಂ ||೨||

ಇದನೋದಿ ಬರೆದು ಪಠಿಸುತ ।
ಮುದದಿಂದರ್ಥೈಸಿ ಕೇಳೆ ಭವಬಂಧನಮಂ ||

ಒದೆದು ನಿಜಮುಕ್ತಿ ರಾಜ್ಯದಿ ।
ಪದುಳದೊಳಿರುತಿಹನು ಗುರು ನಿರಂಜನ ಲಿಂಗಾ ॥೩॥
ಸಿದ್ಧೇಶ್ವರ ಪವಾಡದ ರಗಳೆ ಸಮಾಪ್ತ.

ಶಿವಾನುಭವ ಗ್ರಂಥಮಾಲಾ ನಂ॥ ೭

# ಗಣದಾಸಿ ವೀರಣ್ಣನವರ
## ವಚನಗಳು.

ಸಂಪಾದಕರು

**ರಾ॥ ಸಾ॥ ಫ. ಗು. ಹಳಕಟ್ಟಿ**

ಬಿ. ಎ. ಎಲ್ ಎಲ್, ಬಿ. ವಕೀಲ

ವಿಜಾಪುರ.

೧೯೨೬

ಬೆಲೆ ೪ ಆಣೆ.

# ಪ್ರಸ್ತಾವನೆ.

ಈ ಗ್ರಂಥವು ಮೂರು ಹಸ್ತಲಿಖಿತ ಗ್ರಂಥಗಳ ಸಹಾಯದಿಂದ ತಿದ್ದಲ್ಪಟ್ಟು ಪ್ರಸಿದ್ಧಿಸಲ್ಪಟ್ಟಿದೆ. ಒಂದು ಕೈ. ವಾ. ಗುರಬಸಯ್ಯಾ ಕಂಠಿ ಬನಹಟ್ಟಿ ಸಂ|| ಜಮಖಂಡಿ, ಎರಡನೆಯದು ಶಿ॥ಮೂ॥ ಬುದ್ದಯ್ಯ ಪುರಾಣಿಕ ಎಡಿಹಳ್ಳಿ ಜಿಲ್ಹಾ॥ ವಿಜಾಪುರ ಈ ಸಭ್ಯಗ್ರಹಸ್ಥರು ಕಳಿಸಿದ್ದು, ಮತ್ತು ಮೂರನೆಯದು ಶ್ರೀ ಶಿವಯೋಗಮಂದಿರದಲ್ಲಿ ದೊರೆದದ್ದು. ಇವುಗಳಲ್ಲಿ ಒಟ್ಟು ೩೭ ವಚನಗಳಿವೆ. ಈಗ್ರಂಥದಲ್ಲಿವಿಷಯವು ಹೆಚ್ಚಾಗಿ ಅಷ್ಟಾವರಣವಾಗಿರುತ್ತದೆ. ಆದರೆ ನನಗೆದೊರೆದ ಗ್ರಂಥಗಳಲ್ಲಿ ಒಂದೊಂದು ಆವರಣಕ್ಕೆ ಸಂಬಂಧಿಸಿದ ವಚನಗಳುಒತ್ತಟ್ಟಿಗೆ ಸೇರಿಸಲ್ಪಟ್ಟಿಲ್ಲ. ಆದ್ದರಿಂದ ವಿಷಯಗಳು ಚನ್ನಾಗಿ ಬೋಧವಾಗಬೇಕೆಂದುಶಕ್ಯವಿದ್ದಷ್ಟು ಮಟ್ಟಿಗೆಅಷ್ಟಾವರಣಗಳಿಗೆ ಸರಿಯಾಗಿ ವಚನಗಳ ಕ್ರಮ[illegible] ಈ ಗ್ರಂಥವನ್ನು ಪ್ರಸಿದ್ಧಿಸಿದ್ದೇನೆ.

ಗಣದಾಸಿ ವೀರಣ್ಣನು [illegible]ಕು ಸುಲಭ ಭಾಷೆಯಲ್ಲಿ ಅಷ್ಟಾವರಣಗಳವಿವೇಚನೆಯನ್ನು ಮಾಡಿರುವನು. ಈ ಚಿಕ್ಕ ಗ್ರಂಥವು ಆಬಾಲ ವೃದ್ಧರಿಗೂ ಉಪಯೋಗವಾಗಬಹುದೆಂದು ಎಣಿಸಿ ಇದನ್ನು ಅಚ್ಚು ಹಾಗಿದ್ದೇನೆ. ಈ ವಚನದ ಹಸ್ತ ಲಿಖಿತ ಗ್ರಂಥಗಳನ್ನು ಕಳಿಸಿಕೊಟ್ಟಿದ್ದಕ್ಕಾಗಿ ಮೇಲ್ಕಂಡಮೂರೂ ಜನ ಮಹನೀಯರಿಗೂ ನಾನು ಬಹಳ ಆಭಾರಿಯಾಗಿದ್ದೇನೆ. ಗಣದಾಸಿ ವೀರಣ್ಣನವರ ಚರಿತ್ರೆಯು ಇನ್ನೂ ಉಪಲಬ್ಧವಾಗಿಲ್ಲ..

ವಿಜಾಪುರ
ತಾ. ೬-೯-೨೬

ಫ. ಗು. ಹಳಕಟ್ಟಿ
ಪ್ರಕಾಶಕ

# ಗಣದಾಸಿವೀರಣ್ಣನವರ ವಚನಗಳು.

೧. ನಿರಾಕಾರ ಪರವಸ್ತು ತನ್ನ ಲೀಲಾ ವಿನೋದಕ್ಕೋಸ್ಕರವಾಗಿ ಎರಡು ಮುಖದಿಂದ ಎರಡು ಸೃಷ್ಟಿಯ ಮಾಡಿದರು. ಒಂದು ಊರ್ಧ್ವ ಸೃಷ್ಟಿ, ಒಂದು ಅಧೋ ಸೃಷ್ಟಿ. ಅಧೋ ಸೃಷ್ಟಿ ಎಂತೆಂದೊಡೆ ಅಂಡಜ, ಪಿಂಡಜ, ಜರಾಯುಜ, ಉದ್ಭಿಜ ಇವು ನಾಲ್ಕು ಕೂಡಿ ಎಂಬತ್ತುನಾಲ್ಕು ಲಕ್ಷ ಜೀವ ರಾಶಿಯ ಮಾಡಿದರು. ಸ್ವರ್ಗ, ನರಕ, ಇಹ, ಪರ, ಪುಣ್ಯ, ಪಾಪ, ಧರ್ಮ ಕರ್ಮ, ಸತ್ಯ ಅಸತ್ಯ, ಜ್ಞಾನ, ಅಜ್ಞಾನ, ಹೆಣ್ಣು ಗಂಡು, ಹಿರಿದು ಕಿರಿದು ಉತ್ಪತ್ತಿ ಸ್ಥಿತಿಲಯಕ್ಕೆ ಅಧಿಕಾರರಾದ ಬ್ರಹ್ಮ ವಿಷ್ಣು ರುದ್ರರು ಮಾಡಿಟ್ಟರು. ಇನ್ನು ಊರ್ಧ್ವ ಸೃಷ್ಟಿ ಎಂತೆಂದೊಡೆ, ಅಸಂಖ್ಯಾತ ಮಹಾ ಗಣಂಗಳು. ಇವರಿಗೆ ಸ್ವರ್ಗ ನರಕವಿಲ್ಲ, ಇಹ ಪರವಿಲ್ಲ, ಪುಣ್ಯ ಪಾಪವಿಲ್ಲ, ಧರ್ಮ ಕರ್ಮವಿಲ್ಲ, ಸತ್ಯಾ ಸತ್ಯವಿಲ್ಲ, ಜ್ಞಾನಾಜ್ಞಾನವಿಲ್ಲ, ಹೆಣ್ಣು ಗಂಡು ವಿಲ್ಲ, ಹಿರಿದು ಕಿರಿದು ವಿಲ್ಲ, ಉತ್ಪತ್ತಿ ಸ್ಥಿತಿಲಯಕ್ಕೆ ಕರ್ತರಾದ, ಬ್ರಹ್ಮ ವಿಷ್ಣು ರುದ್ರರು ಇಲ್ಲ. ಆ ನಿರಾಕಾರ ಪರವಸ್ತು ತಾನೆ ಗುರುಲಿಂಗ ಜಂಗಮವಾಗಿ ಗುರುವಿನಲ್ಲಿ ಉತ್ಪತ್ತಿ, ಲಿಂಗದಲ್ಲಿ ಸ್ಥಿತಿ, ಜಂಗಮದಲ್ಲಿ ನಿಜೈಕ್ಯವ ಮಾಡಿ, ಮತ್ತೆ ಆ ಪರಶಿವ ಮೂರ್ತಿ ತನ್ನ ವಿನೋದಕ್ಕೆ ಆಟವಾಡಬೇಕಾಗಿ, ಮಹಾದಾಕಾಶವನೇ ಮಂಟಪವ ಮಾಡಿ, ಆಕಾಶವನೇ ಪರದೆಯ ಕಟ್ಟಿ, ಅಸಂಖ್ಯಾತ ಮಹಾ ಗಣಂಗಳ ಮೂರ್ತವಮಾಡಿಸಿ ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳಿಗೆ ಸೂತ್ರವ ಮಾಡಿ ತನ್ನ ಕೈಯ್ಯಲ್ಲಿ ಹಿಡಿದುಕೊಂಡು ಚಿತ್ರವಿಚಿತ್ರ ದಾಟವ ಆಡಿಸುತ್ತಿಹುದಕ್ಕೆ ಲೆಕ್ಕವಿಲ್ಲ. ಅದನ್ನು ಹೇಳುವದಕ್ಕೆ ಅಸಾಧ್ಯವು. ಆ ಪ್ರಮಥ ಗಣಂಗಳು ನೋಡಿ, ಆ ಬೊಂಬೆಗಳೇನು ಆಡಿಹವು, ಸೂತ್ರಕನಾಡಿಸಿದಹಾಗೆ ಆಡುವವು. ಆ ಬೊಂಬೆಗಳಿಗೆ ಶಿವನಿಲ್ಲದಿರ್ದೊಡೆ, ಆಡುವುದು ಹ್ಯಾಗೆ? ತನ್ನ ಕೈಯ್ಯಲ್ಲಿ ಸೂತ್ರವಿಡಿದು ಆಡಿಸುವನಲ್ಲವೆ, ಇವೆಲ್ಲವು ಅನಿತ್ಯವೆಂದು ತಿಳಿದು ಪ್ರಮಥ ಗಣಂಗಳು ತಮ್ಮ ಲಿಂಗದಲ್ಲಿ ನಿಜಮೋಕ್ಷಿಗಳಾಗಿ ಶಾಂಭವ ಪುರಕ್ಕೆ

ಹೋದ ಭೇದವ ಎನ್ನೊಳರುಹಿದಾತ ನಮ್ಮ ಶಾಂತ ಕೂಡಲಸಂಗಮ ದೇವ.

೨. ಜೀವನ್ಮುಕ್ತಿ ಎಂತಹದೆಂದೊಡೆ ಹೇಳಿಹೆ, ಕೇಳಿರಯ್ಯ. ಜೀವನ ಬುದ್ಧಿಯ ಬಿಟ್ಟುದೇ ಜೀವನ್ಮುಕ್ತಿ. ಜೀವನ ಬುದ್ಧಿ ಯಾವುದೆಂದೊಡೆ, ಜ್ಞಾನ ಗುರುಗಳಿಂದ ಜ್ಞಾನವ ಹಡೆದು ಅಂಗ ಲಿಂಗ ಸಂಗ ಸಮರಸವಾದುದೇ ಜೀವನ್ಮುಕ್ತಿ. ಗೊಲ್ಲಾಳಯ್ಯಂಗೆ ಕುರಿಯ ಹಿಕ್ಕಿಯ ಪೂಜಿಸಿ ಗುರುಪ್ರಸನ್ನ ತೆಯ ಹಡೆದುದಿಲ್ಲವೆ? ಅವಿಶ್ವಾಸದಿಂದೆ ಅಂಗಬುದ್ಧಿಯಿಂದೆ ಹಲವು ಗುರುವು, ಹಲವು ಲಿಂಗ ಅರ್ಚಿಸಿ ಪೂಜಿಸಿ ಹಲವು ಭವದಲ್ಲಿ ಬಂದರು ನೋಡಾ. ಜೀವನ ಬುದ್ಧಿ ಎಂತೆಂದೊಡೆ ಆಶೆ, ರೋಷ, ಅಹಂಕಾರ, ಅರಿಷಡ್ವರ್ಗಂಗಳು, ಅಷ್ಟ ಮದಂಗಳು, ಅನೃತ, ಪರಧನ, ಪರಸ್ತ್ರೀ, ಪರನಿಂದೆ, ಪರಹಿಂಸೆ ಇವೆಲ್ಲ ಜೀವನ ಬುದ್ಧಿ. ಇವನೆಲ್ಲವ ನೊಳಗಿಟ್ಟುಕೊಂಡು ನಾವು ಜೀವನ್ಮುಕ್ತರೆಂದೊಡೆ, ಎಂತಹರೋ ನೋಡಾ. ದೀಪವೆಂದೊಡೆ ಕಾವಳು ಕತ್ತಲೆ ಹರಿಯಿತ್ತೆ? ಅಮೃತವೆಂದೊಡೆ ಹಸಿವು ಹೋಯಿತ್ತೆ ? ಉದಕವೆಂದೊಡೆ ತೃಷೆಯು ಹೋಯಿತ್ತೆ? ಈ ದೃಷ್ಟವ ಕಂಡು, ಶರಣಸತಿ ಲಿಂಗ ಪತಿ ಎಂಬ ಭೇದವ ತಿಳಿದೊಡೆ ಜೀವನ್ಮುಕ್ತಿ, ಈ ತ್ರಿವಿಧತನುವ ಮೀಸಲಾಗಿ ತ್ರಿವಿಧ ಲಿಂಗಾರ್ಪಿತವ ಮಾಡಬಲ್ಲಡೆ ಜೀವನ್ಮುಕ್ತಿ, ಎಂದಾತ ನಮ್ಮ ಶಾಂತ ಕೂಡಲಸಂಗಮದೇವಾ.

೩. ತಮಂಧಕಾರದೊಳು ಮೋಡವಿಲ್ಲದ ನಿರ್ಮಲವಾದ ಆಕಾಶದಂತೆ, ಎಲೆ ಇಲ್ಲದ ವೃಕ್ಷದಂತೆ, ರೆಕ್ಕೆ ಇಲ್ಲದ ಪಕ್ಷಿಯಂತೆ, ಗಾಳಿ ಇಲ್ಲದ ದೀಪದಂತೆ, ನೊರೆತೆರೆ ಬುದ್ಬುದಾಕಾರವಿಲ್ಲದ ಸಮುದ್ರದಂತಿರುವದೇ ಸಹಜ ಜ್ಞಾನವೆಂದು, ಎನ್ನೊಳರುಹಿದಾತ ನಮ್ಮ ಶಾಂತಕೂಡಲ ಸಂಗಮದೇವ.

೪. ಅಷ್ಟಾವರಣಂಗಳು ಆರಿಗೆ ಸಾಧ್ಯವಾಯಿತ್ತೆಂದೊಡೆ, ಹೇಳಿಹೆ ಕೇಳಿರಿ. ಗುರುಸಾಧ್ಯವಾಯಿತ್ತು ಗುರುಭಕ್ತಂಗೆ, ಲಿಂಗಸಾಧ್ಯವಾಯಿತ್ತು ನೀಲಲೋಚನೆತಾಯಿಗೆ, ಜಂಗಮ ಸಾಧ್ಯವಾಯಿತ್ತು ಬಸವೇಶ್ವರದೇವರಿಗೆ, ಪಾದೋದಕ ಸಾಧ್ಯವಾಯಿತ್ತು ವೇಮನಾರಾಧ್ಯರಿಗೆ, ಪ್ರಸಾದ ಸಾಧ್ಯವಾಯಿತ್ತು ಬಿಬ್ಬಿಬಾಚಯ್ಯಗಳಿಗೆ, ವಿಭೂತಿ ಸಾಧ್ಯವಾಯಿತ್ತು ವಹಿಲಯ್ಯಗಳಿಗೆ, ರುದ್ರಾಕ್ಷಿ ಸಾಧ್ಯವಾಯಿತ್ತು ಚಾರಮರಾಯಗೆ, ಪಂಚಾಕ್ಷರಿ ಸಾಧ್ಯವಾಯಿತ್ತು ಅಜಗಣ್ಣಂಗೆ. ಇನ್ನು ಷಟ್‌ಸ್ಥಲ ಆರಾರಿಗೆ ಸಾಧ್ಯವಾ

ಯಿತ್ತೆಂಪೊಡೆ, ಭಕ್ತಸ್ಥಲ ಬಸವಣ್ಣಂಗಾಯಿತ್ತು, ಮಹೇಶ್ವರಸ್ಥಲ ಮಡಿವಾಳಯ್ಯಂಗಾಯಿತ್ತು. ಪ್ರಸಾದಿಸ್ಥಲ ಚನ್ನಬಸವಣ್ಣಂಗೆ ಸಾಧ್ಯವಾಯಿತ್ತು, ಪ್ರಾಣಲಿಂಗಿಸ್ಥಲ ಸಿದ್ಧರಾಮಯ್ಯಂಗಾಯಿತ್ತು, ಶರಣಸ್ಥಲ ಪ್ರಭುದೇವರಿಂಗಾಯಿತ್ತು, ಐಕ್ಯಸ್ಥಲ ಅಜಗಣ್ಣಂಗಾಯಿತ್ತು. ಇನ್ನು ಷಟ್‌ಸ್ಥಲದ ವಿವರಮಂ ಪೇಳ್ವೆ. ಭಕ್ತಸ್ಥಲದ ವಿವರ, ಸದಾಚಾರದಲ್ಲಿ ನಡೆವನು. ತ್ರಿಕಾಲಮಜ್ಜನವನೀಡುವನು. ಲಾಂಛನಧಾರಿಗಳ ಕಂಡೊಡೆ ವಂದನೆಯ ಮಾಡುವನು. ಆಪ್ಯಾಯನಕ್ಕೆ ಅನ್ನವ ನೀಡುವನು. ಪೃಥ್ವಿ ಅಂಗವಾಗಿಪ್ಪುದೇ ಭಕ್ತಸ್ಥಲ ॥ಸಾಕ್ಷಿ॥ ಮಜ್ಜನ ತ್ರಿಕಾಲೇಷು ಶುಚಿಪಾಕ ಸಮರ್ಪಿತಂ। ಸದಾಚಾರಶಿವಭಕ್ತರ್ಲಿಂಗ ಜಂಗಮೇವಚ। ಲಾಂಛನೇನ ಶರಣಂಚ ಭಕ್ತಸ್ಥಲಂಚ ಮುತ್ತಮಂ॥ ಮಹೇಶ್ವರಸ್ಥಲದ ವಿವರ. ಪರಸ್ತ್ರೀ, ಪರದ್ರವ್ಯ, ಪರನಿಂದೆ, ಹಿಂಸಾ, ಅನೃತ, ಇವು ಪಂಚಮಹಾಪಾತಕಂಗಳು, ಇವಂ ಬಿಟ್ಟು, ಲಿಂಗನೈಷ್ಠೆಯಲ್ಲಿ ಇರ್ದು ಜಲವೇ ಅಂಗವಾಗಿಪ್ಪುದೀಗ ಮಹೇಶ್ವರಸ್ಥಲ. ॥ಸಾಕ್ಷಿ॥ ಪರಸ್ತ್ರೀ ಪರನಿಂದಾಚ ಪರಾರ್ಥಂ ಹಿಂಸಾನೃತಃ ವರ್ಜಿತೊ ಭಾವಶುದ್ಧಿಮಾನ್ ॥ ಲಿಂಗನಿಷ್ಠಾಯುಕ್ತಾತ್ಮಂ ಮಹೇಶ್ವರಸ್ಥಲಮುತ್ತಮಂ॥ ಇನ್ನು ಪ್ರಸಾದಿಸ್ಥಲದ ವಿವರ- ಲಿಂಗಕ್ಕರ್ಪಿಸಿ ಪ್ರಸಾದವ ಲಿಂಗನೆನಹಿನಿಂದೆ ಸ್ವೀಕರಿಸುವುದು. ಅನರ್ಪಿತವ ವರ್ಜಿಸುವುದು. ಅಗ್ನಿಯೇ ಅಂಗವಾಗಿಪ್ಪುದೀಗ ಪ್ರಸಾದಿಸ್ಥಲ. ॥ಸಾಕ್ಷಿ॥ ಲಿಂಗಾರ್ಪಿತಂ ಪ್ರಸಾದಂಚ। ಲಿಂಗಧ್ಯಾನಂಚ ಸ್ಥಿಕರೊ ॥ ಸುಭೋಗೀಲಿಂಗಯುಕ್ತಾತ್ಮಂ ಅನರ್ಪಿತಂ ವರ್ಜಿತಂ ಪ್ರಸಾದಿಸ್ಥಲಮುತ್ತಮಂ ॥ ಇನ್ನು ಪ್ರಾಣಲಿಂಗಿಸ್ಥಲದ ವಿವರ- ಸುಗುಣವೇ ಲಿಂಗ ಪ್ರಾಣಿಯಯ್ಯಾ. ದುರ್ಗುಣವೇ ವಾಯು ಪ್ರಾಣಿಯಯ್ಯಾ. ಸುಗುಣ ನಿರ್ಗುಣವೆಂಬ ಉಭಯವನತಿಗಳೆದು ಸುಖದುಃಖ, ಸ್ತುತಿ ನಿಂದೆ, ಶತ್ರು ಮಿತ್ರಾದಿಗಳೆಲ್ಲರಂ ಸಮಾನಂಗಂಡು, ವಾಯುವೇ ಅಂಗವಾಗಿಪ್ಪುದೀಗ ಪ್ರಾಣಲಿಂಗಿಸ್ಥಲ ॥ಸಾಕ್ಷಿ॥ ಸುಖ ದುಃಖ ಸ್ತುತಿ ನಿಂದಾ। ಸುಗುಣ ನಿರ್ಗುಣಂತ್ಯಜೇತ್। ವಾಯುವಂಗಯುಕ್ತಾತ್ಮಂ ಶತ್ರು ಮಿತ್ರವರ್ಜಿತಂ ॥೧॥ ಇನ್ನು ಶರಣಸ್ಥಲದ ವಿವರ. ಸತಿಪತಿಭಾವ ಅಂಗಲಿಂಗವಾಗಿಪ್ಪುದು, ಪಂಚೇಂದ್ರಿಯ ಸುಖನಾಸ್ತಿಯಾಗಿಪ್ಪುದು, ಆಕಾಶವಂಗವಾಗಿಪ್ಪುದು ಶರಣಸ್ಥಲ ॥ಸಾಕ್ಷಿ॥ ಪತಿಲಿಂಗಂ ಸತಿಚಾಹಂ। ಇತಿಯುಕ್ತ ಸನಾತನಃ। ಪಂಚೇಂದ್ರಿಯ ಸುಖಂ ನಾಸ್ತಿ। ಶರಣಸ್ಥಲಮುತ್ತಮಂ॥ ಇನ್ನು ಐಕ್ಯಸ್ಥಲದ ವಿವರ. ಅರಿಷಡ್ವರ್ಗಂಗಳಿಲ್ಲದಿಹುದು, ಷಡೂ

ರ್ಮಗಳಿಲ್ಲದಿಹುದು, ಅಷ್ಟವಿಧಾರ್ಚನೆ ಇಲ್ಲದಿಹುದು, ಭಾವ ನಿರ್ಭಾವವಿ ಲ್ಲದಿಹುದು, ಉರಿ ಕರ್ಪುರ ಸಂಯೋಗದಂತಿಹುದು, ಆತ್ಮನೇ ಅಂಗವಾ ಗಿಪ್ಪುದು ಐಕ್ಯಸ್ಥಲ. ॥ಸಾಕ್ಷಿ॥ ಷಡೂರ್ಮಿಯೋಗಯುಕ್ತ ಷಡ್ವರ್ಗಂ । ನಾಸ್ತಿ ಚಾಷ್ಟ ವಿಧಾರ್ಚನಂ ॥ ನಿರ್ಭಾವಂ ಶಿವಲಿಂಗೈಕ್ಯಂ ಶಿಖಿ ಕರ್ಪುರಸಂಯೋಗವತ್ ॥ ಎಂದುದಾಗಿ ಹೀಗೆ ಗಣಂಗಳು ನಡೆವ ಮಾರ್ಗವನ್ನು ಎನ್ನೊಳಿರುಹಿದಾತ ನಮ್ಮ ಶಾಂತಕೂಡಲಸಂಗಮದೇವ.

೫. ಅಂದಿನವರಿಗೆ ಅಷ್ಟಾವರಣವು ಸಾಧ್ಯವಪ್ಪುದಲ್ಲದೆ ಇಂದಿನವರಿಗೆ ಸಾಧ್ಯವಾಗದೆಂಬರು. ಅದೇನು ಕಾರಣ ಸಾಧ್ಯವಲ್ಲ ಶ್ರೀ ಗುರುವೇ? ಅಂದಿನ ಸೂರ್ಯ ಚಂದ್ರ ಆತ್ಮ ಆಕಾಶ ವಾಯು ಅಗ್ನಿ ಅಪ್ಪು ಪೃಥ್ವಿಯೆಂಬ ಅಷ್ಟತನು ಮೂರ್ತಿಗಳು, ಅಂದಿನ ಹದಿನೆಂಟು ಧಾನ್ಯಂಗಳು, ಅಂದಿನವಾರ ತಿಥಿ ನಕ್ಷತ್ರಂಗಳು ಸಂವತ್ಸರಂಗಳು ಇಂದು ನಡೆವುದುಂಟು. ಅಂದಿನ ಅಷ್ಟಾವರಣ ಸ್ವರೂಪ ಇಂದುಂಟು. ಅಂದು ಇಂದೆಂಬ ಸಂದೇಹದ ಕೀಲಕಳೆದು ದಯಮಾಡೋ ಸದ್ಗುರುವೇ. ಕೇಳೈ ಮಗನೇ, ದೃಢವಿಡಿದು ಏಕಚಿತ್ತದಲ್ಲಿ ನಡೆವ ನಂಬಿಗೆಯುಳ್ಳ ಶಿವಭಕ್ತಂಗೆ ಅಂದೇನು, ಇಂದೇನು? ಶಿವಾಚಾರದಲ್ಲಿ ವಿಭೂತಿ ರುದ್ರಾಕ್ಷಿಯಲ್ಲಿ ವಿಶ್ವಾಸವಿದ್ದವರಲ್ಲಿ ದೃಢವಿದ್ದವರಲ್ಲಿಶಿವಮಂತ್ರವಲ್ಲದೆ, ಅನ್ಯಮಂತ್ರವಿಲ್ಲೆಂಬುವರಿಗೆ ಅಂದೇನು, ಇಂದೇನು? ಪಂಚಾಚಾರವೇ ಪ್ರಾಣವಾಗಿ ಅಷ್ಟಾವರಣವೇ ಅಂಗವಾಗಿಪ್ಪವರಿಗೆ ಅಂದೇನು, ಇಂದೇನು? ಪುರಾತನರ ವಚನವಿಡಿದು ನಡೆಯುವವರಿಗೆ ಆದಿ ಮಧ್ಯಾವಸಾನ ತಿಳಿದವರಿಗೆ, ಅಂದು ಇಂದೆಂಬ ಸಂದೇಹವಿಲ್ಲ, ಸ್ವಾಮಿ. ಎನ್ನಲ್ಲಿ ನೋಡಿದೊಡೆ ಹುರುಳಿಲ್ಲ. ಎನ್ನ ತಪ್ಪಿಂಗೇನೂ ಎಣೆ ಇಲ್ಲ, ನಿಮ್ಮ ಸೈರಣೆಗೆ ಲೆಕ್ಕವಿಲ್ಲ. ಮೇರು ಗುಣವನರಸುವದೇ ಕಾಗೆಯಲ್ಲಿ? ಪರುಷ ಗುಣವನರಸುವದೇ ಕಬ್ಬುನದಲ್ಲಿ? ನೀನು ಎನ್ನ ಗುಣವನರಸುವರೆ, ಎಂತು ಜೀವಿಸುವೆನಯ್ಯಾ? ಶಾಂತ ಕೂಡಲಸಂಗಮದೇವಾ ನಿಮ್ಮ ಧರ್ಮ, ನಿಮ್ಮ ಧರ್ಮ.

೬. ಗುರುವೇ ಪರಶಿವನು. ಗುರುವೇ ಸಕಲ ವಿದ್ಯಾ ಸ್ವರೂಪ, ಗುರುವೇ ಸಕಲ ಮಂತ್ರ ಸ್ವರೂಪನು. ಗುರುವೇ ಕಾಮಧೇನು. ಸರ್ವಧ್ಯಾನಕ್ಕೆ ಗುರುಧ್ಯಾನವೇ ಅಧಿಕ. ಸರ್ವ ಪೂಜೆಗೆ, ಗುರುವಿನ ಪಾದಪೂಜೆಯೇ ಅಧಿಕ. ಸರ್ವಮಂತ್ರಕ್ಕೆ ಗುರುವಾಕ್ಯವೇ, ಅಧಿಕ. ಸರ್ವಮುಕ್ತಿಗೆ, ಗುರು ಕೃಪೆಯೇ ಅಧಿಕ. ॥ಸಾಕ್ಷಿ॥ ಧ್ಯಾನ ಮೂಲಂ ಗುರೋರ್ಮೂ

ರ್ತಿಃ। ಪೂಜಾ ಮೂಲಂ ಗುರೋಃಪಾದಃ ॥ ಮಂತ್ರ ಮೂಲಂ ಗುರೋರ್ವಾ ಕ್ಯಂ। ಮುಕ್ತಿ ಮೂಲಂ ಗುರೋಃಕೃಪಾ॥ ಇಂತೆಂದುದಾಗಿ ಇಂತಿವೆಲ್ಲವ ನೊಳಕೊಂಡು ಎನ್ನ ಕರಸ್ಥಲಕ್ಕೆ ಇಷ್ಟ ಲಿಂಗ ಸ್ವರೂಪವಾಗಿ ಎನ್ನ ಮನಸ್ಥಲಕ್ಕೆ ಪ್ರಾಣಲಿಂಗ ಸ್ವರೂಪವಾಗಿ, ಎನ್ನ ಭಾವಸ್ಥಲಕ್ಕೆ ಭಾವಲಿಂಗ ಸ್ವರೂಪವಾಗಿ ಈ ತ್ರಿವಿಧ ಮೂರ್ತಿಯೇ ಅಷ್ಟಾವರಣ ಸ್ವರೂಪವಾಗಿ। ಎನ್ನ ರೂಹಿನಲ್ಲಿ ಗುರು ಎನ್ನ ಪ್ರಾಣದಲ್ಲಿ ಲಿಂಗ, ಎನ್ನ ಜ್ಞಾನದಲ್ಲಿ ಜಂಗಮ, ಎನ್ನ ಜಿಹ್ವೆಯಲ್ಲಿ ಪಾದೋದಕ, ಎನ್ನ ನಾಸಿಕದಲ್ಲಿ ಪ್ರಸಾದ ಎನ್ನ ತ್ವಕ್ಕಿನಲ್ಲಿ ವಿಭೂತಿ, ಎನ್ನ ನೇತ್ರದಲ್ಲಿ ರುದ್ರಾಕ್ಷಿ, ಎನ್ನ ಶ್ರೋತ್ರದಲ್ಲಿ ಪಂಚಾಕ್ಷರಿ ಇಂತೀ ಅಷ್ಟಾವರಣ ಸ್ವರೂಪವಾಗಿ ಎನ್ನೊಳು ತನ್ನ ಕರುಣ ಕೃಪೆಯ ತೋರಿದಾತನೆಮ್ಮ ಶಾಂತ ಕೂಡಲಸಂಗವ ದೇವ.

೭. ವಸ್ತುವೆಂದೊಡೆ ಪರಬ್ರಹ್ಮದ ನಾಮವು. ಅದು ಹೇಗೆಂದೊಡೆ, ಹರಿಸುರ ಬ್ರಹ್ಮಾದಿಗಳಿಗೆ ಅಗೋಚರವಾಗಿಪ್ಪದು. ಸಾಧ್ಯಕ್ಕಸಾಧ್ಯವಾಗಿಪ್ಪದು. ಭೇದ್ಯಕ್ಕಭೇದ್ಯವಾಗಿಪ್ಪದು. ಕೋಟಿ ಸೋಮ ಸೂರ್ಯ ಪ್ರಕಾಶಕ್ಕೆ ಮಿಗಿಲಾಗಿಪ್ಪದು. ಈರೇಳು ಭುವನವ ತುಂಬಿಕೊಂಡಿಪ್ಪದು. ಅಪ್ರಮಾಣ ಅಗೋಚರವಾದ ವಸ್ತುವು ಎನ್ನ ಕರ ಮನಭಾವದೊಳಗಿಪ್ಪ ಭೇದವ ತಿಳುಹಿದಾತ ನಮ್ಮ ಶಾಂತ ಕೂಡಲಸಂಗಮದೇವಾ.

೮. ಲಿಂಗದೊಳಗೆ ಅಖಿಳಾಂಡ ಕೋಟಿ ಬಹ್ಮಾಂಡಂಗಳಡಗಿಹವು. ಲಿಂಗವು ತಾನೇ ಬ್ರಹ್ಮಾಂಡದೊಳಡಗಿ, ಆ ಬ್ರಹ್ಮಾಂಡವು ಲಿಂಗವು ತನ್ನೊಳಡಗಿದ ಭೇದವ ಶಾಸ್ತ್ರಬಲ್ಲವರಿಗೆ ಕಾಣಿಸದು, ಆಗಮಯುಕ್ತರಿಗೆ ತಿಳಿಯದು, ಕರ್ಮಭೂಭಾರಿಗಳಿಗೆ ಸಲ್ಲದು. ಇದನ್ನು ಭಕ್ತಗಣಂಗಳಿಗೆ ಗುರುವು ಪ್ರತ್ಯಕ್ಷವಂ ಮಾಡಿ ತೋರಿಸಿದ್ದ ಭೇದವು ಎಂತೆಂದೊಡೆ, ಕರಿ ಕನ್ನಡಿಯೊಳಡಗಿದಂತೆ, ನೇತ್ರದ ಕೊನೆಯೊಳಗೆ ಆಕಾಶ ವಡಗಿದಹಾಗೆ, ಬೀಜದೊಳಡಗಿದ ವೃಕ್ಷದ ಹಾಗೆ, ಈ ಭೇದವು ಗುರುಭಕ್ತರಂತಿಕರಿಗೆ ಸಾಧ್ಯವಲ್ಲದೆ ಉಳಿದ ಭಿನ್ನಜ್ಞಾನಿಗಳೆತ್ತ ಬಲ್ಲರು ಎಂದಾತ ನಮ್ಮ ಶಾಂತ ಕೂಡಲಸಂಗಮದೇವಾ.

೯. ಗುರು, ಲಿಂಗ, ಶಿವ, ಭಕ್ತ, ಈ ಚತುರ್ವಿಧವು ಒಂದೇ ವಸ್ತು. ಇವು ಯೆಂಟಕ್ಷರಗಳಾದವು. ಆ ಎಂಟಕ್ಷರವೇ ಅಷ್ಟಾವರಣಂಗಳಾದವು. ಆ ಅಷ್ಟಾವರಣಂಗಳೇ ಇಪ್ಪತ್ತುನಾಲ್ಕು ಅಕ್ಷರವಾದವು. ಆ ಇಪ್ಪತ್ತುನಾಲ್ಕು ಅಕ್ಷರವೇ, ಚತುರ್ವಿಂಶತಿ ತತ್ವಂಗಳಾದವು. ಮತ್ತಂ, ಗುರು ಲಿಂಗ

ಜಂಗಮ ಪಾದೋದಕ ಪ್ರಸಾದ ಈ ಐದು ಒಂದೇ ವಸ್ತು ಹದಿನಾಲ್ಕು ಅಕ್ಷರಗಳಾದವು. ಆ ಹದಿನಾಲ್ಕು ಅಕ್ಷರಂಗಳೇ ಹದಿನಾಲ್ಕು ಭುವನಂಗಳಾದವು. ಮತ್ತೆ, ವಿಭೂತಿ ರುದ್ರಾಕ್ಷಿ ಪಂಚಾಕ್ಷರಿ ಇವು ಮೂರು ಒಂದೇ ವಸ್ತು. ಇವು ಮೂರು ಹತ್ತಕ್ಷರಗಳಾದವು. ಆ ದಶಾಕ್ಷರವೇ ದಶಗಂಗೆಗಳಾದವು. ಆ ದಶಾಕ್ಷರಗಳೇ ದಶವಿಧ ಪಾದೋದಕವಾದವು. ಇಂತಿವನೆಲ್ಲವ ನೊಳಕೊಂಡು ಎನ್ನ ಕರಸ್ಥಲದಲ್ಲಿ ಬಂದು ನಿಂದಾತ ನಮ್ಮ ಶಾಂತ ಕೂಡಲಸಂಗಮದೇವಾ.

೧೦. ನಮ್ಮ ಗಣಂಗಳ ಸಹವಾಸದಿಂದ ಏನೇನು ಫಲಪದವಿ ಎಂದೊಡೆ, ಅಷ್ಟಾವರಣಂಗಳು ಸಾಧ್ಯವಾದವು. ಸಾಧ್ಯವಾದ ಕಾರಣ, ಶ್ರೀ ಗುರುವು ಎನ್ನ ಕರಸ್ಥಲಕ್ಕೆ ಲಿಂಗವಕೊಟ್ಟು, ಎಂದೆಂದಿಗೂ ಸತಿಪತಿ ಭಾವ ತಪ್ಪಬೇಡೆಂದು, ಗಣಸಾಕ್ಷಿಯಂ ಮಾಡಿ ನೀನು ಅಂಗವಾಗಿ, ಅಂಗವೇ ಪ್ರಾಣವಾಗಿರಿ ಎಂದು ಇಬ್ಬರಿಗೂ ಆಜ್ಞೆಯ ಮಾಡಿದ ಕಾರಣ ಎನ್ನಂಗವೇ ನಿನ್ನಂಗ, ನಿನ್ನಂಗವೇ ಎನ್ನ ಪ್ರಾಣ, ಎನ್ನ ಪ್ರಾಣವೇ ನಿನ್ನ ಪ್ರಾಣ, ನಿನ್ನ ಪ್ರಾಣವೇ ಎನ್ನ ಪ್ರಾಣವಾದ ಮೇಲೆ, ಎನ್ನ ಮಾನಾಪಮಾನ ನಿನ್ನದೈಯ್ಯಾ. ಎನ್ನ ಹಾನಿ ವೃದ್ಧಿ ನಿಮ್ಮದೈಯ್ಯಾ. ನೀವು ಈರೇಳು ಲೋಕದ ಒಡೆಯರೆಂಬುದ ನಾನು ಬಲ್ಲೆನಯ್ಯಾ. ಬಲ್ಲೆನಾಗಿ ಪುರುಷನ ದೊರೆತನ ಹೆಂಡರಿಗಲ್ಲದೆ ಬೇರುಂಟೇ? ಎನ್ನ ಸುಖ ದುಃಖವೇ ನಿನ್ನದೈಯ್ಯಾ ನಿಮ್ಮ ಸುಖದುಃಖವೇ ಎನಗೈಯ್ಯಾ. ಎನ್ನತನು ಮನ ಧನವ ಸೂಸಲೀಯದೆ, ನಿಮ್ಮೊಡವೆಯ ನೀವೇ ಜೋಕೆಮಾಡಿಕೊಳ್ಳಿರಿ. ಜೋಕೆ ಮಾಡದಿದ್ದೊಡೆ, ಗಣಂಗಳಿಗೆ ಹೇಳುವೆನು. ಯಾಕಂದರೆ, ಗಣಂಗಳು ಸಾಕ್ಷಿಯಾಗಿರ್ದ ಕಾರಣ. ಆಗ ಮನೆಯ ಮಾತ ಹೇಳಬಹುದೇ ಎಂದೊಡೆ, ಎನಗೆ ಪಾತಿವ್ರತ್ಯವಿಲ್ಲ. ಸ್ವಾಮಿ ನಿಮ್ಮೊಡವೆಯ ನಿಮಗೊಪ್ಪಿಸೆಂದು ಅರುಹಿದಾತ ನಮ್ಮ ಶಾಂತ ಕೂಡಲಸಂಗಮದೇವಾ.

೧೧. ಈ ರೇಳು ಲೋಕವನೊಳಕೊಂಡ ಮಹಾಘನ ಲಿಂಗವು ಭಕ್ತನ ಕರಸ್ಥಳಕ್ಕೆ ಬಂದು ಪೂಜೆಗೊಂಬ ಪರಿಯ ನೋಡಾ. ಅಗಮ್ಯ ಅಗೋಚರ ಅಪ್ರಮಾಣ ಲಿಂಗಸಂಗದಲ್ಲಿ ಇರಬಲ್ಲಾತನೇ ಭಕ್ತನು. ಹೀಗಲ್ಲದೆ ಕೇಡಿಲ್ಲದ ಲಿಂಗಕ್ಕೆ ಕೇಡ ಕಟ್ಟಿ, ಹೋದೀತೋ, ಇದ್ದೀತೋ, ಹ್ಯಾಗೋ, ಎಂತೋ, ಎಂದು ಚಿಂತಿಸಿ ನುಡಿವರು ಭಿನ್ನಜ್ಞಾನಿಗಳು. ಆ ಲಿಂಗದೊಳಗೆ ಅಖಿಳಾಂಡ ಕೋಟಿ ಬ್ರಹ್ಮಾಂಡಂಗಳಡಗಿಹವು. ॥ಸಾಕ್ಷಿ॥ ಲಿಂಗವು

ಧ್ಯೈ ಜಗತ್ಸರ್ವಂ ತ್ರೈಲೋಕ್ಯ ಸಚರಾಚರಂ। ಲಿಂಗ ಬಾಹ್ಯ ಪರಂ ನಾಸ್ತಿ ತಸ್ಮಾತ್ ಲಿಂಗಂ ಪ್ರಪೂಜ ಯೇತ್ ॥ ಎಂದುದಾಗಿ ಇಂತಪ್ಪ ಘನ ಲಿಂಗವ ಶ್ರೀ ಗುರು ಭಕ್ತಂಗೆ ಕರಮನ ಭಾವಕ್ಕೆ ಪ್ರತ್ಯಕ್ಷವಾಗಿ ಮಾಡಿ ಕೊಟ್ಟಬಳಿಕ ಅಗಲಲುಂಟೇ? ಹೀಗೆ ಆವಶಾಸ್ತ್ರ ಆವ ಆಗಮ ಆವ ವಚನ ಹೇಳಿಲ್ಲವಾಗಿ, ಮತ್ತಂ ಸಂಪಿಗೆಯ ಪುಷ್ಪದ ಪರಿಮಳವು ಎಳ್ಳೆಣ್ಣೆಯ ಬೆರೆದಮೇಲೆ, ಆ ಸಂಪಿಗೆಯ ಪುಷ್ಪದ ಪರಿಮಳ ಬೇರೆ ಆಗಲ ಲುಂಟೆ? ಹಾಗೆ ಭಕ್ತನ ಅಂಗದಲ್ಲಿ ಬೆರೆದ ಬಳಿಕ ಲಿಂಗವ ಅಗಲಲುಂಟೆ? ಇಂತಪ್ಪ ಮಹಾಘನ ಲಿಂಗವು ಹೇಗಿಪ್ಪದೋ ಎಂದೊಡೆ ಅವರವರ ಮನ ಭಾವ ಹೇಗಿಪ್ಪದೋ ಹಾಗಿಪ್ಪದು. ಇವಕ್ಕೆ ದೃಷ್ಟ. ಉದಕ ಒಂದೇ ಹಲವು ವೃಕ್ಷದಲ್ಲಿ ಹೊಕ್ಕು ಮಧುರ, ಕಾರ, ಒಗರು, ಹುಳಿ, ಉಪ್ಪು, ಕಹಿ ಮೊದಲಾದ ಹಲವು ಪ್ರಕಾರದ ಹಣ್ಣು ಫಲಂಗಳು, ಉದಕ ಒಂದೇ. ಶ್ವೇತ, ಪೀತ, ಹರಿತ, ಮಾಂಜಿಷ್ಟ ಕಪೋತ ಮಾಣಿಕ್ಯ ಈ ಆರು ವರ್ಣಂಗಳಲ್ಲಿ ಬೆರೆದುದು ಅಭ್ರಕ ಒಂದೇ. ಈ ಅಭ್ರಕ ಹ್ಯಾಗೋ ಮನ ಹಾಗೆ ಘನ ಮಹಾಲಿಂಗ, ಹೀಗೆಂದರು ಹಿದಾತ ನಮ್ಮ ಶಾಂತ ಕೂಡ ಲಸಂಗಮದೇವ.

೧೨. ಸತ್ತು ಚಿತ್ತಾನಂದ ನಿತ್ಯಪರಿಪೂರ್ಣ ಮಹಾಘನಲಿಂಗವು ಭಕ್ತನ ತನುತ್ರಯಕ್ಕೆ ಸಾಕಾರವಾಗಿ, ಇಷ್ಟ ಪ್ರಾಣ ಭಾವಲಿಂಗವಾಗಿರ್ದ ಕಾರಣ ನಡೆವುತ್ತ ನುಡಿವುತ್ತ ಸರ್ವಾವಸ್ಥೆಯಲ್ಲಿ ಲಿಂಗದೊಳಗಿಪ್ಪಾತನೇಭಕ್ತ. ಹೀಗಲ್ಲದೆ ನಿತ್ಯವಾದ ಲಿಂಗವ ಅನಿತ್ಯವೆಂದು, ಸಂಕಲ್ಪ ವಿಕಲ್ಪ ಸಂದೇಹದಿಂದ ಅದನು ನುಡಿದು ಆ ಮಹಾಘನಲಿಂಗವ ನಂಬದವರಿಗೆ ಆತನು ಇಂಬಾಗಿಪ್ಪನು. ವಿಶ್ವಾಸದಿಂದ ಗೊಲ್ಲಾಳಯ್ಯಂಗೆ ಕುರಿಹಿಕ್ಕೆ ಲಿಂಗವಾದುದಿಲ್ಲವೆ? ಸದ್ಭಾವದಿಂದ ಬಳ್ಳೇಶ ಮಲ್ಲಯ್ಯಂಗೆ ಬಳ್ಳ ಲಿಂಗವಾದುದಿಲ್ಲವೇ? ಭಾವದಿಂದ ನಂಬೆಣ್ಣಂಗೆ ಅಂಗನೆಯ ಕುಚ ಲಿಂಗವಾದುದಿಲ್ಲವೆ? ವಿಶ್ವಾಸದಿಂದ ಕೆಂಭಾವಿ ಭೋಗಣ್ಣಂಗೆ ಲಿಂಗ ಒಡನೆ ಹೋದುದಿಲ್ಲವೇ? ಮತ್ತೆ ಇಷ್ಟಲಿಂಗದೊಳಗೆ ನೀಲಲೋಚನೆಯಮ್ಮ ಶರೀರವೇ ಏಕಾಕಾರವಾಗಲಿಲ್ಲವೇ? ॥ಸಾಕ್ಷಿ॥ ಕರ್ಪೂರ ಮನಲಂ ಗ್ರಾಹ್ಯಂ ರೂಪಂ ನಾಸ್ತಿ ನಿರಂತರಂ। ತಥಾ ಲಿಂಗಾಂಗ ಸಂಯೋಗೇ। ತತ್ಪದೆ ನಿರ್ಣಯೇ ಯೋಗಾತ್॥ ಎಂದುದಾಗಿ ಇಂತಪ್ಪ ಮಹಾಘನ ಲಿಂಗದ ನಿಲವನರುಹಿದಾತ ನಮ್ಮ ಶಾಂತ ಕೂಡಲ ಸಂಗಮದೇವಾ.

೧೩. ಘಟಾಕಾಶ, ಮಠಾಕಾಶ, ಮಹದಾಕಾಶ ಆವಾವೆಂದೊಡೆ, ಘಟಾಕಾಶವೇ ಇಷ್ಟಲಿಂಗಕ್ಕೆ ಮನೆಯಾಗಿಪ್ಪುದು. ಜಿಹ್ವೆಯೇ ತಾಯಾಗಿಪ್ಪುದು ನೇತ್ರವೇ ತಂದೆಯಾಗಿಪ್ಪುದು. ದ್ವಿಕರ್ಣಂಗಳೇ ಅಣ್ಣತಮ್ಮಂದಿರಾಗಿಪ್ಪರು. ಹಸ್ತಪಾದಂಗಳೇ ಕುಟುಂಬವಾಗಿಪ್ಪವು. ಚಿತ್ತಶುದ್ಧವೇ ಅರಮನೆಯಾಗಿಪ್ಪುದು. ಇವರು ಇಷ್ಟಲಿಂಗಕ್ಕೆ ಉಪಚರಿಸುತ್ತಿಹರು. ಇನ್ನು ಮಠಾಕಾಶವೇ ಪ್ರಾಣಲಿಂಗಕ್ಕೆ ಮನೆಯಾಗಿಪ್ಪುದು. ಸತ್ಯವೇ ತಾಯಾಗಿಪ್ಪುದು. ಜ್ಞಾನವೇ ತಂದೆಯಾಗಿಪ್ಪುದು. ಧರ್ಮವೇ ಅಣ್ಣತಮ್ಮಂದಿರಾಗಿಪ್ಪರು. ದಯವೇ ಗೆಳೆಯನಾಗಿಪ್ಪುದು. ಶಾಂತಿಯೇ ಸ್ತ್ರೀಯಾಗಿಪ್ಪಳು. ಕ್ಷಮೆಯೇಪುತ್ರರಾಗಿಹರು ಇವರು ಬಂಧುಗಳಾಗಿ, ಪ್ರಾಣಲಿಂಗಕ್ಕೆ ಉಪಚರಿಸುತ್ತಿಹರು. ಇನ್ನು ಮಹದಾಕಾಶವೇ ಭಾವಲಿಂಗಕ್ಕೆ ಮನೆಯಾಗಿಪ್ಪುದು ತೃಪ್ತಿಯೇ ತಾಯಾಗಿಪ್ಪಳು. ಆನಂದವೇ ತಂದೆಯಾಗಿಪ್ಪನು. ಸಂತೋಷವೇ ಅಣ್ಣತಮ್ಮಗಳಾಗಿಪ್ಪರು. ಹರುಷಾಬ್ಧಿಯೇ ಸ್ತ್ರೀಯಾಗಿಪ್ಪಳು.ಕ್ಷಮೆಯೇಗೆಳೆಯರಾಗಿಹರು. ಸದ್ಭಾವವೇ ಮಕ್ಕಳಾಗಿಹರು. ಇವರು ಬಂಧುಗಳಾಗಿ ಭಾವಲಿಂಗಕ್ಕೆ ಉಪಚರಿಸುತ್ತಿಹರು. ॥ಸಾಕ್ಷಿ॥ ಮಾತಾ ಜಿಹ್ವೆ ಪಿತಾ ಚಕ್ಷು। ದ್ವಿಕರ್ಣಶ್ಚ ಸಹೋದರ ಹಸ್ತಪಾದ ಕುಟುಂಬೇನ। ಚಿತ್ತೇನ ಶುದ್ಧತೆ ಮಠ॥ ಸತ್ಯ ಮಾತಾ ಪಿತಾ ಜ್ಞಾನ। ಧರ್ಮಭ್ರಾತಾ ದಯಾ ಸಖಾ। ಶಾಂತಿ ಪತ್ನಿ ಕ್ಷಮಾ ಪುತ್ರ ಷಡ್ಯೆತೆಮಮ ಬಾಂಧವಃ॥ ತೃಪ್ತಿಮಾತಾನಂದ ಪಿತಾ। ಸಂತೋಷಶ್ಚ ಸಹೋದರಾ। ಹರುಷಸ್ತ್ರೀ ಕ್ಷಮಾಮಿತ್ರ। ಸದ್ಭಾವೇನ ಪುತ್ರಸ್ತಥಾ॥ ಘಟಾಕಾಶವೆಂದೊಡೆ ಜೀವಾತ್ಮ, ಮಠಾಕಾಶವೆಂದೊಡೆ ಅಂತರಾತ್ಮ, ಮಹದಾಕಾಶವೆಂದೊಡೆ ಪರಮಾತ್ಮ. ಚನ್ನಂಗಿಬೇಳೆಗಿಂದ ಸಣ್ಣನಾಗಿಪ್ಪ ನೇತ್ರವು ತ್ರಿವಿಧ ಲಿಂಗ ತ್ರಿವಿಧಾಕಾಶವನೊಳಕೊಂಡ ಭೇದವ ನಮ್ಮ ಶಾಂತಕೂಡಲ ಸಂಗಮದೇವ ಬಲ್ಲನಲ್ಲದೆ ಕಣ್ಣಿಗೆಟ್ಟಣ್ಣಗಳೆತ್ತ ಬಲ್ಲರು?

೧೪. ಅಖಂಡ ಗೋಳಕಾಕಾರ ಮಹಾಲಿಂಗದ ಪೂಜೆ ಎಂತೆಂದೊಡೆ ಸದ್ಯೋಜಾತ ಮುಖದಿಂದಾದ ಪೃಥ್ವಿ, ಪತ್ರೆ, ಪುಷ್ಪ ಲಿಂಗಕ್ಕೆ ಬೇಕೆಂದು ಅನಂತ ಪತ್ರಿ ಪುಷ್ಪಗಳಿಂದ ಅರ್ಚಿಸುತ್ತಿಹುದು. ವಾಮದೇವ ಮುಖದಿಂದಾದಪ್ಪು ಲಿಂಗಕ್ಕೆ ಮಜ್ಜನಕ್ಕೆರೆಯಬೇಕೆಂದು ಸಪ್ತ ಸಮುದ್ರ ದಶಗಂಗೆಗಳ ಕುಂಭವ ಮಾಡಿ ಕೆರೆಬಾವಿಗಳ ಪಂಚಪಾತ್ರೆಯ ಮಾಡಿ ಮಜ್ಜನ ನೀಡಿಸುತ್ತಿಹುದು. ಅಘೋರಮುಖದಿಂದಾದಗ್ನಿ ಲಿಂಗಕ್ಕೆಧೂಪದೀಪ ಆರುತಿಗಳಾಗಬೇಕೆಂದು ಕಾಷ್ಠದಲ್ಲಿ ಪಾಷಾಣದಲ್ಲಿ ಬೆಳಗುತ್ತಿಹುದು. ತತ್ಪುರುಷ ಮುಖ

ದಿಂದಾದ ವಾಯು ಲಿಂಗಕ್ಕೆ ಜಪವ ಮಾಡಿಸುತ್ತಿಹುದು. ಈಶಾನ್ಯ ಮುಖ ದಿಂದಾದ ಆಕಾಶ ಲಿಂಗಕ್ಕೆ ಭೇರಿ ಮೊದಲಾದ ನಾದಂಗಳು ಬಾರಿಸುತ್ತಿ ಹುದು. ಗೋಪ್ಯ ಮುಖದಿಂದಾದ ಆತ್ಮನು ಲಿಂಗಕ್ಕೆ ಸಿಂಹಾಸನವಾಗಿ ರ್ಪುದು. ಮನ ಚಕ್ಷುವಿನಿಂದಾದ ಚಂದ್ರ ಸೂರ್ಯರು ದೀವಿಗೆಗಳಾಗಿ ಹರು. ಇಂತಪ್ಪ ಘನವಸ್ತುವು ಎರಡಾಗಿ ತನ್ನ ವಿನೋದಕ್ಕೆ, ಅರ್ಪಿಸಿಕೊಂ ಬಾತನು ತಾನೇ, ಅರ್ಪಿಸುವಾತನು ತಾನೇ. ಇಂತಪ್ಪ ಘನಲಿಂಗವು ಎನ್ನ ಕರಸ್ಥಲದೊಳಗೆ ಚುಳಕಾಗಿ ನಿಂದಸಿಲವ ಎನ್ನೊಳಗಿರುಹಿದಾತ ನಮ್ಮ ಶಾಂತ ಕೂಡಲಸಂಗಮದೇವಾ.

೧೫. ಲಿಂಗಾಂಗ ಸಮರಸದ ವಿವರವ ಕರುಣಿಸು ಸ್ವಾಮಿ. ಕೇಳ್ಳೈ ಮಗನೇ. ಮುಖಪ್ರಕ್ಷಾಲನವ ಮಾಡುವಾಗ ಅಂಗಕ್ಕೆ ಮಜ್ಜನವ ನೀಡಿ ದುದು ಇಷ್ಟಲಿಂಗದ ಮಜ್ಜನ. ಮತ್ತೆ ಲಿಂಗಾರ್ಚನೆಯ ಮಾಡುವಾಗ್ಗೆ ಕ್ರಿಯೆವಿಟ್ಟು ಲಿಂಗಕ್ಕೆ ಮಜ್ಜನ ನೀಡಿದುದು ಪ್ರಾಣಲಿಂಗದ ಮಜ್ಜನವು. ಲಿಂಗಾರ್ಚನೆ ಮುಗಿದ ಬಳಿಕ ಮತ್ತೆ ಮಜ್ಜನ ನೀಡಿದುದು ಭಾವಲಿಂ ಗದ ಮಜ್ಜನ ಎಂದರಿವುದು. ಇನ್ನು ವಿಭೂತಿಯ ಧರಿಸುವ ಕ್ರಮವೆಂ ತೆಂದೊಡೆ, ಸ್ನಾನ, ಧೂಳಣ, ಧಾರಣ. ಸ್ನಾನ ಮಾಡಿದುದು ಇಷ್ಟಲಿಂ ಗದಲ್ಲಿ, ಧೂಳನವ ಮಾಡಿದುದು ಪ್ರಾಣಲಿಂಗದಲ್ಲಿ, ಧಾರಣವಮಾಡಿದುದ್ಯ ಭಾವಲಿಂಗದಲ್ಲಿ ಎಂದರಿವುದು. ಇನ್ನು ಲಿಂಗಪೂಜೆ, ಹೊರಗಣ ಪುಷ್ಪ ಇಷ್ಟಲಿಂಗಕ್ಕೆ, ಒಳಗಣ ಕಮಲದ ಪುಷ್ಪ ಪ್ರಾಣಲಿಂಗಕ್ಕೆ, ಬಯಲ ಪುಷ್ಪ ಭಾವಲಿಂಗಕ್ಕೆಂದರಿವುದು. ಇನ್ನು ಜಪದ ಕ್ರಮವು. ಹನ್ನೆರಡು ಪ್ರಣ ಮ ಮೊದಲಾದ ಪಂಚತತ್ವವಡೆದ ಜಪ ಇಷ್ಟಲಿಂಗಕ್ಕೆ, ಒಳಗಣ ಜಪ ಇಪ್ಪತ್ತೊಂದು ಸಾವಿರದ ಆರುನೂರು ಪ್ರಾಣಲಿಂಗಕ್ಕೆ, ಬಯಲ ಜಪ ಭಾವಲಿಂಗಕ್ಕೆ ಎಂದರಿವುದು. ಇನ್ನು ತ್ರಿಕಾಲಪೂಜೆ. ಉದಯಕಾಲದ ಪೂಜೆ ಇಷ್ಟಲಿಂಗಕ್ಕೆ, ಮಧ್ಯಾಹ್ನಕಾಲದ ಪೂಜೆ ಪ್ರಾಣಲಿಂಗಕ್ಕೆ, ಸಾ ಯಂಕಾಲದ ಪೂಜೆ ಭಾವಲಿಂಗಕ್ಕೆಂದರಿವುದು. ಇನ್ನು ಪ್ರಸಾದತ್ರಯ ದ ವಿವರ. ಶುದ್ಧಪ್ರಸಾದ ಇಷ್ಟಲಿಂಗಕ್ಕೆ, ಸಿದ್ಧಪ್ರಸಾದ ಪ್ರಾಣಲಿಂಗಕ್ಕೆ ಪ್ರಸಿದ್ಧಪ್ರಸಾದ ಭಾವಲಿಂಗಕ್ಕೆಂದರಿವುದು. ಇನ್ನು ಭೋಗತ್ರಯದ ವಿವ ರ. ಭೋಜನಸುಖವು ಇಷ್ಟಲಿಂಗಕ್ಕೆ. ತನ್ನ ಸ್ತ್ರೀಸಂಗದ ಸುಖವು ಪ್ರಾ ಣಲಿಂಗಕ್ಕೆ, ವಸ್ತ್ರಾಭರಣದ ಸುಖವು ಭಾವಲಿಂಗಕ್ಕೆಂದರಿವುದು. ಇನ್ನು ಲಿಂಗಾಂಗಿಯ ಚರಿತ್ರದ ವಿವರ. ನಿಂತಿರ್ದುದೆ ಇಷ್ಟಲಿಂಗಕ್ಕೆ, ಕುಳಿತಿ

ರ್ದುದೇ ಪ್ರಾಣಲಿಂಗಕ್ಕೆ, ಮಲಗಿರ್ದುದೆ ಭಾವಲಿಂಗಕ್ಕೆ ಎಂದರಿವುದು. ಇನ್ನು ನಡೆದುದೇ ಇಷ್ಟಲಿಂಗಕ್ಕೆ, ನುಡಿದುದೇ ಪ್ರಾಣಲಿಂಗಕ್ಕೆ, ಪಿಡಿದು ನೋಡುವ ಸುಖ ಭಾವಲಿಂಗಕ್ಕೆಂದರಿವುದು. ಇನ್ನು ಇಷ್ಟಲಿಂಗದಗರ್ಭದೊಳಗೆ ತನ್ನ ಶರೀರವನಿಟ್ಟು ಬ್ರಹ್ಮರಂಧ್ರದೊಳಗಿಹ ಸಹಸ್ರದಳ ಕಮಲದೊಳಗೆ ಆ ಇಷ್ಟಲಿಂಗವ ಮುಳಗಿಸುವದೀಗ ಲಿಂಗಾಂಗವು. ಇನ್ನು ನೇತ್ರ ಸ್ಥಾನದಲ್ಲಿರ್ದ ವಿಶ್ವಜೀವನ ಜಾಗ್ರಾವಸ್ಥೆ ಸ್ಥೂಲತನುವಿನ ವ್ಯವಹರಣೆ ಇಷ್ಟಲಿಂಗವೆಂದರಿವುದು. ಕಂಠಸ್ಥಾನದಲ್ಲಿರ್ದ ತೈಜಸಜೀವನ ಸ್ವಪ್ನಾವಸ್ಥೆ ಸೂಕ್ಷ್ಮತನುವಿನ ವ್ಯವಹರಣೆ ಪ್ರಾಣಲಿಂಗವೆಂದರಿವುದು. ಹೃದಯ ಸ್ಥಾನದಲ್ಲಿರ್ದ ಪ್ರಾಜ್ಞಜೀವನ ಸುಷುಪ್ತಾವಸ್ಥೆ ಕಾರಣ ತನುವಿನ ವ್ಯವಹರಣೆ ಭಾವಲಿಂಗವೆಂದರಿವುದು. ಇನ್ನು ಆಯತ ಇಷ್ಟಲಿಂಗವು, ಸ್ವಾಯತ ಪ್ರಾಣಲಿಂಗವು, ಸನ್ನಿಹಿತ ಭಾವಲಿಂಗವೆಂದರಿವುದು. ಇನ್ನು ಪಾತಾಳಲೋಕವನೊಳಕೊಂಡು ಇಷ್ಟಲಿಂಗವಿಹುದು. ಮರ್ತ್ಯಲೋಕವನೊಳಕೊಂಡು ಪ್ರಾಣಲಿಂಗವಿಹುದು. ಸ್ವರ್ಗಲೋಕವನೊಳಕೊಂಡು ಭಾವಲಿಂಗವಿಹುದು. ಈರೇಳುಲೋಕವ ನೊಳಕೊಂಡಿದ್ದು ಪ್ರಾಣಲಿಂಗವು ಚರ್ಮ ಚಕ್ಷುವಿಗೆ ಅಗೋಚರವು. ಮನೋನೇತ್ರಕ್ಕೆ ಒಂದೆರಡಾಗಿ ಕಾಣಲ್ಪಟ್ಟದೀಗ ಪ್ರಾಣಲಿಂಗವು ಆ ಪ್ರಾಣಲಿಂಗಕ್ಕೆ ಎರಡು ನೇತ್ರಂಗಳು ಪುಷ್ಪವಾಗಿಪ್ಪುದೀಗ ಲಿಂಗಾಂಗ ಸಂಗವು. ಇನ್ನು ರೂಪಾಗಿ ಬಂದ ಪದಾರ್ಥವನು ಭೋಗಿಸುವದು ಇಷ್ಟಲಿಂಗವು ತಾನೆ. ರುಚಿಯಾಗಿ ಬಂದ ಪದಾರ್ಥವನು ಭೋಗಿಸುವದೀಗ ಪ್ರಾಣಲಿಂಗವು. ತಾನ ತೃಪ್ತಿಯಾಗಿ ಬಂದ ಪದಾರ್ಥವನು ಭೋಗಿಸುವದೀಗ ಭಾವಲಿಂಗವು ತಾನೆ. ॥ಸಾಕ್ಷಿ॥ ಇಷ್ಟಲಿಂಗಾರ್ಪಿತಂ ಅಂಗಂ। ಪ್ರಾಣಲಿಂಗಾರ್ಪಿತಂ ಮನಃ। ಭಾವಲಿಂಗಾರ್ಪಿತಂ ತೃಪ್ತಿರಿತಿಭೇದವರಾನನೇ ॥ ಎಂದುದಾಗಿ ಅಂಗವೆಂದರೆ ರೂಪು, ಮನವೆಂದರೆ ರುಚಿ, ಸಂತೋಷವೆಂದರೆ ತೃಪ್ತಿ, ಎಂದರಿವುದು. ಕ್ರಿಯೆವಿಡಿದು ಕಾಯಾರ್ಪಣವ ಮಾಡುವ ಷಡ್ವಿಧಲಿಂಗದ ಸುಖವ ಭೋಗಿಸುವದು ಇಷ್ಟಲಿಂಗವು ತಾನೆ. ಜ್ಞಾನವಿಡಿದು ಕರಣಾರ್ಪಣವ ಮಾಡುವ ಮೂವತ್ತಾರುಲಿಂಗದ ಸುಖವ ಭೋಗಿಸುವದು ಪ್ರಾಣಲಿಂಗವು ತಾನೆ. ಭಾವವಿಡಿದು ಪರಿಣಾಮಾರ್ಪಣವ ಮಾಡುವ ಇನ್ನೂರು ಹದಿನಾರು ಲಿಂಗದ ಸುಖವ ಭೋಗಿಸುವದು ಭಾವಲಿಂಗವು ತಾನೆ. ಸಾವಿರದ ಇನ್ನೂರು ತೊಂಬತ್ತಾರು ಲಿಂಗ ಇಂತಪ್ಪ ಬಯಲಲಿಂಗಕ್ಕೆ ನಿಲುಕದ ಬಯಲಹಸ್ತ

ದಿಂ ಪೂಜಿಸಿ ಬಯಲಲಿಂಗದೊಳಗೆ ತಾನಾಗಿ ತನ್ನೊಳಗೆ ಬಯಲ ಲಿಂಗವ ಬೆರಿದುದು, ಇದು ಲಿಂಗಾಂಗ ಸಂಗಸಮರಸವು, ಇದು ಶರಣಸತಿ ಲಿಂಗಪತಿ ನ್ಯಾಯವು, ಇದು ತ್ರಿವಿಧ ತನುವ ತ್ರಿಲಿಂಗಕ್ಕೆ ಅರ್ಪಿಸುವ ಕ್ರಮವು. ಇಂತಿವೆಲ್ಲ ಕ್ರಮವನೊಳಕೊಂಡು ಇಷ್ಟ ಬ್ರಹ್ಮ ತಾನೆಂದರು ಓದಾತ ನಮ್ಮ ಶಾಂತಕೂಡಲಸಂಗಮದೇವ.

೧೬ ನಾಲ್ಕುವೇದ, ಆರುಶಾಸ್ತ್ರ, ಹದಿನೆಂಟು ಪುರಾಣ, ಇಪ್ಪತ್ತೆಂಟು ದಿವ್ಯಾಗಮಂಗಳು ಇವು ಯಾಕೆ ನಿರ್ಮಾಣ ಮಾಡಿದಿರಿ ಸ್ವಾಮಿ, ದಯದಿಂದೆ ಕರುಣಿಪುದು ಕೇಳೈಮಗನೆ, ಹರಿಸುರ ಬ್ರಹ್ಮಾದಿಗಳು ದೇವದಾನವ ಮಾನವರುಗಳು ಎಂಬತ್ತೆಂಟುಕೋಟಿ ಮುನಿಗಳು ಇವರೆಲ್ಲ ರುಮನವಳಲಿಸಿಹೆವೆಂದು ಬಿನ್ನಹಮಾಡಿ ಕೊಳಲು ಶಿವನು ಸರ್ವಶೃತಿ ಸ್ಮೃತಿ, ಶಾಸ್ತ್ರಗಳನು ನಿರ್ಮಾಣವಮಾಡಿದನು. ವೇದಾಂತ ತತ್ವಮಥಿಕಂ ನವನೀತಸಾರ ಎಂಬುದಾಗಿ ವೇದ ವೊದಲಾದವೆಲ್ಲವು ಮಜ್ಜಿಗೆಯ ಹಾಗೆ, ಪುರಾತನರ ವಚನಗಳು, ಗುರುವಾಕ್ಯವೆಲ್ಲವೂ ಬೆಣ್ಣೆಯಹಾಗೆ. ಈ ಗುರುವಾಕ್ಯವಿಡಿದು ಲಿಂಗದಲ್ಲಿ ಮನವ ನಿಲಿಸಿದೊಡೆ ಸರ್ವಶಾಸ್ತ್ರವೇಕೆ? ಮನವು ಲಿಂಗದಲ್ಲಿ ನಿಲ್ಲದಿರ್ದೊಡೆ ಏನು ಮಾಡಿದಡೂ ನಿಷ್ಫಲ. ಇದನು ಜ್ಞಾನಿಗಳು ತಿಳಿದು ಗುರುಕಾರುಣ್ಯ ಕೃಪೆಯಿಂದ ತಿಳಿದು, ಲಿಂಗದಲ್ಲಿ ಬೆರೆದು ಲಿಂಗವೇ ತಾನುತಾನಾಗಿ ಜ್ಯೋತಿ ಜ್ಯೋತಿ ಕೂಡಿದಂತೆ ನಿಜಲಿಂಗೈಕ್ಯವಾದರು, ಎಂದಾತ ನಮ್ಮ ಶಾಂತ ಕೂಡಲಸಂಗಮದೇವ.

೧೭. ಲಿಂಗವೇ ನಿಮ್ಮ ನೆನೆವ ಮನಕ್ಕೆ ಹೊನ್ನ ತೋರಿ, ನಿಮ್ಮ ನೋಡುವ ನೋಟಕ್ಕೆ ಹೆಣ್ಣ ತೋರಿ, ನಿಮ್ಮ ಪೂಜಿಸುವ ಕೈಗೆ ಮಣ್ಣ ತೋರಿ, ಗಣಂಗಳು ಸಾಕ್ಷಿಯಾಗಿದ್ದುದ ತಿಳಿದು, ಅವರಿಗೆ ಅಂಜಿ ಮನದ ಕೊನೆಯಲ್ಲಿ ಮಂತ್ರ ರೂಪವಾಗಿ ನಿಂದಕಾರಣ, ಹೊನ್ನಿನ ನೆನಹು ಕೆಟ್ಟಿತ್ತು, ನೋಡಾ. ಪರಶಿವ ಮೂರ್ತಿಯ ಮುದ್ದು ಮೊಗದ ತುಟಿಯಲ್ಲಿ ಹುಟ್ಟಿದ ಓಂಕಾರನಾದಾಮೃತವ ಚುಂಬನವ ಮಾಡಲಿಕ್ಕೆ ಹೆಣ್ಣಿನ ನೋಟ ಕೆಟ್ಟಿತ್ತು. ಕರಕಮಲವ ಗದ್ದುಗೆಯ ಮಾಡಿದ ಕಾರಣ ಮಣ್ಣಿನ ಧಾವತಿ ಬಿಟ್ಟು ಹೋಯಿತ್ತು. ಇಂತು ಮಾಡಿದಿರಿ ಲಿಂಗವೇ. ಮತ್ತೆ ನಿಮ್ಮ ಬೇಡಿದರೆ, ಅಷ್ಟೈಶ್ವರ್ಯ ಚತುರ್ವಿಧ ಪದಗಳನ್ನು ಕೊಡುವಿರಿ. ಇವೆಲ್ಲ ಅಲ್ಪ ಸುಖ ತಾಮಸಕಿಕ್ಕುವವು. ಮತ್ತೆ ನಮ್ಮ ಗಣಂಗಳ ಮನೆಯಲ್ಲಿ ಕೇಡಿಲ್ಲದಂಥ ನಿತ್ಯವಾದ ವಸ್ತು ಅಷ್ಟೈಶ್ವರ್ಯಗಳು ನಿಧಿನಿಧಾನಗಳುಂಟು. ಅದಕ್ಕೆ ನಾವು

ನೀವು ಕೂಡಿ ಬೇಡಿಕೊಂಬುವ ಬನ್ನಿರಿ. ಅವರಿರುವ ಸ್ಥಲವ ತೋರಿಕೊಡಿರಿ ಎಲೆ ಲಿಂಗವೇ. ಗಣಂಗಳು ಇರುವ ಸ್ಥಲವು ಆವುದೆಂದೊಡೆ, ಏಳುಪ್ಪರಿಗೆ ಯಲ್ಲಿಪ್ಪವು. ಅವರ ನಾಮುಗಳ ಪೇಳ್ವೆನು. ಪಶ್ಚಿಮ ಚಕ್ರದಲ್ಲಿ ನಿರಂಜನ ಜಂಗಮವು ಗುರು ಹಿರಿಯರು ಅಸಂಖ್ಯಾತ ಮಹಾ ಗಣಂಗಳು ಸಹವಾಗಿಪ್ಪರು. ಅವರ ಮಧ್ಯದಲ್ಲಿ ನೀವೇ ನಾವಾಗಿ ಬೇಡಿಕೊಂಬೆವು. ಬೇಡಿಕೊಂತ ಮೇಲೆ, ಅವರು ಕೊಟ್ಟ ವಸ್ತುವ ಹೇಳಿಹೆನು ಕೇಳಿರಿ ಲಿಂಗವೇ. ಅವು ಯಾವವೆಂದೊಡೆ, ಜೀವಾತ್ಮ, ಅಂತರಾತ್ಮ, ಪರಮಾತ್ಮರೆಂಬ ಆತ್ಮತ್ರಯವು. ಹೇಮಾದ್ರಿ, ರಜತಾದ್ರಿ, ಮಂದರಾದ್ರಿ ಎಂಬ ಮೇರುಗಳ ಸೆಜ್ಜೆಯ ಮಾಡಿ, ವಾಯುವನೇ ಶಿವದಾರವ ಮಾಡಿ, ತನುತ್ರಯುವನೇ ವಸ್ತ್ರವ ಮಾಡಿ, ಇವುಗಳನೆ ಅವರು ನಮಗೆ ಕೊಟ್ಟರು. ಅಲ್ಲದೆ ಪರಸ್ತ್ರೀಯರ ಅಪ್ಪದ ಹಾಗೆ ನಿಃಕಾಮವೆಂಬ ಉಡುಗೊರೆಯ ಮಾಡಿ ಕಟಿಯಲಿಟ್ಟರು. ಕುಶಬ್ದವ ಕೇಳದ ಹಾಗೆ ಬಲದಕರ್ಣದಲ್ಲಿ ಷಡಕ್ಷರವೆಂಬ ವಸ್ತುವ ಮಾಡಿಟ್ಟರು. ಭಕ್ತಗಣಂಗಳ ನಿಂದೆಯ ಕೇಳದ ಹಾಗೆ ಎಡದಕರ್ಣದಲ್ಲಿ ಪಂಚಾಕ್ಷರವೆಂಬ ವಸ್ತುವ ಮಾಡಿಟ್ಟರು. ಪಂಚಾಂಗುಲಿಗೆ ಪಂಚಾಚಾರವೆಂಬ ಅಯ್ದುಂಗುರವ ಮಾಡಿಟ್ಟರು. ನೂರೆಂಟು ನಾಮುಹರಗಣ ಕೊರಳಲಿ ಹಾಕಿದರು ಆಪತ್ತಿಗೆ ಅಂಜ ಬೇಡೆಂದು, ವಿಭೂತಿ ಧೂಳನ ಧಾರಣವ ಮಾಡಿ ಜೋಡಂಗಿಯ ತೊಡಿಸಿದರು. ಗಣಂಗಳು ಹೋದ ಹಾದಿಯನೆ ಮುಂಡಾಸವ ಮಾಡಿ ತಲೆಗೆ ಸುತ್ತಿದರು. ಆವ ಕಂಟಕವು ಬಾರದ ಹಾಗೆ ಗಣಂಗಳ ಪಾದ ಧೂಳವ ಸೆಲ್ಲೆಯ ಮಾಡಿ ಹೊದಿಸಿದರು. ಭಕ್ತಿ ಎಂಬ ನಿಧಾನವ ಕೊಟ್ಟು, ಭಾವದಲ್ಲಿ ಬಚ್ಚಿಟ್ಟು ಕೊಳ್ಳಿರಿ ಎಂದರು. ಅಷ್ಟಾವರಣವೇ ನಿಧಿ ನಿಧಾನವೆಂದು ಹೇಳಿದರು. ಇವೆಲ್ಲ ವಸ್ತುಗಳ ನಿಮ್ಮ ನೋಡಿ ಕೊಟ್ಟರಲ್ಲದೆ ಬೇರಿಲ್ಲ. ನಿಮ್ಮ ದಾಸಾನುದಾಸಿಯೆಂದು ನಿಮ್ಮೊಡವೆಯ ನಿಮಗೊಪ್ಪಿಸು ಎಂದರುಹಿದಾತ ನಮ್ಮ ಶಾಂತ ಕೂಡಲಸಂಗಮದೇವಾ.

೧೮. ಲಿಂಗವ ಪೂಜಿಸಿ ಅಂಗವ ಬೇಡಬಾರದಯ್ಯ. ಅದೇಕೆಂದೊಡೆ, ಶಿವನು ದೀನನು. ಅದು ಹೇಗೆಂದೊಡೆ, ದ್ರವ್ಯವೆಲ್ಲವು ಕುಬೇರನವಾಸಮಾಡಿ ದೀನವಾಯಿತು. ಹದಿನಾಲ್ಕು ಲೋಕಕ್ಕೀಶ್ವರವಾಗಿ ಆ ದ್ರವ್ಯ. ಇದ ಹದಿನಾಲ್ಕು ಲೋಕಕ್ಕೆ ಹೇಗೆ ಮಾಡಲೆಂದು ಚಿಂತಿಸಿ ಕೊಪ್ಪರಿಗೆಯ ತಂದು ನಮ್ಮ ಗಣಂಗಳ ಮನೆಯಲಿಟ್ಟು ಮಾಯವಾಗಿ, ನ್ಯಾಯಕಿಕ್ಕಿ ಅಮರ ನೀತಿಯ ಮನೆಯ ಬೊಕ್ಕಸ ಭಾಂಡಾರವೆಲ್ಲವ ಅವರ ಸಹವಾಗಿ ಒಯ್ದು, ಅ

ದುಸಾಲದೆ ನಮ್ಮ ಗಣಪತಿ ರಾಯನ ಮನೆಯ ಕನ್ನವನಿಕ್ಕಿ ಒಯ್ದು, ಈರೇಳು ಲೋಕವನೆ ಪ್ರತಿಪಾಲನೆಯ ಮಾಡಿ, ಅವರೆಲ್ಲ ಉಂಡ ಮೇಲೆ ನೀವು ಉಂಬಿರಿ. ದಿನ ದಿನಕ್ಕೆ ಇದೇಚಿಂತೆ ನಿಮಗೆ. ನಮ್ಮ ಗಣಂಗಳು ನಿಶ್ಚಿಂತೆಯಲ್ಲಿಪ್ಪರು. ಅದು ಹೇಗೆಂದೊಡೆ, ದಿನದಿನದ ಕಾಯಕವ ದಿನದಿನಕೆ ಸರಿಮಾಡಿ ಇಂದಿನ ಕಾಸು ನಾಳಿಗೆ ತಂಗಳೆಂಬರು, ನಾಳಿನ ಚಿಂತೆ ನಮಗೇಕೆಂಬರು. ನೀವು ನಾಳೆಗೆಬೇಕೆಂದು ಇಟ್ಟುಕೊಂಡು ನಮ್ಮ ಕರಿಕಾಲ ಚೋಳನ ಮನೆಯಲ್ಲಿ ಅಡಿಗೆಯ ಮಾಡಿಸಿ ಉಂಚು, ಅದುಸಾಲದೆ ನಮ್ಮ ಮಾದಾರ ಚನ್ನಯ್ಯನ ಮನೆಯಲ್ಲಿ ಅಂಬಲಿಯ ನುಂಬಿರಿ. ಆಗ ಈರೇಳು ಲೋಕಕ್ಕೆ ತೃಪ್ತಿಯಾಯಿತ್ತು. ಇಂತಪ್ಪ ನಮ್ಮ ಗಣಂಗಳ ಉದಾರತ್ವ ಹೇಳಲಿಕ್ಕೆ ಅಸಾಧ್ಯವು. ಇದ ನೀವು ಬಲ್ಲಿರಾಗಿನಮ್ಮ ಗಣಂಗಳಹೃದಯದಲ್ಲಿ ಮನೆಯಮಾಡಿಕೊಂಡಿಪ್ಪಿರಿ ಎಂದರುಹಿದಾತ ನಮ್ಮ ಶಾಂತ ಕೂಡಲಸಂಗಮದೇವಾ.

೧೯. ಭಕ್ತರ ಮನವ ಶಿವನು ನೋಡಲಿಕ್ಕೆ ಕಂಟಕವನೊಡ್ಡುವನು. ಅಪರಾಧಗೊಡುವನು, ಭಾಗ್ಯವೆಲ್ಲ ಬಯಲ ಮಾಡುವನು, ಬಂಧುಗಳೆಲ್ಲ ವೈರಿಗಳ ಮಾಡುವನು, ದೇಶತ್ಯಾಗವ ಮಾಡಿಸುವನು, ಅಲ್ಲಿ ಮಹಾವ್ಯಾಧಿಗಳ ತೋರಿಸುವನು. ॥ಸಾಕ್ಷಿ॥ ಪುಣ್ಯಮೇಕೋ ಮಹಾಬಂಧುः। ಪಾಪಮೇಕೋ ಮಹಾರಿಪುः। ಅಸಂತೋಷೋ ಮಹಾವ್ಯಾಧಿ। ಧೈರ್ಯಂ ಸರ್ವತ್ರ ಸಾಧನಂ॥ ಅಪರಾಧಾರ್ಥ ನಾಶಂಚ। ವಿರೋಧನಂಚ ಬಾಂಧವ। ದೇಶತ್ಯಾಗಮಹಾ ವ್ಯಾಧಿ। ಮದ್ಭಕ್ತಸ್ಯ ಸುಲಕ್ಷಣಂ॥ ಎಂದುದಾಗಿ ಇಂತಿವೆಲ್ಲದುःಖವನು ಶಿವನಾಜ್ಞೆಯಿಂದ ಬಂದವೆಂದು ತಿಳಿದು ನೀವೇ ಗತಿ, ನೀವೇ ಮತಿ, ಹಾಲಲದ್ದು ನೀರಲದ್ದು ಎಂಬ ಭಾವದಲ್ಲಿಪ್ಪವರನು ಶಿವ ತನ್ನ ಗರ್ಭದಲ್ಲಿ ಇಂಬಿಟ್ಟುಕೊಂಬನು. ನಮ್ಮ ಶಾಂತ ಕೂಡಲಸಂಗಮದೇವ ತನ್ನ ನಂಬಿದವರ ಹೃದಯದಲ್ಲಿಪ್ಪನು.

೨೦. ಅಂದಿನವರಿಗೆ ಪರುಷವಿಪ್ಪುದು, ಇಂದಿನವರಿಗೆ ಪರುಷವೇಕಿಲ್ಲ, ಸ್ವಾಮಿ ದಯದಿಂದ ಕರುಣಿಸುದು ಗುರುವೇ. ಕೇಳಯ್ಯಾ ತರುಳನೇ. ಶಿವಯೋಗಿಲಿಂಗಾರ್ಪಿತ ಭಿಕ್ಷಕ್ಕೆ ಬಂದಲ್ಲಿ ಸುಮ್ಮನಿರು, ಇದುಭಿಕ್ಷವೇಳೆಯೋ ಎಂಬವರಿಗೆಲ್ಲಿಯದೋ ಪರುಷ? ಲಾಂಛನ ಧಾರಿಗಳು ಸ್ವಯಂಪಾಕ ಭಿಕ್ಷಕ್ಕೆ ಬಂದ ವೇಳೆಯಲ್ಲಿ ಗೋದಿಯ ಬೀಸುವಹಾಗೆ ಕಡೆಯಲಿದ್ದ ಹಿಟ್ಟನೀಡುವವರಿಗೆ ಎಲ್ಲಿಯದೋ ಪರುಷ? ಲಾಂಛನಧಾರಿಗಳು ಧಾನ್ಯ ಭಿಕ್ಷಕ್ಕೆ ಬಂದಲ್ಲಿ ಘನವ ಮಾಡಿಕೊಳ್ಳಿರಿ ಎಂಬವರಿಗೆ ಎಲ್ಲಿಯದೋ ಪರುಷ? ಪರುಷ ಎಲ್ಲಿಹುದೆಂದರೆ, ಜಂಗಮವು ಮನೆಗೆ ಬರಲು, ಬಂದಬರವ ನಿಂದನಿಲ

ವನರಿತು ಭಕ್ತಿಯ ಮಾಡುವವರಿಗೆ ಅದೇ ಪರುಷ. ತನ್ನ ಪ್ರಪಂಚಿನ ಪುತ್ರ, ಮಿತ್ರ, ಕಳತ್ರರಿಗೆ ಮಾಡುವ ಹಾಗೆ ಗುರುಲಿಂಗಜಂಗಮಕ್ಕೆ ಕೇವಲ ಸದ್ಭಕ್ತಗೆ ಭಕ್ತಿಯ ಮಾಡಿದವರಿಗೆ ಅದೇ ಪರುಷ. ಹೀಗೆ ಮಾಡಿದವರಿಗೆ ಅಂದೇನು, ಇಂದೇನು ಹೀಗೆಂದರುಹಿದಾತ ನಮ್ಮ ಶಾಂತ ಕೂಡಲಸಂಗಮದೇವಾ.

೨೧. ಗುರುಭಕ್ತರಾದವರು ಶಿವಭಕ್ತರಾದವರ ದಣಿವ ಕಂಡು, ಸುಮ್ಮನಿರಲಾಗದು. ಅದೇನು ಕಾರಣವೆಂದೊಡೆ, ಒಬ್ಬ ಗುರುವಿನ ಮಕ್ಕಳಾದ ಮೇಲೆ ತನಗೆಗುರುವು ಕೊಟ್ಟದ್ರವ್ಯವ ಸವಿಯಲೇಬೇಕು. ಮತ್ತೆ ಪ್ರಪಂಚಿನ ತಂದೆ ಒಬ್ಬನಿಗೆ ಮಕ್ಕಳೈವರು, ಅವರು ತಂದೆಯ ಬದುಕನ್ಯಾಯದಿಂದ ಪಾಸರಿಮಾಡಿಕೊಂಬರು. ಈ ದೃಷ್ಟವ ಕಂಡು, ನಮಗೆ ಭಕ್ತಿ ಪಕ್ಷವಾಗದಿದ್ದೊಡೆ ಈ ಪ್ರಪಂಚರಿಗಿಂತ ಕಡಿಮೆಯಾಯಿತಲ್ಲಾ ಗುರುವೇ ಎನ್ನ ಬಾಳುವೆ. ಒಂದಗಳ ಕಂಡರೆ ಕಾಗೆ ಕರೆಯದೆ ತನ್ನ ಬಳಗವನೆಲ್ಲವ? ಒಂದು ಗುಟಕ ಕಂಡರೆ ಕೋಳಿ ಕರೆಯದೆ ತನ್ನ ಕುಲವನೆಲ್ಲವ? ಇಂತಪ್ಪ ದೃಷ್ಟವ ಕಂಡು, ಆ ಭಕ್ತಂಗೆ ಭಕ್ತಿ ಪಕ್ಷವಾಗದಿದ್ದೊಡೆ ಆ ಕಾಗೆ ಕೋಳಿಗಿಂತ ಕರ ಕಷ್ಟವಾಯಿತಲ್ಲ ಎನ್ನ ಬಾಳುವೆ. ಭಕ್ತಭಕ್ತರಿಗೆ ಕೊಟ್ಟುಕೊಂಬ ಉದ್ಯೋಗವಾಗಲಿ ಆಚಾರ ವಿಚಾರವಾಗಲಿ, ಬೈದು ಹೊಯಿದರಾಗಲಿ, ಮತ್ತೆ ತೊಡಕು ಬರಲಿ ತಮ್ಮ ಮನದೊಳಗೆ ಸುಮ್ಮನಿರುವುದೇ ಲೇಸು. ಇಲ್ಲವೆ ಭಕ್ತಗಣಂಗಳಲ್ಲಿಗೆ ಹೋಗಿ ತಮ್ಮ ಸ್ಥಿತಿಯ ಹೇಳಿ, ಅವರು ಹೇಳಿದ ಹಾಗೆ ಕೇಳಿಕೊಂಡಿಪ್ಪದೇ ಲೇಸು. ಎಲೇ ಲಿಂಗವೇ ನೀವು ಬೇಡಿತ್ತ ನೀವನೆಂಬ ತಮ್ಮಟ ಬಿರಿದ ಕೇಳಿ, ಬೇಡಿಕೊಂಬೆನು. ಏನೆಂದೊಡೆ, ಉದ್ಯೋಗ ವ್ಯಾಪಾರ ಮಾಡುವಲ್ಲಿ ಹುಸಿ ಸಟೆಯ ಒಬ್ಬರ ಮನೆಯ ದ್ರವ್ಯವ ಒಬ್ಬರ ಮನೆಗೆ ಹಾಕಿ, ಅಹುದಲ್ಲವ ಮಾಡುವದ ಬಿಡಿಸು. ನಿಮ್ಮ ನೆನಹಿನೊಳಗಿಟ್ಟು ಮೇಲೆ ಒಡೆತನವ ಬೇಡವಯ್ಯ, ಕಿರಿತನವ ಕೊಡಿರಯ್ಯ! ಇಷ್ಟನು ಕೊಡದಿರ್ದೊಡೆ ನೀವು ಬೇಡಿತ್ತ ನೀವನೆಂಬ ನಿಮ್ಮತಮ್ಮಟ ಬಿರಿದು ಕೇಳಿ ನಮ್ಮ ಗಣಂಗಳು ಹಿಡಿತಿಯ ಹಿಡಿದಾರಯ್ಯಾ! ಎಂದಾತ ನಮ್ಮ ಶಾಂತ ಕೂಡಲಸಂಗಮದೇವ.

೨೨. ಗುರುಭಕ್ತರಾದವರು ವಾರ, ತಿಥಿ, ನಕ್ಷತ್ರ, ಯೋಗ, ಕರಣ, ವ್ಯತೀಪಾತ, ವೈಧೃತಿ ಶುಭಾಶುಭವ ನೋಡಲಾಗದು, ಕೇಳಲಾಗದು. ಅವರ ಮನೆಯಲ್ಲಿ ಬಾಲರಂಡೆ ಇಪ್ಪ ಕಾರಣ ಕೇಳಲಾಗದು. ವಾರ ತಿಥಿ ನಕ್ಷ

ತ್ರ ಆಸ್ಥೆಯ ಕೇಳುವವರಿಗೆ, ಗುರುವಿಲ್ಲ, ಶಿವನಿಲ್ಲ, ಅವರಿಗೆ ವಾರಗಳೇ ದೈವವಾಗಿಪ್ಪವು. ಇದಕ್ಕೆ ದೃಷ್ಟ. ವಸಿಷ್ಠಮುನಿ ರಾಮಲಕ್ಷ್ಮಣರಿಗೆ ವೇಳೆ ವೇಳೆಯಲ್ಲಿ ಲಗ್ನ ತೆಗೆದು ಕೊಟ್ಟನಲ್ಲದೆ, ಲಗ್ನವಾದಮೇಲೆ ಅವರ ಹೆಂಡಿರ ರಾವಣನೇಕೆ ಒಯ್ದ? ಮತ್ತೆ ಅವರು ದೇಶತ್ಯಾಗಿಯಾಗಿ ವನವಾಸವೇಕೆ ಹೋದರು? ॥ಸಾಕ್ಷಿ॥ ಬ್ರಾಹ್ಮಣೋ ವಿಪ್ರಧಾನಕ್ಷಂ ಕಿಂಕರೋತಿ ಶುಭಗ್ರಹಂ । ವಸಿಷ್ಠೇನ ದೀಯತೆ ಲಗ್ನಂ ರಾಮಃಕಿಂಭ್ರಮತೇವನೆ ॥ ಎಂದುದಾಗಿ ಈ ನಡತೆ ಭಕ್ತಗಣಂಗಳಿಗೆ ಸಮ್ಮತವಲ್ಲ. ಸಮ್ಮತ ಹೇಗೆಂದೊಡೆ ಮದುವೆಯ ಮಾಡುವಲ್ಲಿ, ಊರಕೇರಿಗೆ ಹೋಗುವಲ್ಲಿ ಪ್ರಸ್ಥಾನ ಮಾಡುವಲ್ಲಿ, ಕೆರೆಬಾವಿಗಳನಗಿಸುವಲ್ಲಿ ಸಮಸ್ತ ಕಾರ್ಯವೆಲ್ಲಕ್ಕೆ ಗುರುಲಿಂಗ ಜಂಗಮ ಭಕ್ತಗಣಂಗಳ ಕೇಳಿ ಅವರು ಹೇಳಿದಹಾಗೆ ಕೇಳಿ ಅಪ್ಪಣೆಯ ತೆಗೆದುಕೊಂಡು ಸಮಸ್ತ ಕಾರ್ಯವ ಮಾಡುವದು. ಹೀಗೆ ನಂಬಿದವರಿಗೆ ಸಿದ್ಧಿಯಪ್ಪುದು. ಅದು ಹೇಗೆಂದೊಡೆ, ನಕ್ಷತ್ರ ಫಲವ ಕೇಳಿಹೆನೆಂದೊಡೆ, ನಮ್ಮ ಗಣಂಗಳಾದರಾಜೇಂದ್ರ ಚೋಳ, ಚಾರಮರಾಜು, ಸೌಂದರ ಪಾಂಡ್ಯ, ಈ ಮೂವರ ಸೀಮೆಯ ಮೇಲೆ ಮಳೆ ಬೀಳದಿದ್ದರೆ, ಆಗ ಮೂವರು ಕೂಡಿ ಸ್ವರ್ಗಕ್ಕೆ ಹೋಗಿ, ಆ ಇಪ್ಪತ್ತೇಳು ನಕ್ಷತ್ರಂಗಳ ಮುಂಗೈ ಕಟ್ಟಿ ತಮ್ಮ ಊರಿಗೆ ತಂದು, ಸೆರೆಮನೆಯೊಳಗೆ ಹಾಕಿದುದು ಜಗವೆಲ್ಲ ಬಲ್ಲದು. ಅಂದಿನ ಗಣಂಗಳು ಇಂದಿದ್ದಾರೆಂದು ನಂಬಿದವರಿಗೆ ಬೇಡಿದ್ದ ನೀವ ನಮ್ಮ ಶಾಂತ ಕೂಡಲಸಂಗಮದೇವ.

೨೩. ಆದಿ ಮಧ್ಯಾವಸಾನ ಹೇಗೆಂದೊಡೆ, ಗುರುವಿನ ಕರಕಮಲದಲ್ಲಿ ಹುಟ್ಟಿದುದೀಗ ಆದಿ, ಗುರುಲಿಂಗ ಜಂಗಮದ ಪಾದೋದಕ ಪ್ರಸಾದವ ಕೊಂಬುದೀಗ ಮಧ್ಯ, ಜಂಗಮದಲ್ಲಿ ಲೀಯವಾದುದೀಗ ಅವಸಾನ, ಇದು ತಿಳಿದು ಎಲ್ಲ ಗಣಂಗಳು ಎನಗೆ ಮರ್ತ್ಯಲೋಕಕ್ಕೆ ಹೋಗಿ ಭಕ್ತಗಣಂಗಳ ಕೈಯ್ಯಲ್ಲಿ ಹೊಯಿಸಿಕೊಂಡು, ಬೈಸಿಕೊಂಡು, ಅವರೊಕ್ಕು ಮಿಕ್ಕ ಪ್ರಸಾದವ ಹಾರೈಸಿಕೊಂಡು, ಅವರ ಕರುಣ ಪ್ರಸಾದವ ಕೊಂಡು ಬಾ ಎಂದು ಆಜ್ಞೆಯನಿತ್ತ ಭೇದವ ಗುರು ಅರುಹಿದನಾಗಿ ಗಣದಾಸಿವೀರಣ್ಣನೆಂಬ ನಾಮವಾಯಿತ್ತೆನಗೆ. ಸತ್ಯಣ್ಣನ ಮನೆಯ ಬಂಟನಾನಯ್ಯ. ನನ್ನನು ತಮ್ಮ ಗಣಂಗಳು ಸಲುಹಿ ಕೃತಾರ್ಥನ ಮಾಡಿದರಯ್ಯ. ಅವರನೇನೆಂದುಪಮಿಸುವೆನಯ್ಯ. ಅವರು ಮಹಾದೇವನಲ್ಲದೆ ಬೇರುಂಟೆ? ಅವರ ಮನೆಯ ದಾಸಾನುದಾಸ ನಾನು. ಅವರ ಮನೆಯ ಹೂವ

ಡಿಗನು. ತಮ್ಮ ಗಣಂಗಳನೆಲ್ಲ ಎನ್ನಿಷ್ಟಲಿಂಗದೊಳಗೆ ತೋರಿದ ನಮ್ಮ ಶಾಂತಕೂಡಲ ಸಂಗಮದೇವ.

೨೪. ಭಕ್ತಗಣಂಗಳಿಗೆ ನಮಸ್ಕಾರವ ಮಾಡುವ ಕ್ರಮವೆಂತೆಂದೊಡೆ, ಗುರುವಿಂಗೆ ದೀರ್ಘದಂಡ ನಮಸ್ಕಾರ. ಅದರಿಂದೆಹಿಂದಿನಜನ್ಮದ ಪಾಪವೆಲ್ಲ ಪರಿಹಾರ. ಲಿಂಗಕ್ಕೆ ಕರಮುಟ್ಟಿ ನಮಸ್ಕಾರ ಮಾಡುವುದು. ಆದರಿಂದೆ ಉರಿ ಉಂಡಕರ್ಪುರದ ಹಾಗೆ ಆಗುವುದು. ಜಂಗಮಕ್ಕೆ ತಲೆಮುಟ್ಟಿ ನಮಸ್ಕಾರವ ಮಾಡುವುದು. ಅದರಿಂದೆ ನಿಜಮುಕ್ತಿಯಾಗುವುದು. ಭಕ್ತಂಗೆ ಅಷ್ಟಾಂಗ ನಮಸ್ಕಾರ. ಆ ಭಕ್ತಂಗೆ ಅಷ್ಟಾಂಗ ನಮಸ್ಕಾರ ಏಕೆಂದೊಡೆ, ಆ ಭಕ್ತನ ಹೃದಯದಲ್ಲಿ ಅಷ್ಟಾವರಣ ಮೂರ್ತಿಗಳಿಹರು. ಅದಕ್ಕೆ ಭಕ್ತಂಗೆ ಅಷ್ಟಾಂಗಭೂಮಿಗೆ ಹೊಂದಿ ನಮಸ್ಕಾರವ ಮಾಡಿದೊಡೆ ಗಣಪದವಿಯಪ್ಪುದು. ಇದಕ್ಕೆ ತ್ರಿಕರಣಶುದ್ಧವಾಗಿ, ವಂಚನೆಯಿಲ್ಲದೆ ತನು ಮನ ಧನವನೊಪ್ಪಿಸಿ, ಈ ನಾಲ್ಕು ಚತುರ್ವಿಧ ಮೂರ್ತಿಗಳಿಗೆ ನಮಸ್ಕಾರವ ಮಾಡಿದೊಡೆ ನಾಲ್ಕು ಪದ ಸಿದ್ಧಿಯಪ್ಪುದು ತಪ್ಪದು. ಇದು ಶಾಶ್ವತವೆಂದಾತ ನಮ್ಮ ಶಾಂತ ಕೂಡಲಸಂಗಮದೇವ.

೨೫. ಗುರುಲಿಂಗ ಜಂಗಮದ ಅರ್ಚನೆ ಪೂಜೆಯ ಮಾಡುವ ಕ್ರಮವ ದಯದಿಂದ ಕರುಣಿಪುದು ಸ್ವಾಮಿ. ಕೇಳೈ ಮಗನೇ. ತಾನಿದ್ದ ಊರಲ್ಲಿ ಗುರುವಿದ್ದರೆ ನಿತ್ಯ ತಪ್ಪದೆ ದರುಶನವ ಮಾಡುವುದು. ಗುರುಪೂಜೆಯ ಮಾಡುವಾಗ್ಗೆ ಆ ಗುರುವಿನೊಳಗೆ ಲಿಂಗಜಂಗಮ ಉಂಟೆಂದು ಭಾವಿಸಿ, ತನು ಮನ ಧನವ ನೊಪ್ಪಿಸಿ ಅರ್ಚಿಸುವುದು ಗುರುಪೂಜೆ. ಮತ್ತಂ, ಲಿಂಗಪೂಜೆಯ ಮಾಡುವಾಗ್ಗೆ ಆ ಲಿಂಗದೊಳಗೆ ಜಂಗಮವು ಗುರುವುಉಂಟೆಂದು ಭಾವಿಸಿ ತನುಮನಧನವ ನೊಪ್ಪಿಸಿ ಅರ್ಚಿಸುವುದು ಲಿಂಗಪೂಜೆ. ಇನ್ನು ಜಂಗಮ ಪೂಜೆಯ ಮಾಡುವಾಗ್ಗೆ ಆ ಜಂಗಮದೊಳಗೆ ಗುರುಲಿಂಗ ಉಂಟೆಂದು ಭಾವಿಸಿ, ತನು ಮನ ಧನವನೊಪ್ಪಿಸಿ, ಅರ್ಚಿಸುವುದು ಜಂಗಮ ಪೂಜೆ. ಈ ತ್ರಿವಿಧ ಮೂರ್ತಿಯೇ ಭಕ್ತನ ತ್ರಿವಿಧ ತನುವಿಗೋಸ್ಕರವಾಗಿ ಇಷ್ಟ ಪ್ರಾಣ ಭಾವಲಿಂಗ ಸ್ವರೂಪರಾಗಿಹರೆಂದು ನಿರೂಪಿಸಿದಿರಿ, ಸ್ವಾಮಿ. ಆ ತ್ರಿವಿಧ ಲಿಂಗದ ಪೂಜೆಯ ಕರುಣಿಪುದು ಎನ್ನ ಶ್ರೀ ಗುರುವೇ, ಕೇಳೈ ಮಗನೇ. ಇಷ್ಟಲಿಂಗದ ಪೂಜೆಯ ಮಾಡುವಾಗ್ಗೆ ಆ ಇಷ್ಟಲಿಂಗದೊಳಗೆ ಪ್ರಾಣಲಿಂಗ, ಭಾವಲಿಂಗ ಉಂಟೆಂದು ಭಾವಿಸಿ ಕರಮನಭಾವದೊಳಿರಿಸಿ, ಪೂಜಿಸುವುದು ಇಷ್ಟಲಿಂಗದ ಪೂಜೆ.

ಪ್ರಾಣಲಿಂಗದ ಪೂಜೆಯು ಮಾಡುವಾಗ್ಗೆ, ಆ ಪ್ರಾಣಲಿಂಗದೊಳಗೆ, ಭಾವಲಿಂಗ ಇಷ್ಟಲಿಂಗ ಉಂಟೆಂದು, ಭಾವಿಸಿ, ಭಾವಮನಕರ ದೊಳಗಿರಿಸಿ ಪೂಜಿಸುವುದು ಪ್ರಾಣಲಿಂಗದ ಪೂಜೆ. ಇನ್ನು ಭಾವಲಿಂಗದ ಪೂಜೆಯು ಮಾಡುವಾಗ, ಆ ಭಾವಲಿಂಗದೊಳಗೆ, ಇಷ್ಟಲಿಂಗ ಪ್ರಾಣಲಿಂಗ ಉಂಟೆಂದು ಭಾವಿಸಿ ಕರಮನಭಾವದೊಳಗಿರಿಸಿ, ಪೂಜಿಸುವುದು ಭಾವಲಿಂಗದ ಪೂಜೆ. ||ಸಾಕ್ಷಿ|| ಏಕಮೂರ್ತಿಸ್ತ್ರಯೋಭಾಗಂ ಗುರುರ್ಲಿಂಗಂಚ ಜಂಗಮಂ। ಜಂಗಮಂಚ ಗುರೋರ್ಲಿಂಗಂ। ತ್ರಿವಿಧಂ ಲಿಂಗಮುಚ್ಯತೆ। ಎಂದುದಾಗಿ ಈ ತ್ರಿವಿಧವು ಒಂದೇ ಎಂದಾತ ನಮ್ಮ ಶಾಂತ ಕೂಡಲಸಂಗಮದೇವಾ.

೨೬. ಪ್ರಸಾದಿ ಪ್ರಸಾದಿಗಳೆಂದು ನುಡಿದುಕೊಂಡು, ನಡೆಯುಬಹುದಲ್ಲದೆ, ಪ್ರಸಾದವಕೊಂಬ ಭೇದವ ನರಿಯರು. ಕರುಣಿಸುವುದ್ಗುರುವೆ, ಕೇಳೈ ಮಗನೇ. ಗುರುವಿನಲ್ಲಿ ತನುವಂಚನೆ ಇಲ್ಲದೆ ಕೊಂಬುದು ಶುದ್ಧ ಪ್ರಸಾದ. ಲಿಂಗದಲ್ಲಿ ಮನವಂಚನೆ ಇಲ್ಲದೆ ಕೊಂಬುದು ಸಿದ್ಧ ಪ್ರಸಾದ. ಜಂಗಮದಲ್ಲಿ ಧನವಂಚನೆ ಇಲ್ಲದೆ ಕೊಂಬುದು ಪ್ರಸಿದ್ಧ ಪ್ರಸಾದ. ಈ ತ್ರಿವಿಧದಲ್ಲಿ ತ್ರಿವಿಧ ವಂಚನೆ ಇಲ್ಲದೆ ಅವರ ಕರುಣ ಪ್ರಸಾದವ ಕೊಂಬ ಪ್ರಸಾದ ಕಾಯಕ್ಕೆ ಪ್ರಳಯ ಬಾಧೆಗಳು ಬಾಧಿಸಲಮ್ಮವು. ಕರಿ, ಉರಗ, ವೃಶ್ಚಿಕ ಇವು ಪೊದ್ದಲಮ್ಮವು. ಇರುವೆ ಕೆಂಡವು ಹೊದ್ದಲಮ್ಮವು. ಹೊಂದುವಪರಿ ಎಂತೆಂದೊಡೆ, ಲಿಂಗದಲ್ಲಿ ನೈಷ್ಠೆ ಇಲ್ಲ, ಜಂಗಮದಲ್ಲಿ ಪ್ರೇಮಭಕ್ತಿ ಇಲ್ಲ, ವಿಭೂತಿ ರುದ್ರಾಕ್ಷಿಯಲ್ಲಿ ವಿಶ್ವಾಸವಿಲ್ಲ, ಶಿವಾಚಾರದಲ್ಲಿ ದೃಢವಿಲ್ಲದ ಕಾರಣದಿಂ ತಾಪತ್ರಯಂಗಳು ಕಾಡಿಸುವವೆಂದರಿವುದು. ಮತ್ತೆ ನಂಬಿಗೆಯುಳ್ಳ ಪ್ರಸಾದಿಗಳಿಗೆ ವ್ಯಾಧಿ ಏಕೆ ಕಾಡಿಸುತ್ತಿಹವು; ಸದ್ಗುರು ಮೂರ್ತಿ ಕರುಣಿಸು ಎನ್ನ ತಂದೆಯೆ? ಕೇಳೈ ಮಗನೇ. ಭಕ್ತ ಗಣಂಗಳಿಗೆ ವಂದಿಸಿ ನಿಂದಿಸಿ, ಹಾಸ್ಯ ದೂಷಣವ ಮಾಡಿದರೆ, ಅದೇ ವ್ಯಾಧಿರೂಪಾಗಿ, ಕಾಡುವದು. ಆ ಭಕ್ತ ಗಣಂಗಳಿಗೆ ತಾನು ನಿಂದಿಸಿದುದ ತಿಳಿದು, ಅವರಿಗೆ ತ್ರಿಕರಣ ಶುದ್ಧವಾಗಿ, ಸೇವೆಯ ಮಾಡಿ, ಅವರ ಕರುಣವ ಹಡೆದರೆ, ಆಗ ವ್ಯಾಧಿಬಿಟ್ಟು ಹೋಗುವವು ಎಂದಾತ ನಮ್ಮಶಾಂತಕೂಡಲಸಂಗಮದೇವಾ.

೨೭. ಲಿಂಗಾರ್ಚನೆಯ ಮಾಡುವಾಗ್ಗೆ, ಪಾದಪೂಜೆಯ ಮಾಡುವಾಗ್ಗೆ, ಪಾದೋದಕ ಪ್ರಸಾದವ ಕೊಂಬುವಾಗ್ಗೆ, ಭವಿಶಬ್ದ, ಕುಶಬ್ದ, ಹಿಂಸಾಶಬ್ದ ಹೊಲೆಶಬ್ದ, ಹುಸಿನುಡಿ, ಭಂಡಣಶಬ್ದ, ಹೇಸಿಕೆಶಬ್ದ, ಇವೆಲ್ಲವ ವರ್ಜಿ

ಸುವದು. ವರ್ಜಿಸದಿರ್ದೊಡೆ ಲಿಂಗಾರ್ಚನೆ ಪಾದಪೂಜೆ ಪಾದೋದಕ ಪ್ರಸಾದ ನಿಷ್ಫಲ. ॥ಸಾಕ್ಷಿ॥ ಭವಿಶಬ್ದ ಕುಶಬ್ದಶ್ಚ ಹಿಂಸಾಶಬ್ದ ಸ್ತಥಾಪರ। ಶ್ವಪಚಾನೃತ ಶಬ್ದಂಚ। ಕರ್ಕಶೊಭಾಂಡಿಕೋಟಿವಾ। ಬೀಭತ್ಸಕೊ ಮಹಾ ದೇವಿ ಪ್ರಸಾದಂಚ ವಿವರ್ಜಯೇತ್॥ ಎಂದುದಾಗಿ ಪ್ರಸಾದ ಮುಗಿವತನಕ ಭೋಜ್ಯ ಭೋಜ್ಯಕ್ಕೆ ಪಂಚಾಕ್ಷರಿಯ ಸ್ಮರಿಸುತ್ತ ಸಲಿಸುವದು ॥ಸಾಕ್ಷಿ॥ ವಿಷಯಾದಿ ಪಂಚಭೋಗಂ। ಪಂಚಾಕ್ಷರ ಸಮನ್ವಿತಂ ಪಂಚೇಂದ್ರಿಯ ಸಮಾಯುಕ್ತಂ। ಪಂಚ ವಕ್ತ್ರಸ್ಯ ಸಂಯುತಂ॥ ಎಂದುದಾಗಿ ಶಿವ ಸ್ಮರಣೆ ಯಿಂದ ಸ್ವೀಕರಿಸಲು ಮುನ್ನೂರರವತ್ತು ವ್ಯಾಧಿಗಳು ನಿಲ್ಲದೇ ಓಡುವವು. ಹೀಗೆ ನಂಬಿಗೆಯುಳ್ಳೊಡೆ, ಪ್ರಸಾದ ಸಿದ್ಧಿಯಹುದು ತಪ್ಪದು ನೋಡಾ. ನಮ್ಮ ಬಿಬ್ಬಿಬಾಚಯ್ಯನವರು ನಂಬಿದ ಕಾರಣದಿಂದೆ ಓಗರ ಪ್ರಸಾದವಾಗಿ ಎಂಜಲೆಂದ ವಿಪ್ರರ ಮಂಡೆಯ ಮೇಲೆ ತಳಿಯಲು, ಕೆಂಡವಾಗಿ ಸುಟ್ಟು ದಿಲ್ಲವೇ ಗ್ರಾಮ ಸಹಿತವಾಗಿ? ಮತ್ತೆ ಮರುಳ ಶಂಕರದೇವರು ಪ್ರಸಾ ದ ಕುಂಡದೊಳಗೆ ಹನ್ನೆರಡು ವರ್ಷ ಇರ್ದು, ನಿಜೈಕ್ಯವಾದುದಿಲ್ಲವೆ? ಇಂತಪ್ಪ ದೃಢವ ಕಂಡು ನಂಬದೆ ಕರ್ಮ ಫಲವ ನಂಬಿದವರಿಗೆ ಇಂಬಾ ಗಿಪ್ಪನು ನಮ್ಮ ಶಾಂತ ಕೂಡಲಸಂಗಮದೇವಾ.

೨೮. ದೇಹದೊಡನೆ ತ್ರಿದೋಷಂಗಳು, ವಾತ, ಪಿತ್ತ, ಶ್ಲೇಷ್ಮ, ಇವು ಮೂರು ಕೂಡಿ ದೇಹ ಹುಟ್ಟಿತ್ತು. ವಾತ ೮೧ ಪಿತ್ತ ೬೪ ಶ್ಲೇಷ ೨೧೫ ಇವು ಕೂಡಿ ೩೬೦ ವ್ಯಾಧಿಗಳಾದವು. ಇವು ಶಿವನನುಜ್ಞೆಯಿಂದ ಬಂದ ವಲ್ಲದೆ ಮನುಷ್ಯನ ಯತ್ನವಿಲ್ಲವು- ಶಿವಸದ್ವರ್ತನೆ ಸದ್ಧರ್ಮ ಸದಾ ಚಾರವಿಲ್ಲದವರಿಗೆ ಈ ವ್ಯಾಧಿಗಳು ಕಾಡುತ್ತಿಹವು. ತಲೆಶೂಲಿ, ಕಣ್ಣಶೂ ಲಿ, ಉಬ್ಬಸವಾಯು, ಜ್ವರ, ಚಳಿ, ಇಂತಿವೆಲ್ಲವು ಕಣ್ಣಿಗೆ ಕಾಣಿಸದ ವ್ಯಾಧಿಗಳು ಶಿವನ ಅಂಶಿಕವು. ತದ್ದು, ತುರಿ, ಕುಷ್ಠ, ಗಂಡಮಾಲೆ, ಕುರು ವು, ಬಾವು ಹುಣ್ಣುಗಳು ಕಣ್ಣಿಗೆ ಕಾಣಿಸುವಂಥ ಬೇನೆಗಳು. ಇವೆಲ್ಲ ಪಾರ್ವತಿಯ ಅಂಶಿಕವು. ಕೇವಲ ಶಿವಭಕ್ತರ್ಗೆ ಆ ವ್ಯಾಧಿಗಳು ಹಿತವಾ ಗಿಹವು. ಗುರುಮಾರ್ಗಾಚಾರ ತಪ್ಪಿ ನಡಿದವರಿಗೆ ಆ ವ್ಯಾಧಿಗಳು ವೈರಿಗ ಳಾಗಿಹವು. ಮತ್ತಂಪ್ರಸಾದವ ಕೊಂಡಬಳಿಕ ಅವಿಶ್ವಾಸದಿಂದೆ ಅಷ್ಟಾವರ ಣದಲ್ಲಿ ನಂಬುಗೆ ಇಲ್ಲದೆ ಮಂತ್ರ ತಂತ್ರ ಮಾಡಿಸಿ, ಶಿವಶಾಸ್ತ್ರ ಆಗಮ ಪು ರಾಣದಲ್ಲಿ ಅಷ್ಟಾವರಣವೇ ಅಧಿಕವೆಂದು ಕಂಡು ಕೇಳಿ ನಂಬದಲೆ ಅವಿ ಶ್ವಾಸದಿಂದ ಇರ್ಪುದು ಅವಿನ ಕೆಚ್ಚಲೊಳಗೆ ಉಣ್ಣೆ ಇದ್ದಂತಾಯಿತ್ತು

ಎಂದಾತ ನಮ್ಮ ಶಾಂತ ಕೂಡಲಸಂಗಮದೇವಾ. /

೨೯ ಸಹಜ ಶಿವಭಕ್ತರಾದವರು ತಟ್ಟೆ ಬಟ್ಟಲೊಳಗುಂಡದ್ದು ಇಷ್ಟ ಲಿಂಗದ ಪ್ರಸಾದವು. ಕರಕಮಲದೊಳಗುಂಡದ್ದು ಪ್ರಾಣಲಿಂಗದ ಪ್ರಸಾದ ವು. ಪಾವುಡ ಪರ್ಣದೊಳುಂಡದ್ದು ಭಾವಲಿಂಗದ ಪ್ರಸಾದವು. ಲಿಂಗದಲ್ಲಿ ಮನನೋಟವಿಲ್ಲದೆಕೊಂಬುದು ಅನರ್ಪಿತ- ಅದು ಕಾರಣ ಲಿಂಗ ನೆನಹಿಂದೆ ಸ್ವೀಕರಿಸುವದು ಎಂದು ಅರುಹಿದಾತ ನಮ್ಮ ಶಾಂತಕೂಡಲಸಂಗಮದೇವ.

೩೦. ಶಿವಭಕ್ತ ಆವ ಊರೊಳಗಿದ್ದರೇನು? ಆವ ಕೇರಿಯೊಳಗಿ ದ್ದರೇನು? ಹೊಲಗೇರಿಯೊಳಗಿದ್ದರೇನು? ಆತನಿದ್ದುದೇ ಕೈಲಾಸ. ಆತನ ಮನೆಯೇ ಶಿವನ ಅರಮನೆ. ಆತನ ಮನೆಸುತ್ತಲಿದ್ದ ಲೋಕ ಶಿವಲೋ ಕ ॥ಸಾಕ್ಷಿ॥ ಚಾಂಡಾಲವಾಟಿಕಾಯಾಂಯಂಚ । ಶಿವಭಕ್ತ ಸ್ಥಿತೋಯದಿ। ತಛ್ರೇಣಿಶಿವಲೋಕಸ್ಯ । ತವ್ ಗೃಹಂಶಿವಮಂದಿರಂ। ಎಂದುದಾಗಿ, ಇಂತ ಪ್ಪ ಶಿವಭಕ್ತನ ಅಂಗಳವಕಂಡಲ್ಲಿ ಕೋಟಿಬ್ರಹ್ಮಹತ್ಯ ಕೋಟಿ ಶಿಶುಹತ್ಯ ಇ ವೆಲ್ಲ ಅಳಿದು ಹೋಗುವವು. ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದವರಿಗೆ ಅಷ್ಟೈಶ್ವರ್ಯ, ಅಷ್ಟ ಮಹಾ ಸಿದ್ಧಿ ಫಲವು ತಪ್ಪದು. ಅವರೊಕ್ಕು ಮಿಕ್ಕ ಪ್ರಸಾದವ ಕೊಂಡರೆಸದ್ಯನ್ಮುಕ್ತಿ ಬಪ್ಪುದು ತಪ್ಪದು. ಇಂತಪ್ಪ ಶಿವಭಕ್ತ ರ ನೀನೆಂದು ಪಮಿಸುವೆನಯ್ಯ. ಆತನು ಮಹಾದೇವನಲ್ಲದೆ ಬೇರುಂಟೆ? ಆತ ಅಗಮ್ಯ ಅಪ್ರಮಾಣ ಆನಂದ ಮಹಿಮನು. ಸಾವಿರ ಹೆಡೆಯ ಸರ್ಪಂ ಗೆಸ್ತುತಿಸಲಳವಲ್ಲ. ಅಂತಪ್ಪ ಸದ್ಭಕ್ತನ ಶ್ರೀ ಚರಣವ ಎನ್ನೊಳಗೆ ತೋ ರಿಸಿದಾತ ನಮ್ಮ ಶಾಂತಕೂಡಲಸಂಗಮದೇವಾ.

೩೧ ಕುಲ ಎಷ್ಟು ಎಂದರೆ ಯರಡುಕುಲ. ಅವಾವೆಂದೊಡೆ ಭವಿ ಒಂದು ಕುಲ, ಭಕ್ತ ಒಂದು ಕುಲ- ಅಷ್ಟಾವರಣವೇ ಅಂಗವಾಗಿ ಪಂಚಾಚಾರವೇ ಪ್ರಾಣವಾಗಿಪ್ಪ ಭಕ್ತರ ಕುಲವನಾರಿಸಿದರೆ ಬಾರದ ಭವಂಗಳಲ್ಲಿ ಬಪ್ಪು ದು ತಪ್ಪದು. ನೀರಿಂದಾದ ಮುತ್ತು ಮರಳಿ ಉದಕವಪ್ಪುದೇ? ಆಕಾ ಶಕ್ಕೆ ಹಾರಿ ಹೋದ ಜ್ಯೋತಿ ಹಿಂದಕ್ಕೆಬಪ್ಪುದೆ? ಮೃತ್ತುವಿನಿಂದಾದ ಮಡಿಕೆ ಮರಳಿ ಮಣ್ಣಪ್ಪುದೆ? ಮತ್ತೆ ವಾಮಮುನಿ ಹಿರಿಯ ಭಕ್ತರ ಮನೆಯ ಬಿನ್ನಹವ ಕೈಕೊಂಡು, ಕುಲಕಂಜಿ ಉಣಲೊಲ್ಲದೆ ಹೋಹ ನಿಮಿತ್ಯದಿಂದ, ಹಾವಿನ ಹಾಳಕಲ್ಲಯ್ಯಗಳ ಮನೆಯಲ್ಲಿ ಶ್ವಾನನಾಗಿ ಹು ಟ್ಟಲಿಲ್ಲವೇ? ಅದುಕಾರಣ ಶಿವಭಕ್ತ ರೊಕ್ಕು ಮಿಕ್ಕ ಪ್ರಸಾದವ ಕೊಳಬೇ ಕು, ಎಂದಾತ ನಮ್ಮ ಶಾಂತ ಕೂಡಲಸಂಗಮದೇವ.

೩೨. ಓಂಕಾರನಾದ ಪಿಂಡ ಬ್ರಹ್ಮಾಂಡವ ತುಂಬಿ ಕೊಂಡಿಪ್ಪುದು. ಅದು ಮಹಾಜ್ಞಾನಿಗಳಿಗೆ ಪ್ರತ್ಯಕ್ಷವಾಗಿರ್ಪುದು. ಆ ನಾದವಿಲ್ಲದಿರ್ದೊಡೆ ನಿರ್ಜೀವಿಗಳು ಹ್ಯಾಗೆ ನುಡಿವವು? ನಿರ್ಜೀವಿ ಯಾವವೆಂದೊಡೆ ಕೊಡ ಹಿದ ಶಬ್ದ, ಚರ್ಮವಾದ್ಯ, ಭೇರಿ, ತಮ್ಮಟೆ. ಮತ್ತಂ ॥ ಲೋಹವಿಡಿದ ಶಬ್ದ, ತಾಳ, ಕೌಂಸಾಳ ಗಂಟೆ, ಕಹಳೆ, ಕರ್ನೆ, ನಪೂರಿ ಸ್ವನಾಯಿ. ಮತ್ತಂ ॥ ತಂತಿವಿಡಿದ ಶಬ್ದ, ಕಿನ್ನರಿ, ವೀಣೆ, ಕಾಮಾಕ್ಷಿ, ತಂಬೂರಿ, ರು ದ್ರವೀಣೆ. ಇನ್ನು ಆಕಾಶದೊಳಗೆ ಶಬ್ದವನಿಕ್ಕಿದರೆ, ಪ್ರತಿಶಬ್ದ ಕುಡುವ ದು. ಮತ್ತಂ ದೇಗುಲದೊಳಗೆ ಶಬ್ದವಿಕ್ಕಿದೊಡೆ, ನುಡಿದ ಹಾಗೆ ನುಡಿ ವುದು. ಹಾಗೆ ಪರಿಪೂರ್ಣ ವಸ್ತುವಿಲ್ಲದಿರ್ದೊಡೆ ಈ ನಿರ್ಜೀವಿಗಳು ಹ್ಯಾ ಗೆ ನುಡಿವವು? ಈ ನಾದ ಶಬ್ದವು ಆವಘಟದೊಳಗೆ ಪೊಕ್ಕು, ಆಘಟ ಶಬ್ದವ ಕುಡುತ್ತಿಹುದು ಆ ಘಟದ ಗುಣವೆಂದು ತಿಳಿವುದು. ನಮ್ಮ ಗಣಂಗಳು ಆ ಘಟವ ಬಿಟ್ಟು ಪಿಂಡ ಬ್ರಹ್ಮಾಂಡದೊಳಗಿಪ್ಪ ಪರಿಪೂರ್ಣ ವಸ್ತುವಿನೊಳಗೆ ಬೆರೆದುದ ಎನ್ನೊಳರುಹಿದಾತ ನಮ್ಮ ಶಾಂತ ಕೂಡಲ ಸಂಗಮದೇವ.

೩೩. ಭಸವ ನೀಲಲೋಚನೆ ಇಬ್ಬರ ನಾಮ ಕೂಡಲು ಯೆಂಟಕ್ಷರವಾ ದವು. ಆ ಎಂಟಕ್ಷರವೇ ಮಾಯಾಖ್ಯ ಪಂಚಾಕ್ಷರವಾದವು. ಮಾಯಾ ಖ್ಯ ಪಂಚಾಕ್ಷರ ಎಂತೆಂದೊಡೆ ಓಂ ಹ್ರಾಂ ಹ್ರೀಂ ನಮಃಶಿವಾಯ. ॥ಸಾಕ್ಷಿ॥ ಬಕಾರಂ ಗುರುರೂಪಂಚ ಸಕಾರಂ ಲಿಂಗಮೇವಚ । ವಕಾರಂ ಪರಮ ಖ್ಯಾತಂ। ತ್ರಿವಿಧಂತತ್ವ ನಿರ್ಣಯಂ । ನೀಲಲೋಚನೆ ವಸ್ತು ನಾಮಾ ಕ್ಷರ ಪಂಚಕಂ, ಸ್ತೋತ್ರವೇತ್ರಿ ಸಂಧ್ಯಾಂಚ । ಭಕ್ತ ಸರ್ವ ಕಾಮ ಮೋ ಕ್ಷದಂ ॥ ಎಂದುದಾಗಿ ಈ ಎಂಟಕ್ಷರವೇ ಎನ್ನ ಅಸ್ಟದಳ ಕಮಲದೊಳಗೆ ಇಷ್ಟ ಲಿಂಗವಾಗಿ ನಿಂದ ನಿಲವ ತೋರಿದಾತ ನಮ್ಮ ಶಾಂತ ಕೂಡಲಸಂ ಗಮದೇವ.

೩೪. ಎನ್ನ ಪಶ್ಚಿಮಬಲ್ಲಿ ನಿರಂಜನ ಪ್ರಣಮವಾಗಿ ನಿಂದಾತ ನಮ್ಮ ಬಸವಣ್ಣ. ಎನ್ನ ಶಿಖೆಯಲ್ಲಿ ಬಸವಾಕ್ಷರತ್ರಯವಾಗಿ ನಿಂದಾತ ನಮ್ಮ ಬಸ ವಣ್ಣ. ಎನ್ನ ಬ್ರಹ್ಮರಂಧ್ರದಲ್ಲಿ ಅಉಮ ಅಕ್ಷರತ್ರಯವಾಗಿ ಪ್ರಸಾದ ಪಂ ಚಾಕ್ಷರಿಯಾಗಿ ನಿಂದಾತ ನಮ್ಮ ಬಸವಣ್ಣ. ಎನ್ನ ಆಜ್ಞೆಯಲ್ಲಿ ಓಂಕಾರವಾ ಗಿ ನಿಂದಾತ ನಮ್ಮ ಬಸವಣ್ಣ. ಎನ್ನ ವಿಶುದ್ಧಿಯಲ್ಲಿ ಯಕಾರವಾಗಿ ನಿಂ ದಾತ ನಮ್ಮ ಬಸವಣ್ಣ. ಎನ್ನ ಅನಾಹತದಲ್ಲಿ ವಕಾರವಾಗಿ ನಿಂದಾತ ನ

ಮ್ಮ ಬಸವಣ್ಣ. ಎನ್ನ ಮಣಿಪೂರಕದಲ್ಲಿ ಶಿಕಾರವಾಗಿ ನಿಂದಾತ ನಮ್ಮ ಬಸ
ವಣ್ಣ. ಎನ್ನ ಸ್ವಾದಿಷ್ಠಾನದಲ್ಲಿ ಮಕಾರವಾಗಿ ನಿಂದಾತ ನಮ್ಮ ಬಸವಣ್ಣ.
ಎನ್ನ ಆಧಾರದಲ್ಲಿ ನಕಾರವಾಗಿ ನಿಂದಾತ ನಮ್ಮ ಬಸವಣ್ಣ. ಮತ್ತೆ
ಮಸ್ತಕದಲ್ಲಿ ಹಕಾರವಾಗಿ ನಿಂದಾತ ನಮ್ಮ ಬಸವಣ್ಣ. ಎನ್ನ ಬಲದಬದಿ
ಯಲ್ಲಿ ಓಂಕಾರವಾಗಿ ನಿಂದಾತ ನಮ್ಮ ಬಸವಣ್ಣ. ಎನ್ನ ಎಡದ ಬದಿಯಲ್ಲಿ
ಅಕಾರವಾಗಿ ನಿಂದಾತ ನಮ್ಮ ಬಸವಣ್ಣ. ಎನ್ನ ಹೃದಯದಲ್ಲಿ ಉಕಾರವಾ
ಗಿ ನಿಂದಾತ ನಮ್ಮ ಬಸವಣ್ಣ. ಎನ್ನ ಬೆನ್ನನಲ್ಲಿ ಮಕಾರವಾಗಿ ನಿಂದಾತ
ನಮ್ಮ ಬಸವಣ್ಣ. ॥ಸಾಕ್ಷಿ॥ ಅಕಾರಂ ವಾಮಭಾಗಂಚ। ಉಕಾರಂ ಪೂರ್ವ
ಮೇವಚ। ಮಕಾರಂ ಪಶ್ಚಿಮಶ್ಚೈವ। ಓಂಕಾರಂ ದಕ್ಷಿಣ ಸ್ತಥಾ॥ ಹಕಾರಂ
ಊರ್ಧ್ವಭಾಗಂಚ। ಪಂಚ ಪ್ರಣವ ಪ್ರಕೀರ್ತಿತಃ॥ ಎಂದುದಾಗಿ, ಎನ್ನ ಲಲಾ
ಟದಲ್ಲಿ ಓಂಕಾರವಾದಾತ ನಮ್ಮ ಬಸವಣ್ಣ. ಎನ್ನ ಬಲ ಭುಜದಲ್ಲಿ ನ
ಕಾರವಾಗಿ ನಿಂದಾತ ನಮ್ಮ ಬಸವಣ್ಣ. ಎನ್ನ ಎಡ ಭುಜದಲ್ಲಿ ಮಕಾರವಾಗಿ
ನಿಂದಾತ ನಮ್ಮ ಬಸವಣ್ಣ. ಎನ್ನ ನಾಭಿಯಲ್ಲಿ ಶಿಕಾರವಾಗಿನಿಂದಾತ ನಮ್ಮ
ಬಸವಣ್ಣ. ಎನ್ನ ಬಲದೊಡೆಯಲ್ಲಿ ವಕಾರವಾಗಿ ನಿಂದಾತ ನಮ್ಮ ಬಸ
ವಣ್ಣ. ಎನ್ನಎಡದೊಡೆಯಲ್ಲಿ ಯಕಾರವಾಗಿ ನಿಂದಾತ ನಮ್ಮ ಬಸವಣ್ಣ.
॥ಸಾಕ್ಷಿ॥ ಓಂಕಾರಂ ವಂದನಂ ದೇವೀ ನಮಾಕ್ಷರಂಭುಜದ್ವಯಂ। ಶಿಕಾ
ರಂ ದೇಹಮಧ್ಯಸ್ತು। ವಯಕಾರಂ ಪಾದದ್ವಯಂ ॥೧॥ ಎಂದುದಾಗಿ ಎ
ನ್ನ ಪಂಚಭೂತಾತ್ಮದಲ್ಲಿ ಓಂಕಾರವಾಗಿ ನಿಂದಾತ ಬಸವಣ್ಣ. ಎನ್ನ ದಶ
ವಿಧೇಂದ್ರಿಯದಲ್ಲಿ ನಕಾರವಾಗಿ ನಿಂದಾತ ಬಸವಣ್ಣ. ಎನ್ನ ಮನಪಂಚ
ಕದಲ್ಲಿ ಮಕರವಾಗಿ ನಿಂದಾತ ಬಸವಣ್ಣ. ಎನ್ನ ಪ್ರಾಣದಲ್ಲಿ ಶಿಕಾರವಾ
ಗಿ ನಿಂದಾತ ಬಸವಣ್ಣ. ಎನ್ನ ದಶವಾಯುಗಳಲ್ಲಿ ವಕಾರವಾಗಿ ನಿಂದಾ
ತ ಬಸವಣ್ಣ. ಎನ್ನ ತ್ರಿಗುಣದಲ್ಲಿ ಯಕಾರವಾಗಿ ನಿಂದಾತ ಬಸವಣ್ಣ
॥ಸಾಕ್ಷಿ॥ಓಂಕಾರಂಪಂಚಭೂತಾತ್ಮಕಂ। ನಕಾರಂದಶಇಂದ್ರಿಯಂ। ಮ
ಕಾರಂ ಮನಪಂಚಕಂ ಶಿಕಾರಂ ಪ್ರಾಣನಾಯಕಂ ॥ ವಕಾರಂ ದಶ
ವಾಯುನಾಂ। ಯಕಾರಂ ತ್ರಿಗುಣಂ ಭವೇತ್ ॥ ಎಂದುದಾಗಿ ಶಿವನ
ಆರು ಮುಖಗಳಲ್ಲಿ ಆರು ಪ್ರಣವಂಗಳು ಪುಟ್ಟಿದವು. ಈ ಆರು
ಪ್ರಣವಂಗಳನರಿಯದೆ ಪೂಜೆಯ ಮಾಡಿದೊಡೆ, ಆ ಪೂಜೆ ನಿಷ್ಫಲ.
॥ಸಾಕ್ಷಿ॥ ಷಡಕ್ಷರಂ। ಸಮಾಖ್ಯಾತಂ। ಷಡಾನನ ಸಮನ್ವಿತಗಂ ಷಟ್ಕೇ
ದ ಯೋಗಜಾನಾತಿ। ಪೂಜಾ ನಿಷ್ಫಲಂ ಭವೇತ್ ॥ ಎಂದುದಾಗಿ ಎನ್ನ

ಸರ್ವಾಂಗದಲ್ಲಿ ಸರ್ವ ಮಂತ್ರಮಯವಾಗಿ ನಿಂದಾತ ನಮ್ಮ ಬಸವಣ್ಣ ನೆಂದು ಎನ್ನೊಳಗೆ ತೋರಿದಾತ ನಮ್ಮ ಶಾಂತ ಕೂಡಲಸಂಗಮದೇವ.

೩೫. ಪಾದಪೂಜೆಯ ಮಾಡಿ ಪಾದತೀರ್ಥವ ಪಡಕೊಂಬ ಕ್ರಮವು ಎಂತೆಂದೊಡೆ, "ಸ್ಕಂದ ಪುರಾಣ ಸಾಕ್ಷಿ." ದೇಶಿಕಂ ಚರಣಾಂಗುಷ್ಠಂ ಪ್ರಣಮಂ ಲಿಖಿತಂ ತಥಾ। ಪಾದಪೂಜಾ ಇದಂ ಕೃತ್ವಾ ವಿಶೇಷಂ ಶೃಣು ಪಾರ್ವತಿ || ಎಂದುದಾಗಿ ಭಯಭಕ್ತಿ ಕಿಂಕುರ್ವಾಣತೆಯಿಂದ ಜಂಗಮಕ್ಕೆ ಪಾದಾರ್ಚನೆಯ ಮಾಡಿ, ಗದ್ದುಗೆಯನಿಕ್ಕಿ, ಮೂರ್ತವ ಮಾಡಿಸಿ, ಪಾದತೀರ್ಥವ ಪಡೆಕೊಂಬಾತನು ತನ್ನ ಕರಕಮಲವಂ ಮುಗಿದು, ಅಯ್ಯ ಹಸಾದ, ಮಹಾಪ್ರಸಾದ, ಶ್ರೀ ಪಾದಪದ್ಮಂಗಳಿಗೆ ಶರಣು ಶರಣಾರ್ಥಿ ಎಂದು, ಬ್ರಹ್ಮಾಂಡ ಪುರಾಣ ಸಾಕ್ಷಿ || ಪ್ರಣಮ್ಯ ದಂಡವದ್ಭೂಮ್ಯಾಂ। ಇಷ್ಟಮಂತ್ರ ಚರಾಚರೇತ್। ಗುರು ಶ್ರೀ ಪಾದಪದ್ಮಸ್ಯ ಗಂಧಪುಷ್ಪಾಕ್ಷತಾದಿಭಿಃ ॥ಎಂದುದಾಗಿ ದೀರ್ಘದಂಡ ನಮಸ್ಕಾರವಂ ಮಾಡಿ ಪಾದಪೂಜೆಯ ಅಪ್ಪಣೆಯ ತೆಗೆದುಕೊಂಡು, ಮೂರ್ತವ ಮಾಡಿ ಲಿಂಗವ ನಿರೀಕ್ಷಿಸಿ, ತನ್ನ ಅಂಗೈಯಲ್ಲಿ ಹಕಾರ ಪ್ರಣಮವ ವಿಭೂತಿಯಲ್ಲಿ ಬರೆದು ಆ ಜಂಗಮದ ಎರಡು ಪಾದಗಳ ತನ್ನ ಕರಕಮಲದಲ್ಲಿ ಹಿಡಿದುಕೊಂಡು, ಎರಡು ಅಂಗುಷ್ಠದ ಮೇಲೆ ಪ್ರಣಮವಂ ಬರೆದು ಅಷ್ಟವಿಧಾರ್ಚನೆ ಷೋಡಶೋಪಚಾರವಂ ಮಾಡಿ, ನಮಸ್ಕರಿಸಿ, ಆ ಪೂಜೆಯ ನಿಳುಹಿ, ಬಟ್ಟಲೊಳು ಪ್ರಣಮವಂ ಬರೆದು, ತಂಬಿಗೆಯ ಉದಕದೊಳು ಪ್ರಣಮವಂ ಬರೆದು, ಬ್ರಹ್ಮರಂಧ್ರದಲ್ಲಿರ್ದ ಸತ್ಯೋದಕವೆಂದು ಭಾವಿಸಿ, ಆ ಉದಕವ ಬಲದಂಗುಷ್ಠದ ಮೇಲೆ ನೀಡುವಾಗ ಆರು ವೇಳೆ ಷಡಕ್ಷರಮಂ ಸ್ಮರಿಸಿ ಇಷ್ಟಲಿಂಗವೆಂದು ಭಾವಿಸಿ, ಎಡದಂಗುಷ್ಠದ ಮೇಲೆ ನೀಡುವಾಗ ಐದು ವೇಳೆ ಪಂಚಾಕ್ಷರಿಯಂ ನೆನೆದು ಪ್ರಾಣಲಿಂಗವೆಂದು ಭಾವಿಸಿ ಎರಡು ಅಂಗುಷ್ಠದ ಮಧ್ಯದಲ್ಲಿ ನೀಡುವಾಗ ಒಂದೇ ವೇಳೆ ಓಂ ಬಸವಲಿಂಗಾಯನಮಃ ಎಂದು ಸ್ಮರಿಸಿ, ಭಾವಲಿಂಗವೆಂದು ಭಾವಿಸಿ, ದ್ರವವನೆಲ್ಲವ ತೆಗೆದು ಮತ್ತೆ ಪೂಜೆಯ ಮಾಡಿ ನಮಸ್ಕರಿಸಿ, ಶರಣಾರ್ಥಿ ಎಂದು ಆ ಜಂಗಮವು ಸಲಿಸಿದ ಮೇಲೆ ತಾನು ಸಲಿಸುವದು ಸಾಕ್ಷಿ॥ ಜಂಗಮಂ ಪಾದತೀರ್ಥಂಚ। ಇಷ್ಟಲಿಂಗಂ ಸಮರ್ಪಿತಂ॥ ಪಂಚಾಂಗುಲಿಧಾರಯೇತ್ ಸದ್ಯನ್ಮುಕ್ತಿನಯಸಂಶಯಃ ॥ ಎಂದುದಾಗಿ ಪಂಚಾಂಗುಲಿಗಳೆಂಬ ಪಂಚಾಕ್ಷರಿಯಿಂದ ಲಿಂಗಕ್ಕರ್ಪಿಸಿ ಆ ಪಂಚಾಂಗುಲಿಯ

ಜಿಹ್ವೆಯಿಂದ ಸ್ವೀಕರಿಸುವುದು ಗುರುಪಾದೋದಕ. ಲಿಂಗವನೆತ್ತಿ ಅಂಗೈಯಲ್ಲಿರ್ದ ತೀರ್ಥವ ಸಲಿಸುವುದು ಲಿಂಗಪಾದೋದಕ. ಬಟ್ಟಲೊಳಗಿರ್ದ ತೀರ್ಥವ ಸಲಿಸುವದು ಜಂಗಮ ಪಾದೋದಕ. ಈ ತ್ರಿವಿಧ ಪಾದೋದಕ ಒಂದೇ ಎಂದರಿವುದು. ॥ಸಾಕ್ಷಿ॥ ಸಪ್ತಸಾಗರ ಪರ್ಯಂತ । ತೀರ್ಥಸ್ನಾನ ಯಥಾಫಲಂ ॥ ಗುರೋರಂಘ್ರಿ ಜಲಂ ಬಿಂದು । ಸಹಸ್ರಂಶನಪೂರಯೇತ್ ॥ ಎಂದುದಾಗಿ ಹೀಗೆ ಕ್ರಮವರಿದು, ಸಲಿಸುವರ್ಗೆ ಮುಕ್ತಿಯಾಗುವದಕ್ಕೆ ತಡವಿಲ್ಲ. ॥ಸಾಕ್ಷಿ॥ ಪಾದಾಂಬುಜ ಪೂರಿತ ಪಾತ್ರಂ । ಜಂಗಮಸ್ಯ ಪುರಸ್ಥಿತಂ । ಪರಿಗೃಹ್ಯ ಸಮಾದಿತ್ಯ ಪೀತ್ವಾ ತತ್ರಾಪಿ ನಿಕ್ಷಿಪೇತ್ ॥ ಎಂದುದು. ಎಂದಾತ ನಮ್ಮ ಶಾಂತ ಕೂಡಲಸಂಗಮದೇವ.

೩೬. ಧ್ಯಾಸ, ಧಾರಣ, ಸಮಾಧಿ ಎಂತೆಂದೊಡೆ, ಸದ್ಗುರುವೇ ಕರುಣಿಪುದು, ಕೇಳ್ಮೆ ಮಗನೇ. ಧ್ಯಾನಯೋಗವೆಂದೊಡೆ ಆಧಾರ ಮೊದಲಾಗಿ ಆಜ್ಞೆ ಕಡೆತನಕ ಇಷ್ಟಲಿಂಗವ ಧ್ಯಾನಿಸಿ, ಅರ್ಚಿಸಿ, ಪೂಜಿಸಿ, ಅಲ್ಲಿ ತ್ರಿಕೂಟಸಂಗಮದಲ್ಲಿ ಗಂಗೆ, ಯಮುನೆ, ಸರಸ್ವತಿ ನದಿಗಳು ಕೂಡಿದ ತಾವಿನಲ್ಲಿ ಪ್ರಮಥ ಗಣಂಗಳು ಮೊದಲಾಗಿ ಅಲ್ಲಿ ಮಜ್ಜನವ ನೀಡುತಿಹರು. ಅಲ್ಲಿ ಸೂರ್ಯಪೀಠದ ಮೇಲೆ ಗುರುವು ಮೂರ್ತವ ಮಾಡಿರಲು ಅವರ ಪಾದಾರ್ಚನೆಯ ಮಾಡಿ ಪಾದೋದಕ ನದಿಗಳಲ್ಲಿ ಸ್ನಾನವ ಮಾಡಿ ಅವರ ಸಂಗಡ ಶಿಖಾಸ್ಥಾನಕ್ಕೆ ಹೋಗಿ, ಆ ಶಿಖಾಚಕ್ರದಲ್ಲಿರ್ದ ಬಸವಾದಿ ಪ್ರಮಥ ಗಣಂಗಳು, ಅವರ ಸಹವಾಗಿ ಏಳನೆಯ ಮಂಟಪಕ್ಕೆ ಹೋಗಿ, ಅಲ್ಲಿ ಪಶ್ಚಿಮ ಚಕ್ರದಲ್ಲಿ ನಿರಂಜನ ಜಂಗಮವು ಅಲ್ಲಿ ಅಸಂಖ್ಯಾತ ಪ್ರಮಥರು ನೂತನ ಗಣಂಗಳು ಸಹವಾಗಿ ಲಿಂಗಾರ್ಚನೆಯ ಮಾಡುತ್ತಿಹರು. ಆ ಲಿಂಗಾರ್ಚನೆ ಎಂತೆಂದೊಡೆ ಮೊದಲೆ ಚಿದ್ಭಸ್ಮವನೇ ಧರಿಸಿ ಆನಂದೋದಕದಿಂದ ಲಿಂಗಕ್ಕೆ ಕ್ರಿಯಾ ಮಜ್ಜನವ ನೀಡಿ ಅಷ್ಟತನುವಿನ ಅಷ್ಟಸುಗಂಧವನೇ ಧರಿಸಿ, ಕರಣಂಗಳ ಸಂಚಲವಿಲ್ಲದೆ, ಗುಣತ್ರಯದಕ್ಷತೆಯ ಧರಿಸಿ, ಸಾವಿರದ್ದೈವತ್ತು ಪ್ರಣಮದ ಪರಿಮಳವ ತುಂಬಿರ್ದ ಪುಷ್ಪವ ಧರಿಸಿ ದಶವಾಯುಗಳ ಗುಣ ಧರ್ಮ ಕರ್ಮಂಗಳ ಸುಟ್ಟು ಸದ್ವಾಸನೆಯ ಧೂಪವ ಬೀಸಿ, ಹೃದಯವೆಂಬ ಪ್ರಣತಿಯೊಳು ದೃಢಚಿತ್ತವೆಂಬ ಬತ್ತಿಯನಿರಿಸಿ, ಅರುಹೆಂಬ ತೈಲವ ನೆರೆದು, ಮಹಾಜ್ಞಾನವೆಂಬ ಜ್ಯೋತಿಯ ಮುಟ್ಟಿಸಿ, ಅದರಿಂದೊದಗಿರ್ದ ಏಕಾರತಿ ತ್ರಿಯಾರತಿ ಪಂಚಾರತಿಗಳ ಮಹಾಪ್ರಕಾಶದ ದೀಪವ ಬೆಳಗಿ ಕ್ರಿಯಾಜ್ಞಾನ

ಇಚ್ಛಾದಿ ಪರಾಚಿತ್‌ಶಕ್ತಿ ಮೊದಲಾದವರು ಆರತಿಯ ಪಿಡಿದಿಹರು. ಆ ಮೇಲೆ ಪಾದತೀರ್ಥವ ಸಲಿಸಿ ಮತ್ತೆ ಐವತ್ತು ದಳದಲ್ಲಿರ್ದ ಐವತ್ತು ರುದ್ರಕನ್ನಿಕೆಯರು ಅಡಿಗೆಯ ಮಾಡಿ ಅವರಿಗೆ ಇಚ್ಛಾಪದಾರ್ಥವ ನೀಡುತ್ತಿಹರು. ಅವರೊಕ್ಕು ಮಿಕ್ಕ ಪ್ರಸಾದವನುಂಡು ಫಲ ಪದ ಕಾಂಕ್ಷೆಗಳಿಲ್ಲದೆ ಉಲುಹಡಗಿದ ನಿಜಪ್ರಭಾಲತೆ ಪರ್ಣದ ವೀಳೆಯವನಿತ್ತು, ಅವರ ತಾಂಬೂಲ ಪ್ರಸಾದವನುಂಡು ಪರಿಣಾಮಿಸಿ, ಕರಮನಭಾವಂಗಳಿಗೆ ಪ್ರತ್ಯಕ್ಷವಾಗಿ ಕಂಡು ಧ್ಯಾನಿಸುವವೇ ಧ್ಯಾನಯೋಗ. ಇನ್ನು ಧಾರಣಯೋಗದ ವಿವರ. ಕರದೊಳಗೆ ಇಷ್ಟಲಿಂಗವ ಮೂರ್ತವ ಮಾಡಿಸಿ, ಮನದೊಳಗೆ ಪ್ರಾಣಲಿಂಗವ ಮೂರ್ತವ ಮಾಡಿಸಿ, ಭಾವದೊಳಗೆ ತೃಪ್ತಿಲಿಂಗವ ಮೂರ್ತವ ಮಾಡಿಸಿ ಕರಮನಭಾವದೊಳಗೆ ಪ್ರತ್ಯಕ್ಷವಾಗಿ ಕಂಡು, ಧರಿಸಿಕೊಂಡಿಪ್ಪುದೀಗ ಧಾರಣಯೋಗ. ಇನ್ನು ಸಮಾಧಿಯೋಗದ ವಿವರ. ಆ ಇಷ್ಟ, ಪ್ರಾಣ, ಭಾವಲಿಂಗವ ಏಕವ ಮಾಡಿ, ಅಲ್ಲಿ ಐಕ್ಯವಾಗಿಪ್ಪುದೀಗ ಸಮಾಧಿಯೋಗ ಎಂದರುಹಿದಾತ ನಮ್ಮ ಶಾಂತ ಕೂಡಲಸಂಗಮದೇವ.

೩೭. ನಿರಾಕಾರ ಪರವಸ್ತು ಹೇಗೆಂದೊಡೆ, ಹೆಣ್ಣಲ್ಲ, ಗಂಡಲ್ಲ,, ಬೀಜವಲ್ಲ, ವೃಕ್ಷವಲ್ಲ, ಆಕಾರವಲ್ಲ, ನಿರಾಕಾರವಲ್ಲ, ಶ್ವೇತನಲ್ಲ, ಪೀತನಲ್ಲ ಹರಿತನಲ್ಲ, ಮಾಂಜಿಷ್ಟನಲ್ಲ, ಕಪೋತನಲ್ಲ, ಮಾಣಿಕ್ಯನಲ್ಲ. ಆತನು ವರ್ಣಾತೀತನು, ವಾಙ್ಮನಕ್ಕಗೋಚರನು. ಇಂತಪ್ಪ ವಸ್ತುವಿನೊಳಗೆ ಬೆರೆವ ಪರಿ ಎಂತೆಂದೊಡೆ, ಗುರುವಿನ ವಾಕ್ಯವಿಡಿದು ಆಚರಿಸಿದವನು ಐಕ್ಯನು. ಎಲೆಗಳೆದ ವೃಕ್ಷದಂತೆ, ಸಮುದ್ರದೊಳಗೆ ನೊರೆ, ತೆರೆ, ಬುದ್ಬುದಾಕಾರವಡಗಿದ ಹಾಗೆ ಭಕ್ತನು ಮಹೇಶ್ವರನೊಳಡಗಿ, ಮಹೇಶ್ವರ ಪ್ರಸಾದಿಯೊಳಡಗಿ, ಆ ಪ್ರಸಾದಿ ಪ್ರಾಣಲಿಂಗಿಯೊಳಡಗಿ, ಆ ಪ್ರಾಣಲಿಂಗಿ ಶರಣನೊಳಡಗಿ, ಆ ಶರಣ ಐಕ್ಯನೊಳಡಗಿ, ಆ ಐಕ್ಯ ನಿರ್ವಯಲೊಳಡಗಿ, ಕ್ಷೀರ ಕ್ಷೀರ ಕೂಡಿದಂತೆ, ನೀರು ನೀರು ಕೂಡಿದಂತೆ ಜ್ಯೋತಿಜ್ಯೋತಿಯ ಕೂಡಿದಂತೆ, ಬಯಲು ಬಯಲ ಕೂಡಿದಂತೆ, ಚಿದ್ಬಯಲಾಗಿ ನಿಂದನಿಲವ ಲಿಂಗದೊಳರುಹಿ ಮೂವತ್ತಾರು ಲಿಂಗದ ಮುಖದಿಂದ ಮೂವತ್ತಾರು ವಚನವ ಓದಿದವರು ಕೇಳಿದವರು ಸದ್ಯನ್ಮುಕ್ತರಪ್ಪುದು ತಪ್ಪದು ಎಂದಾತ ನಮ್ಮ ಶಾಂತ ಕೂಡಲಸಂಗಮದೇವ.

# ಸಂಗನಬಸವೇಶ್ವರ ವಚನಗಳು.

೧. ಅಯ್ಯಾ, ವರಕುಮಾರ ದೇಶಿಕೇಂದ್ರನೇ ಕೇಳಾ, ಚಿದ್ಘನ ಶರಣ ಪ್ರಸಾದ ಲಿಂಗವಾಗಿ ನಿಂದ ನಿಜಾಚರಣೆಯ ನಿಲುಕಡೆಯ ಕಲ್ಯಾಣ ಪಟ್ಟಣದ ಅನುಭವ ಮಂಟಪದ ಶೂನ್ಯ ಸಿಂಹಾಸನದಲ್ಲಿ ಬಸವ ಚನ್ನಬಸವ ಸಿದ್ಧರಾಮ ಅಕ್ಕಮಹಾದೇವಿ ನೀಲಲೋಚನೆ ಮೊದಲಾದ ಸಕಲ ಪ್ರಮಥ ಗಣಂಗಳು ಮಹಾ ಪ್ರಭುಸ್ವಾಮಿಗಳಿಗೆ ಅಭಿವಂದಿಸಿ ಹಸ್ತಾಂಜುಳಿತರಾಗಿ, ಎಲೈ ಮಹಾಪ್ರಭುವೇ, ನಿನ್ನ ಅನಾದಿ ಷಟ್ಸ್ಥಲ ನಿರಾಭಾರಿ ವೀರಶೈವ ಶರಣನ ನಿಜಾಚರಣೆಯ ನಿಲುಕಡೆಯ ದಯವಿಟ್ಟು ಕರುಣಿಸಬೇಕಯ್ಯ, ಮಹಾ ಗುರುವೇ, ಎಂದು ಬೆಸಗೊಂಡಲ್ಲಿ, ಆಗ ಮಹಾಪ್ರಭುವು ಲಿಂಗಾಂಗಕ್ಕೆ ಭಿನ್ನವಿಲ್ಲದೆ ಹಸ್ತ ಮಸ್ತಕ ಸಂಯೋಗವ ಮಾಡಿ ವೇಧಾ, ಮಂತ್ರ, ಕ್ರಿಯಾ ದೀಕ್ಷೆಯ ನಿತ್ತು, ಇಪ್ಪತ್ತೊಂದು ತೆರದ ವಿಚಾರವನರುಪಿ, ನೂರೊಂದು ಸ್ಥಲದಾಚರಣೆ, ಇನ್ನೂರುಹದಿನಾರು ಸ್ಥಲದ ಸಂಬಂಧವ ತೋರಿ, ಸರ್ವಾಚಾರ ಸಂಪತ್ತಿನ ಸ್ವಸ್ವರೂಪು ನಿಲುಕಡೆಯ ತೋರಿಸಿ, ಸಾಕಾರ ನಿರಾಕಾರದ ನಿಜದ ನಿಲುಕಡೆಯನರುಹಿ, ನಿಜಶಿವಯೋಗದ ನಿರ್ಣಯಲವ ಕರುಣಿಸಿ, ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣ ಅವಿರಳಪರಂಜ್ಯೋತಿ ಸ್ವರೂಪತಾವೆಂದರುಪಿದರು ನೋಡಾ. ಇಂತು ಚನ್ನಬಸವೇಶ್ವರ ಸ್ವಾಮಿಗಳು ಬೆಸಗೊಂಡು, ತಮ್ಮ ಚಿದಂಗ ಸ್ವರೂಪರಾದ ಚಿದ್ಘನ ಶರಣ ನಿರ್ಲಜ್ಜಶಾಂತಯ್ಯನೆಂಬ ಶಿವಶರಣನ ಮುಖದಲ್ಲಿ ಮೋಳಿಗಯ್ಯ ಮೊದಲಾದ ಸಕಲಪ್ರಮಥರ್ಗೆ ಬೋಧಿಸಿದರು ನೋಡಾ. ಅದೇ ಪ್ರಸಾದವನ್ನೇ ನಿರ್ಲಜ್ಜ ಶಾಂತಯ್ಯನೆಂಬ ದೇಶಿಕೇಂದ್ರನು ಚಂಗಣಗಲ ಮಂಟಪದ ರೇವಣ ಸಿದ್ಧೇಶ್ವರಂಗೆ ಬೋಧಿಸಿದರು ನೋಡಾ. ಅದೇ ಪ್ರಸಾದವನ್ನೇ ರೇವಣ ಸಿದ್ಧೇಶ್ವರನೆಂಬ ದೇಶಿಕೇಂದ್ರನು ಜ್ಞಾನೋದಯವಾಗಿ ತಮ್ಮಡಿಗೆರಗಿ ಬಂದ ಶಿಷ್ಯೋತ್ತಮ ಶಿವಶರಣರ್ಗೆ ಸ್ವಾನುಭವ ಸೂತ್ರವ ಬೋಧಿಸುತಿರ್ದರು ನೋಡಾ.

ಅದೇ ಮಹಾ ಪ್ರಸಾದವ ನಿನ್ನ ಶ್ರೋತ್ರಮುಖದಲ್ಲಿ ಮಹಾಮಂತ್ರ ಮೂರ್ತಿಯಾಗಿ ನೆಲೆಗೊಂಡಿರ್ಪ ಪ್ರಸಾದ ಲಿಂಗಮುಖದಲ್ಲಿ ಅರುಹಿಸಿ ಕೊಟ್ಟೆವು. ಕೇಳಿ ಮಹಾ ಲಿಂಗಮುಖದಲ್ಲಿ ಸಂತೃಪ್ತನಾಗಿ ಪರಿಣಾಮ ಪ್ರಸಾದದಲ್ಲಿ ಲೋಲುಪ್ತನಾಗಾ ಎನ್ನಾಜ್ಞಾ ಮಂಟಪದಲ್ಲಿ ಮೂರ್ತಿ ಗೊಂಡಿರುವ ಸಂಗನ ಬಸವೇಶ್ವರಾ.

ಆಜ್ಞೋಪ ದೀಕ್ಷೆ—೨. ಅಯ್ಯ ಪ್ರಥಮದಲ್ಲಿ ಇಪ್ಪತ್ತೊಂದು ತೆರದ ದೀಕ್ಷೆಯು ಕರುಣಿಸಿಹೆವು ನೋಡು. ಆದರ ವಿಚಾರವೆಂತೆಂದೊಡೆ:-ಅಷ್ಟ ತನ. ಅಷ್ಟ ಭೋಗಂಗಳಭಿಲಾಷೆಯ ನೀಗಿ, ಸರ್ವಸಂಗ ಪರಿತ್ಯಾಗತ್ವ ದಿಂದ ನಿಜನೈಷ್ಠೆಕರಿಗೊಂಡು, ಸಚ್ಚಿದಾನಂದದಿಂದ ನಿಂದ ನಿಜೋತ್ತ ಮಂಗೆ ಶ್ರೀಗುರು ಲಿಂಗಜಂಗಮವು ಕೃಪಾದೃಷ್ಟಿಯಿಂದ ನೋಡಿ ಜನ್ಮ ಜರಮರಣಂಗಳಿಗಂಜ ಬೇಡೆಂದು ಅಂಗಮನ-ಪ್ರಾಣಂಗಳ ಮೇಲೆ ಅಭಯ ಹಸ್ತವನಿತ್ತು ಸಂಸಾರ ಪ್ರಪಂಚಕ್ಕೊಳಗಾದ ಪಂಚಮಹಾ ಪಾತಕರಂತೆ ನಡೆಯ ಬಾರದೆಂದು ಪಾದಕ್ಕಾಜ್ಞೆಯ ಮಾಡಿದರಯ್ಯ. ಜಡಮರ್ತ್ಯರು ನುಡಿದಂತೆ ನುಡಿಯ ಬೇಡವೆಂದು ವಾಣಿಗೆ ಆಜ್ಞೆಯ ಮಾಡಿದಿರಯ್ಯ. ಪರದೈವ ಪರದ್ರವ್ಯ ಪರಸ್ತ್ರೀಯರ ಮುಟ್ಟಬೇಡೆಂದು ಪಾಣಿಗೆ ಆಜ್ಞೆಯ ಮಾಡಿದಿರಯ್ಯ. ಪರಸ್ತ್ರೀಯರ ಸಂಗದಿಂದ ಜನಿತ ತಪ್ಪದೆಂದು, ಆದರಿಂದ ಬಿಟ್ಟ ಹುಳಗೊಂಡವಿಲ್ಲವೆಂದು ಮಾಣಿಗೆ ಆಜ್ಞೆಯ ಮಾಡಿದಿರಯ್ಯ. ಇಂತು ಭವಿಮಾರ್ಗವನುಳಿದು ಸತ್ಯನಡೆ, ಸತ್ಯನುಡಿ, ಸತ್ಯಪಾಣಿ ಸತ್ಯ ಮಾಣಿಯಾದರೆ ನಿನ್ನ ಪಾದ ಮೊದಲಾಗಿ ಮಾಣಿಯೆ ಅಂತ್ಯವಾದ ಸರ್ವಾಂಗದಲ್ಲಿ ಚತುರ್ವಿಧ ಸಾರಾಯ ಸ್ವರೂಪ ಗುರುಲಿಂಗ ಜಂಗಮ ಪ್ರಸಾದವಾಗಿ, ಕ್ಷೀರದೊಳಗೆ ಘೃತವಡಗಿದಂತೆ ಏಕ ಸ್ವರೂಪನಿಂದ ನಿಮಿಷಾರ್ಧವಗಲದೆ ನಿಜವಸ್ತು ಬೆರೆದಿರ್ಪುದು ನೋಡಾ, ಎಂದು ಅನುಭವ ಮಂಟಪದಲ್ಲಿ ಶ್ರೀಗುರು ನಿಃಕಳಂಕ ಚನ್ನಬಸವ ರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ಗಣಸಾಕ್ಷಿಯಾಗಿ ಆಜ್ಞೋಪ ದೀಕ್ಷೆಯ ಮಾಡಿದರು ನೋಡಾ ಸಂಗನ ಬಸವೇಶ್ವರಾ.

**ಉಪಮಾದೀಕ್ಷೆ:**—೩. ಅಯ್ಯಾ, ನಿನ್ನಷ್ಟತನುವಿನ ಮಧ್ಯದಲ್ಲಿ ಆ ಪರಬ್ರಹ್ಮ ನಿಜವಸ್ತುವೆ ನಿನ್ನ ಪಾವನ ನಿಮಿತ್ಯಾರ್ಥವಾಗಿ ಅಷ್ಟಾವರಣ ಸ್ವರೂಪಿನಿಂದ ನೆನೆದಿರ್ಪರು ನೋಡಾ. ಆದರ ವಿಚಾರವೆಂತೆಂದೊಡೆ, ನಿನ್ನ ಸ್ಥೂಲತನುವಿನ ಮಧ್ಯದಲ್ಲಿ ಅರುಹೇ ಗುರುವಾಗಿ ನೆಲಿಸಿರ್ಪುದು

ನೋಡಾ. ನಿನ್ನ ಸೂಕ್ಷ್ಮ ತನುವಿನ ಮಧ್ಯದಲ್ಲಿ ಸುಜ್ಞಾನವೇ ಲಿಂಗವಾಗಿ ನೆಲಿಸಿರ್ಪುದು ನೋಡಾ. ನಿನ್ನ ಕಾರಣ ತನುವಿನ ಮಧ್ಯದಲ್ಲಿ ಸ್ವಾನು ಭಾವವೇ ಜಂಗಮವಾಗಿ ನೆಲಿಸಿರ್ಪುದು ನೋಡಾ. ನಿನ್ನ ನಿರ್ಮಲತ ನುವಿನ ಮಧ್ಯದಲ್ಲಿ ಕರುಣಾಮೃತ ಪಾದೋದಕವಾಗಿ ನೆಲಿಸಿರ್ಪುದು ನೋಡಾ. ನಿನ್ನ ಆನಂದ ತನುವಿನ ಮಧ್ಯದಲ್ಲಿ ಕೃಪಾ ಪ್ರಸಾದವಾಗಿ ನೆಲಿಸಿರ್ಪುದು ನೋಡಾ. ನಿನ್ನ ಚಿದ್ರೂಪ ತನುವಿನ ಮಧ್ಯದಲ್ಲಿ ಚಿತ್ಪ್ರಕಾಶ ಭಸಿತವಾಗಿ ನೆಲಿಸಿರ್ಪುದು ನೋಡಾ. ನಿನ್ನ ಚಿನ್ಮಯತನು ಮಧ್ಯದಲ್ಲಿ ಚಿತ್ಕಾಂತೆ ರುದ್ರಾಕ್ಷಿಯಾಗಿ ನೆಲಿಸಿರ್ಪುದು ನೋಡಾ. ನಿನ್ನ ಚಿತ್ಪ್ರಕಾಶ ತನುವಿನ ಮಧ್ಯದಲ್ಲಿ ಚಿದಾನಂದ ಮಂತ್ರವಾಗಿ ನೆಲಿಸಿರ್ಪುದು ನೋಡಾ. ಇಂತು ನಿನ್ನ ಸರ್ವಾಂಗದಲ್ಲಿ ಅಷ್ಟಾವರಣ ಸ್ವರೂಪಿನಿಂದ ಪರಾತ್ಪರ ನಿಜವಸ್ತು ನೆಲಿಸಿರ್ಪುದು. ನಿನ್ನ ನಿರ್ಮಾಯ ಚಿತ್ತು ಮಹಾ ಜ್ಞಾನ ನಿಜದೃಷ್ಟಿಯಿಂದ ನಿನ್ನ ನೀ ತಿಳಿದು ನೋಡಾ. ಎಂದು ಗಣಸಾಕ್ಷಿಯಾಗಿ ಶ್ರೀ ಗುರು ನಿಃಕಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜ ಶಾಂತದೇಶಿಕೋತ್ತಮಂಗೆ ಉಪಮಾದೀಕ್ಷೆ ಇಂತು ಉಂಟೆಂದು ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ.

**ಸ್ವಸ್ತಿಕಾರೋಹಣದೀಕ್ಷೆ**:—೪ ಅಯ್ಯಾ. ಶ್ರೀ ಗುರುಲಿಂಗ ಜಂಗಮವೇ ರುದ್ರಲೋಕದ ರುದ್ರ ಗಣಂಗಳಿಗೆ ಶಾಂಭವ ಗಣಂಗಳಿಗೆ ನಾಗ ಗಣಂಗಳಿಗೆ ದೇವಗಣಂಗಳಿಗೆ ಮರ್ತ್ಯಲೋಕದ ಮಹಾ ಗಣಂಗಳಿಗೆ ಅವರವರ ಮನಭಾವ ಕರಣಂಗಳು ಹ್ಯಾಗುಂಟು ಹಾಗೆ ಪ್ರಸನ್ನತೆ ಪ್ರಸಾದವಾಗಿರ್ಪುದು ನೋಡಾ. ಸ್ವರ್ಗ ಮರ್ತ್ಯ ಪಾತಾಳಲೋಕದಲ್ಲಿ ಚರಿಸುವ ಹರಿ ಸುರ ಬ್ರಹ್ಮಾದಿ ದೇವದಾನವ ಮಾನವ ಮನು ಮುನಿಗಳೆಲ್ಲಾ ಅತ್ಯತಿಷ್ಠಾದ್ದಶಾಂಗುಲವೆಂದು ಹೊಗಳುವ ಶೃತಿ ಎಂತೋ ಹಾಗೆ ಅವರವರ ಮನದಂತೆ ಮಹಾದೇವನಾಗಿ ಫಲಪದಗಳ ಕೊಟ್ಟು, ದುಷ್ಟ ನಿಗ್ರಹ ಶಿಷ್ಟ ಪ್ರತಿಪಾಲಕತ್ವದಿಂದ ಸರ್ವಲೋಕಂಗಳಿಗೆ ಸೂತ್ರಧಾರಿಗಳಾಗಿರ್ಪರು ನೋಡಾ. ಇಂತು ಏಕಮೇವ ಪರಬ್ರಹ್ಮವೆಂಬ ಶೃತಿಯು ದಿಟವ ಮಾಡಿ, ಪರಮ ಸ್ವಸ್ಥಿರ ಮಂಟಪದ ಮೇಲೆ ಶಿವಭಕ್ತಿ ಅಂಗಲಿಂಗವೆಂಬ ಉಭಯ ನಾಮವಳಿದು ಶಿಷ್ಯರೂಪಿನಿಂದ ಕುಳ್ಳಿರಿಸಿ ದೀಕ್ಷಾ ಪಾದೋದಕ ಮಿಶ್ರವಾದ ಗೊಮೂತ್ರದಿಂದ ಸಪ್ತಧಾತು ಸಂಬಂಧವಾದ ಸಪ್ತ ವ್ಯಸನ ಸಂಬಂಧವಾದ ಅಂಗ ಇಂತು ಲಿಂಗದ ಮಲಿನದ ಭಾವಲಿಂಗ

ದ ಶಿಲಾಭಾವವ ಕಳೆದು ಕ್ಷೀರ ಘೃತ ರಂಭಾಯಿಕ್ಷುಮಧು ಯುಕ್ತವಾದ ರಸ ಪಂಚಾಮೃತವ ಜಂಗಮ ಚರಣೋದಕ ಮಿಶ್ರದಿಂದಭಿಷೇಕವ ಮಾಡಿ ಸಿ, ಅದರಿಂ ಮೇಲೆ ಗುರುಪಾದೋದಕದಲ್ಲಿ ಶರಣ ಗಣಂಗಳ ಹಸ್ತೋ ದಕ ಮಂತ್ರೋದಕ ಶುದ್ಧೋದಕ ಗಂಧೋದಕ ಪುಷ್ಪೋದಕವೆಂಬ ಪಂಚ ಪರಮಾನಂದ ಜಲದಿಂದ ಅಭ್ಯಂಗ ಸ್ನಾನವ ಮಾಡಿಸಿ, ಹಿಂದು ಮುಂದಣ ಕಾಲಕಾಮರ ಭಯಕ್ಕಂಜ ಬೇಡೆಂದು ತ್ರಿವಿಧಂಗುಳ ಪ್ರಮಾಣವಾದ ದರ್ಭೆಯಂತು ಮಾಡಿ ತ್ರಿವಿಧ ಮಂತ್ರ ಸ್ಮರಣೆಯಿಂದ ಕಟಿಯಲ್ಲಿ ಧರಿಸಿದ ರಯ್ಯ. ಅರಿವೈರಿಗಳಿಗೆ ಒಳಗಾಗಬೇಡವೆಂದು ಷಡಂಗುಲ ಪ್ರಮಾಣವಾದ ರಂಭಾ ಪಟ್ಟೆಯ ಕೌಪೀನವ ಮಾಡಿ ಷಡಕ್ಷರ ಮಂತ್ರ ಸ್ಮರಣೆಯಿಂದ ಹರಿಯುಜದ್ವಾರಗಳ ಬಂಧಿಸಿದರಯ್ಯ. ಅದರಿಂ ಮೇಲೆ ನಾರಂಗ ಶಾಟಿ ಯ ಪವಿತ್ರತೆಯಿಂ ಹೊದ್ದಿಸಿ, ಶ್ರೀ ಗುರು ದೇವನ ಚರಣಕಮಲಕ್ಕೆ ಅಷ್ಟಾಂಗ ಪ್ರಣತನ ಮಾಡಿಸಿ ಶಿವಶರಣ ಭಕ್ತ ಮಹೇಶ್ವರರು ಗಳಿಗೆಲ್ಲ ಹುಸಿ ನುಡಿಯ ನುಡಿಯದೆ ದಿಟವಬಿಡದೆ, ಅಶ್ಮತ್ವದಿಂದ ನಡೆನುಡಿ ಕೊ ಟ್ಟು ಕೊಂಬ ವಿಚಾರಂಗಳ ಶ್ರತ ಮಾಡಿದಲ್ಲಿ, ಶ್ರೀ ಗುರುದೇವನು ಶರ ಣಗಣ ಒಪ್ಪಿಗೆಯಿಂದ ಶಿಷ್ಯನ ಮಸ್ತಕದ ಮೇಲೆ ಅಭಯ ಹಸ್ತವನಿಟ್ಟು, ಗುರು ಶಿಷ್ಯ ಭಾವವಳಿದು, ಗುರುವಿನ ಸೂತ್ರವ ಶಿಷ್ಯ ಹಿಡಿದು ಶಿಷ್ಯನ ಸೂತ್ರವ ಗುರುವು ಹಿಡಿದು, ಅಂತರಂಗ ಬಹಿರಂಗದಲ್ಲಿ ಶಿವಯೋಗಾನು ಸಂಧಾನದಿಂದ ಏಕರೂಪವಾಗಿ ಭೃತ್ಯರಿಂದ ಕಲಶಾರ್ಚನೆಯ ರಚಿಸಿ, ಪ್ರಮ ಥಗಣಾರಾಧ್ಯ ಭಕ್ತ ಮಾಹೇಶ್ವರರೊಡಗೂಡಿ, ನವರತ್ನ ಖಚಿತವಾದ ಶೂ ನ್ಯ ಸಿಂಹಾಸನದ ಮೇಲೆ ಮೂರ್ತಿಗೊಂಡಿರುವಂಥ ಮಂತ್ರ ಮೂರ್ತಿ ನಿರಂ ಜನ ಜಂಗಮಕ್ಕೆ ವಿಭೂತಿ ವೀಳ್ಯೆ ಸುವರ್ಣ ಕಾಣಿಕೆ ದಶಾಂಗ ಘನ ಸಾರ ಪುಷ್ಪದ ಮೇಲೆ ವಸ್ತ್ರಾಭರಣ ಮೊದಲಾಗಿ ಸಮಸ್ತ ಪದಾರ್ಥಂ ಗಳ ಪ್ರಮಥ ಗಣಾರಾಧ್ಯ ಭಕ್ತ ಮಾಹೇಶ್ವರರ ಮಧ್ಯದಲ್ಲಿಟ್ಟು ಅಷ್ಟಾಂ ಗಯುಕ್ತರಾಗಿ ಸ್ವಸ್ಥ ದೃಢ ಚಿತ್ತದಿಂದ ಒಹು ಪರಾಕು ಭವರೋಗ ವೈದ್ಯನೇ ಎಂದು ತ್ರಿಕರಣದ ಶುದ್ಧತೆಯಿಂದ ಅಭಿವಂದಿಸುವಂಥಾದ್ದೇ ಸ್ವಸ್ತಿಕಾ ರೋಹಣ ದೀಕ್ಷೆ ಇಂತುಟೆಂದು ಶ್ರೀ ಗುರು ನಿಃಕಳಂಕ ಮೂರ್ತಿ ಚನ್ನ ಬಸವ ರಾಜೇಂದ್ರನು ನಿರ್ಲಜ್ಜ ಶಾಂತ ಲಿಂಗ ದೇಶಿಕೋತ್ತಮಂಗೆ ನಿರೂ ಪಮಂ ಕೊಡುತಿರ್ದರು ನೋಡಾ ಸಂಗನ ಬಸವೇಶ್ವರಾ.

**ಕಲಶಾಭಿಷೇಕದೀಕ್ಷೆ**—೫. ಅಯ್ಯಾ ಪರಮಸಚ್ಚಿದಾನಂದ ಮಂತ್ರ

ಮೂರ್ತಿಜಂಗಮದೇವನು ಪ್ರಮಥಗಣಾರಾಧ್ಯ ಭಕ್ತಮಾಹೇಶ್ವರರೊಪ್ಪಿಗೆಯಿಂದ ನಿರಂಜನ ಜಂಗಮಕ್ಕೆ ಉಪರಿಸಿಂಹಾಸನವಮಾಡಿ ಮೂರ್ತವ ಮಾಡಿದ ಮೇಲೆ ಷಡಕ್ಷರ ಮಂತ್ರಸ್ವರೂಪವಾದ ಪೂರ್ವ ಪಶ್ಚಿಮ ಉತ್ತರ ದಕ್ಷಿಣ ಮಧ್ಯದಲ್ಲಿ ಮೂರ್ತಗೊಂಡಿರುವ ಈಶಾನ್ಯ ಕಲಶ ಮೊದಲಾಗಿ ಪಂಚ ಕಲಶಂಗಳಿಗೆ ಜಂಗಮದೀಕ್ಷಾ ಪಾದೋದಕವ ತುಂಬಿ ಮಂಟಪ ಪಟ್ಟ ಮ್ಮಾರ್ಜನೆ ಪಙ್ವಿಧವರ್ಣದ ರಂಗವೋಲೆ ಸವಧ್ಯಾನ ನವಸೂತ್ರ ವಿಭೂತಿವೀಳ್ಯ ಸುವರ್ಣಕಾಣಿಕೆ ಪಂಚಮುದ್ರೆ ಅಷ್ಟವಿಧ ಷೋಡಶೋಪಚಾರಂಗಳಿಂದೊಪ್ಪುವ ಸದ್ಯೋಜಾತವಾಮದೇವ ಅಘೋರ ತತ್ಪುರುಷ ಈಶಾನ್ಯ ಕಲಶಮೂರ್ತಿಗಳ ಪಶ್ಚಿಮಭಾಗದಲ್ಲಿ ಜಂಗಮ ಪಾದಸೋಂಕುವಂತೆ ಗುರುವು ಮೂರ್ತವಮಾಡಿ ಆ ಕಲಶಂಗಳ ಸೂತ್ರವತನ್ನ ಪಾದಕ್ಕೆ ಹಾಕಿ ರನ್ನಚಿಪ್ಪೆಳಗಿನ ಮುಂದೆ ಮೂರ್ತಗೊಂಡಿರುವ ಕಲಶಂಗಳ ಪೂರ್ವಭಾಗದಲ್ಲಿ ಕರಿಯಕಂಬಳಿಯ ಗದ್ದುಗೆಯ ಮಾಡಿಸಿ, ಹಸೆಯರಚಿಸಿ, ಆ ಗದ್ದುಗೆಯ ಮೇಲೆ ಶಿಷ್ಯೋತ್ತಮನ ಮೂರ್ತವ ಮಾಡಿಸಿ ಆತನಂಗಕ್ಕೆ ಗುರುಸೂತ್ರವ ಹಾಕಿಸಿ, ಶಿಷ್ಯನಂಗದ ಮೇಲೆ ಮೂರ್ತಗೊಂಡಿರುವ ವೀರಶಿವಲಿಂಗವ ಗಣ ಸಾಕ್ಷಿಯಾಗಿ ಶ್ರೀಗುರುದೇವನು ತನ್ನ ಕರಸ್ಥಲದಲ್ಲಿ ಮೂರ್ತವ ಮಾಡಿಸಿ, ಆ ಲಿಂಗದ ಮಸ್ತಕದ ಮೇಲೆ ನಿರಂಜನ ಜಂಗಮದ ಪಾದವಿಡಿಸಿ, ಆ ಪಂಚಕಲಶಂಗಳಲ್ಲಿ ಶೋಭಿಸುವಂಥ ದೇವಗಂಗಾಜಲಸ್ವರೂಪವಾದ ಗುರುಪಾದೋದಕವನ್ನು ಒಂದು ಪಾತ್ರೆಯಲ್ಲಿ ಆ ಕಲಶಂಗಳೈದರಲ್ಲಿ ತೆಗೆದುಕೊಂಡು ಗುರುವಿನ ದಕ್ಷಿಣ ಭಾಗದಲ್ಲಿ ಮೂರ್ತಗೊಂಡಿರುವ ಪಾದೋದಕ ಕುಂಭದಲ್ಲಿ ಒಂದು ಬಿಂದುವ ತೆಗೆದುಕೊಂಡು, ಆ ಪಾತ್ರೆಯಲ್ಲಿ ಹಾಕಿ ಈ ಆರು ತೆರದ ಅಗ್ರೋದಕಗಳ ಪ್ರಮಥಗಣಾರಾಧ್ಯ ಭಕ್ತಮಾಹೇಶ್ವರರೆಲ್ಲ ಆ ಗುರುವಿನ ಹಸ್ತಕಮಲದಲ್ಲಿರುವಂಥ ಉದಕವನ್ನು ತೆಗೆದುಕೊಂಡು ಆ ಶರಣ ಸತಿ ಲಿಂಗಪತಿಯಾಗೊಪ್ಪುವ ಶಿಷ್ಯೋತ್ತಮನ ಮಸ್ತಕದ ಮೇಲೆ ಮಂತ್ರಧ್ಯಾನದಿಂದ ಸಂಪ್ರೋಕ್ಷಣೆಯ ಮಾಡುವಂಥಾದ್ದೇ ಕಲಶಾಭಿಷೇಕದೀಕ್ಷೆ ಇಂತುಂಟೆಂದು ಶ್ರೀಗುರು ನಿಃಕಳಂಕ ಚನ್ನಬಸವ ರಾಜೇಂದ್ರನು ನಿರ್ಲಜ್ಜಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ.

**ವಿಭೂತಿ ಪಟ್ಟದೀಕ್ಷೆ:**—೬. ಅಯ್ಯಾ, ಗುರುದೇವನು ಪ್ರಮಥಗಣಾರಾಧ್ಯ ಭಕ್ತಮಾಹೇಶ್ವರರೊಡಗೂಡಿ ಪಂಚಾಭಿಷೇಕ ಮೊದಲಾದ ಷಾ-

ದೋದಕ ಕಡೆಯಾಗಿ ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ ಇಷ್ಟ ಲಿಂಗದೇವಂಗೆ ಸಪ್ತವಿಧಾರ್ಚನೆಯ ಮಾಡಿ ತವ್ಮ ಕುಮಾರ ಮೂರ್ತಿ ಎಂದು ಮಹಾಸಂತೋಷದಿಂದ ತೊಡೆಯಮೇಲೆ ಮೂರ್ತವ ಮಾಡಿಸಿ ಕೊಂಡು, ಆ ಮೇಲೆ ಪ್ರಾಣಲಿಂಗ ಸ್ವರೂಪವಾದ ಉಭಯ ಹಸ್ತವನ್ನು ಸಪ್ತವಿಧಾರ್ಚನೆಯುಮಾಡಿ, ದಶಾಂಗುಳ ಮಧ್ಯದಲ್ಲಿ ದ್ವಾದಶಮೂ ಲಪ್ರಣಮವ ಲಿಖಿಸಿ, ಕುಮಾರತಾವಮಾಡಿ, ಆ ಮೇಲೆ ಭಾವಲಿಂಗಸ್ವ ರೂಪ ಗೋಳಕಸ್ಥಾನವಾದ ಮಸ್ತಕವನ್ನು ಸಪ್ತವಿಧಾರ್ಚನೆಯುಮಾಡಿ, ದ್ವಾದಶ ಮಹಾಪ್ರಣಮವ ಲಿಖಿಸಿ, ಸರ್ವಾಂಗದಲ್ಲಿ ಕ್ರಿಯಾಪಾದೋದಕಸ್ವ ರೂಪವಾದ ಚಿಷ್ಟಸಿತ ಮಹಾಮಂತ್ರ ಸ್ಮರಣೆಯಿಂದ ಸ್ನಾನಧೂಳನ ಧಾ ರಣವಮಾಡಿ, ಲಲಾಟದಲ್ಲಿ ಅನಾದಿ ಪರಶಿವಲಿಖಿತವ ಲಿಖಿಸಿ, ಸರ್ವಾಚಾ ರ ಸಂಪನ್ನನಾಗೆಂದು ಆಶೀರ್ವಚನ ನೀಡುವಂಥಾದ್ದೇ ವಿಭೂತಿಪಟ್ಟದೀಕ್ಷೆ ಇಂತು ಎಂದು ಶ್ರೀಗುರು ನಿಃಕಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ.

**ಲಿಂಗಾಯತದೀಕ್ಷೆ:**—೭. ಅಯ್ಯಾ, ವರವೀರಶೈವ ಷಟ್ಸ್ಥಲಾಚಾ ರ್ಯ ಘನಲಿಂಗ ಚಕ್ರವರ್ತಿಯಪ್ಪ ಶ್ರೀಗುರುಲಿಂಗದೇವರು ತನ್ನ ತೊಡೆ ಯ ಮೇಲೆ ಮೂರ್ತಗೊಂಡಿರುವ ಇಷ್ಟಲಿಂಗದೇವಂಗೆ ಪ್ರಾಣಲಿಂಗ ಭಾ ವಲಿಂಗ ಸ್ವರೂಪವಾದ ಶರಣನ ಚಿದಂಗವೆ ನಿನಗೆ ನಿಜಮೋಕ್ಷಮಂದಿರ ವೆಂದು ಅರುಹಿದ ಮೇಲೆ, ನಿಮಿಷಾರ್ಧವಗಲಿದರೆ, ನಮ್ಮ ಪ್ರಮಥಗಣಾ ಚಾರಕ್ಕೆ ಹೊರಗುಮಾಡಿ ಭವಕ್ಕೆ ನೂಂಕೆಪೆಂದು ಪ್ರತಿಜ್ಞೆಯನಿತ್ತು ಆ ಶರಣನ ಕರಸ್ಥಲಕ್ಕೆ ಪ್ರಾಣಕಳಾ ಚೈತನ್ಯ ಮೂರ್ತಿಲಿಂಗದೇವನ ಮೂರ್ತ ವಮಾಡಿಸಿ, ಆ ಲಿಂಗದೇವಂಗೆ ಪ್ರಮಥಗಣಾರಾಧ್ಯ ಭಕ್ತಮಾಹೇಶ್ವರರೆ ಲ್ಲ ಅಭಯ ಹಸ್ತವನಿತ್ತು ಆ ಮೇಲೆ ಚಿದಂಗಸ್ವರೂಪವಾದ ಶರಣಂಗೆ ಈ ಲಿಂಗದೇವನ ನಿಮಿಷಾರ್ಧವಗಲಿದರೆ ನಿನಗೂ ಅದೇ ಪ್ರತಿಜ್ಞೆ ಬಂದೀ ತೆಂದು ಆಜ್ಞಾಪನವ ಮಾಡಿ, ಹೃದಯಕಮಲಮಧ್ಯದಲ್ಲಾಡುವ ಸಹಸ್ರ ಹೆಡೆಯ ಕುಂಡಲಿಸರ್ಪಂಗೆ ಮುಸುಕಿರುವ ಅಜ್ಞಾನಮಾಯಾ ಮರವೆಯ ನ್ನು ಅನಾಹತದ್ವಾರದಿಂದ ಅನಾದಿ ಮೂಲಮಂತ್ರವನುಸುರಿ ಕುಂಡಲಿಸ ರ್ಪನ ಹೆಡೆಯೆತ್ತಿಸಿ ಚಿದಗ್ನಿಯ ಪುಟವ ಮಾಡುವಂಥಾದ್ದೇ ಲಿಂಗಾಯ ತದೀಕ್ಷೆ. ಇಂತು ಎಂದು ಶ್ರೀಗುರು ನಿಃಕಳಂಕ ಚನ್ನಬಸವರಾಜೇಂದ್ರನು

ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ

**ಲಿಂಗಸ್ವಾಯತ ದೀಕ್ಷೆ:**—೮. ಅಯ್ಯಾ, ಘನಮಹಾ ಇಷ್ಟಲಿಂಗವೇ ನಿನ್ನ ನಾದ ಬಿಂದು ಕಲೆಗಳಿಗೆ ಚೈತನ್ಯ ಸ್ವರೂಪು ನೋಡಾ. ಈ ಲಿಂಗದ ವೃತ್ತದಲ್ಲಿ ಸಕಲ ಲೋಕಂಗಳು ಸಕಲಮನುಗಳಡಗಿರ್ಪವು ನೋಡಾ. ಈ ಲಿಂಗವೇ ನಿನ್ನ ಹರಣಕಿರಣ ಚೈತನ್ಯ ಸ್ವರೂಪು ನೋಡಾ. ಈ ಲಿಂಗವೇ ನಿನ್ನ ಸಂಜೀವನ ಕಾಮಧೇನು ಕಲ್ಪ ವೃಕ್ಷ ನೋಡಾ. ಇಂತು ನಿನ್ನ ಕರಸ್ಥಲದಲ್ಲಿ ರಾಜಿಸುವ ಪರ ಶಿವಲಿಂಗದೇವಂಗೆ ಜಂಗಮ ಪಾದೋದಕ ಪ್ರಸಾದವೇ ಪರಮ ಚಿದೈಶ್ವರ್ಯ ನೋಡಾ. ಇಂತು ಜಂಗಮಕ್ಕೆ ಭೃತ್ಯಾಚಾರ ಮೂರ್ತಿ ಲಿಂಗದೇವನ ಒಕ್ಕು ಮಿಕ್ಕ ಕರುಣಜಲ ಪ್ರಸಾದವೇ ನಿನಗರ್ಪಿತವಯ್ಯ. ನಿನ್ನ ಪರಿಣಾಮ ಸಂತೋಷವೇ ಲಿಂಗಾರ್ಪಿತವಯ್ಯ. ಇಂತಪ್ಪ ಲಿಂಗದೇವನ ನಿನ್ನ ಷಟ್ಸ್ಥಾನಂಗಳಲ್ಲಿ ಧರಿಸಿ, ಲಿಂಗವೇ ನಿನಗೆ ಪ್ರಾಣವಾಗಿ ನೀನು ಲಿಂಗಕ್ಕೆ ಪ್ರಾಣವಾಗಿ, ಸತ್ಯದಿಂದ ಬಂದ ಪದಾರ್ಥವ ದಾಸೋಹಂ ಭಾವದಿಂದ ಸಮುದ್ರದುದಕವ ಸಮುದ್ರಕ್ಕೆ ಅರ್ಪಿಸಿದಂತೆ ಧಾನ್ಯದ ರಾಶಿಯ ಒಳಗಣ ಧಾನ್ಯವ ತಂದು ಪಾಕವ ಮಾಡಿ ಮತ್ತಾ ರಾಶಿಗೆ ಅರ್ಪಿಸಿದಂತೆ ಆ ಲಿಂಗ ಜಂಗಮ ಪಾದೋದಕ ಪ್ರಸಾದವ ಮತ್ತಾ ಲಿಂಗಜಂಗಮಕ್ಕೆ ಸಮರ್ಪಿಸಿ ಆ ಲಿಂಗ ಜಂಗಮದ ಪರಿಣಾಮ ಪ್ರಸಾದದಲ್ಲಿ ನಿತ್ಯ ತೃಪ್ತನಾಗಿರುವಂಥಾದ್ದೇ ಲಿಂಗಸ್ವಾಯತದೀಕ್ಷೆ, ಇಂತುಟೆಂದು ಶ್ರೀ ಗುರು ನಿಃಕಳಂಕ ಚನ್ನಬಸವ ರಾಜೇಂದ್ರನು ನಿರ್ಲಜ್ಜೆ ಶಾಂತಲಿಂಗದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ.

**ಸಮಯದೀಕ್ಷೆ:**—೯. ಅಯ್ಯಾ, ಇಂತು ಅನಾದಿ ಪರಶಿವಲಿಂಗವೇ ಪಾವನಾರ್ಥವಾಗಿ ದೀಕ್ಷಾಗುರು ಲೀಲೆಯ ಧರಿಸಿ ಜ್ಞಾನೋದಯವಾಗಿ, ಅಡಿಗೆರಗಿ ಬಂದ ಶಿಷ್ಯೋತ್ತಮಂಗೆ ದಯಾನಂದ ಕರುಣಹುಟ್ಟಿ, ಆತನ ಸ್ಥೂಲತನುವಿಗೆ ಇಷ್ಟಲಿಂಗವ ಸಂಬಂಧವಮಾಡಿ, ಎಲೆ ಶಿಷ್ಯೋತ್ತಮನೆ, ನಿನ್ನ ಸರ್ವಾಂಗವೆಲ್ಲಾ ಶುದ್ಧಪ್ರಸಾದವಾದ ಚಿದ್ಘನಮಯವೆಂದು ಅರುವುವಂಥಾದ್ದೇ ಕ್ರಿಯಾದೀಕ್ಷೆ ನೋಡಾ. ಇಂತು ಕ್ರಿಯಾದೀಕ್ಷೆಯಾದಮೇಲೆ ಆ ದೀಕ್ಷಾಗುರುವೆ ಶಿಕ್ಷಾಗುರು ಲೀಲೆಯಧರಿಸಿ ಆ ಕ್ರಿಯಾದೀಕ್ಷೆಯಾದ ಶಿಷ್ಯೋತ್ತಮನಿಗೆ ಉಪದೇಶವ ಕರುಣಿಸುವ ಭೇದವೆಂತೆಂದೊಡೆ:—

ಏನಯ್ಯ ಬಸವ ಮೊದಲಾದ ಪ್ರಮಥಗಣಾರಾಧ್ಯರ ಸನ್ಮಾರ್ಗಾಚಾರಕ್ಕೆ ದೃಢಚಿತ್ತದಿಂದ ನಿಂದು ನಿರಾಭಾರಿ ವೀರಶೈವ ಷಟ್‌ಸ್ಥಲಮಾರ್ಗದಲ್ಲಿ ಆಚರಿಸುವ ಶರಣಗಣಂಗಳಲ್ಲಿ ಪಂಚಸೂತಕಂಗಳ ಕಲ್ಪಿಸದೆ, ಭೃತ್ಯಾಚಾರ ಮುಂದುಗೊಂಡು ಅವರ ಒಕ್ಕುಮಿಕ್ಕಿದ ಹಾರೈಸಿ, ನಿಜಭಕ್ತಿಯಲ್ಲಿ ನಿಂದು ಸನ್ಮಾರ್ಗಾಚಾರಕ್ಕೆ ಬಾರದಂಥ ಗುರುಚರ ಭಕ್ತಗಣ ಬಂಧುಬಳಗ ತಂದೆತಾಯಿ ಪುತ್ರಮಿತ್ರ ಕಳತ್ರ ಶಿಷ್ಯ ಮೊದಲಾಗಿ ತೃಣಕ್ಕೆ ಸಮಮಾಡಿ ತ್ಯಜಿಸಿ ಮನದ ಮಧ್ಯದಲ್ಲಿ ಹುಟ್ಟಿದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳ ಬಲೆಗೆ ಸಿಲ್ಕದೆ, ತ್ರಿಕರಣ ಪವಿತ್ರತೆಯಿಂದ ಅಷ್ಟಾವರಣವ ಸ್ತೋತ್ರವ ಮಾಡುವಂಥಾದ್ದೇ ಸಮಯ ದೀಕ್ಷೆ ಇಂತುಟೆಂದು ಶ್ರೀಗುರು ನಿಃಕಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನ ಬಸವೇಶ್ವರಾ.

**ನಿಃಸಂಸಾರದೀಕ್ಷೆ**:—೧೦. ಅಯ್ಯ ನಿನ್ನ ಸ್ವಾತ್ಮಜ್ಞಾನದಿಂದ ಶೃತಿ ಗುರುಸ್ವಾನು ಭಾವ ಪಿಡಿದು, ನಿನ್ನ ತನುಮನ ಕರಣ ಇಂದ್ರಿಯಂಗಳ ಪರಿಪಕ್ವ ಮಾಡಿ, ಆ ತನು ಮನ ಇಂದ್ರಿಯಂಗಳನಾಶ್ರಯಿಸಿದ ಅರ್ಥ ಪ್ರಾಣಾಭಿಮಾನಂಗಳ ಶ್ರೀ ಗುರುಲಿಂಗ ಜಂಗಮ ಭಕ್ತ ಮಾಹೇಶ್ವರ ಶರಣ ಗಣಂಗಳಿರ್ಪಿತವ ಮಾಡಿ ನಿರ್ವಂಚಕ ಬುದ್ಧಿ ಮುಂದುಗೊಂಡು ಅಷ್ಟ ವಿಧಾರ್ಚನೆ ಷೋಡಶೋಪಚಾರಂಗಳಿಂದ ಇಷ್ಟ ಲಿಂಗ ತೃಪ್ತಿಯ ಮಾಡಿ, ಮಂತ್ರಧ್ಯಾನ ಜಪ ಸ್ತೋತ್ರಂಗಳಿಂದ ಪ್ರಾಣಲಿಂಗ ತೃಪ್ತಿಯ ಮಾಡಿ, ಮನೋರ್ಲಯ ನಿರಂಜನ ಕ್ರಿಯಂಗಳಿಂದ ಭಾವಲಿಂಗ ತೃಪ್ತಿಯ ಮಾಡಿ, ಗುರುಲಿಂಗ ಜಂಗಮ ಪಾದೋದಕ ಪ್ರಸಾದದಿಂದ ಮತ್ತಾ ಗುರುಲಿಂಗ ಜಂಗಮ ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಮೊದಲಾದ ಮಹಾ ಪ್ರಮಥ ಗಣಂಗಳ ತೃಪ್ತಿಯ ಮಾಡಿ ತನಗೊಂದಾಶ್ರಯಂಗಳಿಲ್ಲದೆ ಚಿದ್ಘನ ಮಹಾಲಿಂಗದಲ್ಲಿ ಅವಿರಳಾನಂದದಿಂದ ಕೂಟಸ್ಥನಾಗಿರುವಂಥಾದ್ದೇ ನಿಃಸಂಸಾರ ದೀಕ್ಷೆ ಇಂತುಟೆಂದು ಶ್ರೀಗುರು ನಿಃಕಳಂಕ ಚನ್ನಬಸವ ರಾಜೇಂದ್ರನು ನಿರ್ಲಜ್ಜ ಶಾಂತ ಲಿಂಗದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ. ಸಂಗನಬಸವೇಶ್ವರಾ.

**ನಿರ್ವಾಣದೀಕ್ಷೆ**—೧೧. ಅಯ್ಯಾ, ಮರ್ತ್ಯದ ಮಧ್ಯದಲ್ಲಿ ಶ್ರೀ ಗುರು ಕರಜಾತನಾದಮೇಲೆ, ಹೊನ್ನು ಹೆಣ್ಣು ಮಣ್ಣು ಅನ್ನ ನೀರು ವಸ್ತ್ರ

ಭರಣ ವಾಹನ ಪುತ್ರ ಮಿತ್ರ ದಾರಿದ್ರ್ಯ ಚಿಂತೆ ಶತೃತ್ವಂಗಳ ಸಮಾ ನಂಗಂಡು, ಲಿಂಗಾಣತಿಯಿಂದ ಉಪವಾಸ ತೃಪ್ತಿಗಳು ಬಂದು ತಟ್ಟಿದ ಲ್ಲಿ, ಸಂತೃಪ್ತನಾಗಿ, ಆಧಿ ವ್ಯಾಧಿಗಳು ಬಂದು ತಟ್ಟಿದಲ್ಲಿ ಪಾದೋದಕ ಪ್ರಸಾದದಲ್ಲಿ ಕೂಡಿಸಿ ಸಮಭಾಜನವ ಮಾಡಿ, ಲಿಂಗ ಭೋಗೋಪ ಭೋಗಿಯಾಗಿ, ಅವಿರಳಾನಂದದಿಂದ ಹಿಂದಣ ಪಾಪ ಮುಂದಣ ಪುಣ್ಯ ಗಳಿಗೆ ಹೊರಗಾಗಿ, ಅವನು ತನ್ನೊಳಗು ಮಾಡಿಕೊಂಡು ಮನಬಯಕೆಯು ನೀಗಿ, ಕಾಲಹರ ಕರ್ಮಹರ ದುರಿತಹರ ಪಾಪಹರ ಲೀಲೆಯಿಂದ ಮರ್ತ್ಯ ದಲ್ಲಿದ್ದು ಇಲ್ಲದಂತೆ ಸಚ್ಚಿದಾನಂದನಾಗಿ, ಆಚರಿಸುವಂಥ ನಿಜ ನೈಷ್ಠೆಯೇ ನಿರ್ವಾಣದೀಕ್ಷೆ, ಇಂತುಟೆಂದು ಶ್ರೀ ಗುರು ನಿಃಕಳಂಕ ಪರಮಾನಂದ ಮೂರ್ತಿ ಚಿಕ್ಕ ದಂಡನಾಥ ಚನ್ನಬಸವ ರಾಜೇಂದ್ರನು ನಿರ್ಲಜ್ಜ ಶಾಂತ ಲಿಂಗದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ. ಸಂಗ ನಬಸವೇಶ್ವರಾ.

**ತತ್ವದೀಕ್ಷೆ:**—೧೨. ಅಯ್ಯಾ ಒಂದು, ಅನಾದಿ ಮೂಲ ಪ್ರಣವವೇ ಸಾಕಾರ ಲೀಲೆಯ ಧರಿಸಿ ಚಿದಂಗ ಚಿದ್ಘನ ಲಿಂಗವಾಗಿ, ಒಂದಂಗ ಲಿಂ ಗವೇ ತ್ರಿವಿಧಾಂಗ ತಿವಿಧ ಲಿಂಗವಾಗಿ, ಆ ತ್ರಿವಿಧಾಂಗ ಲಿಂಗಾಂಗವೆ ಷಡ್ವಿಧ ಲಿಂಗವಾಗಿ, ಆ ಷಡ್ವಿಧ ಲಿಂಗಾಂಗವೆ ಮೂವ್ವತ್ತಾರು ಲಿಂಗಾಂ ಗವಾಗಿ ಆ ಮೂವತ್ತಾರು ಲಿಂಗಾಂಗಗಳನೆ ಶ್ರದ್ಧಾದಿ ಮೂವತ್ತೆರಡು ಭಕ್ತಿಗಳಲ್ಲಿ, ಕೂಟವ ಮಾಡಿ, ಇಂತು ಲಿಂಗಾಂಗ ಭಕ್ತಿಗಳನೆ ಸತ್ಕ್ರಿ ಯಾ ಸಮ್ಯಜ್ಞಾನ ಸತ್ಕಾಯಕ ಸತ್ಪಾತ್ರ ಭಿಕ್ಷದಲ್ಲಿ ಸಮರಸವಮಾಡಿ, ಆಮಹಾ ಜ್ಞಾನವ ಸಾಧಿಸಿ ಆಮಹಾ ಜ್ಞಾನವ ಬಲದಿಂದ ಪೃಥ್ವಿ ತತ್ವ ಸಂಬಂಧವಾದ ಕರ್ಮೇಂದ್ರಿಯಂಗಳು, ಅಪ್ಪು ತತ್ವ ಸಂಬಂಧವಾದ ಜ್ಞಾನೇಂದ್ರಿಯಂಗಳು, ಅಗ್ನಿ ತತ್ವ ಸಂಬಂಧವಾದ ವಿಷಯೇಂದ್ರಿಯಂಗಳು, ವಾಯು ತತ್ವ ಸಂಬಂಧವಾದ ಪ್ರಾಣವಾಯುಗಳು, ಆಕಾಶತತ್ವ ಸಂಬಂ ಧವಾದ ಕರಣಂಗಳು, ಭಾನುತತ್ವ ಸಂಬಂಧವಾದ ಉದರವೆಂಬ ಭೂತ ಗಳು, ಶಿವತತ್ವ ಸಂಬಂಧವಾದ ಶ್ವೇತವರ್ಣ ಮೊದಲಾದ ವರ್ಣಂಗಳು, ಆತ್ಮ ತತ್ವ ಸಂಬಂಧವಾದ ಸಮಸ್ತ ನಾದಂಗಳು ಇಂತು ಸಮಸ್ತ ತತ್ವಂ ಗಳು ಕೂಡಲಾಗಿ ನಾಲ್ವತ್ತು ತತ್ವವೆನಿಸುವವು. ಈ ತತ್ವಂಗಳ ಶಿವತತ್ವ ಅನಾದಿ ಶಿವತತ್ವ ಅನಾದಿ ನಿಃಕಲ ಪರಶಿವ ತತ್ವ ಅನಾದಿ ನಿಃಕಲ ಪರಾ ತ್ಪರ ಶಿವತತ್ವವೆಂಬ ಚತುರ್ವಿಧ ತತ್ವ ಸ್ವರೂಪ ಗುರುಲಿಂಗ ಜಂಗಮವ

ಕೂಡಿಸಿ, ಆ ಮಹಾಜ್ಞಾನದಿಂದ ನೋಡಿದಲ್ಲಿ ೪೪ ತತ್ವ ಸ್ವರೂಪಿನಿಂದ ಒಂದು ಚಿದಂಗವೆನಿಸುವದಯ್ಯ. ಆ ಚಿದಂಗ ಷಟ್‌ಚಕ್ರಂಗಳಲ್ಲಿ ಶ್ರೀ ಗುರುಲಿಂಗ ಜಂಗಮ ಕೃಪೆಯಿಂದ ಮೂರ್ತಿಗೊಂಡಿರುವ ೫೬ ಪ್ರಣವಂಗಳೆ ಸಾಕಾರಲೀಲೆಯ ಧರಿಸಿ ನಾನಾಕೃತಿ ಸಂಬಂಧವಾದ ಅನಾದಿ ಮೂಲ ಪ್ರಣವವ ಕೂಡಿ ಏಕ ಸ್ವರೂಪಿನಿಂದ ೫೭ ಲಿಂಗ ಸ್ವರೂಪ ಪ್ರಣವವ. ನೊಳಕೊಂಡು, ಒಂದು ಚಿದ್ಘನ ಲಿಂಗವೆನಿಸುವದಯ್ಯ. ಇಂತು ಅಂಗ ಲಿಂಗವೆಂಬ ನೂರೊಂದು ಸ್ಥಲ ಕುಲಂಗಳ ವಿಚಾರಿಸಿ ಶರಣ ರೂಪಿಂದ ತನ್ನಾದಿ ಮಧ್ಯಾವ ಸಾನವ ತಿಳಿದು, ಕರ್ತೃ ಭೃತ್ಯತ್ವದ ವಿಚಾರವ ನರಿದು ದ್ವಾದಶಾಚಾರದ ಮರ್ಮವನರಿದು ಕರ್ತೃಭೃತ್ಯತ್ವ ಆಚಾರ ಸದ್ಭಕ್ತಿಯೆಂಬ ನಿಜ ಸಮಾಧಿಯಲ್ಲಿ ನಿರವಯಲ ಕೂಡುವಂಥಾದ್ದು ತತ್ವದೀಕ್ಷೆ. ಇಂತು ಟೆಂದು ಶ್ರೀ ಗುರು ನಿಃಕಳಂಕ ಚನ್ನಬಸವ ರಾಜೇಂದ್ರನು ನಿರ್ಲಜ್ಜಶಾಂತ ಲಿಂಗದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ. ಸಂನಗಬಸವೇಶ್ವರಾ.

**ಅಧ್ಯಾತ್ಮ ದೀಕ್ಷೆ**—೧೩ ಅಯ್ಯಾ, ನಿನ್ನ ಷಟ್ಚಕ್ರಂಗಳಲ್ಲಿ ಅನಾದಿ ನಿಃಕಳಂಕ ಚಿದ್ಘನ ಇಷ್ಟ ಮಹಾಲಿಂಗವೇ ಷಡ್ವಿಧ ಲಿಂಗವಾಗಿ ನೆಲಿಸಿರ್ಪರು ನೋಡಾ. ಅದೆಂತೆಂದೊಡೆ, ಆಧಾರ ಚಕ್ರ ನಾಲ್ಕೆಸಳ ಮಧ್ಯದಲ್ಲಿ ನಕಾರ ಮಂತ್ರಮೂರ್ತಿ ಆಚಾರ ಲಿಂಗವಾಗಿ ನೆಲಿಸಿರ್ಪರು ನೋಡಾ, ಸ್ವಾಧಿಷ್ಟಾನ ಚಕ್ರ ಆರೆಸಳ ಮಧ್ಯದಲ್ಲಿ ಮಕಾರ ಮಂತ್ರಮೂರ್ತಿ ಗುರುಲಿಂಗವಾಗಿ ನೆಲಿಸಿರ್ಪರು ನೋಡಾ. ಮಣಿಪೂರಕ ಚಕ್ರದ ಹತ್ತೆಸಳ ಮಧ್ಯದಲ್ಲಿ ಶಿಕಾರ ಮಂತ್ರ ಮೂರ್ತಿ ಶಿವಲಿಂಗವಾಗಿ ನೆಲೆಸಿರ್ಪರು ನೋಡಾ. ಅನಾಹತ ಚಕ್ರದಲ್ಲಿ ಹನ್ನೆರಡೆಸಳಿನ ಮಧ್ಯದಲ್ಲಿ ವಕಾರ ಮಂತ್ರ ಮೂರ್ತಿ ಚರಲಿಂಗವಾಗಿ ನೆಲಿಸಿರ್ಪರು ನೋಡಾ. ವಿಶುದ್ಧಿ ಚಕ್ರ ಹದಿನಾರೆಸಳ ಮಧ್ಯದಲ್ಲಿ ಯಕಾರ ಮಂತ್ರಮೂರ್ತಿ ಪ್ರಸಾದ ಲಿಂಗವಾಗಿ ನೆಲಿಸಿರ್ಪರು ನೋಡಾ. ಆಜ್ಞಾಚಕ್ರದ ಎರಡೆಸಳ ಮಧ್ಯದಲ್ಲಿ ಓಂಕಾರ ಮಂತ್ರ ಮೂರ್ತಿ ಮಹಾಲಿಂಗವಾಗಿ ನೆಲಿಸಿರ್ಪರು ನೋಡಾ. ಇಂತು ನಿನ್ನ ಷಟ್ಚಕ್ರ ಮಧ್ಯಂಗಳಲ್ಲಿ ನೆಲಿಸಿ ನಿನ್ನ ಷಡ್ವಿಧ ಯೋಗಂಗಳ ಕೈಕೊಂಡು ಆ ಪರಿಣಾಮವ ನಿನಗೆ ಸಂತೃಪ್ತಿಯಮಾಡಿ ಶರಣಸತಿ ಲಿಂಗಪತಿ ಭಾವದಿಂದ ಮೇಲುಗಿರಿ ಮಂಟಪದ ನವರತ್ನ ಖಚಿತ ಸಹಸ್ರದಳ ಪದ್ಮಯುಕ್ತವಾದ ಪರ್ಯಂಕದ ಮೇಲೆ ಲಿಂಗಾನುಭಾವರತಿ ಸುಖಾನಂದದಿಂ ಶೋಭಿಸು

ವೆಂಥಾದ್ದೇ ಅಧ್ಯಾತ್ಮದೀಕ್ಷೆ. ಇಂತುಟೆಂದು ಶ್ರೀಗುರು ನಿಃಕಳಂಕ ಚನ್ನ ಬಸವ ರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪವಂ ಕೊಡುತಿರ್ದರು ನೋಡಾ ಸಂಗನ ಬಸವೇಶ್ವರಾ.

**ಅನುಗ್ರಹ ದೀಕ್ಷೆ**—೧೪ ಅಯ್ಯಾ ನಿನ್ನ ಚಿದಂಗದ ಷಟ್ಸ್ಥಾನಂಗಳಲ್ಲಿ ೨೫ ತತ್ವಗಳು ಅಡಗಿರ್ಪವಯ್ಯಾ. ಚಿದ್ಘನ ಲಿಂಗದ ಷಟ್‌ಸ್ಥಾನಂಗಳಲ್ಲಿ ೧೮ ತತ್ವಂಗಳಡಗಿರ್ಪವಯ್ಯಾ. ಆ ಚಿದಂಗ ಚಿದ್ಘನಲಿಂಗದ ಮಧ್ಯದಲ್ಲಿ ಬೆಳಗುವ ಅಖಂಡ ಜ್ಯೋತಿ ಪ್ರಣವದ ಷಟ್‌ಸ್ಥಾನದಲ್ಲಿ ಅಷ್ಟವಿಧ ತತ್ವಂಗಳಡಗಿರ್ಪವಯ್ಯಾ. ಆ ತತ್ವಂಗಳ ವಿಭಾಗವೆಂತೆಂದೊಡೆ, ಪೃಥ್ವಿ ತತ್ವ ೨೫, ಅಪ್ಪುತತ್ವ ೨೦, ಅಗ್ನಿತತ್ವ ೧೫, ವಾಯುತತ್ವ ೧೦, ಆಕಾಶ ತತ್ವ ೫, ಇಂತು ೭೫ ತತ್ವಂಗಳು ಆತ್ಮತತ್ವ ಒಂದರಲ್ಲಿ ಅಡಿಗಿ ಇಂಥ ಅನಂತಾನಂತಾತ್ಮರು ಔದುಂಬರ ವೃಕ್ಷಕ್ಕೆ ಫಲತೊಂತಿದೋಪಾದಿಯಲ್ಲಿ ಆ ಚಿದಂಗಕ್ಕೆ ಅನಂತಾತ್ಮತತ್ವಂಗಳು ತೊಂತಿ ಕೊಂಡಿರ್ಪವು ನೋಡಾ. ಅಂಥ ಚಿದಂಗ ೧೮ ಪ್ರಣವ ರೂಪಿನಿಂದ ಚಿದ್ಘನ ಲಿಂಗವನಾಶ್ರೈಸಿರ್ಪುದು ನೋಡಾ. ಆ ಚಿದ್ಘನ ಲಿಂಗವು ಅಷ್ಟವಿಧ ಸಕೀಲಂಗಳಿಂದ ಅಖಂಡ ಮಹಾ ಜ್ಯೋತಿ ಪ್ರಣವವನಾಶ್ರೈಸಿರ್ಪುದು ನೋಡಾ. ಇಂತು ನೂರೊಂದು ಸಕೀಲಂಗಳ ತತ್ವದ ರೂಪಿನಿಂದ ತಿಳಿದು, ಅಂಗಲಿಂಗ ಸಂಗದಲ್ಲಿ ಅಡಗಿರುವ ನೂರೊಂದು ಸಕೀಲಂಗಳ ನೂರೊಂದು ಸ್ಥಲದಲ್ಲಿ ನೆಲೆಗೊಳಿಸಿ, ಪರತತ್ವ ಲಿಂಗ ಲೀಲೆಯಿಂದ ನಿಂದ ನಿಲುಕಡೆಯೆ ಅನುಗ್ರಹ ದೀಕ್ಷೆಯಿಂತುಟೆಂದು ಶ್ರೀಗುರು ನಿಃಕಳಂಕ ಚನ್ನಬಸವ ರಾಜೇಂದ್ರನು ನಿರ್ಲಜ್ಜ ಶಾಂತ ಲಿಂಗ ದೇಶಿಕೋತ್ತಮಂಗೆ ನಿರೂಪವಂ ಕೊಡುತಿರ್ದರು ನೋಡಾ ಸಂಗನ ಬಸವೇಶ್ವರಾ

**ಸತ್ಯ ಶುದ್ಧ ದೀಕ್ಷೆ**—೧೫ ಅಯ್ಯಾ, ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣವೆಂಬ ಪಂಚಾಂಗವನಂಗೀಕರಿಸಿ ಕೊಂಡಿರುತ್ತಿಹ ಪರಬ್ರಹ್ಮದಲ್ಲಿ ಸಮರಸ ಸಂಗದಿಂದ ಕೂಟವ ಮಾಡಿ, ಅವಿರಳ ಪರಂಜ್ಯೋತಿ ಸ್ವರೂಪ ಶರಣನ ನಿಲುಕಡೆ ಎಂತೆಂದೊಡೆ, ಅಣು ಮಾತ್ರ ಸತ್ಯ ನಡೆನುಡಿ ತೊಲಗನಯ್ಯಾ. ದೃಢ ಚಿತ್ತದಿಂದ ಕೊಟ್ಟ ಭಾಷೆಗಳ ಬಿಡನು. ಮನದ ಸಂಗವ ಮಾಡಿ, ಹುಸಿನುಡಿಯ ನುಡಿಯನಯ್ಯಾ. ನಿಜನೈಷ್ಠಾಪರತ್ವದಿಂದ ಸತ್ಕಾಯಕ ಸತ್ಪಾತ್ರ–ಭಕ್ತಿ ಸತ್ಕ್ರಿಯೇ ಜ್ಞಾನಾಚಾರಂಗಳ ಅವರಂತರದಲ್ಲಿ ನಿಂದೆ ಕುಂದು ದರಿದ್ರ ರೋಗ ರುಜೆ ವಿಪತ್ತು ಹಾಸ್ಯ ರೋಷಂಗಳು

ಒಂದು ತಟ್ಟಿದಲ್ಲಿ, ಶ್ರೀಗುರುಲಿಂಗ ಜಂಗಮದ ಕರುಣಾಕಟಾಕ್ಷೆಯಿಂದ ಒಂದ ಮಹಾ ಪ್ರಸಾದವೆಂದು ಲಿಂಗಭೋಗಿಯಾಗಿರುವನಲ್ಲದೆ, ಶೈವ ಜಡ ಕರ್ಮ ಭೂತ ಪ್ರಾಣಿಗಳಂತೆ ಸತ್ಕಾಯಕ ಸತ್ಪಾತ್ರ-ಭಕ್ತಿ ಸತ್ಕ್ರಿಯೆ ಜ್ಞಾನಾಚಾರಂಗಳ ನಿಮಿಷಾರ್ಧವನಗಲುವನಲ್ಲ ನೋಡಾ. ಕುಲಛಲಕ್ಕಾ ದೊಡೆ ಶಿವಶರಣರಲ್ಲಿ ಜಾತಿ ಸೂತಕವ ಬಳಿಸದೆ ದುಷ್ಟ ಕಾಯಕ ಅಪಾತ್ರ ಭಕ್ತಿ ಅಕ್ರಿಯಾಜ್ಞಾನ ಅನಾಚಾರಂಗಳನನುಕರಿಸಿ ಉದರ ಪೋಷಣಕ್ಕೆ ಲಾಂಛನ ದಿಚ್ಚೆಗೆ ನುಡಿದು, ಸಮ ಪಂಕ್ತಿಯ ಮಾಡದೆ, ಪರಮಾನಂದ ಸುಖಾಬ್ಧಿಯಲ್ಲಿ ಮುಳುಗಿ ಅಷ್ಟಾವಧಾನ ಎಚ್ಚರ ಗುಂದದೆ ಮನ ಪ್ರಾಣ ಲಿಂಗವಾದುದೀಗ ಸತ್ಯ ಶುದ್ಧ ದೀಕ್ಷೆ ಇಂತುಟೆಂದು ಶ್ರೀಗುರು ನಿಃಕಳಂಕ ಚನ್ನಬಸವ ರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮುಂ ಕೊಡುತಿರ್ದರು ನೋಡಾ ಸಂಗನ ಬಸವೇಶ್ವರಾ.

ಏಕಾಗ್ರ ದೀಕ್ಷೆ—೧೬ ಅಯ್ಯಾ, ಇಂತು ಶಿಕ್ಷಾಗುರುದೇವನು ಅನಾದಿ ಶಿಷ್ಯೋತ್ತಮನ ಸೂಕ್ಷ್ಮ ತನುವಿನಲ್ಲಿ ಇಹ ಪ್ರಣವಸ್ವರೂಪವಾದ ಪ್ರಾಣಲಿಂಗವ ಸಂಬಂಧಿಸಿ, ಆ ಪ್ರಾಣಲಿಂಗಕ್ಕೆ ಹಣರಕಿರಣ ಚೈತನ್ಯಸ್ವ ರೂಪ ನಿಃಕಳಂಕ ಜಂಗಮವ ತೋರಿ ಆ ಜಂಗಮದ ಚರಣ ಸೋಂಕಿನಿಂ ಪವಿತ್ರವಾದ ಕ್ರಿಯಾ ಭಸಿತ ರುದ್ರಾಕ್ಷಿ ಮಹಾ ಮಂತ್ರಂಗಳನರುಹಿ, ದಶ ವಿಧ ಪಾದೋದಕ ಏಕಾದಶ ಪ್ರಸಾದವ ಕರುಣಿಸಿ, ಎಲೇ ಶಿಷ್ಯೋತ್ತ ಮನೆ, ನಿನ್ನ ಮನ ಮೊದಲಾದ ಕರಣಂಗಳೆಲ್ಲಾ ಸಿದ್ಧ ಪ್ರಸಾದವಾದ ಪ್ರಾಣಲಿಂಗ ಮಯವಾದುದೆಂದು ಅರುಪುವಂಥಾದ್ದೇ ಕ್ರಿಯಾ ದೀಕ್ಷೆಯ ಹಡೆದ ಚಿದಂಗ ಚಿದ್ಘನ ಇಷ್ಟ ಮಹಾಲಿಂಗದೊಳಗಣ ಚಿತ್ಪ್ರಾಣಾಂಗ ಚಿತ್ಪ್ರಾಣಲಿಂಗಕ್ಕೆ ಮಂತ್ರದೀಕ್ಷೆ ಇಂತುಟು ನೋಡಾ ಇಂತು ಕ್ರಿಯಾ ದೀಕ್ಷೆ ಮಂತ್ರದೀಕ್ಷೆ ತೀರಿದ ಮೇಲೆ, ಆ ದೀಕ್ಷಾಗುರು ಶಿಕ್ಷಾಗುರುವೇ ಜ್ಞಾನ ಗುರುತ್ವದ ಲೀಲೆಯಂಧರಿಸಿ ಮತ್ತು ಶಿಷ್ಯೋತ್ತಮಂಗೆ ಉಪದೇಶವ ಕರು ಣಿಸುವ ಭೇದವೆಂತೆಂದೊಡೆ, ಪರಮ ಪತಿವ್ರತೆ ಹರಗಣ ಸಾಕ್ಷಿಯಾಗಿ ಕಂಕಣವ ಕಟ್ಟಿದ ಪುರುಷಂಗೆ ತನ್ನ ತನುಮನವ ನೀಸಲಮಾಡಿ, ತನ್ನ ಪಿತ ಮಾತೆ ಬಂಧುಬಳಗ ಒಡಹುಟ್ಟಿದರು ಮೊದಲಾಗಿ ಪರಶಿವಲಿಂಗ ಜಂಗಮ ತೀರ್ಥ ಪ್ರಸಾದ ಪುತ್ರಮಿತ್ರರ ಸಂಗವ ಸೋಂಕದೆ ಅವರೊಡನೆ ಗಿಚ್ಚಿಸಿ ನಡೆನುಡಿಗಳಾಲಿಸದೆ ತನ್ನ ರಮಣನ ದ್ರವ್ಯಾಭರಣವ ಹಾರೈಸಿ ಆತನು ನುಡಿದ ನುಡಿಯೆ ಮಹಾ ಪ್ರಸಾದವೆಂದು ಪ್ರತಿ ನುಡಿಯ ನುಡಿ

ಯದೆ, ಸರ್ವಾವಸ್ಥೆಯಲ್ಲಿ ಆ ರಮಣನ ರತಿ ಸಂಯೋಗಾನು ಸಂಧಾನ ದಿಂದ ಎರಡಳಿದಿರುವ ಸತ್ಯಾಂಗನೆಯಂತೆ ಶ್ರೀ ಗುರುವಿನ ಕರಗರ್ಭ ಮಧ್ಯ ದಲ್ಲಿ ಜನಿತವಾದ ಲಿಂಗ ಭಕ್ತ ಸತಿಸುತ ಪಿತಮಾತೆ ಬಂಧುಬಳಗ ಒಡ ಹುಟ್ಟಿದವರು ಮೊದಲಾಗಿ ಪರಶಿವಲಿಂಗ ಜಂಗಮತೀರ್ಥ ಪ್ರಸಾದ ಮಂತ್ರದಲ್ಲಿ ಮನಮುಳುಗಿ ಲೋಕದ ಶೈವ ಮಾರ್ಗಿಗಳಂತೆ ಹಲವು ಕ್ಷೇತ್ರ, ಹಲವು ತೀರ್ಥ ಹಲವು ನೇಮವ್ರತಂಗಳಿಗೆ ಅಡಿ ಇಡದೆ ಕಾಯಕ ವಾಚಕ ಮಾನಸ ಮೊದಲಾದ ಸಮಸ್ತ ತತ್ವಂಗಳ ಸ್ವಪಾಕವ ಮಾಡಿ, ನಿಃಕಳಂಕ ಪರಶಿವಲಿಂಗ ಜಂಗಮಕ್ಕೆ ಸಮರ್ಪಿಸಿ, ಅವರೊಕ್ಕು ಮಿಕ್ಕ ಹರ್ಷಾನಂದ ಮಹಾ ಪ್ರಸಾದದಲ್ಲಿ ಸಂತೃಪ್ತನಾಗಿ ಇಷ್ಟಲಿಂಗ ಬಾಹ್ಯ ವಾದ ಜಡಶೈವ ನಡೆನುಡಿಗಳ ಆಲಿಸದಿರ್ಪುದೆ ಏಕಾಗ್ರದೀಕ್ಷೆ ಇಂತು ಟೆಂದು ಶ್ರೀಗುರು ನಿಃಕಳಂಕ ಚನ್ನಬಸವ ರಾಜೇಂದ್ರನು ನಿರ್ಲಜ್ಜ ಶಾಂತ ಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗ ನಬಸವೇಶ್ವರಾ.

**ದೃಢವ್ರತ ದೀಕ್ಷೆ**—೧೭. ಅಯ್ಯಾ ಸತ್ಯ ಸದಾಚಾರ ಲಿಂಗವ ಧರಿ ಸಿದ ಲಿಂಗಭಕ್ತಂಗೆ ದೀಕ್ಷಾ ಗುರುವೆ ಕುಲದೈವ, ಶಿಕ್ಷಾ ಗುರುವೇ ಮನೆ ದೈವ, ಜ್ಞಾನ ಗುರುವೇ ಮನಮಧ್ಯದಲ್ಲಿ ಬೆಳಗುವ ಪರಂಜ್ಯೋತಿರ್ಲಿಂಗ ವೆಂದು ಕುಲತುಂಬಿ, ಮನೆತುಂಬಿ, ಮನತುಂಬಿ, ಮತ್ತೊಂದು ಇತರವಾ ದಿಗಳಂತೆ ಅನ್ಯಾರ್ಚನೆ ಅನ್ಯಶಾಸ್ತ್ರ ಅನ್ಯಮಂತ್ರ ಅನ್ಯಪಾಕವ ಮುಟ್ಟದೆ, ಸ್ವಪಾಕವ ಮಾಡಿ, ಹರಗಣ ಗುರುಚರಪರಕ್ಕೆ ಸಮರ್ಪಿಸಿ, ಬಂದಬರವ ನಿಂ ದ ನಿಲುಕಡೆಯ ತಿಳಿದು, ತನುವೆಲ್ಲ ದೀಕ್ಷಾಗುರುವಿನ ದೀಕ್ಷಾಪಾದೋದಕ ಶುದ್ಧ ಪ್ರಸಾದವೆಂದರಿದ ನಿಜವೇ ಆದಿಪ್ರಸಾದ ಸ್ಥಲ ನೋಡಾ. ಮನವೆಲ್ಲ ಶಿಕ್ಷಾಗುರುವಿನ ಶಿಕ್ಷಾಪಾದೋದಕ ಸಿದ್ಧಪ್ರಸಾದವೆಂದರಿದ ನಿಜವೇ ಅಂತ್ಯ ಪ್ರಸಾದಿ ನೋಡಾ. ಭಾವವೆಲ್ಲ ಜ್ಞಾನಗುರುವಿನ ಜ್ಞಾನಪಾದೋದಕ ಪ್ರಸಿ ದ್ಧಪ್ರಸಾದವೆಂದರಿದ ನಿಜನೈಷ್ಠಿಯೇ ಸೇವ್ಯ ಪ್ರಸಾದಿ ನೋಡಾ. ಇಂತು ದೀಕ್ಷಾಗುರು ಶಿಕ್ಷಾಗುರು ಜ್ಞಾನಗುರು ಸ್ವರೂಪವಾದ ಲಿಂಗಜಂಗಮದ ಪಾದೋದಕ ಪ್ರಸಾದ ಒದವಿದಲ್ಲಿ ಆಚರಣೆ ಸಾಮಾನ್ಯದಲ್ಲಿ ಸಂಬಂಧ ವಿಟ್ಟುಕೊಂಡು ಕೊಟ್ಟು ಕೊಳಬಲ್ಲಾತನೆ ನಿಚ್ಚಪ್ರಸಾದಿಯಯ್ಯ. ಲಿಂಗ ಜಂಗಮದ ಪಾದೋದಕದ ಪ್ರಸಾದವನುಳಿದು, ಜಂಗಮ ಲಿಂಗದ ಪ್ರಸನ್ನ ಪಾದೋದಕ ಪ್ರಸಾದವ ದಿವಾ ರಾತ್ರಿಗಳೆನ್ನದೆ ಆಚರಣೆಯೇ

ಪ್ರಾಣವಾಗಿ ಕೊಟ್ಟು ಕೊಳಬಲ್ಲಾತನೇ ಅಚ್ಚಪ್ರಸಾದಿಯಯ್ಯ. ಇವರಿಬ್ಬ ರಲ್ಲಿ ಅತಿ ಭೃತ್ಯನಾಗಿ ಇವರಿಬ್ಬರಾಚರಣೆಯುಲ್ಲಿ ದೃಢ ಚಿತ್ತದಿಂದ ಕೊಟ್ಟು ಕೊಳಬಲ್ಲಾತನೆ ಸಮಯಪ್ರಸಾದಿ ನೋಡಾ. ಇಂತು ಸರ್ವಾಚಾರ ಸಂಪ ತ್ತಿನಾಚರಣೆಯು ಸಾಕಾರಲೀಲೆ ಅರ್ಪಿತಾವಧಾನ ಚೇತನಪರಿಯಂತರವು ಆಚರಿಸುವಂಥಾದ್ದೇ ದೃಢವ್ರತದೀಕ್ಷೆ, ಇಂತುಟೆಂದು ಶ್ರೀಗುರು ನಿಃಕ ಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ.

**ಪಂಚೇಂದ್ರಿಯಾರ್ಪಿತ ದೀಕ್ಷೆ**—೧೮. ಅಯ್ಯಾ ಶರಣಸತಿ ಲಿಂಗ ಪತಿ ಭಾವದಿಂವ ಸುಚಿತ್ತ ಸುಬುದ್ಧಿ ನಿರಹಂಕಾರ ಸುಮನ ಸುಜ್ಞಾನ ಸದ್ಭಾವ ನಿರುಪಾಧಿಕ ನಿಃಕಳಂಕ ನಿರಾಲಂಬವೆಂಬ ನವವಿಧಹಸ್ತಂಗಳಿಂದ ನವವಿಧ ಪದಾರ್ಥವನ್ನು ಇಷ್ಟ ಪ್ರಾಣ ಭಾವಲಿಂಗ ಆಚಾರ ಗುರು ಲಿಂಗ ಜಂಗಮ ಪ್ರಸಾದಲಿಂಗ ಮಹಾಲಿಂಗವೆಂಬ ನವವಿಧಲಿಂಗಗಳಿಗೆ ಶ್ರದ್ಧಾ ಭಕ್ತಿ ಮೊದಲಾಗಿ ನವವಿಧಭಕ್ತಿಗಳಿಂದ ಸಮರ್ಪಿಸುವ ಕ್ರಮವೆಂತೆಂದೊಡೆ, ತನು ಸಂಬಂಧವಾದ ರೂಪು ಪದಾರ್ಥವನ್ನು ಇಷ್ಟಲಿಂಗಕ್ಕೆ ಸಮರ್ಪಿಸಿ, ಮನಸಂಬಂಧವಾದ ರುಚಿ ಪದಾರ್ಥವನ್ನು ಪ್ರಾಣಲಿಂಗಕ್ಕೆ ಸಮರ್ಪಿಸಿ, ಧನಸಂಬಂಧವಾದ ತೃಪ್ತಿಪದಾರ್ಥವನ್ನು ಭಾವಲಿಂಗಕ್ಕೆ ಸಮರ್ಪಿಸಿ, ಸು ಗಂಧ ಪದಾರ್ಥವನ್ನು ಆಚಾರಲಿಂಗಕ್ಕೆ ಸಮರ್ಪಿಸಿ, ಸುರಸ ಪದಾರ್ಥವನ್ನು ಗುರುಲಿಂಗಕ್ಕೆ ಸಮರ್ಪಿಸಿ, ಸುರೂಪ ಪದಾರ್ಥವನ್ನು ಶಿವಲಿಂಗಕ್ಕೆ ಸಮ ರ್ಪಿಸಿ, ಸುಸ್ಪರ್ಶನ ಪದಾರ್ಥವನ್ನು ಜಂಗಮಲಿಂಗಕ್ಕೆ ಸಮರ್ಪಿಸಿ, ಸು ಶಬ್ದ ಪದಾರ್ಥವನ್ನು ಪ್ರಸಾದಲಿಂಗಕ್ಕೆ ಸಮರ್ಪಿಸಿ, ಸುತೃಪ್ತಿ ಪದಾರ್ಥ ವನ್ನು ಮಹಾಲಿಂಗಕ್ಕೆ ಸಮರ್ಪಿಸಿ, ಘ್ರಾಣ, ಜಿಹ್ವೆ, ನೇತ್ರ, ತ್ವಕ್ಕು ಶ್ರೋತ್ರ ಹೃದಯಂಗಳು ಮೊದಲಾದ ಸಮಸ್ತ ಮುಖಂಗಳಲ್ಲಿ ಬರುವ ಪದಾರ್ಥಂ ಗಳ ಸಮಸ್ತ ಲಿಂಗಗಳಿಗೆ ಮಿಶ್ರಾಮಿಶ್ರಂಗಳೊಡನೆ ಸಮರ್ಪಿಸಿ, ಆ ಲಿಂಗಂ ಗಳ ಸಂತೃಪ್ತಿ ಪರಿಣಾಮ ಪ್ರಸಾದದಲ್ಲಿ ಲೋಲುಪ್ತರಾಗಿ ಇರುವಂಥಾದ್ದೇ ಪಂಚೇಂದ್ರಿಯಾರ್ಪಿತ ದೀಕ್ಷೆ. ಇಂತುಟೆಂದು ಶ್ರೀಗುರು ನಿಃಕಳಂಕ ಚನ್ನ ಬಸವರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪ ಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ.

**ಅಹಿಂಸಾ ದೀಕ್ಷೆ**— ೧೯. ಅಯ್ಯಾ, ಶ್ರೀಗುರು ಲಿಂಗ ಜಂಗಮದ ಕರುಣಾಕಟಾಕ್ಷೆಯಿಂದುತ್ಪತ್ಯವಾಗಿ ನಿರ್ಮಾಯ-ಕಂಥೆಯ ಧರಿಸಿದ ಶಿವ

ಶರಣಂಗೆ ಅನಂತ ಲೀಲೆಯಲ್ಲಿ ಬೆಂಬತ್ತಿ ಬಂದ ಪಾಪವೇ ಒಂದು ರೂಪಾಗಿ ಮಾಯಾಜಡಜೀವ ಶರೀರವ ಧರಿಸಿ, ಪರಿಪರಿಯಿಂದ ನಿಂದೆಕುಂದು ಅಪ ಮೃತ್ಯುಗಳು ಬಂದು ತಟ್ಟಿದಲ್ಲಿ, ಅಪರ್ಿತಾವಧಾನ ಸುಖದುಃಖಗಳು ಬಂದು ಸೋಂಕಲೊಡನೆ, ಶಿವಶರಣನು ಸ್ವಾತ್ಮಜ್ಞಾನವಿಂದರಿದು ನೋಡಿದಲ್ಲಿ, ಈ ಮಾಯಾ ಜಡ ಜೀವಾತ್ಮರಿಗೆ ಸೂತ್ರಧಾರಿ ಶಿವನು ಕಪಟನಾಟಕ ಲೀಲೆಯ ಧರಿಸಿ ಸಕಲ ಜೀವಾತ್ಮರ ಮಧ್ಯದಲ್ಲಿ, ಅಣುವಿಗಣುವಾಗಿ, ಮಹತ್ತಿಂಗೆ ಮಹತ್ತಾಗಿ ಆ ಜೀವನೆಂಬ ವಿಧಿಗೆ ಸ್ಮೃತಿ ನಿಂದೆ ಪುಣ್ಯ ಪಾಪ, ಸಂಕಲ್ಪ ವಿಕಲ್ಪವೆಂಬ ಕುಟಿಲ ವ್ಯವಹಾರವ ಕಲ್ಪಿಸಿ, ಆ ಜೀವನಿಂದ ಭಕ್ತಗಣಂಗಳಲ್ಲಿ ಅಷ್ಟಾವರಣದ ನಿಷ್ಠಾ ಪರತ್ವವ ನೊಡಬೇಕೆಂದು ಅನಂತ ಬಾಧೆಗಳಿಂದ ಬಾಧಿಸಿದಲ್ಲಿ ಶಿವಶರಣಗಣಂಗಳು ಆ ಬಾಧೆಗೆ ಅಳುಕದೆ ಚಿಂತಿಸದೆ, ಅಷ್ಟಾವರಣ ಭರಿತರಾಗಿ ದೇಹಾಭಿಮಾನದ ಹಸಿವು ತೃಷೆ ನಿದ್ರೆ ಆಲಸ್ಯ ಸಂಗವೆಂಬ ಕಾಲಕಾಮರ ಪಾಶದಲ್ಲಿ ಬೀಳದೆ, ಭವಿ ಭಕ್ತನೆಂಬ ವಿಚಾರವನರಿಯದ ದುಷ್ಟರ ಕಂಡರೆ ದೂರದಲ್ಲಿರಬೇಕೆಂಬ ಗುರುವಾಕ್ಯವ ತಿಳಿದು, ಅವರ ಸಂಭಾಷಣೆ ಸಂಸರ್ಗವ ಮಾಡದೆ, ಅವರ ಸ್ತುತಿ ನಿಂದ್ಯಾದಿಗಳಾಲಿಸದೆ ನಿಃಕಳಂಕ ಪರಬ್ರಹ್ಮ ಪರಶಿವಲಿಂಗದಲ್ಲಿ ಸದಾ ಸನ್ಮಾರ್ಗಿಯಾಗಿ, ಸುಸಂಗಿಗಳಿಂದ ಶ್ರದ್ಧಾತುರ ಪರಿಣಾಮದಲ್ಲಿ ಬಂದು ತಟ್ಟಿದ ಪರಿಣಾಮ ಪಾದೋದಕ ಪ್ರಸಾದದಲ್ಲಿ ಲೋಲುಪ್ತರಾಗಿ ತನ್ನ ನಡೆನುಡಿಗಳ ಸ್ವಾತ ಜ್ಞಾನದಿಂದ ವಿಚಾರಿಸಿ, ಪಕ್ವ ಮಾಡುವಂಥ ನಿಂದನಿಲುಕಡೆಯು ಅಹಿಂಸಾ ದೀಕ್ಷೆ ಇಂತುಟೆಂದು ಶ್ರೀಗುರು ನಿಃಕಳಂಕ ಚನ್ನ ಬಸವರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ.

**ಲಿಂಗನಿಷ್ಠಾ ದೀಕ್ಷೆ**— ೨೦. ಅಯ್ಯಾ, ಸತ್ತು ಚಿತ್ತಾನಂದ ನಿತ್ಯಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪ ಪರಮಾರಾಧ್ಯ ವೀರಶೈವಾಚಾರ ಷಟ್ಸ್ಥಲ ಪ್ರತಿಪಾದಕ ಶ್ರೀಗುರು ಲಿಂಗ ಜಂಗಮ ಕರುಣಾಕಟಾಕ್ಷೆಯಿಂದ ಅಂಗಮನಭಾವಂಗಳೆಲ್ಲ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದಸ್ವರೂಪವಾದ ಇಷ್ಟ ಪ್ರಾಣ ಭಾವಲಿಂಗವಾದ ಮೇಲೆ ಭೃಂಗಿಕೀಡೆಯೋಪಾದಿಯಲ್ಲಿ ಗುರು ಲಿಂಗ ಜಂಗಮ ಬೇರೆ, ನಾನು ಬೇರೆಂಬ ಭಿನ್ನಭಾವವಳಿದು, ಗುರುಮಾರ್ಗಾಚಾರದಲ್ಲಿ ಪ್ರೇಮವುಳ್ಳಾತನಾಗಿ ಜ್ಞಾತೃ ಜ್ಞಾನ ಜ್ಞೇಯವೆಂಬ ಅಷ್ಟಾಂಗಯೋಗ ಭ್ರಮಿತರಾದ ಜಡಕರ್ಮ ಶೈವಮಾರ್ಗದಲ್ಲಿ ಸಾಕ್ಷಿತ್ವವನೇ

ಇಷ್ಟಲಿಂಗಧಾರಕನಾಗಿ ಗುರು ರೂಪ ಧರಿಸಿ ಭವಿ ಭಕ್ತಮಾರ್ಗವ ತೋರದೆ ಇಚ್ಛೆಯನುಡಿದು ಉದರವ ಹೊರೆವ ವೇಷವಕಂಡು, ಶರಣೆಂದು ಮನ್ನಣೆಯಕೊಡದೆ, ಭೂತ ಸೋಂಕಿದ ಮನುಜನೋಪಾದಿಯಲ್ಲಿ ತನ್ನ ಪವಿತ್ರಸ್ವರೂಪ ಪರತತ್ವ ಮಾರ್ಗಧ್ಯಾನದಿಂದ ಚಿದ್ಘನ ಲಿಂಗದೊಳಗೆ ತಾನಾಗಿ, ತನ್ನೊಳಗೆ ಚಿದ್ಘನ ಲಿಂಗವಾಗಿ ಸಪ್ತಧಾತು ಸಪ್ತವ್ಯಸನಂಗಳಲ್ಲಿ ಕೂಡದೆ, ಲಿಂಗವೇ ತಾನಾದ ಸ್ವಸ್ವರೂಪು ನಿಲುಕಡೆಯೇ ಲಿಂಗನಿಷ್ಠಾದೀಕ್ಷೆ ಇಂತುಟೆಂದು ಶ್ರೀಗುರು ನಿಃಕಳಂಕ ಚನ್ನಬಸವ ರಾಜೇಂದ್ರನು ನಿರ್ಲಜ್ಜಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ.

**ಮನೋಲಯದೀಕ್ಷೆ**—೨೧. ಅಯ್ಯಾ, ಸತ್ಯಸದಾಚಾರ ಸದ್ಭಕ್ತಿ ಜ್ಞಾನವೈರಾಗ್ಯ ಸತ್ಕ್ರಿಯೆ ಸತ್ಕಾಯಕ ಸತ್ಪಾತ್ರಭಿಕ್ಷವೆಯಧರಿಸಿ ಲೋಕಪಾವನಾರ್ಥವಾಗಿ ಇಚ್ಛೆಯನುಡಿಯದೆ, ನಡೆನುಡಿಹೀನವಾದ ಸೂತಕ ಪಾತಕರ ಸಂಗವ ಹೊದ್ದದೆ, ಗುರುಮಾರ್ಗಾಚಾರಕ್ಕೆ ಕುಂದುಕೊರತೆಗಳ ತಾರದೆ, ಸನ್ಮಾರ್ಗದಲ್ಲಾಚರಿಸಿ, ಗುರುಲಿಂಗಜಂಗಮ ಸದ್ಭಕ್ತಿಚಾರಿತ್ರವುಳ್ಳ ಶಿವಶರಣಗಣಂಗಳಲ್ಲಿ ಕುಂದುನಿಂದೆಗಳ ಕಲ್ಪಿಸದೆ ಎಚ್ಚರದಪ್ಪಿದಲ್ಲಿ, ಬಹುಪರಾಕು ಸ್ವಾಮಿ ಶರಣಗಣಂಗಳು ಹೋದ ಮಾರ್ಗವಿದಲ್ಲವೆಂದು ಭೃತ್ಯಭಕ್ತಿಯಿಂದ ಹೇಳಿ, ಅಜ್ಞಾನ ಅಕ್ರಿಯೆ ಅನಾಚಾರವೆಂಬ ಮಾಯಾಶರಧಿಯಲ್ಲಿ ಮುಳುಗಿ ಹೋಗುವ ಇಷ್ಟಲಿಂಗಧಾರಕ ಭಕ್ತಗಣಂಗಳಕಂಡು, ಅಗಸ ತನ್ನ ಮಡಿವ್ಯೆಲಿಗೆಯ ಹೊರುವ ಕತ್ತೆಯು ಜಿಹ್ವಾಲಂಪಟ ಗುಹ್ಯಾಲಂಪಟದಿಂದ ಹೋಗಿ ಹಳ್ಳಕೊಳ್ಳ ಕೆರೆ ಬಾವಿಯೊಳಗೆ ಬಿದ್ದು ಹೋಗುವದ ಕಂಡು ಕಪಿಯಹಿಡಿದು ಎಳೆದುಕೊಂಡೋಪಾದಿಯಲ್ಲಿ ಹಸ್ತಪಾದಹಿಡಿಹಿಡಿದು ಕಡೆಗೆಳೆದು ಶೃತಿಗುರುಸ್ವಾನುಭಾವವತೋರಿ ಮತ್ತವರ ಕರುಣವಪಡೆದು ಏಕಮಾರ್ಗದಲ್ಲಿ ಆಚರಿಸಿ ನಿಃಕಲ ಪರಶಿವಲಿಂಗದಲ್ಲಿ ಶಿಖಿ ಕರ್ಪುರದಂತೆ ರತಿಸಂಯೋಗವುಳ್ಳಂಥಾದ್ದೇ ಮನೋಲಯ ದೀಕ್ಷೆ ಇಂತುಟೆಂದು ಶ್ರೀಗುರು ನಿಃಕಳಂಕಮೂರ್ತಿ ಚನ್ನಬಸವ ರಾಜೇಂದ್ರನು ನಿರ್ಲಜ್ಜಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ.

**ಸದ್ಯೋಮುಕ್ತಿದೀಕ್ಷೆ**-೨೨. ಅಯ್ಯಾ ಶ್ರೀಗುರುಲಿಂಗಜಂಗಮದಕರುಣಾಕಟಾಕ್ಷೆಯಿಂದ ಶೃತಿಗುರುಸ್ವಾನುಭಾವವಿಡಿದು ಹಿಡಿದಂಥ ಸನ್ಮಾರ್ಗಾ

**ಕಂದ॥**

ನವರತ್ನ ಖಚಿತ ಸಜ್ಜೆಯ ।
ಛ[ಪ]ನಕೆ ನಡೆಗಲಿಸಳೆನೆ ಮರಾಳಕೆ ಸತತಂ ।
ಭುವನಸ್ತುತೆ ಧೇನುಕೆಗಂ ।
ನವಪೃದು ಪಸಪಿಡು ತಳ್ತಿದಿಸಳ್ಗಂತಸದಿಂ ॥೧೩೫॥

ಮಾಂಗಾರಂ ಕೇಕಿಯುನ ।
ವ್ಯಾಂಗವ ಕುಮುದಿನಿಯು ಚಂದ್ರನಂ ದಿನಮಣಿಯಂ ॥
ಅಂಗೈಸುವಂತೆ ಪದ್ಮಿನಿ ।
ಜಂಗಮಲತಿಕಾಂಗಿ ಪತಿಯ ಬರವಂ ಪಾರ್ದಳ್ ॥೧೩೬॥

ರತಿಯೆಡೆ ಗಾರತಿ ಪತಿಯುಂ ।
ಕ್ಷಿತಿಸುತೆಯೆಡೆಗೈದಿ ರಾಘವಂ ಬರ್ಪಂತಾ ॥
ಕ್ಷಿತಿ ಪತಿ ನಿಜಸತಿಯೆಡೆಗಂ ।
ನತಿಮುದದಿಂದೈದಿಂ ಮಂಚದೊಳ್ಕುಳ್ಳಿರ್ದ ॥೧೩೭॥

ಕತ್ತುರಿ ಕಮ್ಮೆಣ್ಣೆಯುಮಂ ।
ಮತ್ತೆ ನಿಸುವ ನೇಕ ಪುಷ್ಪ ವೀಳೆಯಗಳನಾ ॥
ಮತ್ತೆ ಕಾಶಿನಿಯರಿತ್ತರ್ ।
ಚಿತ್ತಜರತಿಗೆಣೆಯ ರಾಜಸತಿಗಂ ಪತಿಗಂ ॥೧೩೮॥

**ಚಂಪಕ॥**

ನಗೆನುಡಿ ಬೇಟ ನಖರಕ್ಷತ ತೋಳ್ಗಳ ತೆಕ್ಕೆ ನಲ್ಮೆಕ್ಕೈ ।
ಮಿಗೆ ಬಗೆ ಡೇಣನೇತ್ರಿಯರದೃಶ್ಯತೆಯೈದುತಮಿಂದ್ರ ಜಾಲಮಂ ।
ದ್ವಿಗುಣಿಪರಂತೆ ಪೋಗೆ ನವರತ್ನದ ಪುತ್ರಿಕೆ ಪೇಳ್ವ ವಸ್ತುವಂ ।
ಸುಗಮ ದೊಳೀಯೆ ಕೈಕೊಳುತನಂಗನ- ಕೇಳಿಯುಲೀಲೆಯೊಂದಿದರ್ ।
॥೧೩೯॥

ತೊಡೆತೂಡೆಸೋಂಕಿ ಕುಳ್ಳಿತೊಲವಿಂಕುಡಿನೋಟದಬೇಟವೊಂದೆ ಕೈ ।
ದುಡುಕಿ ಶರೇಜ ಕುಟ್ಮಲ ವಿದೆತ್ತಣದೆಂದು ಘನಸ್ತನಂಗಳಂ ।
ಪಿಡಿದ ಮರ್ದಪ್ಪಿ ಮುದ್ದಿಸಿ ಸುಧಾರಸ ಪೂರಿತದೋಷ್ಠ ಬಿಂಬಮಂ ।
ಕಡೆಯದೆ ಪೀರ್ದುದಂತನಖರಾಂಕಿತದಿಂ ರತಿಲೀಲೆಯೊಂದಿದರ್ ॥೧೪೦॥

**ಕಂದ॥**

ಧೀರೋದಾತ್ತನು ಧಾತ್ರಂ।
ಧೀರೋದ್ಧತಧೀರಲಲಿತ ಧೀರನು ಶಾಂತಂ॥
ಮೂರ ನಮರೂಪನಾಯಕ।
ವೀರಂ[ ಗತ ] ಸೋಮ ಶೇಖರನೆ ಶೃಂಗಾರಂ ॥೧೪೧॥

ಪದ್ಮಾಸ್ಯೆ ಪದ್ಮಗಂಧಿನಿ।
ಪದ್ಮಾಂಕಿತ ಪಾಣಿ ಪತ್ನಿ ಪದ್ಮಾಕ್ಷಿಯು ತಾಂ॥
ಪದ್ಮ ಮುಕುಲಸ್ತನಯುತೆ।
ಪದ್ಮಿನಿ ನೀಲಮ್ಮ ದೇವಿಯುತ್ತಮೆ ಯೆನಿಪಳ್ ॥೧೪೨॥

ಉತ್ತಮ ನಾಯಕಿ ನಾಯಕ।
ರೆತ್ತಂ ನೋಡಿದಡೆಯುತ್ತಮೋತ್ತಮರೆನಿಪರ್ ॥
ಚಿತ್ತಜನ ಕೇಳಿಯಿರವಂ।
ಚಿತ್ರರಸಿಂ ರಚಿಪುದಲ್ತೆ ಕವಿಸಮ್ಮತದಿಂ ॥೧೪೩॥

**ಚಂಪಕ॥**

ತರವಲಿತೋರುತೆ ಕರಗಳೊಂದೆಯು ಸೋರುವ ಮರ್ಮಭಿಂದುಗ।
ಳ್ತೊರೆಯೆ, ಮುಖಾಬ್ಜದೊಪ್ಪಿರೆಯೆ, ಕುಂಕುಮ ಕಸ್ತುರಿ ತೋಳತೆಕ್ಕೆಯಂ॥
ಗುರುತರನೀವಿಬಂಧ ಸಿಥಿಲಾಗಿರೆ ನಿರ್ಮಲಹಾರ ಮೌಕ್ತಿಕಾ।
ಭರಣ ಜಗುಳ್ದು, ಸಸ್ಮಿತ ವಿಲೋಚನದಿಂ ನೆರೆನಿದ್ರೆಯೊಂದಿದರ್ ॥೧೪೪॥

**ಕಂದ॥**

ವನಿತೆಯರ ಶಿರೋಮಣಿಯೆಂ।
ದೆನಿಸಿದ ನೀಲಮ್ಮದೇವಿ ಕಂಡಳ್ಕನಸಂ॥
ಘನವೆನಿಪ ಪುಂಡರೀಕವ।
ನಿನುಗುವ ಕಂಠೀರವೇಂದ್ರನಂ ವಿಸ್ಮರಮಂ ॥೧೪೫॥

ಮದನಾರಿಯ ಸದನದೊಳೂಂ।
ದಿದ ಶಂಖದ ನಿನದ ಗೇಳುತುಪ್ಪವಡಿಸಿದಳ್ ॥

ಹೃದಯದೊಳು ಶಿವನ ಚಿಂತಿಸಿ ।
ಪದಪಿಂ ತಾನಿದ್ದು ಕುಳಿತು ತದನಂತರದೊಳ್ ॥೧೪೬॥

ಮುಕುರವನೀಕ್ಷಿಸಿ ಜಗುಳಿದ ।
ಚಿಕುರವ ಸೈತಿಕ್ಕಿ ಸಿಗುರಿಗಳ ನೀವುತ್ತಂ॥
ಶುಕಪಿಕನಿಕರದ ಗಾನದ।
ಚಕಿತೇಣಾಂಬಕಿಯು ಮುದದಿ ಲಾಲಿಸುತಿರ್ದಳ್ ॥೧೪೭॥

ಜನಪತಿಯೆಚ್ಚರದಂತಿರೆ।
ವನಿತಾಮಣಿಯಿದ್ದು ಮುಕುರವಂ ನೋಡುತ್ತಂ ॥
ಅನುವರ್ತಿಸಿ ಮುಖಮಜ್ಜನ ।
ಮನಿತಲದೆ ಶಿವನ ಪೂಜೆಯಂ ವಿರಚಿಸಿದಳ್ ॥೧೪೮॥

ಅನಿತರೊಳಾ ಜನಪತಿಯುಂ ।
ಮುನಿಸಿನ.ತ ಶಿವಗೃಹದಘಂಟೆಯುಲಿಹಂ ಕೇಳ್ದಾ ॥
ಮನಸಿಜಹರ ಪಂಚಾಕ್ಷರ
ವನಿತುಂ ಸ್ಮರಿಸುತ್ತ ಉಪ್ಪವಡಿಸಿದ ನೊಲವಿಂ ॥೧೪೯॥

**ಚಂಪಕ॥**

ಸ್ಮರಿಸುತಲೊರ್ಮೆ ಮುನ್ನ ಶಿವನಂ ಸಿರಿಗೌರಿಯ ಪಾದಪದ್ಮಮಂ।
ಸುರಪಸಮಾನ ವೈಭವನು ಚಿಂತಿಸಿ ವಾಮನ ನುಡಿಯೆಂಬುದಂ।
ಪರಿಕಿಸುತಿದ್ದುಬಂದು ವರದರ್ಪಣಮಂ ನವಗವ್ಯ ಹವ್ಯಮಂ ।
ನೆರೆಮುದದಿಂದ ವಿೂಕ್ಷಿಸುತ ಕುಳಿತು ಭೂವರ ಸೋಮಶೇಖರಂ॥೧೫೦॥

**ಕಂದ॥**

ಪನ್ನೀರಿಂ ಮಜ್ಜನಮಂ ।
ಸನ್ನುತ ನವ ಮೋಹನಾಂಗನೆಸಗಿದ ಬಳಿಕಂ॥
ಕನ್ನಡಿ ಕದಪಿನ ನೃಪಕುಲ ।
ರನ್ನಂ ಶಿವ ಪೂಜೆಗೈದನತಿ ವೈಭವದಿಂ ॥೧೫೧॥
ಆ ಸಮಯ ದೊಳ್ಳೈದಿಕರಂ ।
ಭೂಸುರಕೇಂರನ ರಾಣಿ ನೀಲಾಂಬಿಕೆ ತಾಂ||

ಲೇಸಿನ ಕನಸಿನ ಫಲಮಂ ।
ಓಸರಿಸದೆ ಪೇಳ್ದುದೆಂದು ಪತಿಯಂ ಕೇಳ್ದಳ್ ॥೧೫೨॥

ವಿಷ್ಣುಪಕಧಿಪತಿಯುಪ್ಪಂ ।
ವಿಷ್ಣುರಡಿಂದುಷ್ಪಸಿಗ್ರಪಂ ಗೈವುತ್ತಂ ॥

ಶಿಷ್ಟರನು ರಕ್ಷಿಸುವನೀ ।
ಸೃಷ್ಟಿ ಯೊಳೆಣೆಯಿಲ್ಲವೆಂಬ ತೆರದಿಂ ಜಗದೊಳ್ ॥೧೫೩॥

ಏಕಚ್ಛತ್ರದೊಳಾಳುವ ।
ಭೂಕಾಂತರೊಳಿವನೆ ಮುಖ್ಯನೆನಿಸುತೆ ಧರೆಯಂ॥

ರಾಕೇಂದು ವದನನಪ್ಪಂ।
ಲೋಕಸ್ತುತ ಪುಂಡರೀಕನಮಂ ಕಂಡುದರಿಂ ।೧೫೪॥

ಕಂಠದೊಳು ಧರಿಸುವಸುಮಣಿ ।
[illegible]ಯಂ ಹರಿಯು ಕಂಡ ಕನಸಿನ ಫಲದಿಂ ॥

ಕುಂಠತನವಿಲ್ಲದಾರಣ।
ಕಂಠೀರವನೆಂಬ ಕುವರನಪ್ಪನು ಸತ್ಯಂ ॥೧೫೫॥

ಕನಸಿನ ಫಲಮಂ ಕೇಳ್ದಾ ।
ವನಿತಾಮಣಿ ಹರ್ಷದಿಂದ ಮಿಪ್ರಾಪದದೊಳ್ ॥

ಜಿನವಿನುತ ಗರ್ಭ ಚಿನ್ಹವ ।
ನನುಕರಿಸಿದಳಂದು ವೀರಭದ್ರನ ವರದಿಂ॥೧೫೬॥

**ಮತ್ತೇಭ॥**

ಉದರಸ್ಥಾರ್ಭಕಕೀರ್ತಿ ಪೊಣ್ಮಿ ಹೊರಸೂಸಿತ್ತೆಂಬ ಚೆಲ್ವಿಂಮುಖಂ ।
ವಿದಿತಂಬೆಳ್ಪೊಡೆದೋರ್ಪ್ಪೆ ಲೋಕದನುಹಾದಾರಿದ್ರ್ಯಮುಂ ಪೋದುದೆಂ ।
ದುದಿತ ಶ್ರೀಯುತ ನೆಂಬುದಂ ನಿರುಪಂ ತಾಪಸ್ಥಲ ಮಧ್ಯಾಂಗಮಂ ।
ಹೃದಯಂದೋರಿತಶಾತಿವಸ್ತ್ರದೊಲು ತಾಂ ಕಪ್ಪೇರಿ ತಾ ಚೂಚುಕಂ॥೧೫೭